ಶ್ರೀಃ

ಶ್ರೀಮದಾನಂದತೀರ್ಥಭಗವತ್ಪಾದವಿರಚಿತ

# ತಂತ್ರಸಾರಸಂಗ್ರಹ

[ಕನ್ನಡ ತಾತ್ಪರ್ಯ-ಟಿಪ್ಪಣಿ-ಪರಿಶಿಷ್ಟ-ಶ್ಲೋಕಾನುಕ್ರಮಣಿಕೆಗಳೊಡನೆ]

ಮುನ್ನುಡಿ:

ಶ್ರೀಪೇಜಾವರಮಠಾಧೀಶ ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರಿಂದ



ಅನುವಾದಕ:

ಬನ್ನಂಜೆ ಗೋವಿಂದಾಚಾರ್ಯ

ಉಡುಪಿ



ಉಡುಪಿ

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ

# ಲೇಖಕೀಯಮ್

'ಆಚಾರ್ಯಕೃತಿನಿವೇಶನಮಪ್ಯವಧೂತಂ ವಚೋಽಸ್ಮದಾದೀನಾಮ್ ।
ರಥ್ಯೋದಕಮಿವ ಗಂಗಾಪ್ರವಾಹಪಾತಃ ಪವಿತ್ರಯತಿ ॥' (ಭಾಮತೀ)

ತಂತ್ರಶಾಸ್ತ್ರ ಎಂದಾಗ ಇಸತ್ತಿನ ಜನಾಂಗ ಮರೆತು ಬಿಡುತ್ತಿರುವ, ಅಲಕ್ಷಿಸುತ್ತಿರುವ ಒಂದು ಪರಂಪರೆ ನಮ್ಮ ಕಣ್ಣೆದುರು ನಿಲ್ಲುವುದು. ಅದರ ಕುರಿತು ಇಂದಿನ ಜನ ಹೆಚ್ಚು ವ್ಯಾಸಂಗ ಮಾಡುತ್ತಿಲ್ಲ— ಪರಂಪರೆಯು ಹೆಚ್ಚಿನ ಭಾಗ ಅಳಿದುಹೋಗುತ್ತಿರುವುದರಿಂದ ಹೆಚ್ಚಿನ ವ್ಯಾಸಂಗ ಸಾಧ್ಯವೂ ಆಗುತ್ತಿಲ್ಲ. ಆದರೂ ಅದರ ಕುರಿತು ಕುತೂಹಲವನ್ನು ಕೆರಳಿಸುವಂಥ ಅಮೂಲ್ಯ ಗ್ರಂಥಗಳು ಈಗಲೂ ಉಪಲಬ್ಧವಿವೆ. ಸಂಪೂರ್ಣವಿಲ್ಲದಿದ್ದರೂ ಹೆಚ್ಚಿನ ಮಟ್ಟಿಗೆ ಅದರ ಅಧ್ಯಯನವೂ ಸಾಧ್ಯವಾಗಿದೆ. ಅದರ ಕಡೆಗೆ ನಮ್ಮ ಜನ ಇನ್ನಾದರೂ ಕಣ್ಣು ಹಾಯಿಸಬೇಕಾಗಿದೆ. ಅದರಲ್ಲಿರುವ ಶಕ್ತಿಯನ್ನು ಮನವರಿಕೆಮಾಡಿಕೊಳ್ಳಬೇಕಾಗಿದೆ. ಎಂತಲೇ ನಮ್ಮ ಜನ ಇಂಥ ಅಮೂಲ್ಯ ಪರಂಪರೆಯನ್ನು ಅಲಕ್ಷ್ಯದಿಂದ ಕಳೆದುಕೊಳ್ಳುತ್ತಿದ್ದಾರಲ್ಲ ಎಂಬ ಕಳಕಳಿಯಿಂದ, ಇನ್ನಾದರೂ ಇಂಥ ಪರಂಪರೆ ಬೆಳೆದು ಬೆಳಗಬೇಕು ಎಂಬ ಹಂಬಲಿನಿಂದ— ಆಚಾರ್ಯರ ಈ ಕೃತಿರತ್ನವನ್ನು ಅನುವಾದ ಮಾಡುವ ಕೆಲಸಕ್ಕೆ ತೊಡಗಿದೆ. ಸಾಹಿತ್ಯದ ವಿಭಾಗದಲ್ಲಿ ಒಂದು ಭಾಷೆ ಎಷ್ಟು ಮುಂದುವರಿದಿದೆ ಎನ್ನುವಂತೆಯೇ ಶಾಸ್ತ್ರೀಯ ವಿಶ್ಲೇಷಣೆಯಲ್ಲಿ ಅದರ ಸ್ಥಾನ ಎಂಥದು ಎನ್ನುವುದೂ ಭಾಷೆಯನ್ನು ಅಳೆಯುವ ಒಂದು ಸಾಧನ. ಈ ದೃಷ್ಟಿಯಿಂದ ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥಗಳ ಕೊರತೆಯನ್ನು ನಮ್ಮ ಜನ ಆದಷ್ಟು ತ್ವರಿತದಿಂದ ನೀಗಿಸಿಕೊಳ್ಳಬೇಕಾಗಿದೆ. ಓದುಗರು ಪ್ರಣಯಕಥೆಗಳಿಗಿಂತಲೂ ಹೆಚ್ಚಾಗಿ ಶಾಸ್ತ್ರೀಯ ವಿಚಾರಗಳಲ್ಲಿ ತಮ್ಮ ಪ್ರತಿಭೆಯನ್ನು ಸಫಲಗೊಳಿಸುವುದೂ ಇದಕ್ಕೊಂದು ಸಾಧನ.

ತಂತ್ರಶಾಸ್ತ್ರ—ಆಡಿ ತೋರಿಸುವುದಕ್ಕಿಂತ ಹೆಚ್ಚು ಮಾಡಿ ತೋರಿಸುವ ಶಾಸ್ತ್ರ. ಪ್ರಾಯೋಗಿಕವಾದ ಈ ಶಾಸ್ತ್ರವನ್ನು ಯೋಗಶಾಸ್ತ್ರದ ಸಿದ್ಧಿಯಿಲ್ಲದ ಯಾವನೊಬ್ಬನೂ ಅಧಿಕಾರವಾಣಿಯಿಂದ 'ನಾನು ಬಲ್ಲೆ' ಎಂದು ಎದೆತಟ್ಟಿಕೊಳ್ಳಲಾರ. ಎಂತಲೇ ಆಚಾರ್ಯರ ತಂತ್ರಸಾರದ ಅನುವಾದವನ್ನು ಮಾಡುವಾಗ ನನಗೂ ಈ ಭಯ ಅಂಟಿಕೊಳ್ಳದೆ ಇರಲಿಲ್ಲ. ಆದರೂ ಅನೇಕ

ಪದ್ಧತಿಯ ತಂತ್ರಗ್ರಂಥಗಳ ವಿಶೇಷ ಅಧ್ಯಯನದಿಂದ– ಆಚಾರ್ಯರಿಗೆ ಅಪಚಾರವಾಗದಂತೆ ಅನುವಾದಿಸಲು ಆಚಾರ್ಯರ ಮೇಲಣ ಗೌರವದ ಬೆಂಗಾವಲು ನನಗಿತ್ತು. ಈ ಧೈರ್ಯ ನನ್ನನ್ನು ಈ ಕೆಲಸದಲ್ಲಿ ಪ್ರೇರಿಸಿದೆ.

ಈ ವರೆಗೆ ಮುದ್ರಿತವಾದ ಮೂಲ ಪುಸ್ತಕಗಳಿಗಿಂತಲೂ ಹೆಚ್ಚಿನ ಶೋಧನೆಯಿಂದ ಮೂಲಪಾಠಕ್ಕೆ ಅವಿರುದ್ಧವಾಗಿ ಇಲ್ಲಿ ಆಚಾರ್ಯರ ತಂತ್ರಸಾರವನ್ನು ಮುದ್ರಿಸಲಾಗಿದೆ. ಇದಕ್ಕೆ ಉಪಯೋಗ ಬೀಳುವಂತೆ– ಪ್ರಾಚೀನ ಪುಸ್ತಕಗಳಿಂದ ಶೋಧಿತವಾದ ಒಂದು ಪುಸ್ತಕವನ್ನಿತ್ತು ಮತ್ತು ಕೆಲವೊಂದು ಸಂದರ್ಭದಲ್ಲಿ ತಮ್ಮ ಸಲಹೆಯ ಸಹಕಾರವನ್ನು ಕೊಟ್ಟು ನನ್ನಲ್ಲಿ ನೆಚ್ಚಿನಿಂದ ನಡೆದುಕೊಂಡ ಶ್ರೀ. ಬನ್ನಂಜೆ ಅನಂತಕೃಷ್ಣಾಚಾರ್ಯ, ನ್ಯಾಯ ವಿದ್ವಾನ್, ನ್ಯಾಯ ವೇದಾಂತ ಶಿರೋಮಣಿ- ಅವರನ್ನು ನಾನು ಈ ಸಂದರ್ಭದಲ್ಲಿ ನೆನೆಯದಿರಲಾರೆ.

ಈ ಪುಸ್ತಕಕ್ಕೆ ತನ್ನ ಆಶೀರ್ವಾದದ ಕವಚವನ್ನು ತೊಡಿಸಿದ ಶ್ರೀಪೇಜಾವರ ಶ್ರೀಗಳವರು ನನ್ನ ಮೇಲೆ ತುಂಬುಹೃದಯದ ಮಾತನ್ನಾಡಿದ್ದಾರೆ. ಜತೆಗೆ ಅಮೂಲ್ಯ ಸೂಚನೆಗಳನ್ನಿತ್ತು ಕರುಣಿಸಿದ್ದಾರೆ. ಕೇವಲ ಪ್ರಣಾಮಗಳಿಂದಲ್ಲದೆ ಇನ್ನೇತರಿಂದಲೂ ಅವರ ಈ ಅನುಗ್ರಹದ ಆನೃಣ್ಯವನ್ನು ನಾವು ಪಡೆಯಲಾರೆವು.

ಆಚಾರ್ಯರ ಕೈಂಕರ್ಯರೂಪವಾದ ಈ ಕಾರ್ಯದಲ್ಲಿ ಹಿಂದಿನಂತೆಯೇ ನನ್ನನ್ನು ಉತ್ತೇಜಿಸಿದ ಶ್ರೀ. ಪಾಪಂಜೆ ಸೋದರರು ಈ ಜೊತೆಕಾರ್ಯದಲ್ಲಿ ನನ್ನನ್ನೂ ಸೋದರಭಾವದಿಂದ ಸೇರಿಸಿಕೊಂಡಿದ್ದಾರೆ. ಎಂದ ಮೇಲೆ ಆ ನೆಚ್ಚಿನ ಸಂಬಂಧವೇ ನನ್ನಿಂದ ಔಪಚಾರಿಕ ಮಾತುಗಳು ಬಾರದಂತೆ ತಡೆ ಹಿಡಿದಿದೆ.

'ಮಾಧ್ವೀರ್ಗಾವೋ ಭವಂತು ನಃ'

೯–೪–೧೯೫೮<br>ಉಡುಪಿ

ಬನ್ನಂಜೆ ಗೋವಿಂದಾಚಾರ್ಯ.

# ಪ್ರಕಾಶಕರ ಮಾತು

ಆಚಾರ್ಯರ ವಿಶ್ವತೋಮುಖಪಾಂಡಿತ್ಯಕ್ಕೆ ನಿದರ್ಶನದಂತಿರುವ ಈ **ತಂತ್ರಸಾರಸಂಗ್ರಹ** ಈ ತನಕವೂ ಕನ್ನಡದಲ್ಲಿ ಅನುವಾದಿತವಾಗಿಲ್ಲ. ಅದನ್ನು ಮೊದಲನೆಯ ಬಾರಿ ಕನ್ನಡಿಗರ ಮುಂದಿಡುವ ಭಾಗ್ಯ ನಮ್ಮದಾದುದಕ್ಕಾಗಿ ನಮಗೆ ಹೆಮ್ಮೆಯೆನಿಸುತ್ತದೆ. ಈ ಗ್ರಂಥ ನಮ್ಮವರ ಔದಾಸೀನ್ಯದಿಂದ ಹೆಚ್ಚು ಜನ ವಿಮರ್ಶಕರ ಗಮನಕ್ಕೆ ಬೀಳದೆ– ಪ್ರಚಾರವಿಲ್ಲದೆ– ಸುಪ್ತಾವಸ್ಥೆಯಲ್ಲಿದ್ದಂತಿತ್ತು. ಅಚ್ಚಾದ ಪುಸ್ತಕಗಳೂ ಅಶೋಧಿತಗಳಾದ ಒಂದೆರಡು ಸಂಸ್ಕೃತ ವ್ಯಾಖ್ಯಾನಗಳೊಡನೆ ಅಚ್ಚಾಗಿದ್ದವು. ಅಂಥ ವ್ಯಾಖ್ಯಾನಗಳಿಂದ ಮೂಲ ಸ್ಫುಟವಾಗುವುದಕ್ಕಿಂತಲೂ ಇನ್ನಷ್ಟು ಜಟಿಲವಾಗುವ ಸಂಭವವೇ ಹೆಚ್ಚು. ಅದರಿಂದಲೇ ಇರಬೇಕು, ಹೆಚ್ಚಿನ ವಿಮರ್ಶಕರ ಗಮನ ಇದರ ಮೇಲೆ ಹರಿದೇ ಇಲ್ಲ. ಕನ್ನಡದಲ್ಲಿ ಮಾತ್ರವೇ ಅಲ್ಲ, ಈ ಗ್ರಂಥ ಇಂಗ್ಲಿಷಿನಂಥ ವ್ಯಾಪಕಭಾಷೆಗಳಲ್ಲೂ ಅನುವಾದವಾಗಿ ಬರಬೇಕು. ಕನ್ನಡಿಗರು ಮಾತ್ರವೇ ಅಲ್ಲ, ದೇಶದೇಶದ ಜನ ಇದನ್ನು ಓದಬೇಕು. ಆಗ ಜನತೆಗೆ ಅರಿವಾದೀತು– ಈ ಗ್ರಂಥ ತಂತ್ರಗ್ರಂಥಗಳಲ್ಲಿ ಎಷ್ಟು ಮಹತ್ತರವಾದ ಸ್ಥಾನವನ್ನು ಪಡೆದೀತು– ಎಂದು. 'ಗ್ರಂಥೋಽಯಮಪಿ ಬಹ್ವರ್ಥಃ.' ಆಚಾರ್ಯರು ತಮ್ಮ ಭಾಷ್ಯಾನುಭಾಷ್ಯಗಳ ಕುರಿತು ಆಡಿದ ಮಾತು ಈ ತಂತ್ರಗ್ರಂಥಕ್ಕೂ ಅನ್ವಯಿಸಬಹುದು. ಕೇವಲ ೪೦೦ ಪದ್ಯಗಳಲ್ಲಿ ತಾತ್ತ್ವಿಕ ತಂತ್ರಗಳ ಮರ್ಮವನ್ನೆಲ್ಲ ಹೊರಗೆಡಹುವ ಈ ತಂತ್ರದ ಹಿರಿಮೆಯೇನೂ ಕಮ್ಮಿಯದಲ್ಲ.

ನಮ್ಮ ಸೌಹಾರ್ದದ ಬಂಧುಗಳಾದ **ಬನ್ನಂಜೆ ಗೋವಿಂದಾಚಾರ್ಯರು** ಹಿಂದಿನಂತೆಯೇ ಈ ಗ್ರಂಥವನ್ನೂ ಮುದ್ದಾಗಿ ಅನುವಾದಿಸಿ ಕೊಟ್ಟಿದ್ದಾರೆ. ಜತೆಗೆ ಮನನೀಯಗಳಾದ ಮುನ್ನುಡಿ ಪರಿಶಿಷ್ಟಗಳನ್ನೂ ಬರೆದುಕೊಟ್ಟಿದ್ದಾರೆ. ಹೀಗೆಯೇ ಆಚಾರ್ಯರ **ಋಗ್ಭಾಷ್ಯ**ವನ್ನೂ ಋಗ್ವೇದದ ಮಂತ್ರಗಳೊಡನೆ ಅನುವಾದಿಸಿ ಪ್ರಕಟಿಸಬೇಕೆಂಬ ಹಂಬಲು ಇದೆ. ಆಚಾರ್ಯಪೀಠದ ಜವಾಬುದಾರಿಯನ್ನು ಹೊತ್ತವರು, ಸಂಸ್ಥಾನದ ಅಧಿಕಾರಿಗಳು, ಇಂಥ ಕಾರ್ಯದಲ್ಲಿ ಎಷ್ಟು ನೆರವು ನೀಡಿದರೋ ಅಷ್ಟು ಚೆನ್ನು. ಪ್ರಕೃತ ಗ್ರಂಥಕ್ಕೇ ಆದರೂ ಯಾವುದಾದರೂ ಕಡೆಯಿಂದ ಸಹಕಾರ ಅರ್ಥದ ರೂಪದಲ್ಲಿ

ಹರಿದು ಬರುತ್ತಿದ್ದರೆ— ಕಾಗದಗಳಿಗೆ ಬರಗಾಲ ಬಂದ ಈ ಕಾಲದಲ್ಲೂ ಈ ಪುಸ್ತಕವನ್ನು ಕಮ್ಮಿ ಬೆಲೆಯಲ್ಲಿ ವಾಚಕರಿಗೆ ಒದಗಿಸಬಹುದಾಗಿತ್ತು!

ಈ ಸಂದರ್ಭದಲ್ಲಿ ಪೇಜಾವರ ಮಠಾಧೀಶರಾದ **ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರ** ಆಶೀರ್ರೂಪವಾದ ನೆರವನ್ನು ನಾವು ಮರೆಯಲಾರೆವು. ನಮ್ಮ ಗ್ರಂಥಕ್ಕೆ- ಮಂಗಲದ ಸೇಸೆಯಂತೆ— ಎರಡು ನುಡಿಮುತ್ತುಗಳನ್ನು ಬರೆದು ಅನುಗ್ರಹಿಸಬೇಕು ಎಂದು ಕೇಳಿಕೊಂಡಾಗ— ಅವರು ಸಂತೋಷದಿಂದ ಒಪ್ಪಿಕೊಂಡು ತಮ್ಮ ಅನೇಕ ಕಾರ್ಯಗಳ ಅಡಚಣೆಯ ಮಧ್ಯದಲ್ಲೂ ಮುನ್ನುಡಿಯನ್ನು ಬರೆದು ಕಳುಹಿದ್ದಾರೆ. ಶ್ರೀಗಳವರು ನಮ್ಮ ಮೇಲೆ ತೋರಿದ ವಿಶ್ವಾಸಕ್ಕೆ ಪ್ರತಿಯಾಗಿ ನಾವೇನನ್ನೂ ಮಾಡಲಾರೆವು. ಶ್ರೀಗಳವರ ಸಹಕಾರರೂಪವಾದ ಅನುಗ್ರಹಕ್ಕಾಗಿ ಅನಂತಪ್ರಣಾಮಗಳು.

ಕೊನೆಯದಾಗಿ— ಈ ಗ್ರಂಥದ ಅನುವಾದಕಾರ್ಯದಲ್ಲಿ ಅನೇಕ ಪುಸ್ತಕಗಳನ್ನು ಒದಗಿಸಿಕೊಟ್ಟು ಸಹಕರಿಸಿದ ಎಲ್ಲ ಮಹನೀಯರಿಗೂ ನಮ್ಮ ಧನ್ಯವಾದ ಸಲ್ಲುತ್ತದೆ.

**ವಿಲಂಬಿ:**
ವೈಶಾಖ ಶು. ೧೩, ೧೮೮೦
(ಮೇ, 1, 1958)

**ಪ್ರಕಾಶಕರು**

# ಮುನ್ನುಡಿ

ಮಧ್ವಸಿದ್ಧಾಂತಗ್ರಂಥಾಲಯದ ಕಡೆಯಿಂದ ಪ್ರಕಟಿಸಲಾಗುವ 'ತಂತ್ರಸಾರ'ದ ಕನ್ನಡ ಅನುವಾದಕ್ಕೆ ಮುನ್ನುಡಿಯನ್ನು ಬರೆಯಲು ನಮ್ಮನ್ನು ಕೇಳಿಕೊಳ್ಳಲಾಗಿದೆ. ವಾಸ್ತವವಾಗಿ ತಂತ್ರಗ್ರಂಥಗಳಲ್ಲಿ ವಿಶೇಷ ಪರಿಶ್ರಮವಿಲ್ಲದ ನಾವು ಇದರ ಮುನ್ನುಡಿಯನ್ನು ಬರೆಯಲು ಅಧಿಕೃತರೆಂದು ಹೇಳಲು ಬರಲಾರದು. ಆದರೂ ಶ್ರೀಮದಾಚಾರ್ಯರ ಗ್ರಂಥದ ಕನ್ನಡ ಅನುವಾದವನ್ನು ಪ್ರಕಟಿಸುತ್ತಿರುವ ಮಧ್ವಸಿದ್ಧಾಂತಗ್ರಂಥಾಲಯದ ಈ ಸದುದ್ಯಮವನ್ನು ಅಭಿನಂದಿಸುವುದು ನಮ್ಮ ಕರ್ತವ್ಯವೆಂಬ ದೃಷ್ಟಿಯಿಂದ ಇಂತಹ ಗ್ರಂಥದ ಮುನ್ನುಡಿಯನ್ನು ಬರೆಯಲು ಬೇಕಾಗಬಹುದಾದ ತಂತ್ರ ಗ್ರಂಥಗಳ ಅಭ್ಯಾಸ ಮತ್ತು ವಿವೇಚನಾಶಕ್ತಿಯ ವಿಲೋಪವು ಎದ್ದು ಕಾಣ ಬಹುದಾದರೂ ಈ ಮುನ್ನುಡಿಯನ್ನು ಬರೆಯಲು ನಾವು ಒಪ್ಪಿಕೊಂಡದ್ದಾಗಿದೆ.

ತಂತ್ರಸಾರವು ಭಾರತೀಯರ ಕರ್ಮಾಚರಣೆಗೆ ಸಂಬಂಧಿಸಿದ ಒಂದು ಅಮೂಲ್ಯ ಗ್ರಂಥ. ನಾವು ಭಗವಂತನನ್ನು ಆರಾಧಿಸುವ, ಪರಮಾತ್ಮನ ಪವಿತ್ರನಾಮಗಳನ್ನು ಜಪಿಸಿ ಆ ಮೂಲಕ ಆಧ್ಯಾತ್ಮಿಕಶಕ್ತಿಯನ್ನು ಬೆಳೆಸಿ ಕೊಳ್ಳುವ ವಿಧಾನಕ್ಕೆ ಸಂಬಂಧಿಸಿದ ಈ ಗ್ರಂಥವು ಶ್ರೀಮಧ್ವಾಚಾರ್ಯರಿಂದ ರಚಿತವಾಗಿದೆ. ದೇವರನ್ನು ಆರಾಧಿಸುವುದು ಮುಂತಾದ ಕಾರ್ಯಗಳು ಹೃದಯಕ್ಕೆ ಸಂಬಂಧಿಸಿದ್ದಾಗಿರುವಾಗ ಅವುಗಳ ಬಗ್ಗೆ ಈ ಆಚಾರಜಾಲವು ಈ ತಾಂತ್ರಿಕ ಪ್ರಕ್ರಿಯೆಗಳು ಏಕೆಂದೂ. ಮುಕ್ತಮನಸ್ಸಿನಿಂದ ಯಾವ ತಾಂತ್ರಿಕ ಬಂಧನವೂ ಇಲ್ಲದೆ ದೇವರನ್ನು ಆರಾಧಿಸುವ ಕ್ರಮವನ್ನು ಶಾಸ್ತ್ರ ಕಾರರು ಏಕೆ ರೂಢಿಗೆ ತರಲಿಲ್ಲವೆಂದೂ ಆಧುನಿಕರು ಪ್ರಶ್ನಿಸುವುದುಂಟು. ನಮಗಂತೂ ಆಧುನಿಕರ ಈ ಪ್ರಶ್ನೆ ವಿಚಿತ್ರವೆನಿಸುತ್ತಿದೆ. ರೋಗದ ಪರಿಹಾರಕ್ಕೆ ವೈದ್ಯರನ್ನು ಅವಲಂಬಿಸುವ ವ್ಯಕ್ತಿಯು ಅವರಿಂದ ರೋಗ ನಿವೃತ್ತಿಯ ಬಗ್ಗೆ ಸಲಹೆಗಳನ್ನು ಪಡೆದು ಔಷಧವನ್ನು ಸ್ವೀಕರಿಸಿ, ಔಷಧವನ್ನು ಸೇವಿಸುವ ಬಗ್ಗೆ ಅವರು ಹೇಳುವ ಕ್ರಮ, ಪರಿಮಾಣಗಳನ್ನು ಅನುಸರಿಸದೆ ಇರುವುದಾಗಲೀ ಅವರು ಹೇಳುವ ಪಥ್ಯ ನಿಯಮಗಳನ್ನು ಅತಿಕ್ರಮಿಸುವುದಾಗಲೀ ಜಾಣತನವಾಗಲಾರದು. ಔಷಧದ ಬಗ್ಗೆ ವೈದ್ಯರು ಬೇಕಾಗುವಂತೆ ಅದನ್ನು ಸೇವಿಸುವ ವಿಧಾನಕ್ಕೂ ಅವರನ್ನೇ ಆಶ್ರಯಿಸಬೇಕಾಗುವುದು.

ಅಂತೆಯೇ ಭಗವಂತನ ಜ್ಞಾನ ಹಾಗೂ ಸಾಕ್ಷಾತ್ಕಾರಕ್ಕಾಗಿ ಋಷಿಗಳನ್ನು ಅವಲಂಬಿಸಿ ಅವರ ಕ್ರಮ, ಸಂಪ್ರದಾಯಗಳನ್ನು ಅವರೇ ತಿಳಿಸಿದಾಗ ಅದು ಅನಾವಶ್ಯಕವೆಂದು ಅವುಗಳನ್ನು ಅಪಹಾಸದೃಷ್ಟಿಯಿಂದ ಅಲಕ್ಷ್ಯಭಾವದಿಂದ ನೋಡುವುದು ಸಮಂಜಸವೆನಿಸಲಾರದು. ಔಷಧವನ್ನು ಸ್ವೀಕರಿಸುವಾಗ ವೈದ್ಯರ ವಿಧಾನವನ್ನು ಅಲಕ್ಷಿಸಿ ಸ್ವೇಚ್ಛೆಯಂತೆ ಉಪಯೋಗಿಸಿದರೆ ಆಗುವ ಪರಿಣಾಮದಂತೆ ಸಾಕ್ಷಾತ್ಕಾರಿಗಳಿಂದ ದೇವರ ಜ್ಞಾನವನ್ನು ಪಡೆದು ಅವನನ್ನು ಹೊಂದುವ ಬಗ್ಗೆ ಆ ಜ್ಞಾನಿಗಳು ತೋರಿಸಿದ ಕ್ರಮ, ನಿಯಮಗಳನ್ನು ಅನುಸರಿಸದೆ ನಮಗೆ ತೋರಿದಂತೆ ನಡೆದರೆ ಏನೂ ಪ್ರಯೋಜನವಾಗಲಾರದು. ಆದ್ದರಿಂದ ಸಾಧಕರು ತಮ್ಮ ಆಧ್ಯಾತ್ಮಿಕ ಪ್ರಗತಿಗಾಗಿ ಮಹರ್ಷಿಗಳ ಮಾರ್ಗದರ್ಶನವನ್ನು ಬಯಸುವುದು ಅನಿವಾರ್ಯವಾಗಿದೆ. ತಂತ್ರಸಾರವು ಇಂತಹ ಒಂದು ಪರಮ ಪವಿತ್ರವೂ ಸಾಧಕರಿಗೆ ಮಾರ್ಗದರ್ಶಕವೂ ಆದ ಗ್ರಂಥವಾಗಿದೆ.

ಶ್ರೀಮದಾಚಾರ್ಯರ ಕಾರ್ಯವು ಕೇವಲ ತತ್ತ್ವಜ್ಞಾನದ ಕ್ಷೇತ್ರದಲ್ಲಿ ಮರ್ಯಾದಿತವಾಗಿರದೆ ಉಳಿದ ಎಲ್ಲಾ ಸಾಮಾಜಿಕ ರಂಗಗಳನ್ನೂ ಅದು ವ್ಯಾಪಿಸಿಕೊಂಡಿತ್ತು. ಶ್ರೀಮದಾಚಾರ್ಯರು ತಮ್ಮ ನಿರ್ಮಲವೂ ಹೃದಯಹಾರಿಯೂ ಆದ ವಿಚಾರಧಾರೆಯಿಂದ ತತ್ತ್ವಜ್ಞಾನದ ಕ್ಷೇತ್ರವನ್ನು ವಿಕಸಿತಗೊಳಿಸಿ ಅಲ್ಲಿ ಸಮೃದ್ಧಿಯನ್ನೂ ಪರಿಪುಷ್ಟತೆಯನ್ನೂ ನಿರ್ಮಿಸಿ ಜನತೆಯ ಹೃದಯದ ಹಸಿವಿಗೆ ಪರಿಹಾರವನ್ನು ಒದಗಿಸಿದಂತೆ ಸಾಮಾಜಿಕ ಕ್ಷೇತ್ರದಲ್ಲೂ ಮಹತ್ತಾದ ಸುಧಾರಣೆಯನ್ನು ಸಾಧಿಸಿ ಜನರ ಮನಸ್ಸಿನಲ್ಲಿ ಬಲವಾಗಿ ಬೇರೂರಿದ್ದ ಅನೇಕ ಅಂಧಸಂಪ್ರದಾಯಗಳನ್ನೂ ಪರಸ್ಪರ ವಿಸಂಗತಗಳಾಗಿದ್ದ ಜಳ್ಳು ಆಚಾರಗಳನ್ನೂ ಹೊಡೆದೋಡಿಸಿ ಪರಿಶುದ್ಧವಾದ ಸಾತ್ತ್ವಿಕ ಧರ್ಮಾಚರಣೆಯ ತಳಹದಿಯನ್ನು ಹಾಕಿದ ಧರ್ಮನಿಷ್ಠ ಕ್ರಾಂತಿಪುರುಷರಾಗಿದ್ದಾರೆ. ಪರಸ್ಪರ ವಿರುದ್ಧಗಳಾದ ಪುರಾಣಗಳನ್ನು ಕ್ರಮಬದ್ಧವಾಗಿ ವಿಶ್ಲೇಷಿಸಿ ಸತ್ಯವನ್ನು ಕಂಡುಹಿಡಿಯಲು ಬೇಕಾದ ಪೌರಾಣಿಕ ವಿವೇಚನಾದೃಷ್ಟಿಯನ್ನೂ ಹೊಂದಿರದ ಆಗಿನ ಸಮಾಜವು ಎಲ್ಲಾ ಪುರಾಣಗಳಿಗೂ ಜೋತುಬಿದ್ದು ಅವುಗಳಲ್ಲಿ ಎದ್ದು ಕಾಣುವ ತೀರ ವಿರೋಧದ ಸಂಗತಿಗಳನ್ನು ವಿಮರ್ಶಿಸುವ ಗೋಜಿಗೆ ಹೋಗದೆ ಪರಸ್ಪರ ವಿಸಂಗತಗಳಾದ ಆಚಾರವಿಚಾರಗಳನ್ನು ತನ್ನಲ್ಲಿ ಅಳವಡಿಸಿಕೊಂಡಿತ್ತು. ಪುರಾಣಗಳಲ್ಲಿ ಹೇಳಿದ್ದನ್ನೆಲ್ಲಾ ನಂಬುವ ಈ ಮುಗ್ಧ ದೃಷ್ಟಿಯಿಂದ ಪುರಾಣದಲ್ಲಿ ಅಡಗಿದ ಸತ್ಯ

ವನ್ನು ಕಾಣಲು ಅಸಾಧ್ಯವಾಯಿತು. ಹೀಗೆ ಎಲ್ಲಾ ರೀತಿಯ ಪುರಾಣಗಳಲ್ಲೂ ಅವುಗಳನ್ನು ಆಧರಿಸಿದ ತಂತ್ರಭಾಗದಲ್ಲೂ ಅಶಾಸ್ತ್ರೀಯವೂ ವಿವೇಚನಾರಹಿತವೂ ಆದ ಶ್ರದ್ಧೆಯನ್ನು ಮಾಡಿದ್ದರಿಂದ ಸತ್ಯಕ್ಕೆ ದೂರವೂ ಅರ್ಥರಹಿತವೂ ಆದ ಅನೇಕ ವಾಮಾಚಾರಗಳು ಹುಟ್ಟಲು ಅವಕಾಶವಾಯಿತು. ಮಾತ್ರವಲ್ಲದೆ ಭಿನ್ನ ಭಿನ್ನ ರೀತಿಯ ಅನೇಕ ಆಚಾರ ವಿಚಾರಗಳು ಜನರ ಜೀವನದಲ್ಲಿ ಸೇರಿಕೊಂಡಿದ್ದರಿಂದ ಅವುಗಳಲ್ಲಿ ಯಾವ ತರದ ಹೊಂದಾಣಿಕೆಯೂ ಇಲ್ಲದಂತಹ ವಿಕೃತಧಾರ್ಮಿಕಪರಿಸ್ಥಿತಿಯು ನಿರ್ಮಿತವಾಗಿತ್ತು.

ಈ ಸಂದರ್ಭದಲ್ಲಿ ಶ್ರೀಮಧ್ವಾಚಾರ್ಯರು ಮಾಡಿರುವ ಕಾರ್ಯವು ಅಮೋಘವೂ ಅಸಾಧಾರಣವೂ ಆಗಿತ್ತು. ಪುರಾಣಗಳನ್ನು ಹೇಗೆ ನೋಡಬೇಕೆನ್ನುವುದರ ಬಗ್ಗೆ ಒಂದು ಶಾಸ್ತ್ರೀಯ ದೃಷ್ಟಿಯನ್ನು ಅವರು ಜನರ ಮುಂದೆ ಇಟ್ಟರು. ಹಲವು ಪುರಾಣಗಳು ತಾಮಸಗಳೆಂದೂ ಅವು ಅಪ್ರಾಮಾಣಿಕಗಳೆಂದೂ ಸಪ್ರಮಾಣವಾಗಿ ಸಾರಿದರಲ್ಲದೆ ಅಂತಹ ಪುರಾಣಗಳು ಹೇಗೆ ಮತ್ತು ಯಾವ ಸಂದರ್ಭದಲ್ಲಿ ಹುಟ್ಟಿದವು ಎಂಬುದನ್ನೂ ವಿವರಿಸಿದರು. ಹೀಗೆ ಪುರಾಣಗಳನ್ನು ಕ್ರಮಬದ್ಧವಾಗಿ ವಿಭಜಿಸಿ ಪುರಾಣಗಳ ಅರ್ಥವನ್ನು ಕಂಡುಹಿಡಿಯಲು ಬೇಕಾದ ಪದ್ಧತಿಯನ್ನು ತೋರಿಸಿಕೊಟ್ಟು ಸತ್ಯದೃಷ್ಟಿಗೆ ಒಪ್ಪುವಂತಹ ಏಕರೂಪವಾದ ಆಚಾರ ಹಾಗೂ ಸಂಸ್ಕೃತಿಯ ದರ್ಶನವನ್ನು ಜನತೆಗೆ ಮಾಡಿಸಿದರು. ನಮ್ಮ ದರ್ಶನ ಹಾಗೂ ಆಚಾರಗಳಿಗೆ ಯಾವ ತರದ ವಿಸಂಗತಿ ಇಲ್ಲದಂತೆಯೂ ನಮ್ಮ ಎಲ್ಲಾ ಆಚಾರಗಳಿಗೂ ಒಂದು ಏಕಸೂತ್ರತೆ ಇರುವಂತೆಯೂ ಒಂದು ಸುವ್ಯವಸ್ಥಿತ ಹಾಗೂ ವಿರೋಧಾಭಾಸವಿಲ್ಲದ ಜೀವನ ಪದ್ಧತಿಯನ್ನು ವೇದ ಪುರಾಣಗಳಿಂದ ಮಥಿಸಿ ಸಮಾಜಕ್ಕೆ ನೀಡಿದರು. ಶ್ರೀಮಧ್ವಾಚಾರ್ಯರು ಮಾಡಿರುವ ಈ ಧಾರ್ಮಿಕ ಮಹಾಕ್ರಾಂತಿಯ ದಿಗ್ದರ್ಶನವನ್ನು ಅವರು ಮಾಡಿದ ಈ ತಂತ್ರಸಾರಗ್ರಂಥದಲ್ಲೂ ನಾವು ಕಾಣಬಹುದಾಗಿದೆ.

ಬೇರೆ ಬೇರೆ ಪುರಾಣಗಳನ್ನು ಆಧರಿಸಿರುವ ವಿಚಿತ್ರರೀತಿಯ ಪರಸ್ಪರ ವಿರೋಧಿ ತಂತ್ರಗ್ರಂಥಗಳಿಂದಾಗಿ ವ್ಯಾಮಿಶ್ರರೀತಿಯ ಕರ್ಮಪದ್ಧತಿಯು ಆಗ ಬಳಕೆಯಲ್ಲಿದ್ದು ಶುದ್ಧವಾದ ಪದ್ಧತಿಯನ್ನು ಅಧಿಕಾರವಾಣಿಯಿಂದ ಸಮರ್ಥಿಸಬಲ್ಲ ಒಬ್ಬ ಮಹಾಪುರುಷನ ಮಾರ್ಗದರ್ಶನವು ಆಗ ಅವಶ್ಯವಿತ್ತು. ಶ್ರೀಮದಾಚಾರ್ಯರು ಈ ಗ್ರಂಥ ಹಾಗೂ ಇದರ ಹಿನ್ನಲೆಯಾದ ತರ್ಕಬದ್ಧ

ಶಾಸ್ತ್ರೀಯ ವಿವೇಚನೆಯಿಂದ ಸಾತ್ವಿಕಪುರಾಣಗಳನ್ನವಲಂಬಿಸಿರುವ ತಂತ್ರ ಪದ್ಧತಿಯನ್ನು ಜನರಿಗೆ ತೋರಿಸಿ ಈ ದೊಡ್ಡ ಕೊರತೆಯನ್ನು ನೀಗಿದರು. ಇದರಿಂದ ಕರ್ಮಕಾಂಡದಲ್ಲಿಯ ಅನೇಕ ಕಂದಾಚಾರಗಳು ದೂರವಾಗಿ ವೇದಗಳು ಮತ್ತು ಪ್ರಾಮಾಣಿಕ ಪುರಾಣಗಳಿಗೆ ಸಮ್ಮತವಾದ ಏಕಮೇವ ಸಾತ್ವಿಕ ಕರ್ಮಪ್ರಕ್ರಿಯೆಯನ್ನು ಜನತೆಯು ಗೊತ್ತುಮಾಡಿಕೊಳ್ಳಲು ಅನುಕೂಲವಾಯಿತು. ಪುರಾಣಗಳ ಬಗ್ಗೆಯೂ ತಂತ್ರಗಳ ಬಗ್ಗೆಯೂ ಆಚಾರ್ಯರು ತೋರಿಸಿದ ಈ ದೃಷ್ಟಿಯನ್ನು ಬಿಟ್ಟು ಹೊಂದಿಕೆಯಿಲ್ಲದ ಎಲ್ಲ ಆಚಾರ ಮತ್ತು ವಿಚಾರಗಳನ್ನು ಒಂದುಗೂಡಿಸಿ ಒಂದು ವಿಚಿತ್ರ ವ್ಯಾಮಿಶ್ರಸಂಸ್ಕೃತಿಯನ್ನು ನಮ್ಮ ಉದಾತ್ತ ಪರಂಪರೆಯೆಂದು ಸಾರುವುದು ವೇದಧರ್ಮದ ಅವಹೇಳನವೆಂದೂ ಇದು ಹಿಂದೂಧರ್ಮದ ದೌರ್ಬಲ್ಯ ಹಾಗೂ ಅವಾಸ್ತವಿಕತೆಯ ಪ್ರತೀಕವಾಗಬಹುದೆಂದೂ ಯಾರಿಗೂ ತೋರದಿರಲಾರದು. ಈ ಕೊಳಚೆಯನ್ನು ಒಗೆದು ಹಿಂದೂಧರ್ಮದ ಪ್ರಭೆಯನ್ನು ಬೆಳಗಿಸಿದ ಕೀರ್ತಿಯು ಶ್ರೀಮದಾಚಾರ್ಯರಿಗೇನೇ ಸಲ್ಲತಕ್ಕದ್ದಿರುವುದು. ಅವರ ಈ ಧಾರ್ಮಿಕ ಮಹಾಕ್ರಾಂತಿಯ ಹೆಗ್ಗುರುತಾದ ಈ ತಂತ್ರಸಾರವು ಹಿಂದುಸ್ಥಾನದ ಧಾರ್ಮಿಕ ಇತಿಹಾಸದಲ್ಲಿ ಮಹತ್ತ್ವದ ಸ್ಥಾನವನ್ನು ಪಡೆಯುತ್ತದೆಯೆಂದು ನಮ್ಮ ಅಭಿಪ್ರಾಯ. ಈ ಗ್ರಂಥವು ಚಿಕ್ಕದಾದರೂ ಇದರ ಹಿಂದೆ ಒಂದು ದೊಡ್ಡ ಇತಿಹಾಸವು ಒಂದು ಪ್ರಬಲವಾದ ಕ್ರಾಂತಿಯು ಅಡಗಿದೆಯೆಂಬುದನ್ನು ನಾವು ಗಮನಿಸಿದರೆ ಇದರ ಮಹತ್ವವು ವೇದ್ಯವಾಗದಿರಲಾರದು.

ಈ ಗ್ರಂಥದ ಅನುವಾದವನ್ನು ಶ್ರೀ. ಗೋವಿಂದಾಚಾರ್ಯರು ಉತ್ತಮ ರೀತಿಯಿಂದ ಮಾಡಿರುವರು. ಶ್ರೀ. ಗೋವಿಂದಾಚಾರ್ಯರು ನಮಗೆ ಚೆನ್ನಾಗಿ ಪರಿಚಿತರಾಗಿದ್ದು ಅವರ ತೀಕ್ಷ್ಣದೃಷ್ಟಿ, ವ್ಯಾಸಂಗತತ್ಪರತೆ, ವಿಷಯಗಳನ್ನು ಆಳವಾಗಿ ಶೋಧಿಸುವ ಮಾನಸಿಕಶಕ್ತಿ, ಉತ್ಸಾಹ ಇವುಗಳಿಗೆ ನಾವು ಬಹಳ ಮುಗ್ಧರಾಗಿದ್ದೇವೆ. ಅವರಿಗೆ ವಿಮರ್ಶರಂಗದಲ್ಲಿ ಅತ್ಯುನ್ನತವಾದ ಉಜ್ಜ್ವಲವಾದ ಭವಿಷ್ಯವು ಕಾದಿರಿಸಲ್ಪಟ್ಟಿದೆಯೆಂದು ನಮಗೆ ಮನವರಿಕೆಯಾಗಿದೆ. ಇಲ್ಲಿ ಅವರು ತಂತ್ರಸಾರದ ಅನುವಾದದ ಜೊತೆಗೆ ಕೆಳಗೆ ಟಿಪ್ಪಣಿಗಳನ್ನು ಬರೆದು ಅಭ್ಯಾಸಿಗಳಿಗೆ ಹೆಚ್ಚಿನ ಸಾಮಗ್ರಿಗಳನ್ನು ಒದಗಿಸಿರುವರಲ್ಲದೆ ತಮ್ಮ ವ್ಯಾಸಂಗ ಹಾಗೂ ಸಂಶೋಧನೆಯ ಪರಿಚಯವನ್ನೂ ತೋರಿಸಿದ್ದಾರೆ. ಅವರ ಅನುವಾದವು ಸರಳವೂ ಪ್ರಾಮಾಣಿಕವೂ ಆಗಿರುವುದಲ್ಲದೆ ಟಿಪ್ಪಣಿಯು ವಿಮರ್ಶಪೂರ್ಣವಾಗಿದೆ. ಆದರೆ ಕೆಲವು ಕಡೆ ಅವರ ಅಭಿಪ್ರಾಯಕ್ಕೆ ನಾವು

ಸಹಮತರಾಗಲಾರದಂತಹ ವಿಷಯಗಳು ಈ ಪುಸ್ತಕದಲ್ಲಿ ಇಲ್ಲವೆಂದು ನಾವು ಹೇಳಲಾರೆವು. ಒಂದು ಕಡೆ ಉಪಾಸನೆಗೆ ಸಂಬಂಧಿಸಿದ ರುದ್ರನ ರೂಪ, ವರ್ಣಗಳು ಪುರಾಣಗಳಲ್ಲಿ ಭಿನ್ನವಾಗಿ ಪ್ರತಿಪಾದಿಸಲ್ಪಟ್ಟಿದ್ದುದನ್ನು ಇವರು ಉದಾಹರಿಸಿ ಉಪಾಸನೆಯಲ್ಲಿ ತಮ್ಮ ತಮ್ಮ ಬುದ್ಧಿಯಿಂದ ತಮ್ಮ ತಮ್ಮ ದೃಷ್ಟಿಗಳಿಗೆ ಅನುಗುಣವಾಗಿ ರೂಪಗಳನ್ನು ಕಲ್ಪಿಸಿಕೊಳ್ಳಲಾಗುವುದರಿಂದ ಈ ಭಿನ್ನತೆಯು ಸಂಭವಿಸೀಯವೆಂದು ಒರೆದಿರುವುದು ಶ್ರೀಮದಾಚಾರ್ಯರು ಉಪಾಸನೆಯ ಬಗ್ಗೆ ತಳೆದಿರುವ ದೃಷ್ಟಿಗೆ ವಿರುದ್ಧವಾಗುತ್ತದೆ.* ಸಾಧ್ಯದಲ್ಲಿ ಸತ್ಯತೆ ಇರುವಂತೆ ಸಾಧನದಲ್ಲೂ ಸತ್ಯತೆ ಇರಬೇಕೆಂದೂ ಉಪಾಸನೆಯಲ್ಲಿ ಸತ್ಯವನ್ನೇ ಗೋಚರಿಸಬೇಕೆಂದೂ ಅಲ್ಲಿ ಕಲ್ಪನೆಗೆ ಅಸತ್ಯದ ಪ್ರತಿಭಾಸಕ್ಕೆ ಎಳ್ಳಷ್ಟೂ ಅವಕಾಶವಿರಲಾರದೆಂದೂ ಪ್ರತಿಪಾದಿಸುವವರಲ್ಲಿ ಶ್ರೀಮದಾಚಾ

---

* ರುದ್ರನ ಮುಖದ ಬಣ್ಣಗಳ ವಿಷಯದಲ್ಲಿ– ನಾನು ಬರೆದ ವಿಕಲ್ಪವಕ್ಷ ಆಚಾರ್ಯರ ಸಿದ್ಧಾಂತಕ್ಕೆ ವಿರುದ್ಧವಾಗುವ ಸಂಭವವನ್ನು ಶ್ರೀಗಳವರು ಇಲ್ಲಿ ಉಲ್ಲೇಖಿಸಿದ್ದಾರೆ. ಆದರೆ– ಪುರಾಣಗಳಲ್ಲಿ ವಿರೋಧ ಬಂದಾಗ ಅವುಗಳಿಗೆ ಐಕಮತ್ಯವನ್ನು ಕಲ್ಪಿಸುವ ರೀತಿ ತಪ್ಪೆಂದು ನನಗನ್ನಿಸುವುದಿಲ್ಲ. ತಾಮಸಪುರಾಣಗಳೆಂದರೆ ಅವೇನು ತಪ್ಪಿನ ಕೊಂಪೆಗಳಲ್ಲ, ಹುಚ್ಚುತನದ ಬಡಬಡಿಕೆಗಳಲ್ಲ. ಅವುಗಳ ಆಪಾತದ ಅರ್ಥ ವ್ಯಾಮೋಹಕವಾಗಿದೆ ಎಂಬೊಂದು ಕಾರಣದಿಂದಲೇ ಅವು ತಾಮಸಗಳಾಗಿವೆ. ಆದರಿಂದ ಎಲ್ಲ ಪುರಾಣಗಳ ಒಡಂಬಡಿಕೆ ಸಾಧ್ಯವಿದ್ದರೆ ಅದನ್ನು ಮಾಡಿಕೊಂಡು ಸಾಗುವುದು ಒಳಿತೆಂದೇ ನನ್ನ ಆಶಯ. ಹಾಗೆಯೇ ಉಪಾಸನೆಯ ಈ ರೂಪಗಳು ಅನೇಕ ವಿಧವಾಗಿ ಉಲ್ಲೇಖಿತಗಳಾಗಿದ್ದರೆ ಅವೆಲ್ಲವೂ ಪ್ರಾಮಾಣಿಕಗಳಾಗುವ ಸಂಭವವುಂಟು. ಒಂದೇ ಮೂರ್ತಿಯನ್ನು– ಬೇರೆ ಬೇರೆ ಉದ್ದೇಶಗಳಿಗಾಗಿ ವಿಭಿನ್ನರೂಪಗಳಿಂದ ಧ್ಯಾನಿಸುವುದು ಎಲ್ಲ ತಂತ್ರಗಳಿಗೂ ಸಮ್ಮತವಾದ ವಸ್ತುಸ್ಥಿತಿ. ಆಚಾರ್ಯರಿಗೂ ಇದು ಅಸಮ್ಮತವಲ್ಲ. ಎಂತಲೇ ಅವರು ದುರ್ಗಾಮಂತ್ರವನ್ನು ನಿರೂಪಿಸುವ ಸಮಯದಲ್ಲಿ 'ತ್ರಿನೇತ್ರತ್ವಂ ಚ ದುರ್ಗಾಯಾಃ ಪ್ರಾಯಃ' ಎಂದು ದುರ್ಗಾಧ್ಯಾನದಲ್ಲಿ– ಎರಡು ಕಣ್ಣಿನ ರೂಪ ಮತ್ತು ಮೂರು ಕಣ್ಣಿನ ರೂಪ ಹೀಗೆ ಎರಡು ಬಗೆಯ ಉಪಾಸನೆಯನ್ನೂ ಒಪ್ಪಿಕೊಂಡಿದ್ದಾರೆ. ಅದರಿಂದಲೇ ನರಸಿಂಹನನ್ನು ಧ್ಯಾನಿಸುವಾಗ ಉದ್ದೇಶಭೇದದಿಂದ ಎರಡು ಕೈಯಿಂದ ಹದಿನಾರು ಕೈಗಳ ವರೆಗಿನ ಧ್ಯಾನವೂ ವಿಹಿತವಾಗಿದೆ. ಹೇಗೆ ಒಬ್ಬಳೇ ದುರ್ಗೆಗೆ ಉಪಾಸನಾಭೇದದಿಂದ ದ್ವಿನೇತ್ರತ್ವತ್ರಿನೇತ್ರತ್ವಗಳು ಕೂಡಬಹುದೋ, ಹೇಗೆ ಒಬ್ಬನೇ ನರಸಿಂಹನಿಗೆ ದ್ವಿಬಾಹುತ್ವಬಹುಬಾಹುತ್ವಗಳು ಕೂಡಬಹುದೋ ಹಾಗೆಯೇ ಈ ರೂಪಗಳನ್ನೂ ಕೂಡಿಸುವುದು ಸಾಧ್ಯವಾಗಬಹುದೇನೋ ಎಂಬ ಆಶಯವನ್ನು ಮಾತ್ರ ನಾನಿಲ್ಲಿ ಸ್ಫುಟಗೊಳಿಸಿದ್ದೇನೆ. ಆಧಾರವಿಲ್ಲದ ಕೇವಲ ಕಾಲ್ಪನಿಕ ಉಪಾಸನೆಗಳು ಮಾತ್ರ ಶ್ರೀಗಳವರಂತೆ ಸಿದ್ಧಾಂತವಿರುದ್ಧವಾಗಿವೆ. (ಲೇಖಕ)

ರ್ಯರು ಅಗ್ರಗಣ್ಯರಾಗಿರುವರು. ಆದ್ದರಿಂದ ಉಪಾಸನೆಯಲ್ಲಿ ನಮ್ಮ ಬುದ್ಧಿಗೆ ಅನುಗುಣವಾಗಿ ಕಲ್ಪನೆಗೆ ಅವಕಾಶವಿದೆಯೆಂದು ಹೇಳಿ ಎಲ್ಲ ಪುರಾಣಗಳನ್ನು ಒಂದುಗೂಡಿಸಲು ಪ್ರಯತ್ನಿಸುವುದರಿಂದ ಅಸತ್ಯೋಪಾಸನೆಯಂತಹ ಅವೈಜ್ಞಾನಿಕ ಆಚರಣೆಗೆ ಚಾಲನೆ ಕೊಟ್ಟಂತಾಗುವುದು. ಆಚಾರ್ಯರು ಪುರಾಣಗಳ ಬಗ್ಗೆ ಅನುಸರಿಸಲಾದ ಪದ್ಧತಿಯನ್ನು ಇಟ್ಟುಕೊಂಡು ಪುರಾಣಗಳಲ್ಲಿ ತೋರಿಬರುವ ವಿರೋಧದ ಅರ್ಥವನ್ನೂ ನಾವು ಸುಲಭವಾಗಿ ಗ್ರಹಿಸಿಕೊಳ್ಳಬಹುದು. ಹೀಗೆ ಕೆಲವೆಡೆ ಅನುವಾದಕರ ವಿಚಾರದ ಜೊತೆಗೆ ನಾವು ಸಹಮತರಾಗದಿದ್ದರೂ ಅವರ ಈ ಉತ್ತಮ ಅನುವಾದವನ್ನು ನಾವು ಪ್ರಶಂಸಿಸದಿರಲಾರೆವು. ಅಂತೆಯೇ ಅವರು ಈ ಎಳೇ ವಯಸ್ಸಿನಲ್ಲಿ ಈ ಟಿಪ್ಪಣಿಯ ಮೂಲಕವಾಗಿ ತೋರಿದ ಚಿಕಿತ್ಸಕಬುದ್ಧಿ, ತೀವ್ರ ಅಭ್ಯಾಸ, ಪ್ರತಿಭೆಗಳ ಬಗ್ಗೆ ನಾವು ತಲೆದೂಗದಿರಲಾರೆವು. ಅವರ ಈ ಪರಿಶ್ರಮವು ಸಫಲವಾಗಲೆಂದೂ ಅವರಿಂದ ಇನ್ನೂ ಅನೇಕ ಕೃತಿರತ್ನಗಳು ಹೊರಬರಲೆಂದೂ ನಾವು ಭಗವಂತನನ್ನು ಪ್ರಾರ್ಥಿಸುವೆವು.

ಈ ಉತ್ತಮ ಹಾಗೂ ಅಮೂಲ್ಯ ಪುಸ್ತಕವನ್ನು ಪ್ರಕಟಪಡಿಸಿದ "ಮಧ್ವ ಸಿದ್ಧಾಂತಗ್ರಂಥಾಲಯ"ದ ಈ ಉದ್ಯಮವನ್ನು ಕನ್ನಡ ಜನತೆ ಹಾಗೂ ಮಾಧ್ವಸಮಾಜವು ಸ್ವಾಗತಿಸದಿರಲಾರದು. ಈ ಗ್ರಂಥಾಲಯವು ಮಧ್ವಾಚಾರ್ಯರ ತತ್ವಜ್ಞಾನದ ಬಗ್ಗೆ ಅನೇಕ ವರ್ಷಗಳಿಂದ ಸಲ್ಲಿಸುತ್ತಿರುವ ಸೇವೆಯನ್ನು ಕನ್ನಡ ಜನತೆಯು ಎಂದಿಗೂ ಮರೆಯದು. ಗ್ರಂಥಾಲಯದ ಈ ಯೋಗ್ಯಕಾರ್ಯವನ್ನು ನಾವು ಹೃತ್ಪೂರ್ವಕವಾಗಿ ವಿಶೇಷ ಆನಂದದಿಂದ ಅಭಿನಂದಿಸಿ ಹರಸುವೆವಲ್ಲದೆ ಜನತೆಯು ಇದನ್ನು ಪ್ರೋತ್ಸಾಹಿಸಿ ಇದರಿಂದ ಇನ್ನೂ ಹೆಚ್ಚಿನ ಸೇವೆಯನ್ನು ಸ್ವೀಕರಿಸುವಂತಾಗಲಿ ಎಂದು ಹಾರೈಸುತ್ತೇವೆ.

ಬೆಂಗಳೂರು,
ದಿನಾಂಕ: 3-4-'58

ಶ್ರೀವಿಶ್ವೇಶತೀರ್ಥಶ್ರೀಪಾದಂಗಳವರು,
ಶ್ರೀಪೇಜಾವರಮಠ, ಉಡುಪಿ.

# ವಿಷಯಾನುಕ್ರಮ

**ಪ್ರಥಮಾಧ್ಯಾಯದಲ್ಲಿ:** ಮಂಗಲಾಚರಣೆ, ಓಂಕಾರದ ಅಷ್ಟಾಕ್ಷರಗಳು, ಪಂಚಾಶನ್ಮೂರ್ತಿಗಳು, ವ್ಯಾಹೃತಿ-ಅಷ್ಟಾಕ್ಷರ-ದ್ವಾದಶಾಕ್ಷರ-ಗಾಯತ್ರಿಗಳ ನಿಷ್ಪತ್ತಿನಿರೂಪಣೆ, ಚತುರ್ವಿಂಶನ್ಮೂರ್ತಿಗಳ ಲಕ್ಷಣ, ಓಂಕಾರ ಮತ್ತು ಅಷ್ಟಾಕ್ಷರದ ನ್ಯಾಸ ಧ್ಯಾನಾದಿಗಳು, , ವ್ಯಾಹೃತಿ, ದ್ವಾದಶಾಕ್ಷರಗಳ ನ್ಯಾಸಾದಿಗಳು, ಗಾಯತ್ರಿಯ ಧ್ಯಾನಾದಿಗಳು, ಮಾತೃಕಾಮಂತ್ರನ್ಯಾಸ, ಪುರುಷಸೂಕ್ತದ ಛಂದಸ್ಸುಗಳು, ವಿಷ್ಣುಷಡಕ್ಷರದ ನ್ಯಾಸಾದಿವಿಧಿಗಳು, ಈ ಮೂಲಮಹಾಮಂತ್ರಗಳ ಪ್ರಶಂಸೆ, ಪೂಜಾಕ್ರಮ, ಪೀಠಪೂಜೆ, ಧರ್ಮಾಧರ್ಮಾದಿ ದೇವತೆಗಳು, ನವಶಕ್ತಿಗಳು, ಷೋಡಶೋಪಚಾರಪೂಜೆ, ಆವರಣಪೂಜೆ, ನೈವೇದ್ಯ-ಧೂಪದೀಪ, ಪುಷ್ಪಾಂಜಲಿ, ಪುನಃಪೂಜೆ, ಫಲಶ್ರುತಿ, ಹರಿಮಹಿಮೆ, ಉಪಸಂಹಾರ. (ಶ್ಲೋಕ: ೭೨.)

**ದ್ವಿತೀಯಾಧ್ಯಾಯದಲ್ಲಿ:** ಪಂಚಾಶದಕ್ಷರಗಳ ನ್ಯಾಸಸ್ಥಾನ, ಪ್ರಾಣಾಯಾಮವಿಧಾನ, ಕಲಶಸನ್ನಿಹಿತಗಳಾದ ಅಜಾದಿಶತಮೂರ್ತಿಗಳು, ಕಲಶಸ್ಥಾಪನ, ದೀಕ್ಷಾಸ್ನಾನ, ಕಲಶಾಭಿಷೇಕಮಹಿಮೆ, ಹೋಮಪದ್ಧತಿ, ಕುಂಡದ ಅಳತೆ, ಷೋಡಶಸಂಸ್ಕಾರಗಳು, ಸಮಿತ್ತಿನ ಭೇದಗಳು, ಗುರುದಕ್ಷಿಣೆ. (ಶ್ಲೋಕ: ೨೩.)

**ತೃತೀಯಾಧ್ಯಾಯದಲ್ಲಿ:** ಪ್ರತಿಮಾಲಕ್ಷಣ, ಪ್ರತಿಮೆಯ ಆಭರಣಗಳು, ಪ್ರತಿಮಾನಿರ್ಮಾಣವಿಧಿ, ಶಿಲಾಪರೀಕ್ಷೆ, ಬಲಿದಾನ, ದೇವಾಲಯಯೋಗ್ಯಸ್ಥಲ, ಅಂಗುಲದ ಪರಿಮಾಣ, ವಾಸ್ತುಶಿಲ್ಪ, ಪೀಠದ ಅಳತೆ, ಪಿಂಡಿಕೆಯ ಅಳತೆ, ಗರ್ಭಗುಡಿಯ ಹೊರಭಾಗ ಮತ್ತು ಒಳಭಾಗಗಳ ಅಳತೆ, ಮಂಡಪಲಕ್ಷಣ, ವಾಸ್ತುಪುರುಷಪೂಜೆ, ವಾಸ್ತುಮಂಡಲ, ವಾಸ್ತುದೇವತೆಗಳು, ಮಂಟಪನಿರ್ಮಾಣ, ಅಂಕುರಾರ್ಪಣವಿಧಿ, ಬಲಿವಿಧಿ, ಅಧಿವಾಸನವಿಧಿ, ಪ್ರತಿಷ್ಠಾಂಗಕುಂಡನಿರ್ಮಾಣ, ಹೋಮವಿಧಿ, ಚಕ್ರಾಬ್ಜಮಂಡಲ-ಭದ್ರಕಮಂಡಲ, ಸಹಸ್ರಕಲಶ, ಕಲಶನ್ಯಾಸಸ್ಥಾನಗಳು, ವಿಶೇಷ ಕಲಶಗಳು, ಕಲಶಾಭಿಷೇಕ, ದ್ವಾರಪಾಲಾದಿಬಲಿ, ಗುರುದಕ್ಷಿಣೆ, ಅನ್ನಾರಾಧನೆ, ಅವಭೃಥಸ್ನಾನ, ಜೀರ್ಣೋದ್ಧಾರವಿಧಿ, ಸಂಪ್ರೋಕ್ಷಣವಿಧಿ, ಇತರದೇವತಾಪ್ರತಿಷ್ಠೆ, ವಿಷ್ಣುಭಕ್ತಿಯ ಪ್ರಾಧಾನ್ಯ, ತತ್ವಗಳು-ತತ್ವದೇವತೆಗಳು, ಸೃಷ್ಟಿ-ಸ್ಥಿತಿ ಸಂಹಾರ ನ್ಯಾಸಕ್ರಮ, ಉಪಸಂಹಾರ. (ಶ್ಲೋಕ: ೧೪೦.)

**ಚತುರ್ಥಾಧ್ಯಾಯದಲ್ಲಿ:** ಭೂವರಾಹಮಂತ್ರ, ವರಾಹಸಪ್ತಾಕ್ಷರ-ವರಾಹ ಚತುರ್ದಶಾಕ್ಷರ, ಧ್ಯಾನನ್ಯಾಸಾದಿಗಳು, ಶ್ರೀಕರಮಂತ್ರ, ನಾರಸಿಂಹಮಂತ್ರ, ಚತುರ್ವಿಂಶತ್ಯಕ್ಷರ ನರಸಿಂಹಮಂತ್ರ, ನೃಸಿಂಹಗಾಯತ್ರೀ, ಧ್ಯಾನನ್ಯಾಸಾದಿಗಳು, ಧ್ಯಾನಿಸಬೇಕಾದ ಬಾಹು-ಆಯುಧಗಳ ಲಕ್ಷಣ ಪರಿಮಾಣಗಳು, ಕೆಲವು ಆಯುಧಗಳ ನಿರೂಪಣೆ, ಹಂಸಮಂತ್ರ, ಪ್ರಾತರ್ಯೋಗ, ಧ್ಯಾನಾದಿಗಳು, ದಧಿವಾಮನಮಂತ್ರ,

ವಾಮನಾಷ್ಟಾಕ್ಷರಮಂತ್ರ, ತ್ರಿವಿಕ್ರಮ ಗಾಯತ್ರೀ, ರಾಮಷಡಕ್ಷರ, ಪರಶುರಾಮಧ್ಯಾನ, ದಾಶರಥಿರಾಮಧ್ಯಾನ, ಭಾರ್ಗವಮಂತ್ರ-ರಾಘವಮಂತ್ರ, ಏಕಾಕ್ಷರಮಂತ್ರದ್ವಯ, ಕೃಷ್ಣಮಂತ್ರ, ಧ್ಯಾನ, ಕೃಷ್ಣಷಡಕ್ಷರ-ಏಕಾಕ್ಷರ, ಮಂತ್ರಮಹಿಮೆ, ವೇದವ್ಯಾಸಮಂತ್ರ, ಧ್ಯಾನ, ಏಕಾಕ್ಷರ ವೇದವ್ಯಾಸಮಂತ್ರ, ಧ್ಯಾನ, ಹಯಗ್ರೀವಮಂತ್ರ, ಧ್ಯಾನ, ಕಪಿಲಮಂತ್ರ-ದತ್ತಾತ್ರೇಯಮಂತ್ರ, ಧ್ಯಾನ, ವೈದಿಕ ಮಂತ್ರಗಳು, ಲಕ್ಷ್ಮೀಮಂತ್ರಗಳು, ಭೂಬೀಜ-ದುರ್ಗಾಬೀಜ, ಭೂಪಂಚಾಕ್ಷರ-ದುರ್ಗಾಷಡಕ್ಷರ, ದುರ್ಗಾತ್ರಿಷ್ಟುಪ್, ದುರ್ಗಾಮಂತ್ರದ ಧ್ಯಾನನ್ಯಾಸಾದಿ ವಿಧಾನ, ಬ್ರಾಹ್ಮಮಂತ್ರಗಳು, ಧ್ಯಾನ, ಚತುರ್ಮುಖಪಂಚಾಕ್ಷರ-ಅಷ್ಟಾಕ್ಷರ, ಮುಖ್ಯಪ್ರಾಣಮಂತ್ರ, ಧ್ಯಾನ, ಪ್ರಾಣಾಪಾನಾದಿಪಂಚಮಂತ್ರಗಳು, ಸರಸ್ವತೀಮಂತ್ರ-ಭಾರತೀಮಂತ್ರ, ಧ್ಯಾನ, ಶಿವಪಂಚಾಕ್ಷರ, ಧ್ಯಾನ, ಪಾರ್ವತೀಪಂಚಾಕ್ಷರ, ಶೇಷಮಂತ್ರ, ಧ್ಯಾನ, ಗರುಡಮಂತ್ರ, ಧ್ಯಾನಸ್ವರೂಪ, ದಿಕ್ಪಾಲಮಂತ್ರಗಳು, ದಿಕ್ಪಾಲರ ವರ್ಣ ಮತ್ತು ಆಯುಧಗಳು, ಸ್ಕಂದಮಂತ್ರ, ಸೂರ್ಯಮಂತ್ರ, ಕ್ಷಿಪ್ರಪ್ರಸಾದಮಂತ್ರ, ಧ್ಯಾನ, ಧನ್ವಂತರಿಮಹಾಮಂತ್ರ, ಧ್ಯಾನ ಫಲಗಳು, ಶಾಂತಿಹೋಮವಿಧಾನ. ಹರಿಗುರುಭಕ್ತಿ, ವೇದೋಕ್ತಧನ್ವಂತರಿ ಮಂತ್ರ, ಮಂತ್ರಜಪದ ಉದ್ದೇಶವಿಶೇಷಗಳು, ಮಂತ್ರಾಕ್ಷರಗಳಿಂದ ಸೃಷ್ಟಿಸ್ಥಿತಿ ಸಂಹಾರನ್ಯಾಸ, ನ್ಯಾಸಸ್ಥಾನಗಳು, ಯಂತ್ರವಿಧಾನ, ಆಚಾರ್ಯಲಕ್ಷಣ, ಆಚಾರ್ಯಭೇದ, ಯಮನಿಯಮಾದಿಗಳು, ಆಸನತ್ರಯ, ಮಾತ್ರಾಕಾಲ, ಸುಷುಮ್ನಾನಾಡಿ, ದೇಹದೊಳಗಿನ ಷಟ್ಚಕ್ರಗಳು, ೭೨ ಸಾವಿರ ನಾಡಿಗಳು, ಧ್ಯಾನಧಾರಣಾಲಕ್ಷಣ, ಮಂಗಲಾಚರಣೆ, ಗ್ರಂಥಮಹಿಮೆ, ಸ್ವರೂಪನಿರೂಪಣೆ, ಗ್ರಂಥೋಪಸಂಹಾರ, ಮಂಗಲವಾರ. (ಶ್ಲೋಕ: ೧೬೫.)

೪ ಅಧ್ಯಾಯಗಳಲ್ಲಿ ಒಟ್ಟು ಶ್ಲೋಕ ಸಂಖ್ಯೆ:
೭೨ + ೨೩ + ೧೪೦ + ೧೬೫ = ೪೦೦.

---

**ತಿದ್ದುಪಡಿ:**

೧ನೆಯ ಅಧ್ಯಾಯದ ೧೦ನೆಯ ಪದ್ಯದಲ್ಲಿ 'ಶಾಂತಸಂವಿಚ್ಚಡ್ಗುಣಶ್ಚ' ಎಂದು ಅಚ್ಚಾಗಿದೆ. ಅದನ್ನು 'ಶಾಂತಸಂವಿತ್ ಷಡ್ಗುಣಶ್ಚ' ಎಂದು ವಿಸಂಧಿಯಾಗಿ ತಿದ್ದಿಕೊಂಡು ಓದಬೇಕು.

# ತಂತ್ರಶಾಸ್ತ್ರದ ಕುರಿತು

ಅರಸಿದರ್ ವಿಜ್ಞಾನದೋಲಗದ ಭರಕೆ
ಕಂಗೆಟ್ಟು ಮೈಮುದುಡಿಕೊಂಡಿರದ ತಂತ್ರಂ!
ಕುರುಡುಗಲ್ಲಿಯೊಳು ಕಂಗಳನು ಕಣ್ಸರಿಯು
ಪಡೆವ ಕೈಗೋಲಿಗೆಂಬೊ ತಂತ್ರಶಾಸ್ತ್ರಂ!

ಭಾರತದ ಅತ್ಯಂತ ಪ್ರಾಚೀನ ಶಾಸ್ತ್ರಗಳಲ್ಲಿ ತಂತ್ರಶಾಸ್ತ್ರವೂ ಒಂದು. ಪ್ರಾಚೀನರ ಅಲೌಕಿಕವಾದ ಬುದ್ಧಿಶಕ್ತಿಗೆ, ಅಪ್ರತಿಮವಾದ ಸಿದ್ಧಿಗೆ, ಅಪೂರ್ವವಾದ ತತ್ತ್ವಾನ್ವೇಷಣಾಪ್ರಜ್ಞೆಗೆ ನಿದರ್ಶನವಾಗಿರುವ ಒಂದೇ ಒಂದು ಶಾಸ್ತ್ರವೆಂದರೆ ತಂತ್ರಶಾಸ್ತ್ರ. ಮನುಷ್ಯನ ಸಾರಭೂತವಾದ ಮತ್ತು ಫಲವತ್ತಾದ ಯತ್ನಗಳಲ್ಲಿ ಅತ್ಯಂತ ಯಶಸ್ವಿಯಾದ ಯತ್ನವೆ ತಂತ್ರಶಾಸ್ತ್ರದ ರೂಪವನ್ನು ತಾಳಿದೆ. 'ಯತ್ಸಾರಭೂತಂ ತದುಪಾಸಿತವ್ಯಂ' ಎನ್ನುವುದಕ್ಕೆ ತಂತ್ರಶಾಸ್ತ್ರವು ಒಂದು ಒಳ್ಳೆಯ ಮಾದರಿ. ಅದರ ಕುರಿತು ಪ್ರಾಚೀನರಿಗಿದ್ದ ಶ್ರದ್ಧೆ ಅಂಥದು, ಅದನ್ನು ಸಾಧಿಸಲು ಅವರು ಪಟ್ಟ ಶ್ರಮ ಅಂಥದು ಅದರಿಂದ ಅವರು ಪಡೆದ ಸಿದ್ಧಿಯೂ ಅಂಥದು. ಹಾಗಿದ್ದರೆ— ಅದರಲ್ಲಿ ಮಹತ್ತ್ವವಾದರೂ ಏನಿದೆ? ಅದರ ಬೆಂಬತ್ತಿ ನಡೆದ ಪ್ರಾಚೀನರ ಜಾಡು ಎಂಥದು? ಈ ಪ್ರಶ್ನೆಗಳನ್ನು ಚರ್ಚಿಸುವ ಮೊದಲು ತಂತ್ರ ಎಂಬ ಶಬ್ದವನ್ನು ಪ್ರಾಚೀನರು ಯಾವ ಅರ್ಥದಲ್ಲಿ ಬಳಸಿಕೊಂಡಿದ್ದಾರೆ ಎಂಬುದನ್ನು ಪರಿಶೀಲಿಸಬೇಕು. 'ತಂತ್ರ' ಶಬ್ದವನ್ನು ಇವತ್ತಿಗೂ ನಾವು ಬಹುವ್ಯಾಪಕವಾದ ಅರ್ಥದಲ್ಲಿ ಬಳಸುತ್ತಿದ್ದೇವೆ. ಜನಸತ್ತಂತ್ರ, ರಾಜ್ಯತಂತ್ರ ಮೊದಲಾದೆಡೆಗಳಲ್ಲಿ ಈ ಶಬ್ದ ಬಹುದೊಡ್ಡ ಅರ್ಥವನ್ನು ಕೊಡುವ ಶಕ್ತಿಯನ್ನು ಪಡೆದಿದೆ. ಯಾವುದೇ ಒಂದರ ಎಲ್ಲ ವಿಧದ ಸುಗಮತೆಗೆ ಬೇಕಾದ ಸಾಧನಗಳನ್ನು, ಉಪಾಯಗಳನ್ನು, ವಿಧಾನಗಳನ್ನು 'ತಂತ್ರ' ಶಬ್ದ ವಿವರಿಸುತ್ತದೆ. ಇದರಿಂದಲೇ ಇದನ್ನು ಯೋಗಶಾಸ್ತ್ರ ಎಂದೂ ಕರೆಯಬಹುದು, ಕರೆಯುವುದುಂಟು. ಆದರಲ್ಲಿ ಹೆಚ್ಚು ಬಳಕೆಯಲ್ಲಿದ್ದು ಹೆಚ್ಚಿನ ಪ್ರಭಾವಶಾಲಿಯಾದ ಶಬ್ದ 'ತಂತ್ರ' ಶಬ್ದ. ತಂತ್ರಶಾಸ್ತ್ರ ನಮಗೆ ಬೇಕಾದಂಥ ತಿಳಿವನ್ನು ಕೊಡುತ್ತದೆ, ಆಪತ್ತಿನಲ್ಲಿ ಸಹಾಯಕವಾಗಿ ನಿಲ್ಲುತ್ತದೆ ಎಂಬ ದೊಡ್ಡ ಕಾರಣದಿಂದ ಪ್ರಾಚೀನರು ಅದನ್ನು 'ತಂತ್ರ' ಎಂದು ಕರೆದರು. ತಂತ್ರಪದದ ಈ ತೆರನಾದ ನಿರುಕ್ತಿಯನ್ನು ನಾವು 'ತಂತ್ರ' ಗ್ರಂಥಗಳಲ್ಲಿ ಧಾರಾಳವಾಗಿ ಕಾಣಬಹುದು—

'ತನೋತಿ ವಿಪುಲಾನರ್ಥಾನ್ ತತ್ತ್ವಮಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥'

ತತ್ತ್ವಜ್ಞಾನವನ್ನು, ಮಂತ್ರಜ್ಞಾನವನ್ನು ನಮ್ಮಲ್ಲಿ ಹರಡಿಸಿ ಸಿದ್ಧಿಯ ಪಥಕ್ಕೆ ನಮ್ಮನ್ನು ಕರೆದೊಯ್ಯುವ ಶಾಸ್ತ್ರ ತಂತ್ರಶಾಸ್ತ್ರ; ಆಪತ್ತಿನಲ್ಲಿ ಬಾಂಧವನಂತೆ ಬೆಂಗಾವಲಾಗಿ ಕಾಪಾಡುವ ಶಾಸ್ತ್ರ–ತಂತ್ರಶಾಸ್ತ್ರ. (ತನೋತಿ ತ್ರಾಯತೇ ಚೇತಿ ತಂತ್ರಮ್) ಇಂಥ ದೊಡ್ಡ ಗೌರವದ ಮಾತನ್ನ ಪ್ರಾಚೀನರು ತಂತ್ರದ ಕುರಿತು ಆಡಿದ್ದಾರೆ. ಅದರ ಹಿಂದೆ ಅಡಗಿರುವ ಅವರ ವಿಶ್ವಾಸ ದಾರ್ಢ್ಯವನ್ನು ಕಂಡು ನಾವು ಅಚ್ಚರಿಗೊಳ್ಳುವೆವು.

'ವಿಷ್ಣುಸಂಹಿತೆ'ಯಲ್ಲೂ ಈ ಪದದ ನಿರುಕ್ತಿಯನ್ನು ಇದೇ ತೆರನಾಗಿ ನಿರೂಪಿಸಿದ್ದಾರೆ—

ಸರ್ವೇಽರ್ಥಾ ಯೇನ ತನ್ಯಂತೇ ತ್ರಾಯಂತೇ ಚ ಭಯಾಜ್ಜನಾಃ ।
ಇತಿ ತಂತ್ರಸ್ಯ ತಂತ್ರತ್ವಂ ತಂತ್ರಜ್ಞಾಃ ಪರಿಚಕ್ಷತೇ ॥'

ಎಲ್ಲ ಅಭೀಷ್ಟಗಳನ್ನು ಕರುಣಿಸುವುದರಿಂದ, ಭಯದಿಂದ ಪಾರುಗಾಣಿಸುವುದರಿಂದ– ಈ ಶಾಸ್ತ್ರವನ್ನು ಪಂಡಿತರು ತಂತ್ರಶಾಸ್ತ್ರವೆಂದು ಕರೆದರು. ಹೀಗೆ ಬಹುವಿಧವಾದ ಪ್ರಶಂಸೆಗೆ ಪಾತ್ರವಾದ ತಂತ್ರಶಾಸ್ತ್ರ ಒಂದೊಮ್ಮೆ ನಮ್ಮ ನಾಡಿನ ತಾತ್ವಿಕ ಜನರ ಪ್ರಧಾನ ಶಾಸ್ತ್ರವಾಗಿ ಮೆರೆದಿತ್ತು. ಸುಮಾರು ೨೦ನೆಯ ಶತಮಾನದ ಪ್ರಾರಂಭದ ವರೆಗೂ ಈ ತಂತ್ರದ ಅವಶೇಷ– ಅದರಲ್ಲೂ ವಿಶೇಷತಃ ಮಂತ್ರವಾದದ ಭಾಗ ಸ್ವಲ್ಪಮಟ್ಟಿಗೆ ಪ್ರಭಾವಶಾಲಿಯಾಗಿತ್ತೆಂದರೆ ತಪ್ಪಿಲ್ಲ. ಇವತ್ತು ನಾವು ಕಾಣುವ ತಂತ್ರಮಂತ್ರಗಳು ಅವುಗಳ ಅರಿವಿಲ್ಲದೆ– ಅಂಧಶ್ರದ್ಧೆಯಿಂದ ಉಳಿದುಕೊಂಡ ಆಭಾಸರೂಪಗಳು, ಅಪಚಾರದ ಸಂಪ್ರದಾಯಗಳು.

*　　　*　　　*

ಭಾರತದಲ್ಲಿ ತತ್ವಶಾಸ್ತ್ರಗಳು ಬೆಳೆದು ಬಂದ ಮುಖ ಒಂದೆರಡೇನಲ್ಲ; ಅನಂತಮುಖದಿಂದ ತತ್ವಜ್ಞಾನದ ಅನಂತ ಸ್ರೋತಸ್ಸು ಹರಿದು ಬಂದಿದೆ. ಹಲವಾರು ವೇದಾಂತಗಳು, ಹಲವಾರು ಆಗಮ ಪುರಾಣಗಳು ಇವೆಲ್ಲ ನಮ್ಮ ಬುದ್ಧಿಯ ಪ್ರತಿರೂಪಗಳು. ಅವೆಲ್ಲವನ್ನೂ ಸರಿಯೋ ತಪ್ಪೋ ಎಂದು ಆಳೆವುದಾಗಲಿ, ತೀರ್ಮಾನಿಸುವುದಾಗಲಿ ನಮ್ಮ ಕೈಗೆ ನಿಲುಕದ ವಿಷಯ. ನಾವು ಕಂಡು ಕೇಳಿ ಅರಿಯದ ವಿಷಯಗಳ ಕುರಿತೇ ಆ ಶಾಸ್ತ್ರಗಳೆಲ್ಲ ನಮ್ಮನ್ನು ಬೋಧಿಸುತ್ತಿವೆ. ಆದರೆ ತಂತ್ರಶಾಸ್ತ್ರ ಇವೆಲ್ಲವುಗಳಿಂದ ವಿಲಕ್ಷಣವಾಗಿದೆ.

ಸಾಧನಬಲದಿಂದ ಅದರ ಸತ್ಯತೆಯನ್ನು ಪ್ರಾಯೋಗಿಕವಾಗಿ ತೋರಿಸಿಕೊಡಬಹುದು. ಇದು ಪ್ರಾಚೀನರು ತಂತ್ರಶಾಸ್ತ್ರದ ಕುರಿತು ಆಡಿದ ಹೆಗ್ಗಳಿಕೆಯ ಮಾತು—

'ಅನ್ಯಾನ್ಯಶಾಸ್ತ್ರೇಷು ವಿನೋದಮಾತ್ರಂ
ನ ತೇಷು ಕಿಂಚಿದ್ಭುವಿ ದೃಷ್ಟಮಸ್ತಿ ।
ಚಿಕಿತ್ಸಿತಜ್ಯೌತಿಷತಂತ್ರವಾದಾಃ
ಪದೇ ಪದೇ ಪ್ರತ್ಯಯಮಾವಹಂತಿ ॥'

ಎಷ್ಟೋ ಶಾಸ್ತ್ರಗಳಿರಲಿ, ಅವೆಲ್ಲ ಒಂದು ಮೋಜು; ಅದರಲ್ಲಿ ಹೇಳಿದುದನ್ನು ಯಾರೂ ಕಂಡು ಬಂದು ಎದೆ ತಟ್ಟಿ ಸಾರುವವರಿಲ್ಲ. ಅದರಿಂದ ಅದರ ಗೋಜು ನಮಗೆ ಬೇಕಿಲ್ಲ. ಆದರೆ ತಂತ್ರಶಾಸ್ತ್ರದ ಕುರಿತು ಈ ಮಾತನ್ನಾಡಲು ಸಾಧ್ಯವೆ? ಅದು ವೈದ್ಯಶಾಸ್ತ್ರದಂತೆ, ಜ್ಯೋತಿಃಶಾಸ್ತ್ರದಂತೆ—ಹೆಜ್ಜೆ ಹೆಜ್ಜೆಗೆ ನಂಬುಗೆಯ ಬಿಗುಪನ್ನು ಹೆಚ್ಚಿಸುತ್ತಿದೆ. ಜೀವನದ ಸುಗಮತೆಗೆ, ಸೊಗಯಿಂಕೆಗೆ ವೈದ್ಯಶಾಸ್ತ್ರ—ಜ್ಯೋತಿಃಶಾಸ್ತ್ರದಂತೆ ತಂತ್ರಶಾಸ್ತ್ರವೂ ಸಹಕಾರಿಯಾಗಿದೆ. ಈ ಮಾತನ್ನು ಪ್ರಾಚೀನರು ಸಾವಿರ ಬಾರಿ ಆಡಿದ್ದಾರೆ—ಸಾವಿರ ಬಾರಿ ಮಾಡಿ ತೋರಿಸಿದ್ದಾರೆ. ಆದರೆ ನಮ್ಮ ಜನ ಅದರ ಕುರಿತು ಇಟ್ಟುಕೊಂಡ ಭಾವನೆ ಎಂಥದು? 'ತಂತ್ರಶಾಸ್ತ್ರ' ಎಂಬ ಶೀರ್ಷಿಕೆಯನ್ನು ಕಂಡೇ ಮೂಗು ಮುರಿಯುವಷ್ಟು ಸಂಸ್ಕಾರ, ಅದರ ಪೇಜುಗಳನ್ನಷ್ಟು ಓದದೆಯೇ ತಿರುವಿ ಹಾಕುವಷ್ಟು ಪ್ರಜ್ಞೆ ನಮ್ಮದು! ಈ ಅನಾಸ್ಥೆ—ಅಗೌರವ ಏತರಿಂದ ಬಂತು? ಈ ಪ್ರಶ್ನೆಗೆ ದೊರೆಯುವ ಒಂದೇ ಒಂದು ಪರಿಹಾರವೆಂದರೆ— ಇದು ನಮ್ಮ ಜನರ ಜಂಬುಕಪ್ರಜ್ಞೆಯ ಫಲ ಎಂದು. ಯಾವುದನ್ನೂ ಸಾಧನೆಯಲ್ಲಿ ತರದೆ—ಬರಿಯ ಪುಸ್ತಕದಲ್ಲಿದೆ ಎಂದು ನಂಬಿ ಕುಳಿತರೆ ಯಾವುದರ ಗತಿಯೂ ಇದೇ ತೆರನಾಗಬಲ್ಲುದು. ತಂತ್ರಶಾಸ್ತ್ರದಲ್ಲಿ ಏನಿದೆ? ಅದು ಏತಕ್ಕೆ ಮಾನ್ಯವಾಗಿದೆ ಎಂದು ಯಾರಾದರೂ ನಮ್ಮೊಡನೆ ಸವಾಲೆತ್ತಿದರೆ 'ಅದು ಇಂಥದೇ ಕಾರಣದಿಂದ ಸರಿ' ಎಂದು ವಾದಿಸುವ ಶಕ್ತಿಯನ್ನು ನಾವು ಕಳೆದುಕೊಂಡಿದ್ದೇವೆ. ಅದರ ಜತೆಗೆ ತಂತ್ರಾಗಮಗಳ ಕುರಿತಾದ ಶ್ರದ್ಧೆಯನ್ನೂ ಕಳೆದುಕೊಂಡಿದ್ದೇವೆ. ಇದು ಒಳ್ಳಿತಿನ ಲಕ್ಷಣವಲ್ಲ. ಇದು ನಾವು ಮುಂದುವರಿಯುತ್ತಿದ್ದೇವೆ ಎನ್ನುವುದರ ಕುರುಹಲ್ಲ. ನಮ್ಮಲ್ಲಿ ಬೇಕಾದ ಶಾಸ್ತ್ರಗ್ರಂಥಗಳ ಅಪೂರ್ವ ಪುಸ್ತಕಾಲಯವೇ ಇರಬಹುದು, ನಮ್ಮ ಮನೆಯಲ್ಲಿ ಇಡಲೂ ಜಾಗವಿಲ್ಲದೆ ನಾವು ಅದನ್ನು ಹೊಳೆಗೋ ಬಾವಿಗೋ ಚೆಲ್ಲಿ ಕೈಕೊಡವಿ

ಕೊಂಡಿರಬಹುದು, ಅಥವಾ ಯಾರಿಗಾದರೂ ದಾನವಿತ್ತು ದಾನಿಗಳು ಎನ್ನಿಸಿಕೊಂಡಿರಬಹುದು. ಆದರೆ ಯಾವ ಪುಸ್ತಕವನ್ನು ನಾವು ಸರಿಯಾಗಿ ಅರಗಿಸಿಕೊಂಡಿದ್ದೇವೆ? ಯಾವುದರ ತಿರುಳನ್ನು ನಾವು ಅರಿತು ಆಚರಣೆಗೆ ತಂದಿದ್ದೇವೆ? ಇಂಥವರ ಕುರಿತು ಭವಿಷ್ಯತ್ಪುರಾಣದಲ್ಲಿ ಆಡಿದ ಮಾತು ನಮ್ಮ ಅಂತರಂಗ ಚುಚ್ಚಿ ಕೆದಕುವಷ್ಟು ಮೊನಚಾಗಿದೆ—

'ಬಹೂನಿ ಪುಸ್ತಕಾನೀಹ ಶಾಸ್ತ್ರಾಣಿ ವಿವಿಧಾನಿ ಚ ।
ತಸ್ಯ ಸಾರಂ ನ ಜಾನಾತಿ ಸ ಜಂಬೂಕಃ ಪಶುಃ ಸ್ಮೃತಃ ॥'

ನಮ್ಮಲ್ಲಿ ಬೇಕಾದ ಪುಸ್ತಕಗಳಿವೆ, ಬೇಕಾದ ಶಾಸ್ತ್ರಗಳಿವೆ, ಆದರೆ ನಾವು ಅದರ ಸಾರವನ್ನು ತಿಳಿಯಲು ಪ್ರಯತ್ನಿಸದೆ ಜಂಬೂಕಪಂಡಿತರೆನ್ನಿಸಿಕೊಂಡೆವು. ಈ ಜಂಬೂಕಪಾಂಡಿತ್ಯದಿಂದ ತಂತ್ರಶಾಸ್ತ್ರದ ಅವನತಿಯನ್ನು ನಾವು ಕಾಣುವಂತಾಯಿತು.

ಸತ್ಕರ್ಮದೀಪಿಕೆಯಲ್ಲೂ ಇದೇ ತೆರನಾದ ಮಾತನ್ನಾಡಿದ್ದಾರೆ—

'ಪುಸ್ತಕೇ ಲಿಖಿತಾ ವಿದ್ಯಾ ಯೇನ ಸುಂದರಿ ಜಪ್ಯತೇ ।
ಸಿದ್ಧಿರ್ನ ಜಾಯತೇ ತಸ್ಯ ಕಲ್ಪಕೋಟಿಶತೈರಪಿ ॥'

.ಪುಸ್ತಕಕೀಟನಾಗಿ ಯಾವುದೊಂದು ಮಂತ್ರವನ್ನೂ ಸಾಧಿಸಬರುವಂತಿಲ್ಲ. ಧಾನ್ಯವನ್ನು ಅಪೇಕ್ಷಿಸುವವನು ಜೊಳ್ಳಾದ ಕಾಂಡವನ್ನು ತೆಗೆದೊಗೆವಂತೆ—ಜ್ಞಾನಾಪೇಕ್ಷಿಯಾದವನು ಜ್ಞಾನಾರ್ಜನೆಯ ನಂತರ ಕಾಂಡದಂಥ ಪುಸ್ತಕ ರಾಶಿಯನ್ನು ಹಿಡಿದೇನು ಮಾಡುವುದು ಎಂಬ ಬ್ರಹ್ಮಬಿಂದೂಪನಿಷತ್ತಿನ ಮಾತು ಮಾರ್ಮಿಕವಾಗಿದೆ—

'ಗ್ರಂಥಮಭ್ಯಸ್ಯ ಮೇಧಾವೀ ಜ್ಞಾನವಿಜ್ಞಾನತತ್ಪರಃ ।
ಪಲಾಲ*ಮಿವ ಧಾನ್ಯಾರ್ಥೀ ತ್ಯಜೇದ್ಗ್ರಂಥಾನಶೇಷತಃ ॥'

ಎಲ್ಲರಲ್ಲಿಯೂ ಒಂದಲ್ಲ ಒಂದು ತೆರನಾದ ಅನುಭೂತಿ ಸುಪ್ತವಾಗಿ ಇದ್ದೇ ಇರುತ್ತದೆ. ಅದನ್ನು ಕಡೆದು ಬೆಣ್ಣೆಯಂತೆ ಹೊರ ತೆಗೆವುದೇ ಕಠಿನದ ಕಾರ್ಯ. ಇದನ್ನು ಸಾಧಿಸಿದವನೇ ಬುದ್ಧಿವಂತನಾಗಬಲ್ಲ—

'ಘೃತಮಿವ ಪಯಸಿ ನಿಗೂಢಂ ಭೂತೇ ಭೂತೇ ಚ ವಸತಿ ವಿಜ್ಞಾನಮ್ ।
ಸತತಂ ಮಂಥಯಿತವ್ಯಂ ಮನಸಾ ಮಂಥಾನಭೂತೇನ ॥'

---

* 'ಪಲಾಲೋಽಸ್ತ್ರೀ ಸ ನಿಷ್ಫಲಃ' (ಅಮರ)

ಆದರೆ ಇಂಥ ಶಕ್ತಿಯನ್ನು ಕಳೆದುಕೊಂಡು ತಂತ್ರಶಾಸ್ತ್ರ ಮಂತ್ರಶಾಸ್ತ್ರ ವೆಲ್ಲ ಸುಳ್ಳಿನ ಕೊಂಪೆ ಎಂದು ನೆಮ್ಮುವುದೇ ನಾಗರಿಕತೆಯೆಂದು ಭ್ರಮಿಸಿ ಕೊಂಡು ಬಾಳುವ ಈ ಗಾಂಪತನ ನಮಗೇತಕ್ಕೆ ಬಂತು? ಈ ಕುರಿತು ನಮ್ಮ ಜನರಿಗಿಂತ ಪಾಶ್ಚಾತ್ಯರೇ ಹೆಚ್ಚು ಚಿಂತೆಗೀಡಾಗಿದ್ದಾರೆ–ಕಳವಳಕ್ಕೀ ಡಾಗಿದ್ದಾರೆ. ಭಾರತದಲ್ಲಿ ಇಂಥ ಅಮೂಲ್ಯ ಗ್ರಂಥಗಳಿದ್ದೂ ಭಾರತೀಯರು ಅವುಗಳಿಂದ ಹೆಮ್ಮೆಪಟ್ಟುಕೊಳ್ಳಬೇಕಾಗಿದ್ದರೂ ಅವರು ಅವುಗಳಿಂದ ಸಂಕೋಚಪಡುತ್ತಿರುವುದೇಕೆ ಎನ್ನುವುದು ಪಾಶ್ಚಾತ್ಯರಿಗೆ ಅಪರಿಹಾರ್ಯ ಸಮಸ್ಯೆಯಾಗಿಯೇ ಉಳಿದುಕೊಂಡಿದೆ. ತಂತ್ರಶಾಸ್ತ್ರದ ಅಧ್ಯಯನಕ್ಕಾ ಗಿಯೇ ತನ್ನ ಜೀವನವನ್ನು ಮುಡುಪಾಗಿರಿಸಿದ ಪಾಶ್ಚಾತ್ಯ ವಿದ್ವಾಂಸ ಸರ್ ಜಾನ್ ವುಡ್‌ರೋಫ್ ಅವರ ಅಭಿಪ್ರಾಯಗಳು ಈ ಸಂದರ್ಭದಲ್ಲಿ ಮನ ನೀಯವಾಗಿವೆ. ಅವರು ಪಾಶ್ಚಾತ್ಯರ ಬಾಲದಂತಿರುವ ಕೆಲ ಭಾರತೀಯ ರಿಗೆ ಕಟುನುಡಿಯನ್ನೆ ಆಡಿದ್ದಾರೆ—

"They (The English educated people) were, and some of them still are, the *Manasaputra* of the English. For them what was the English and Western was the mode.

"Some of them care nothing their *Shastra*. Others do not understand it."

ನಮ್ಮ ಜನ ಇಂಗ್ಲಿಷಿಗೆ ಮನಸೋತು ತನ್ನತನವನ್ನೂ ಕಳೆದುಕೊಂಡಿತು! ನಮ್ಮ ಬುದ್ಧಿಯನ್ನು, ವಿಚಾರಧಾರೆಯನ್ನು, ಅಭಿರುಚಿಯನ್ನು, ಎಲ್ಲವನ್ನೂ ಇಂಗ್ಲಿಷಿಗೆ ಮಾರಿಬಿಟ್ಟೆವು; ಅದರ ಮಾನಸಪುತ್ರರಾಗಿ ನಾವು ಬಾಳಿದೆವು. ಇದಕ್ಕೆಲ್ಲ ನಮ್ಮ ಶಾಸ್ತ್ರಗಳ ಕುರಿತು ನಮಗಿರುವ ಅಜ್ಞಾನ–ಅನಾದರಗಳೇ ಕಾರಣವೆಂದು ಪಾಶ್ಚಾತ್ಯರೊಬ್ಬರು ನಮ್ಮ ಕುರಿತು ಆಡುವಂಥ ಪ್ರಸಂಗ ವನ್ನು ನಾವು ತಂದುಕೊಳ್ಳಬಾರದಾಗಿತ್ತು. ಇನ್ನಾದರೂ ನಮ್ಮತನವನ್ನು ನಾವು ಸಂಪಾದಿಸಿಕೊಳ್ಳಬೇಕೆಂದು ಅವರೇ ಸೂಚನೆಯಿತ್ತಿದ್ದಾರೆ --

"The Iadian who has lost his Indian soul must regain it if he would retain that independence in his thought and in the ordering of his life which is the mark of a man that is of one who seeks *Swarajyasiddhi.*"

ಇಂದೇ ಆದರೂ–ಪ್ರಯತ್ನಿಸಿದರೆ, ಸಾಧಿಸಿದರೆ ನಾವು ಪುನಃ ತಂತ್ರಶಾಸ್ತ್ರದ

ತಿರುಳನ್ನು ಅರಿತುಕೊಳ್ಳಬಹುದು. ಆ ಅಗಾಧವಾದ ಶಾಸ್ತ್ರಕ್ಕೆ ಪ್ರಾಚೀನರು
ಹಾಕಿಟ್ಟ ಬೀಗದ ಕೀಲಿ ನಮ್ಮ ಕೈಯಲ್ಲೇ ಇದೆ. ಅದನ್ನುಪಯೋಗಿಸುವ
ಇಚ್ಛೆ ಮಾತ್ರ ನಮಗಿಲ್ಲವಾಗಿದೆ. ಸರ್ ಜಾನ್‌ವುಡ್‌ರೋಫ್ ಈ ವಿಷಯ
ದಲ್ಲೂ ಪ್ರಾಮಾಣಿಕವಾದ ಮಾತನ್ನೇ ಆಡಿದ್ದಾರೆ—

"Again the cause of this ignorance the fact that the *Tantra Shastra* is a *Sadhana Shastra*, the greater part of which becomes intelligible only by *Sadhana*"

ತಂತ್ರಶಾಸ್ತ್ರವನ್ನು ತೆಗಳುವಷ್ಟೇ ಸುಲಭದಲ್ಲಿ ಅದನ್ನು ಅರ್ಥಮಾಡಿ
ಕೊಳ್ಳಬರುವಂತಿಲ್ಲ. ವಿಲಾಸಜೀವನದಲ್ಲಿ ಓಲಾಡುತ್ತಾ—ಬಾಳನ್ನೇ ಹದ
ಗೆಡಿಸಿಕೊಂಡ ವ್ಯಕ್ತಿ ತಂತ್ರಶಾಸ್ತ್ರವೆಂದರೇನು ಎಂಬುದನ್ನು ಅರಿಯಲಾರ.
ಅದನ್ನು ತಿಳಿಯುವ ಅಪೇಕ್ಷೆ ಪ್ರಾಮಾಣಿಕವಾಗಿಯೂ ನಮಗಿದೆಯಾದರೆ—
ಸಾಧನಮಾರ್ಗಕ್ಕೆ ಇಳಿದು ಅದನ್ನು ಪ್ರಯೋಗಕ್ಕೆ ತಂದು ಪರಿಶೀಲಿಸಬೇಕು.
ಸಾಧನದ ಗಂಧವೂ ಇಲ್ಲದ ಬೀದಿಯ ಕಾಮುಣ್ಣಗಳ ಬಡಾಯಿಯಿಂದ
ತಂತ್ರಶಾಸ್ತ್ರವನ್ನು ಅಳೆವುದಲ್ಲ. ತಂತ್ರಶಾಸ್ತ್ರದ ಕುರಿತು ಅನಾದರದ ಮಾತ
ನ್ನಾಡಿದ ಕೆಲವು ಪಾಶ್ಚಾತ್ಯರ ಕುರಿತು ಕೂಡ ಇದೇ ಅಸ್ತ್ರವನ್ನೆಸೆದಿದ್ದಾರೆ
ಸರ್ ಜಾನ್‌ವುಡ್‌ರೋಫ್ ಅವರು—

'A large number of these writers who talk in this strain have never had a *Tantra* in their hands and such Orientalists as have read some portions of these scriptures have not generally understood them, otherwise they would not have found them to be so 'meaningless.' They may be bad or they may be good but they have a meaning. Men are not such fools to believe in what is meaningless.'

ಅರ್ಥವಿಲ್ಲದ ಒಂದು ಪರಂಪರೆ ಬೆಳೆದು ಬರಬೇಕಿದ್ದರೆ ಮೂಲದಲ್ಲಾದರೂ
ಒಬ್ಬ ಬುದ್ಧಿವಂತ ಇದ್ದೇ ತೀರಬೇಕು. ಬುದ್ಧಿಶೂನ್ಯರದೆ ಸಾಮ್ರಾಜ್ಯ ಹೆಚ್ಚು
ಗಳಿಗೆ ಬಾಳುವುದಿಲ್ಲ. ಶತಮಾನ ಶತಮಾನಗಳಿಂದ—ಸಾಧನೆಯ ಬಲದಿಂದ
ದೃಢಮೂಲವಾಗಿ ಬೆಳೆದು ಬಂದ ಒಂದು ಪರಂಪರೆಯನ್ನು 'ಹುಚ್ಚುತನ'
ಎನ್ನುವ ಜನ ತಮ್ಮ ಪ್ರಜ್ಞೆಯ ಕಡೆಗೂ ಸ್ವಲ್ಪ ಗಮನವಿತ್ತರೆ ಚೆನ್ನು! ನಮ್ಮ
ಕಣ್ಣೆದುರಿಗೆಯೇ ಇದ್ದುದನ್ನು ಹೀಗೆಯೇ ಎಂದು ನಿರ್ಧರಿಸಲು ಬಾರದಷ್ಟು
ಸೀಮಿತವಾದ ಪ್ರಜ್ಞೆಯಿಂದ ಮೂರು ಲೋಕವನ್ನೂ ಅಳೆಯಹೋಗುವುದ

ಕ್ಕಿಂತ ಹೆಚ್ಚಿನ ತಿಳಿಗೇಡಿತನ ಇನ್ನೊಂದಿರಲಾರದು. ಸಾಧ್ಯವಿದ್ದರೆ ಅದರ ಕುರಿತು ಶೋಧಕ್ಕೆ ಯತ್ನಿಸಬೇಕು. ಇಲ್ಲದಿದ್ದರೆ ಅದರ ಗೋಜಿಗೇ ಹೋಗದೆ ತೆಪ್ಪಗಿರುವುದಕ್ಕಾದರೂ ಯತ್ನಿಸಬೇಕು. ಅದರಿಂದ ಪ್ರಾಚೀನರು ತಂತ್ರ ಶಾಸ್ತ್ರದ ಕುರಿತು ಎಂಥ ಮಹತ್ತ್ವದ ಕಲ್ಪನೆಯನ್ನು ಮಾಡಿಕೊಂಡಿದ್ದರು ಎಂಬುದನ್ನು ತಿಳಿಯುವುದು ಪ್ರಸಂಗೋಚಿತವಾಗಿದೆ.

ತಂತ್ರಶಾಸ್ತ್ರದ ವಿಷಯ ವಿಮರ್ಶೆಯು ಪೂರ್ವಭಾವಿಯಾಗಿ ಅದು ಏನನ್ನು ಪ್ರತಿಪಾದಿಸುತ್ತದೆ ಎಂಬುದರ ಕುರಿತು ನಾವು ವಿವೇಚಿಸಬೇಕಾಗುವುದು. ಪ್ರಾಚೀನ ಗ್ರಂಥಗಳಲ್ಲಿ ಅದರ ಉಲ್ಲೇಖ ಕೆಳಗಿನಂತಿದೆ—

'ಸರ್ಗಶ್ಚ ಪ್ರತಿಸರ್ಗಶ್ಚ ಮಂತ್ರನಿರ್ಣಯ ಏವ ಚ |
ದೇವತಾನಾಂ ಚ ಸಂಸ್ಥಾನಂ ತೀರ್ಥಾನಾಂ ಚೈವ ವರ್ಣನಮ್ ||
ತಥೈವಾಶ್ರಮಧರ್ಮಶ್ಚ ವಿಪ್ರಸಂಸ್ಥಾನಮೇವ ಚ |
ಸಂಸ್ಥಾನಂ ಚೈವ ಭೂತಾನಾಂ ಯಂತ್ರಾಣಾಂ ಚೈವ ನಿರ್ಣಯಃ ||
ಉತ್ಪತ್ತಿರ್ವಿಬುಧಾನಾಂ ಚ ತರೂಣಾಂ ಕಲ್ಪಸಂಜ್ಞಿತಮ್ |
ಸಂಸ್ಥಾನಂ ಜ್ಯೋತಿಷಾಂ ಚೈವ ಪುರಾಣಾಖ್ಯಾನಮೇವ ಚ ||
ಕೋಷಸ್ಯ ಕಥನಂ ಚೈವ ವ್ರತಾನಾಂ ಪರಿಭಾಷಣಮ್ |
ಶೌಚಾಶೌಚಸ್ಯ ಚಾಖ್ಯಾನಂ ನರಕಾಣಾಂ ಚ ವರ್ಣನಮ್ ||
ಹರಚಕ್ರಸ್ಯ ಚಾಖ್ಯಾನಂ ಸ್ತ್ರೀಪುಂಸೋಶ್ಚೈವ ಲಕ್ಷಣಮ್ |
ರಾಜಧರ್ಮೋ ದಾನಧರ್ಮೋ ಯುಗಧರ್ಮಸ್ತಥೈವ ಚ ||
ವ್ಯವಹಾರಃ ಕಥ್ಯತೇ ಚ ತಥಾಚಾಧ್ಯಾತ್ಮವರ್ಣನಮ್ |
ಇತ್ಯಾದಿಲಕ್ಷಣೈರ್ಯುಕ್ತಂ ತಂತ್ರಮಿತ್ಯಭಿಧೀಯತೇ ||'

ಸೃಷ್ಟಿ ಪ್ರಳಯಗಳ ವಿವರ, ಮಂತ್ರ ವಿಚಾರ, ದೇವತೆಗಳ ಲಕ್ಷಣ, ತೀರ್ಥಗಳ ಪರಿಚಯ, ಆಶ್ರಮ ಧರ್ಮಗಳು, ಬ್ರಾಹ್ಮಣ್ಯದ ಲಕ್ಷಣ, ಎಲ್ಲ ಪ್ರಾಣಿಗಳ ಸ್ಥಿತಿಗತಿ, ಯಂತ್ರಗಳ ನಿರ್ಣಯ, ದೇವತೆಗಳ ಸೃಷ್ಟಿ, ಮರಬಳ್ಳಿಗಳ ಲಕ್ಷಣ ವಿಭಾಗಗಳು, ಜೋತಿಶ್ಶಾಸ್ತ್ರದ ತಿರುಳು, ಪ್ರಾಚೀನ ಇತಿಹಾಸಗಳು, ಶಬ್ದನಿಷ್ಪತ್ತಿ ನಿರುಕ್ತಿಗಳು, ವ್ರತಾನುಷ್ಠಾನಾದಿಗಳ ವಿವರ, ಶೌಚ-ಅಶೌಚಗಳ ನಿರ್ಣಯ, ನರಕಗಳ ವಿವರಣೆ, ಹರಚಕ್ರದ ವರ್ಣನೆ, ಸ್ತ್ರೀಪುರುಷರ ಲಕ್ಷಣಗಳು, ರಾಜನೀತಿ, ದಾನಧರ್ಮ, ಚತುರ್ಯುಗಗಳ ಧರ್ಮ, ಎಲ್ಲಕ್ಕಿಂತ ಮುಖ್ಯ ಇಹದ ಸಾಧಕವಾದ ವ್ಯವಹಾರಜ್ಞಾನ ಮತ್ತು ಪರದ ಸಾಧಕವಾದ ಅಧ್ಯಾತ್ಮವಿದ್ಯೆಗಳನ್ನು ಯಾವುದು ಪ್ರತಿಪಾದಿಸುವುದೋ ಅದೆಲ್ಲವೂ ತಂತ್ರಶಾಸ್ತ್ರವೆನ್ನಿಸುತ್ತದೆ.

ತಂತ್ರ ಮತ್ತು ಆಗಮಶಬ್ದಗಳು ಸಾಮಾನ್ಯ ಒಂದೇ ಅರ್ಥದಲ್ಲಿ ಬಳಕೆಯಲ್ಲಿವೆ. ಅದರಿಂದ ಆಗಮಗ್ರಂಥಗಳ ಪ್ರತಿಪಾದ್ಯವೂ ವಾರಾಹೀತಂತ್ರದಲ್ಲಿ ಇದೇ ತೆರನಾಗಿ ಉಕ್ತವಾಗಿದೆ.

'ಸೃಷ್ಟಿಶ್ಚ ಪ್ರಲಯಶ್ಚೈವ ದೇವತಾನಾಂ ತಥಾರ್ಚನಮ್ ।
ಸಾಧನಂ ಚೈವ ಸರ್ವೇಷಾಂ ಪುರಶ್ಚರಣಮೇವ ಚ ॥
ಷಟ್‌ಕರ್ಮ ಸಾಧನಂ ಚೈವ ಧ್ಯಾನಯೋಗಶ್ಚತುರ್ವಿಧಃ ।
ಸಪ್ತಭಿರ್ಲಕ್ಷಣೈರ್ಯುಕ್ತಮಾಗಮಂ ತದ್ವಿದುರ್ಬುಧಾಃ' ॥

ಈ ಲಕ್ಷಣಗಳನ್ನೆಲ್ಲ ಪರಾಮರ್ಶಿಸಿದಾಗ ಪ್ರಾಚೀನರ ದೃಷ್ಟಿಯಲ್ಲಿ ತಂತ್ರ ಅಥವಾ ಆಗಮ ಎಂದರೆ ಒಂದು ನಿರ್ದಿಷ್ಟವಾದ ಗ್ರಂಥರಾಶಿಯಲ್ಲ. ಜೀವನೋಪಯೋಗಿಯಾದ ಎಲ್ಲ ಬಗೆಗಳನ್ನೂ ಬೋಧಿಸುವ ಜೀವನತಂತ್ರವೇ ತಂತ್ರಶಾಸ್ತ್ರ ಎಂದು ತಿಳಿದುಬರುವುದು. ಈ ದೃಷ್ಟಿಯಿಂದ ತಂತ್ರಶಬ್ದದ ನಿರುಕ್ತಿಯೂ ಸರಿಹೊಂದುವುದು. ಯಾವುದು ನಮಗೆ ಅರಿವನ್ನು ತಂದು ಕೊಡುವುದೋ, ಕಷ್ಟಕಾಲದಲ್ಲಿ ಆಸರೆಯಾಗುವುದೋ ಅವೆಲ್ಲವೂ ತಂತ್ರವೇ. ಪ್ರಾಚೀನರ ದೃಷ್ಟಿಯಲ್ಲಿ ಜೀವನೋಪಯೋಗಿ ಎನಿಸಿದ್ದನ್ನೆಲ್ಲ ಮೇಲಿನ ಶ್ಲೋಕಗಳಲ್ಲಿ ಪರಿಗಣಿಸಿದ್ದಾರೆ. ಈ ಎಲ್ಲ ಲಕ್ಷಣಗಳನ್ನೊಳಗೊಂಡ ಒಂದೇ ಒಂದು ಮಹಾಗ್ರಂಥ– ಇಂದು ನಮಗೆ ಉಪಲಬ್ಧವಾಗಿರುವುದು– ಅಗ್ನಿಪುರಾಣ. ಅದು ಪುರಾಣ ಎನ್ನುವುದು ಗೌಣ. ಅದರ ವಿಷಯ ಪುರಾಣದ ವ್ಯಾಪ್ತಿಯನ್ನು ಮೀರಿ ನಿಂತಿದೆ. ಅದು ಎಲ್ಲ ಯೋಗಗ್ರಂಥಗಳಿಗೂ– ಎಲ್ಲ ತಂತ್ರಶಾಸ್ತ್ರಗಳಿಗೂ– ಎಲ್ಲ ಆಗಮಗಳಿಗೂ ಮೂಲಸ್ತಂಭ ಎನಿಸುವಷ್ಟು ಮಹತ್ತ್ವದ ಸ್ಥಾನವನ್ನು ಪಡೆದಿದೆ. ಆದರೆ ನಾವು ತಂತ್ರಶಬ್ದವನ್ನು ಇಷ್ಟೊಂದು ವ್ಯಾಪಕವಾದ ಅರ್ಥದಲ್ಲಿ ಬಳಸಿಕೊಳ್ಳಬೇಕಾಗಿಲ್ಲ. ತಂತ್ರದಲ್ಲಿ ಪ್ರಕೃತ ಎರಡು ವಿಭಾಗವನ್ನು ಮಾಡಬಹುದು– ಯೋಗವಿಭಾಗ ಮತ್ತು ಮಂತ್ರವಿಭಾಗ. ಮಾಂತ್ರಿಕ ವಿಭಾಗವನ್ನು ಬಿಟ್ಟು ಉಳಿದೆಲ್ಲ ತಂತ್ರಶಾಸ್ತ್ರವೆಂದರೆ ಯೋಗಶಾಸ್ತ್ರವೆ.

ಈ ತಂತ್ರ ಮುಖ್ಯವಾಗಿ ಮೂರು ವಿಧವಾಗಿದೆ. ಶಿವಪಾರಮ್ಯವನ್ನು ಹೇಳುವ ತಂತ್ರ ಶೈವತಂತ್ರ; ಶಕ್ತಿಪಾರಮ್ಯವನ್ನು ಹೇಳುವ ತಂತ್ರ ಶಾಕ್ತತಂತ್ರ; ವಿಷ್ಣುಪಾರಮ್ಯವನ್ನು ಹೇಳುವ ತಂತ್ರ ವೈಷ್ಣವತಂತ್ರ– ಈ ತಂತ್ರಗಳನ್ನೆ ರಾಜಸ, ತಾಮಸ, ಸಾತ್ತ್ವಿಕ ಎಂಬುದಾಗಿಯೂ ವಿಭಾಗಿಸಬಹುದು.

ಇವುಗಳಲ್ಲಿ 'ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಂ' ಎಂದು ಪ್ರಸಿದ್ಧವಾದ ಪಂಚರಾತ್ರವೇ ವೈಷ್ಣವತಂತ್ರಗಳ ಬೇರು— ಉದ್ಗಮ ಸ್ಥಾನ. ಜೀವನವನ್ನು ಅಜ್ಞಾನದ ಕಗ್ಗತ್ತಲಿನಲ್ಲಿ ಧುಮುಕಿಸಿ ನಮ್ಮನ್ನು ಕಣ್ಕಟ್ಟಿಸುವ ಪಂಚಭೂತಗಳು ಅಥವಾ ಶಬ್ದಸ್ಪರ್ಶರೂಪರಸಗಂಧಗಳೆಂಬ ಪಂಚಭೂತಗುಣಗಳೇ ಪಂಚರಾತ್ರಿಗಳು. ಅವುಗಳ ಅಸಾರತೆಯನ್ನು ಬೋಧಿಸಿ, ಈ ಪಂಚರಾತ್ರಿಗಳಿಂದ ದೂರವಾದ ನಿತ್ಯವೂ ಬೆಳಗುತ್ತಿರುವ ಜ್ಯೋತಿರ್ಮಯವಾದ ಭಗವತ್ಸನ್ನಿಧಾನಕ್ಕೆ ನಮ್ಮನ್ನು ಕರದೊಯ್ಯಬಲ್ಲ ಮಹಾತಂತ್ರವೇ ಪಂಚರಾತ್ರ. ಈ ಮಾತು ವಿಷ್ಣುಸಂಹಿತೆಯಲ್ಲಿ ಸ್ಫುಟವಾಗಿ ಬಂದಿದೆ—

'ರಾತ್ರಯೋ ಗೋಚರಾಃ ಪಂಚ ಶಬ್ದಾದಿವಿಷಯಾತ್ಮಿಕಾಃ ।
ಮಹಾಭೂತಾತ್ಮಕಾ ವಾಽತ್ರ ಪಂಚರಾತ್ರಮಿದಂ ತತಃ ॥
ಅವಾಪ್ಯ ತು ಪರಂ ತೇಜೋ ಯತ್ರೈತಾಃ ಪಂಚರಾತ್ರಯಃ ।
ನಶ್ಯಂತಿ ಪಂಚರಾತ್ರಂ ತತ್ ಸರ್ವಾಜ್ಞಾನವಿನಾಶನಮ್ ॥
ಅಧ್ಯೇತವ್ಯಮತಃ ಶ್ರಾವ್ಯಮನುಷ್ಠೇಯಾರ್ಥಮಾದರಾತ್ ।
ಪ್ರಮಾಣಪ್ರವರಂ ತಂತ್ರಂ ಪಂಚರಾತ್ರಾಖ್ಯಮೀದೃಶಮ್ ॥
ಏತಾಭ್ಯಃ ಪಂಚರಾತ್ರಿಭ್ಯೋ ವ್ಯತಿರಿಕ್ತಂ ನಿರಂಜನಮ್ ।
ಯದಾ ಪಶ್ಯೇತ್ ಪರಂ ತತ್ತ್ವಂ ತದಾ ಮುಕ್ತಃ ಸ ನಾನ್ಯಥಾ ॥
ಸ ಏವ ದೇಶಿಕೋ ಜ್ಞೇಯಃ ಸಂಸಾರಾರ್ಣವತಾರಕಃ ।
ಸ ಏವ ಭಗವಾನ್ ವಿಷ್ಣುರ್ನಾಫಲಸ್ತದನುಗ್ರಹಃ ॥'

ಪಂಚರಾತ್ರಿಗಳನ್ನು ನಾಶಮಾಡಿ ಪರಮಪದದ ಪಥಕ್ಕೆ ನಮ್ಮನ್ನು ನಡೆಸುವ ಈ ಶಾಸ್ತ್ರವು ಅಧ್ಯಯನೀಯವಾಗಿದೆ, ಶ್ರಾವ್ಯವಾಗಿದೆ, ಅನುಷ್ಠಾನಯೋಗ್ಯವಾಗಿದೆ. ಎಲ್ಲ ಬಗೆಯ ಅಜ್ಞಾನವನ್ನೂ ಪರಿಹರಿಸುವ ಈ ಪಂಚರಾತ್ರವೆಂಬ ತಂತ್ರಶಾಸ್ತ್ರವು ಪ್ರಮಾಣಗಳಲ್ಲೆಲ್ಲ ಹಿರಿದು. ಪಂಚರಾತ್ರಿಗಳಿಂದ ದೂರನಾದ ಪರಮಪುರುಷನನ್ನು ಯಾರು ಅರಿತುಕೊಳ್ಳುವನೋ ಅವನೇ ಮುಕ್ತನು, ಅವನೇ ಸಂಸಾರಮೋಚಕನಾದ ಪರಮಗುರು; ಅವನು ಅನುಗ್ರಹಿಸಿದನೆಂದರೆ ಏನು ಬೇಕಾದರೂ ಆಗಬಲ್ಲುದು. ಏಕೆಂದರೆ ಅವನು ತನ್ನ ಜ್ಞಾನಮಹಿಮೆಯಿಂದ ಭಗವತ್ಸಾದೃಶ್ಯವನ್ನು ಪಡೆದಿದ್ದಾನೆ. 'ನಿರಂಜನಃ ಪರಮಂ ಸಾಮ್ಯಮುಪೈತಿ.'

ತಂತ್ರಶ್ರೇಷ್ಠವಾದ ಈ ಪಂಚರಾತ್ರವನ್ನು ಅಧ್ಯಯನಮಾಡುವವನು ವಿಷ್ಣುತುಲ್ಯನೆನಿಸುವನು ಎಂದ ಮೇಲೆ ಅದೇನು ಸಾಮಾನ್ಯವೆ? ಆದರಿಂದಲೇ

ತಂತ್ರದ ಕುರಿತು ಪ್ರಾಚೀನರು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ಒಂದೆಡೆ ಕೆಳಗಿನಂತೆ ಉಲ್ಲೇಖವಿದೆ—

'ವಿಷ್ಣುರ್ವರಿಷ್ಠೋ ದೇವಾನಾಂ ಹ್ರದಾನಾಮುದಧಿರ್ಯಥಾ ।
ನದೀನಾಂ ಚ ಯಥಾ ಗಂಗಾ ಪರ್ವತಾನಾಂ ಹಿಮಾಲಯಃ ॥
ಅಶ್ವತ್ಥಃ ಸರ್ವವೃಕ್ಷಾಣಾಂ ರಾಜ್ಞಾಮಿಂದ್ರೋ ಯಥಾ ವರಃ ।
ದೇವೀನಾಂ ಚ ಯಥಾ ದುರ್ಗಾ ವರ್ಣಾನಾಂ ಬ್ರಾಹ್ಮಣೋ ಯಥಾ ।
ತಥಾ ಸಮಸ್ತಶಾಸ್ತ್ರಾಣಾಂ ತಂತ್ರಶಾಸ್ತ್ರಮನುತ್ತಮಮ್ ॥'

ದೇವತೆಗಳಲ್ಲಿ ಶ್ರೀಹರಿಯಂತೆ, ಜಲಾಶಯಗಳಲ್ಲಿ ಸಮುದ್ರದಂತೆ, ನದಿಗಳಲ್ಲಿ ಗಂಗೆಯಂತೆ, ಪರ್ವತಗಳಲ್ಲಿ ಹಿಮಾಲಯದಂತೆ, ವೃಕ್ಷಗಳಲ್ಲಿ ಅಶ್ವತ್ಥದಂತೆ, ರಾಜರುಗಳಲ್ಲಿ ಇಂದ್ರನಂತೆ, ದೇವಿಯರಲ್ಲಿ ದುರ್ಗೆಯಂತೆ, ವರ್ಣಗಳಲ್ಲಿ ಬ್ರಾಹ್ಮಣರಂತೆ, ಸಮಸ್ತಶಾಸ್ತ್ರಗಳಲ್ಲಿ ತಂತ್ರಶಾಸ್ತ್ರ ಉತ್ತಮವಾಗಿದೆ.

ಆದರೆ ಶಂಕರಾಚಾರ್ಯರು ಮಾತ್ರ ಪಂಚರಾತ್ರವನ್ನು ಅಪ್ರಮಾಣವೆಂದಿದ್ದಾರೆ. 'ಉತ್ಪತ್ತ್ಯಸಂಭವಾತ್' ಎಂಬ ಬ್ರಹ್ಮಸೂತ್ರವು ಪಂಚರಾತ್ರದ ಅಪ್ರಾಮಾಣ್ಯಸಾಧಕವೆಂಬುದಾಗಿ ಅವರು ಉಪಪಾದಿಸಿದ್ದಾರೆ. ವೈಷ್ಣವರಾಗಿದ್ದ ಶಂಕರಾಚಾರ್ಯರು ಪ್ರಪಂಚಸಾರದಂಥ ಉತ್ತಮ ತಂತ್ರಗ್ರಂಥಗಳನ್ನು ಬರೆದ ಶಂಕರಾಚಾರ್ಯರು-ವೈಷ್ಣವತಂತ್ರಗಳಿಗೆ ಆಧಾರಸ್ತಂಭದಂತಿರುವ ಪಂಚರಾತ್ರಗಳನ್ನು ಅಲ್ಲಗಳೆದಿದ್ದಾರೆ ಎಂದಾಗ ಯಾರಾದರೂ ಅಚ್ಚರಿಗೊಳ್ಳುವುದು ಸಹಜ. ಆದರೆ ಅವರ ಕಾಲದಲ್ಲಿ ಪ್ರಬಲವಾಗಿ ಪ್ರಸಾರದಲ್ಲಿದ್ದ ಶಾಕ್ತಪಂಥ, ಶೈವಪಂಥಗಳು ಅವರಲ್ಲಿರುವ ವೈಷ್ಣವಮನೋವೃತ್ತಿಯನ್ನು ಕೂಡ ತಡೆಹಿಡಿದು—ಅವರ ಮೇಲೆ ತಮ್ಮ ಪ್ರಭಾವವನ್ನು ಚೆಲ್ಲಿದ್ದುವು ಎನ್ನದೆ ಸಮಸ್ಯೆಗೆ ಪರಿಹಾರ ದೊರೆಯಂತಿಲ್ಲ. ಪರಮ ವೈಷ್ಣವರಾದ ಶಂಕರಾಚಾರ್ಯರು ಕೆಲವೊಂದು ಕಡೆಗಳಲ್ಲಿ ಶಕ್ತಿಪಾರಮ್ಯವನ್ನು ಪರವಶರಾಗಿ ಹಾಡಿದ್ದಾರೆ. ಶಾಕ್ತಪಂಥದ ಪ್ರಭಾವ ಅವರಿಂದ ನಗ್ನದೇವತೆ—ರಜಸ್ವಲಾ ದೇವತೆಯರ ಸ್ತೋತ್ರಗಳನ್ನೂ ಮಾಡಿಸಿದೆ ಎಂದ ಮೇಲೆ ಕಾಲದ, ಪರಿಸರದ ಪ್ರಭಾವ ಎಂಥದು ಎಂಬುದನ್ನು ಊಹಿಸಿಕೊಳ್ಳಬಹುದು!

ಪ್ರಪಂಚಸಾರದ ಪ್ರಾರಂಭದಲ್ಲಿ ಅವರು ಉಲ್ಲೇಖಿಸಿದ ವಿಷ್ಣುವಿನ ಮಾತನ್ನು ಗಮನಿಸಿದಾಗ ಶಕ್ತಿಯ ಮೇಲೆ ಅವರಿಗಿದ್ದ ಗೌರವ ಸ್ಫುಟವಾಗುವುದು—

'ಪ್ರಧಾನಮಿತಿ ಯಾಮಾಹುಃ ಯಾ ಶಕ್ತಿರಿತಿ ಕಥ್ಯತೇ ।
ಯಾ ಯುಷ್ಮಾನಪಿ ಮಾಂ ನಿತ್ಯಮವಷ್ಟಭ್ಯಾತಿವರ್ತತೇ ॥'

ಪ್ರಧಾನಪದವಾಚ್ಯಳಾದ ಶಕ್ತಿಯೇ ನಿಮ್ಮನ್ನೂ (ಬ್ರಹ್ಮರುದ್ರಾದಿಗಳನ್ನೂ) ನನ್ನನ್ನೂ ಅತಿಕ್ರಮಿಸಿ ಸರ್ವಶಕ್ತಳಾಗಿದ್ದಾಳೆ. ಈ ಮಾತನ್ನಾಡುವಾಗ ಶಂಕರಾಚಾರ್ಯರು ಅಪ್ಪಟ ಶಾಕ್ತರಂತೆಯೇ ಕಾಣುತ್ತಾರೆ. '**ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಂ**' ಎಂದ ಶಂಕರಾಚಾರ್ಯರೇ ಈ ಮಾತನ್ನೂ ಬರೆದರೇ ಎಂದು ಸಂಶಯಪಡಬೇಕಾಗುತ್ತದೆ. ಆದರ ಕಾಲದ ಪ್ರಭಾವವನ್ನು ಯಾರೂ ತಪ್ಪಿಸಿಕೊಳ್ಳಲಾರರು/ತಪ್ಪಿಸಿಕೊಳ್ಳುವಂತಿಲ್ಲ.

ಸರ್ ಜಾನ್ ವುಡ್‌ರೋಫ್ ಅವರಿಂದ ಸಂಪಾದಿತವಾದ ಶಾರದಾತಿಲಕದ Introductionನಲ್ಲಿಯೂ ಈ ಮಾತನ್ನು ಬರೆದಿದ್ದಾರೆ—

"Shankaracharya was a *Vaishnava*, but his soul-stirring hymn to the *Devi* in eleventh chapter of the *Prapanchasara* would lead anyone to believe that he was a *Shakta*"

*   *   *

ತಂತ್ರಗಳನ್ನೆ ಆಗಮಗಳೆಂದೂ ಕರೆವುದುಂಟು ಎಂದು ಹಿಂದೆ ಸೂಚಿಸಿದ್ದೇನೆ. ಆಗಮತುಲ್ಯಗಳು ಎನ್ನುವ ಗೌರವ ಬುದ್ಧಿಯಿಂದ ಅವನ್ನು ಆ ಹೆಸರಿನಿಂದ ಕರೆಯುವ ರೂಢಿ ಬಂತು. ಅದರಿಂದಲೇ '**ತಂತ್ರಂ ನೈ ವೇದಸಮ್ಮಿತಂ**' ಎಂದು ಪ್ರಾಚೀನರು ಘೋಷಿಸಿದರು. ಇಷ್ಟೇ ಅಲ್ಲದೆ ತಂತ್ರಗಳಿಗೆ 'ಆಗಮ' ಎಂದು ಹೆಸರು ಬರಲು ಇನ್ನೂ ಒಂದು ಕಾರಣವನ್ನು ನಿರುಕ್ತಕಾರರು ಬರೆದುದುಂಟು —

**'ಆಗತ. ಶಿವವಕ್ತ್ರೇಭ್ಯೋ ಗತಶ್ಚ ಗಿರಿಜಾನನೇ ।**
**ಮಗ್ನಶ್ಚ ಹೃದಯಾಂಭೋಜೇ ತಸ್ಮಾದಾಗಮ ಉಚ್ಯತೇ ॥'**

'ರುದ್ರಯಾಮಲ'ದಲ್ಲಿ ಇದೇ ಶ್ಲೋಕ ಸ್ವಲ್ಪ ವ್ಯತ್ಯಾಸವಾಗಿದೆ

**ಆಗತಂ ಶಿವವಕ್ತ್ರೇಭ್ಯೋ ಗತಂ ಚ ಗಿರಿಜಾನನೇ ।**
**ಮತಂ ಶ್ರೀವಾಸುದೇವಸ್ಯ ತಸ್ಮಾದಾಗಮಮುಚ್ಯತೇ ॥'**

ಶಿವನ ಮುಖಗಳಿಂದ ಬಂದಿದ್ದು—ಪಾರ್ವತಿಯ ಮನಸ್ಸಿನಲ್ಲಿ ನೆಲೆಸಿಂತ, ಶ್ರೀಹರಿಗೆ ಸಮ್ಮತವಾದ ಶಾಸ್ತ್ರಜಾಲವೇ ಆಗಮವಂತೆ. ಹೀಗೆ **ಆಗತಂ**, **ಗತಂ**, **ಮಗ್ನಂ** ಅಥವಾ **ಮತಂ** ಈ ಮೂರು ಶಬ್ದಗಳ ಮೊದಲಿನ ಅಕ್ಷರಗಳಿಂದ 'ಆಗಮ' ಶಬ್ದದ ನಿರುಕ್ತಿಯನ್ನು ಮಾಡಿದ್ದಾರೆ. ಹೆಚ್ಚಿನ ತಂತ್ರಗಳಲ್ಲಿ ಶಿವಪಾರ್ವತಿಯರ ಸಂವಾದರೂಪವಾಗಿಯೇ ಗ್ರಂಥಾರಂಭವಾಗುವುದೂ ಈ ನಿರುಕ್ತಿಗೆ ಸಂವಾದಿಯಾಗಿಯೇ ಇದೆ.

ಆದರೆ ಎಲ್ಲ ತಂತ್ರಗಳಲ್ಲಿಯೂ ಈ ಅರ್ಥವನ್ನು ಅನ್ವಯಿಸುವುದು ಅಸಂಭವ. ಆಚಾರ್ಯರು ಬರೆದ ತಂತ್ರಸಾರಸಂಗ್ರಹಕ್ಕೆ ಮೂಲ ಗ್ರಂಥವಾದ ತಂತ್ರಸಾರದಲ್ಲಿ ಬ್ರಹ್ಮನ ಪ್ರಶ್ನೆಗೆ ಉತ್ತರರೂಪವಾದ ವಿಷ್ಣುವಿನ ಉಪದೇಶ ಭಾಗದಿಂದಲೇ ಗ್ರಂಥಾರಂಭವಾಗುವುದು. ಆಚಾರ್ಯರೂ ಗ್ರಂಥಾರಂಭದಲ್ಲಿ ಇದೇ ಪದ್ಧತಿಯನ್ನು ಅನುಸರಿಸಿದ್ದಾರೆ. ಶಂಕರಾಚಾರ್ಯರು ತನ್ನ ಪ್ರಪಂಚಸಾರದ ಆರಂಭದಲ್ಲಿ ಬ್ರಹ್ಮ-ವಿಷ್ಣು-ಶಂಕರರು ಪಾಲ್ಗಡಲಲ್ಲಿ ಶೇಷನ ತೊಡೆಯಲ್ಲಿ ಪವಡಿಸಿರುವ ಮಹಾವಿಷ್ಣುವನ್ನು ಪ್ರಶ್ನಿಸುವಂತೆಯೂ, ಆ ತ್ರಿಮೂರ್ತಿಗಳಿಗೆ ಮಹಾವಿಷ್ಣು ಉತ್ತರಿಸುವಂತೆಯೂ ಚಿತ್ರಿಸಿದ್ದಾರೆ:

'ಅನಂತಭೋಗೇ ವಿಮಲೇ ಫಣಾಯುತವಿರಾಜಿತೇ ।
ಶಯಿತಂ ಶಾರ್ಙ್ಗಿಣಂ ಶರ್ವಶೌರಿಪದ್ಮಭುವಸ್ತದಾ ।
ತುಷ್ಟುವುರ್ಹೃಷ್ಟಮನಸೋ ವಿಷ್ಟರಶ್ರವಸಂ ವಿಭುಮ್ ॥'

(ಸಾವಿರಾರು ಹೆಡೆಗಳಿಂದ ರಾಜಿಸುವ ವಿಶದವಾದ ಶೇಷನ ಶರೀರದಲ್ಲಿ ಮಲಗಿರುವ ಶ್ರೀಹರಿಯನ್ನು ಸಂತುಷ್ಟರಾದ ತ್ರಿಮೂರ್ತಿಗಳು ಸ್ತುತಿಸಿದರು.)

ಪಂಚರಾತ್ರದ ಹೆಚ್ಚಿನ ಭಾಗವೂ ಪ್ರಾಯಃ ಇದೇ ತೆರನಾಗಿದೆ. ಅಹಿರ್ಬುಧ್ನ್ಯಸಂಹಿತಾದಲ್ಲೂ ಉತ್ತರವನ್ನೀವುದು ರುದ್ರನಾದರೂ ಪ್ರಶ್ನಿಸುವುದು ಪಾರ್ವತಿಯಲ್ಲ, ನಾರದ. ಸಾತ್ತ್ವತಸಂಹಿತೆಯೂ ಇದೇ ತೆರನಾಗಿದೆ. ಅದು ವಿಷ್ಣುವಿನಿಂದ ಆವಿರ್ಭಾವಿತವಂತೆ; ನಾರದನಿಗೋಸ್ಕರ ರುದ್ರನಿಂದ ಪ್ರೋಕ್ತವಾದುದಂತೆ; ಪರಮವೈಷ್ಣವಳಾದ ಪಾರ್ವತಿಯೂ ಈ ತಂತ್ರದ ಶ್ರೋತ್ರಿಯಂತೆ; ಗಣೇಶನು ಲೇಖಕನಂತೆ:

'ಅತಸ್ತದ್ದಿನಮಾರಭ್ಯ ಪಾರ್ವತೀ ಭುವನೇಶ್ವರೀ ।
ಮತ್ಸಂಗಾದ್ವೈಷ್ಣವೀ ಭೂತ್ವಾ ಮಾಮಪೃಚ್ಛತ್ಸುರೇಶ್ವರೀ ।
ಸಂಲಿಖತ್ಯಪ್ರಮತ್ತೋಽಸೌ ಗಣೇಶೋ ಮತ್ಸುತೋಽಂತಿಕೇ ॥'(ಸಾತ್ತ್ವತಸಂ.)

ಈಶ್ವರಸಂಹಿತೆ ಬ್ರಹ್ಮಸಂಹಿತೆ ವಿಷ್ಣುಸಂಹಿತೆ ಮೊದಲಾದೆಡೆಗಳಲ್ಲಿ ಸುಮತಿ ಎಂಬ ಬ್ರಾಹ್ಮಣನಿಗೆ ಕ್ರಮವಾಗಿ ರುದ್ರ-ಬ್ರಹ್ಮ-ವಿಷ್ಣುಗಳು ಉಪದೇಶಿಸಿದ್ದೆಂದು ವಿಷ್ಣುಸಂಹಿತೆಯಿಂದಲೇ ತಿಳಿದುಬರುವುದು—

'ಶೃಣು ತ್ವಂ ದೀಕ್ಷಿತೋ ಭೂತ್ವಾ ಪೂರ್ವಮೀಶ್ವರಸಂಹಿತಾಮ್ ।
ಈಶ್ವರಾತ್ ಬ್ರಹ್ಮಣಃ ಪಶ್ಚಾತ್ ತಥೈವ ಬ್ರಹ್ಮಸಂಹಿತಾಮ್ ।
ಮದ್ ವಿಷ್ಣುಸಂಹಿತಾಂ ಶ್ರುತ್ವಾ ತತೋ ಜ್ಞಾನಮವಾಪ್ಸ್ಯಸಿ ॥'

(ವಿಷ್ಣು — ಸುಮತಿಯೆ, ನೀನು ವೈಷ್ಣವದೀಕ್ಷೆಯನ್ನು ಪಡೆದು ಮೊದಲು ರುದ್ರನಿಂದ ಈಶ್ವರಸಂಹಿತೆಯನ್ನೂ, ಬ್ರಹ್ಮನಿಂದ ಬ್ರಹ್ಮಸಂಹಿತೆಯನ್ನೂ ತಿಳಿದುಕೊ. ಕೊನೆಯದಾಗಿ ನನ್ನಿಂದ ವಿಷ್ಣುಸಂಹಿತೆಯನ್ನು ಕೇಳಿ ಜ್ಞಾನವಂತನಾಗುವೆ.)

*　　　　*　　　　*

ಹೀಗೆ ಬಹುವಿಧವಾಗಿ ಪ್ರಾಚೀನರ ಮೆಚ್ಚುಗೆಯನ್ನು ಗಳಿಸಿದ ಈ ತಂತ್ರ ಶಾಸ್ತ್ರದ ಗುರಿಯೇನು? ಯಾವ ಉದ್ದೇಶಸಾಧನೆಗಾಗಿ ಅದು ತನ್ನ ವಿಚಾರ ಧಾರೆಯನ್ನು ಬೆಳಸಿಕೊಂಡಿದೆ? ನಿರ್ದಿಷ್ಟವಾದ ಒಂದು ಗುರಿಯಿಲ್ಲದ ಶಾಸ್ತ್ರ ಯಾವಾಗಲೂ ಹೆಚ್ಚು ಆಯುಸ್ಸನ್ನು ಪಡೆದುಬಂದಿರುವುದಿಲ್ಲ. ಅದರಿಂದ ಅದರ ದೃಷ್ಟಿ ಅದರ ಉದ್ದೇಶ ಎಂಥದು? ಅದು ಇವತ್ತಿನ ಸಮಾಜಕ್ಕೆ ಎಷ್ಟರ ಮಟ್ಟಿಗೆ ಹೊಂದಿಕೆಯಾಗುವಂಥದು ಎಂಬುದನ್ನು ಗಮನಿಸಬೇಕು. ಅದನ್ನು ತೊರೆದುದರಿಂದ ಆದ ಹಾನಿಯೇನು ಎಂಬುದನ್ನು ಪರ್ಯಾಲೋಚಿಸಬೇಕು.

ವಿಜ್ಞಾನವು ತನ್ನ ವಿಜಯಪತಾಕೆಯನ್ನು ಗಗನಕ್ಕೇರಿಸುತ್ತಿರುವ ಇಂದಿನ ದಿನಗಳಲ್ಲಿ ಆಧ್ಯಾತ್ಮಿಕತೆಯು ತಲೆಮರೆಸಿಕೊಳ್ಳುವ ಸನ್ನಾಹದಲ್ಲಿದೆ, ಎಂತಲೇ ಅಧ್ಯಾತ್ಮಜೀವನವನ್ನು ಬೋಧಿಸುವ ಪ್ರಾಚೀನಗ್ರಂಥಗಳನ್ನು ಜನ ಕಡೆಗಣಿಸಿದ್ದಾರೆ. ವಿಜ್ಞಾನದಲ್ಲಿಯೇ ಸರ್ವಸ್ವವನ್ನು ಕಾಣುವ ಭರವಸೆಯಲ್ಲಿದ್ದಾರೆ. ಆದರೆ ಅದರ ಮೂಲೋದ್ದೇಶದಲ್ಲಿಯೇ ಒಂದು ದೊಡ್ಡ ನ್ಯೂನತೆ ಉಳಿದುಕೊಂಡಿದೆ ಎಂದು ಇತ್ತೀಚಿನ ವಿಜ್ಞಾನಿಗಳೇ ಸಮರ್ಥಿಸತೊಡಗಿದ್ದಾರೆ! ವಿಜ್ಞಾನವು ಜಗತ್ತನ್ನೆ ಶೋಧಿಸಹೊರಟಿದೆ. ಅದರ ಕಣಕಣಗಳನ್ನೂ, ಅಂಶ-ಅಂಶವಾಗಿ ಶೋಧಿಸಹೊರಟಿದೆ. ಎಷ್ಟು ಸೂಕ್ಷ್ಮವಾಗಿ ಶೋಧನೆಮಾಡಿದರೆ ಅಷ್ಟು ಗಹನವಾಗುತ್ತಾ ನಡೆದಿದೆ ಈ ಭೌತಪ್ರಪಂಚ! ಅದು ಬ್ರಹ್ಮತತ್ತ್ವದಂತೆಯೇ ಅಗೋಚರವಾಗಿಯೇ ಉಳಿದಿದೆ! ಅದು ತನ್ನ ರಹಸ್ಯವನ್ನು ತನ್ನ ಗರ್ಭದಲ್ಲಿಯೇ ಹುದುಗಿಸಿಕೊಂಡಿದೆ! '**ಅವಿಜ್ಞಾತಂ ವಿಜ್ಞಾನತಾಂ ವಿಜ್ಞಾತಮವಿಜಾನತಾಮ್**'. ಸಾಗರದ ನೆರೆತೊರೆಯಲ್ಲಿ ತೇಲುವ ಕೀಟ ಅದರ ಆಳವನ್ನು ಅರಿಯಲಾರದು. ಕಟ್ಟಡದ ಒಂದು ತುಣುಕಾದ ಇಟ್ಟಿಗೆ ಕಟ್ಟಡದ ಸೊಬಗನ್ನು ಅರಿಯಲಾರದು; ಮನುಷ್ಯ ಪ್ರಕೃತಿರಹಸ್ಯವನ್ನು ಭೇದಿಸಲಾರ ಎನ್ನುವ ನಿರಾಶಾವಾದವನ್ನು ಆಡುವವರೂ ಉಂಟು! ಒಟ್ಟಿನಲ್ಲಿ ಈ ವಿಜ್ಞಾನದ ಸ್ರೋತಸ್ಸಿಗೆ ಅಂತಪಾರವೆಲ್ಲಿ? ಈ ಭೂಮಿಯ ಮಳಲನ್ನು ಎಣಿಸುವ

ಉದ್ಯೋಗಕ್ಕೆ ಕೊನೆಯಿಲ್ಲಿ? ಮನುಷ್ಯನನ್ನು ಇನ್ನಷ್ಟು ಯಾಂತ್ರಿಕನನ್ನಾಗಿಸುವ ನಮ್ಮ ವಿಜ್ಞಾನ ಇದೇ ಮುಖದಲ್ಲಿ ಮುಂದುವರಿದರೆ ನಮಗೆ ಅದರಿಂದ ಮುಂದೆ ದೊರಕಬಹುದಾದ ಫಲವಾದರೂ ಎಂಥದು? ಅದರ ಕಲ್ಪನೆಯೇ ದಾರುಣವಾಗಿದೆ. ವಿಜ್ಞಾನ ತನ್ನ ಸ್ರೋತಸ್ಸನ್ನು ನಿಧಾನಿಸಿ ಸೌಮ್ಯವಾಹಿನಿಯಾಗಿ ಹರಿಯಬೇಕು. ಅದರ ರಸಪಾನದಿಂದ ಜನತಣಿಯಬೇಕು. ಇದು ವಿಜ್ಞಾನದ ಇನ್ನೊಂದು ಮುಖ. ತಂತ್ರಶಾಸ್ತ್ರದ ಮುಖವೂ ಇದೇ ಎನ್ನಬಹುದು.

ಇಡಿಯ ಜಗತ್ತನ್ನು ಯಾರಿಗಾಗಿ ನಾವು ಪ್ರೀತಿಸುತ್ತಿದ್ದೇವೆ? ದುಡ್ಡು, ಹೆಂಡತಿ, ಮಕ್ಕಳನ್ನು ಯಾರಿಗಾಗಿ ನಾವು ಪ್ರೀತಿಸುತ್ತಿದ್ದೇವೆ? ಇದಕ್ಕೆ ಬರುವ ಉತ್ತರ ಒಂದೇ! ಜಗತ್ತಿಗಾಗಿ ಜಗತ್ತನ್ನು ನಾವು ಪ್ರೀತಿಸುತ್ತಿಲ್ಲ; ದುಡ್ಡಿಗಾಗಿ ನಾವು ದುಡ್ಡನ್ನು ಪ್ರೀತಿಸುತ್ತಿಲ್ಲ; ಸಂಸಾರಕ್ಕಾಗಿ ನಾವು ಸಂಸಾರವನ್ನು ಪ್ರೀತಿಸುತ್ತಿಲ್ಲ; ನಾವು ಎಲ್ಲವನ್ನೂ ಪ್ರೀತಿಸುವುದು ನಮಗಾಗಿ! ಆ 'ನಾನು' ನಮಗೆ ಅಪ್ರಧಾನವಾಗಿ ಬಿಟ್ಟರೆ– ನಾವು ಯಾವುದನ್ನೂ ಅಪೇಕ್ಷಿಸಲಾರೆವು. ಆದರೆ– ವಿಜ್ಞಾನ ಆ 'ನಾನು' ಅಥವಾ ಆತ್ಮತತ್ವವನ್ನು ಮರೆತೇ ಜಗತ್ತನ್ನು ಶೋಧಿಸುತ್ತಿದೆ! ಯಾವ ಆತ್ಮತತ್ವಕ್ಕಾಗಿ ಈ ಇಡಿಯ ವಿಶ್ವವನ್ನೇ ಬಯಸುವೆವೋ ಆ ತತ್ವ ಇದಕ್ಕಿಂತ ಮುಖ್ಯವಾಗಿರಬೇಕು. ಅದರಲ್ಲಿ ನಮ್ಮ ದೃಷ್ಟಿ ಕೇಂದ್ರೀಕೃತವಾಗಿರಬೇಕು.

'ನವಾ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ ।
ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ ।
ಆತ್ಮಾ ವಾ ಅರೇ ದ್ರಷ್ಟವ್ಯಃ ।'

ಆದರಿಂದ ಆತ್ಮತತ್ತ್ವವನ್ನು ತಿಳಿಯಲು ನಾವು ತೊಡಗಬೇಕು. ಅದಕ್ಕಾಗಿ ಎಲ್ಲಾ ಚೇತನಗಳನ್ನರಿತುಕೊಳ್ಳಿ, ಆ ಎಲ್ಲ ಚೇತನಗಳನ್ನೂ ಗೊಂಬೆಯಂತೆ ನಲುಗಿಸುತ್ತಿರುವ ಪ್ರಧಾನ ಚೇತನವನ್ನೂ ಅರಿತುಕೊಳ್ಳಿ ಎನ್ನುತ್ತಿದೆ ತಂತ್ರಶಾಸ್ತ್ರ.

ವಿಜ್ಞಾನದ ಸರಪಣಿಯನ್ನು ನಾವು ಬೆಳೆಸುತ್ತಿದ್ದೇವೆ. ಆದರೆ ಅದರ ಮೊದಲಿನ ಕೊಂಡಿಯೇ ಎಲ್ಲೋ ತಪ್ಪಿ ಬಿದ್ದಿದೆ. ಇನ್ನೆಷ್ಟು ಕೊಂಡಿಗಳನ್ನು ಬೆಳಸಿ ಬಂದು ಫಲವೇನು ಎಂದು ಅಲೆಕ್ಸೀ ಕಾರೆಲರಂಥ ಮಹಾವಿಜ್ಞಾನಿಗಳೇ ಸವಾಲೆತ್ತಿದ್ದಾರೆ! ಯಾವುದೋ ಒಂದು ಅವ್ಯಕ್ತ ಶಕ್ತಿಯ ಸೂತ್ರದ ಗೊಂಬೆಯಾಗಿ ನಾವು ನಲಿಯುತ್ತಿದ್ದೇವೆ. ಅದು ಇಂದಿನ ವರೆಗೂ ವಿಜ್ಞಾನಕ್ಕೆ

ಅಗೋಚರವಾಗಿ ಉಳಿದಿದೆ; ಪ್ರಾಯಃ ಎಂದೆಂದಿಗೂ ಅಗೋಚರವಾಗಿಯೇ ಉಳಿಯುವುದು ಎಂದೂ ಅವರು ಉದ್ಗರಿಸಿದ್ದಾರೆ.

ಈ ಆತ್ಮಾನ್ವೇಷಣೆ ಗಳುಹುವಷ್ಟು, ಕಾಗದ ಮಸಿಮಾಡುವಷ್ಟು ಸುಲಭ ದಲ್ಲಿ ಸಾಧಿಸಬರುವಂತಿಲ್ಲ– ನಿಜ. ಆದರೆ ತಂತ್ರಶಾಸ್ತ್ರದಲ್ಲಿ ಅದರ ಕುರಿತು ಬರೆದ ವಿಧಾನಗಳು ವೈಜ್ಞಾನಿಕವಾಗಿ ಸಮರ್ಥಿಸಬರುವಷ್ಟು ಶುದ್ಧ ವಾಗಿವೆ. ಮೊದಲಾಗಿ ಸಾಧಕ ಪ್ರಾಣಾಯಾಮಾದಿಗಳಿಂದ ಏಕಾಗ್ರತೆಯನ್ನು ಸಂಪಾದಿಸಿ ತನ್ನ ದೇಹವನ್ನು ತನ್ನ ವಶವಾಗಿಸಿಕೊಂಡು– ಅದರ ಬಲದಿಂದ ಇಚ್ಛಾಶಕ್ತಿಯನ್ನು ಬೆಳಸಿಕೊಳ್ಳಬೇಕು. ಆದರಿಂದ ಮನುಷ್ಯ ಅಸಾಧ್ಯವಾದು ದೇನನ್ನೂ ಮಾಡಬಲ್ಲ– ಆಕಾಶದಲ್ಲಿ ಹಾರಬಲ್ಲ, ನೀರಿನಲ್ಲಿ ನಡೆಯಬಲ್ಲ, ಎಂದರು ಶಾಸ್ತ್ರಕಾರರು. ವಿಮಾನವಿಲ್ಲದೆ ನಾವು ಆಕಾಶದಲ್ಲಿ ಹಾರಬಲ್ಲೆ ವಾದರೆ, ಅಲ್ಲಿರುವ ಕಾಸ್ಮಿಕ್ ಕಿರಣಗಳನ್ನು ತಡೆಹಿಡಿವ ಶಕ್ತಿಯನ್ನು ನಮ್ಮ ಯೋಗಬಲದಿಂದಲೇ ಸಾಧಿಸಬಲ್ಲೆವಾದರೆ ಇಂಥ ಯೋಗಶಕ್ತಿಗೆ ಯಾವ ವಿಜ್ಞಾನಿಯೂ ಶರಣುಹೊಡೆಯಬಲ್ಲ. ಆದರೆ ಇದು ಸಾಧ್ಯವೆ? ಅವರು ಬರೆದಿಟ್ಟಿದ್ದಾರೆ ಎಂದಷ್ಟಕ್ಕೆ ನಾವು ಮರುಳಾಗುವುದೆ ಎಂದು ಕೇಳು ವವರುಂಟು. ಅಂಥವರಿಗೆ–'ಇದು ಸಾಧ್ಯ' ಎಂದು ಉತ್ತರಿಸುವ ಮಟ್ಟಿಗೆ ಯೋಗಶಾಸ್ತ್ರ ಇವತ್ತಿಗೂ ಬದುಕಿಕೊಂಡಿದೆ. ಇಚ್ಛಾಶಕ್ತಿಯನ್ನು ಬೆಳೆಸಿ ಕೊಂಡ ಜನ ಇವತ್ತಿಗೂ ಹಳ್ಳಿಗಾಡುಗಳಲ್ಲಿ ಕಾಣಬರುವುದುಂಟು ಎಂದು ವಿಜ್ಞಾನಿಗಳೇ ನುಡಿಯುತ್ತಿದ್ದಾರೆ. ಶಾಪಾನುಗ್ರಹಶಕ್ತಿ ಕೂಡ ಏನೂ ಅರಿ ಯದ ಈ ಕಾಡುಜನರಲ್ಲಿ ಕಾಣುತ್ತಿದೆ ಎಂದು ಅನ್ವೇಷಕರು ಅಭಿಪ್ರಾಯ ಪಡುತ್ತಿದ್ದಾರೆ. ಏನನ್ನೂ ಅರಿಯದ ಆ ಜನ ಸಾಹಜಿಕವಾದ ಇಚ್ಛಾ ಶಕ್ತಿಯ ಮಹತ್ವವನ್ನು ಅರಿತುಕೊಂಡಿದೆ. ಆದರೆ ಎಲ್ಲವನ್ನೂ ಬಲ್ಲವರು ಎನಿಸಿಕೊಂಡ ನಾವು ಯಾವುದರಿಂದ ಎಲ್ಲವನ್ನೂ ಸಾಧಿಸಬಹುದಿತ್ತೋ ಅಂಥ ಇಚ್ಛಾಶಕ್ತಿಯನ್ನು ಕಳಕೊಂಡು ದ್ರಾವಿಡ ಪ್ರಾಣಾಯಾಮಕ್ಕೆ ತೊಡ ಗಿದ್ದೇವೆ! ಇದು ನಾಗರಿಕತೆ ನಮಗಿತ್ತ ಉಡುಗೊರೆ!

ದೂರವಾಣಿ–ದೂರದರ್ಶಕಗಳ ಹೊಸ ಶೋಧದಿಂದ ನಮ್ಮ ಇಂದ್ರಿಯ ಪಾಟವವನ್ನು ಕಳೆದುಕೊಳ್ಳುತಿದ್ದೇವೆ. 'ಕ್ಲೇರ್‌ವೊಯಾನ್ಸ್,' 'ಕ್ಲೇರ್ ಆಡಿ ಯೆನ್ಸ್' ಎನ್ನುವುದು ನಮ್ಮ ಮಟ್ಟಿಗೆ ಅರ್ಥವೇ ಇಲ್ಲದ ಶಬ್ದವಾಗಿ ಉಳಿ ದಿದೆ. ನಾಗರಿಕತೆಯ ಜಂಜಡದಿಂದ ಬೆಳೆದುಬಂದ ಪ್ರತ್ಯೇಕತಾಭಾವನೆ ಒಬ್ಬನಿಂದ ಒಬ್ಬನನ್ನು ದೂರಮಾಡುತ್ತಿದೆ. ಎದುರು ಬಿದ್ದು ನರಳುತ್ತಿರುವ

ವ್ಯಕ್ತಿಯ ದುಃಖವನ್ನು ಕಂಡೂ ಅರಿತುಕೊಳ್ಳದಷ್ಟು ದೂರ-ನಾಗರಿಕತೆ ನಮ್ಮನ್ನು ಕೊಂಡೊಯ್ಯುತ್ತಿದೆ. ಇದರಿಂದ ನಮ್ಮ ಮನಃಶಕ್ತಿ ಕುಗ್ಗುತ್ತಿದೆ-ಇಚ್ಛಾಶಕ್ತಿ ಕೊರಗುತ್ತಿದೆ. 'ಮೆಸ್ಮರಿಸ್ಮ್' ಪ್ರಯೋಗಗಳನ್ನು ಇಚ್ಛಾಶಕ್ತಿಯ ಬಲದಿಂದಲೇ ನಡೆಯಿಸುತ್ತಾರೆ. ಎಂದ ಮೇಲೆ ಅದರ ಶಕ್ತಿಯ ಕುರಿತು ಯಾರೂ ಎಡೆತೆನ್ನಲಾರರು. ಒಬ್ಬ ಡೊಂಬರವನು ಬೀದಿ ಬೀದಿಯಲ್ಲಿ ಮರುಳಾಟಗಳನ್ನು ತೋರಿಸಿ ನಮ್ಮನ್ನು ಬೆರಗುಗೊಳಿಸುವಷ್ಟು ಇಚ್ಛಾಶಕ್ತಿಯನ್ನು ಸಂಪಾದಿಸಬಲ್ಲನೆಂದರೆ ಅದನ್ನು ನಾವು ಕಣ್ಮುಚ್ಚಿ ಅಲಿಸುವುದು ಏತರ ನ್ಯಾಯ? ಅಂಥ ಒಂದು 'ಟೆಲಿಪತಿ'ಯನ್ನು ಸಾಧಿಸಲು ನಾವೇಕೆ ಯತ್ನಿಸಬಾರದು?

ಇಂಥ ಏಕಾಗ್ರತೆಯನ್ನು ಸದುಪಯೋಗವಾಗುವಂತೆ ವಿನಿಯೋಗಿಸಿಕೊಳ್ಳುವುದು ಕಷ್ಟಸಾಧ್ಯವಾದ ಒಂದು ಸಾಧನೆ. ಪ್ರಾಣಾಯಾಮದ ಬಲದಿಂದ ನಾವು ನಮ್ಮ ದೇಹದ ಬಲವನ್ನು ಹೆಚ್ಚಿಸಿಕೊಂಡು-ಏಕಾಗ್ರತೆಯನ್ನು ಸಂಪಾದಿಸಿಕೊಂಡು-ಅದರಿಂದ ಮುಂದೆ-ಅಹಂಕಾರದಿಂದ ಮಲಿನವಾಗದ ಜ್ಞಾನವನ್ನು ಸಂಪಾದಿಸಿಕೊಂಡರೆ ಅದು ಮನುಷ್ಯನಿಗೆ ಸಾಧಕವಾದ ಜ್ಞಾನ ಎಂದು ತಂತ್ರ ಹೇಳುತ್ತದೆ. ಸರ್ ಜಾನ್ ವುಡ್‌ರೋಫ್ ಅವರು ಈ ಕುರಿತು ತನ್ನ ಗ್ರಂಥವೊಂದರಲ್ಲಿ ಬರೆದಿದ್ದಾರೆ—

*Pranayama*, regulation of the breath, A *yogi* renders the vital airs equable, and consciously produces the state of respiration which is favourable for mental concentration, as others do it occasionally and unconsciously."

"There is no better friend than knowledge, nor worse enemy than egoism as to learn to the *Shastra* one must learn the alpabet, so *yoga* is necessary for the acquirment of *tathvajnana*"

ಇಂಥ ಕಷ್ಟಸಾಧ್ಯವಾದ ಒಂದು ಸಿದ್ಧಿಯನ್ನು ನಮ್ಮ ಪೂರ್ವಜರು ಸಾಧಿಸಿಕೊಂಡಿದ್ದರು. ಅದು ಮುಂದಿನ ಪೀಳಿಗೆಯಲ್ಲೂ ಉಳಿದು ಬರಲಿ ಎಂಬ ಆಕಾಂಕ್ಷೆಯಿಂದ-ನಮ್ಮ ಮೇಲೆ ಕರುಣೆಯಿಟ್ಟು ಅದನ್ನು ಬರೆದಿಟ್ಟಿದ್ದಾರೆ. ಆದರೆ ಅವರು ಏನನ್ನು ಬರೆದಿದ್ದಾರೆ-ಎಂದು ಕಣ್ಬಿಟ್ಟು ನೋಡುವಷ್ಟು ತಾಳ್ಮೆ-ಪುರುಸೊತ್ತುಗಳನ್ನು ನಾವು ಪಡೆದುಬಂದಿಲ್ಲ! ಇಂಥ ಒಂದು

ಪ್ರವೃತ್ತಿಯಿಂದ ನಾವು ನಮ್ಮ ಪೂರ್ವಜರಿಗೆ ಕೃತಘ್ನರಾಗುತ್ತಿದ್ದೇವೆ ಎಂಬುದರ ಅರಿವೂ ನಮಗಿಲ್ಲ! ಅವರ ನಾವಿರಾರು ವರ್ಷಗಳ ಸಿದ್ಧಿ-ಗೆದ್ದಲಿನ ಗೂಡಿನಲ್ಲಿ ನವೆಯುತ್ತಿದೆ! ನಾವು ಮಾತ್ರ ದಿನದಿಂದ ದಿನಕ್ಕೆ ನಾಗರಿಕರಾಗುತ್ತಿದ್ದೇವೆ! ನಮಗೆ ಹಳತು ಬೇಕಾಗಿಲ್ಲ! ಈ ದೃಷ್ಟಿಎಷ್ಟು ಉಚಿತ ಎಂದು ಸುದೀರ್ಘವಾಗಿ ಪರ್ಯಾಲೋಚಿಸುವ ಕಾಲ ಈಗ ಬಂದೊದಗಿದೆ.

ನಾನು ಇಂಗ್ಲಿಷಿನ ಮಾನಸಪುತ್ರರ ಕುರಿತು ಹೇಳುತ್ತಿಲ್ಲ. ಅವರಿಗೆ ಮಲಯಮಾರುತ ತೆಂಕಣದ ಬದಲಾಗಿ ಪಡುವಣ ದಿಕ್ಕಿನಿಂದಲೇ ಬೀಸುತ್ತಿರಬಹುದು; ಪಾಶ್ಚಾತ್ಯತರುಣಿಯರೇ ಬಿಡುಗಣ್ಣಿನ ಅಚ್ಚರಸಿಯರಾಗಿರಬಹುದು; ಸೂರ್ಯನೇ ಬೇಕಿದ್ದರೂ ಪಶ್ಚಿಮದಲ್ಲಿ ಉದಯಿಸಬಹುದು. ನಾನು ತಂತ್ರಶಾಸ್ತ್ರದ ಕೆಲವು ಪುಟಗಳನ್ನೋ ಅಕ್ಷರಗಳನ್ನೋ ಓದಿ ವಿಮರ್ಶಿಸುವವರನ್ನು ಕುರಿತು ಹೇಳುತ್ತಿಲ್ಲ. ಅವರಿಗೆ ಎಲ್ಲ ತತ್ತ್ವಗ್ರಂಥಗಳೂ ಅವರ ಬುದ್ಧಿಗೆ ನಿಲುಕದ ಎಲ್ಲ ಸತ್ಯವೂ ಸುಳ್ಳಾಗಿರಬಹುದು. ಆದರೆ ಯಾರು ನಿಜವಾಗಿ ಇಂಥ ಗ್ರಂಥಗಳನ್ನು ಅಧ್ಯಯನ ಮಾಡಬಲ್ಲರೋ, ಯಾರು ಇಂಥ ಪರಂಪರಗೆ ಪುನರ್ಜೀವವನ್ನಿತ್ತು ಚೈತನ್ಯ ತುಂಬಿಸಬಲ್ಲರೋ, ಯಾರ ಆಸರೆಯಿಂದ ಮಾತ್ರವೇ ಇಂಥ ಸಂಪ್ರದಾಯದ ಅಸ್ತಿತ್ವ ಸಾಧ್ಯವೋ ಅಂಥವರು ಇದರ ಕುರಿತು ಅನಾದರ ತೋರುವುದು ಮಾತ್ರ ಅಕ್ಷಮ್ಯ ಅಪರಾಧವಾಗಿದೆ. ಅವರ ಅನಾದರದಿಂದ ಒಂದು ದೊಡ್ಡ ಸಿದ್ಧಿ ನಿರ್ನಾಮವಾಗುತ್ತಿದೆ; ಒಂದು ಹೆಮ್ಮೆಯ ನಿಧಿ ಭೂಗತವಾಗುತ್ತಿದೆ. ಸಂಸ್ಕೃತದಲ್ಲಿ, ಶಾಸ್ತ್ರದಲ್ಲಿ ಪರಿಶ್ರಮವುಳ್ಳ ಜನ ಈ ಮಾತನ್ನಾಲಿಸಬೇಕು. ಇದರ ಹಿಂದಿರುವ ವೇದನೆಯನ್ನರಿತುಕೊಳ್ಳಬೇಕು. 'ಬೊಹೀಮಿಯಾನಿಸ್‌ಮ್'ನಿಂದ ದೂರವಾಗಿ ನಾವು ನಮ್ಮ ಪೂರ್ವಜರ ಸಿದ್ಧಿಯನ್ನು ಕಾಣಲು ಟೊಂಕಕಟ್ಟಬೇಕಾಗಿದೆ. ಅದಕ್ಕೆ ಬೇಕಾಗುವ ಅಧಿಕಾರಸಂಪತ್ತಿಯನ್ನು ಪಡೆದುಕೊಳ್ಳಬೇಕಾಗಿದೆ. ಸುಮಾರು ೨ ಸಾವಿರ ವರ್ಷಗಳ ಹಿಂದೆ ಮನೆಮನೆಯಲ್ಲಿ ಯೋಗಶಾಸ್ತ್ರಜ್ಞರು ತುಂಬಿದ್ದ ಈ ಭಾರತದಲ್ಲಿ ಈಗ ದೇಶಕ್ಕೊಬ್ಬ ಯೋಗಜ್ಞನೂ ಇಲ್ಲದಂತಾಗುವುದು ಶೋಚನೀಯ. ವಿಜ್ಞಾನಿ ಅಲೆಕ್ಸೀಕಾರೆಲ್ ಅವರು ನುಡಿದಂತೆ– ಬುದ್ಧಿಜೀವಿಗಳಲ್ಲದ ಪ್ರಾಣಿಗಳಲ್ಲಿ ಕೂಡ ಶ್ವಾಸನಿರೋಧಮಾಡಿ ದಿನಗಟ್ಟಲೆ ಕೂಡುವ ಶಕ್ತಿ ದೈವದತ್ತವಾಗಿರುವಾಗ ಬುದ್ಧಿಜೀವಿಯಾದ ಮನುಷ್ಯನು ತಿಳಿದೂ ತಿಳಿದೂ ಇದನ್ನು ಮರೆಯುತ್ತಿರುವುದು

ಅಕ್ಷಮ್ಯ ಅಪರಾಧ! ಅದು ಬುದ್ಧಿಜೀವಿ ಎಂಬ ಶಬ್ದವನ್ನು ಹೊತ್ತವನು ಮಾಡದಂಥ ಕೆಲಸ!

ಮನುಷ್ಯ 'ನಾಗರಿಕ'ನಾಗುತ್ತಿದ್ದೇನೆ ಎನ್ನುವ ಭ್ರಮೆಯಿಂದ ಅನ್ಯೋನ್ಯತೆಯನ್ನು ಮರೆತು ಇಚ್ಛಾಶಕ್ತಿಯನ್ನು ಕಳೆದುಕೊಂಡು ಇನ್ನಷ್ಟು ಕೃತಕ ಜೀವನವನ್ನು ಬಾಳುತ್ತಿದ್ದಾನೆ. ಅದನ್ನು 'ಇಚ್ಛಾಶಕ್ತಿ' ಎನ್ನಿ—'ವಿಲ್ ಪವರ್' ಎನ್ನಿ ಏನೇ ಆದರೂ ಅಂಥದೊಂದು ಅಪೂರ್ವಶಕ್ತಿ ಹಿಂದಿನ ಜನರಲ್ಲಿ ಇತ್ತು; ಇವತ್ತು ಕೂಡ ಯಾರನ್ನು ನಾವು 'ನಾಗರಿಕರ ಕೋಟಿ'ಯಲ್ಲಿ ಸೇರಿಸಿಕೊಳ್ಳಲು ನಾಚುತ್ತೇವೆಯೋ ಅಂಥವರಲ್ಲಿ ಸ್ವಲ್ಪಮಟ್ಟಿಗೆ ಇದೆ ಎಂದು ಪುರಾವೆಗಳಿಂದ ಸಿದ್ಧವಾಗಿವೆ. ವಿಜ್ಞಾನಿಗಳೂ ಕೂಡ ಇಂಥ ಸತ್ಯವನ್ನು ತೊಡೆಯಲಾರರು. ಬದಲಾಗಿ ಅವರು ಮನಸ್ಸಿನ ಅದ್ಭುತ ಶೋಧಕ್ಕೆ ತೊಡಗಬೇಕಾಗಿದೆ, ತೊಡಗಿದ್ದಾರೆ.

ಪ್ರಾಚೀನಗ್ರಂಥಗಳಲ್ಲಿ ಋಷಿಗಳು ಪತಿವ್ರತೆಗಳು ಶಾಪಕೊಟ್ಟಂತೆ ಕಥೆಗಳು ಬರುತ್ತವೆ. ಅವು ಕೂಡ ಈ ಇಚ್ಛಾಶಕ್ತಿಯ ಹಿನ್ನೆಲೆಯಿಂದ ಹೊರಟ ಕಥೆಗಳು. ಮಂತ್ರವನ್ನು ಜಪಿಸಿದರೆ ಇಂಥ ಫಲ ಬರುವುದು ಎನ್ನುವುದೂ ಇದೇ ತರದ ಒಂದು ಸಂವಿಧಾನ. ಮಂತ್ರವನ್ನು ಕಂಡುಹಿಡಿದಂಥ ವ್ಯಕ್ತಿಯ ಇಚ್ಛಾಶಕ್ತಿ ಪ್ರಬಲವಾಗಿದ್ದಾಗ ಆತ ಏನಾಗಬೇಕೆಂದು ಆ ಮಂತ್ರವನ್ನು ಉಚ್ಚರಿಸಿದನೋ ಆ ಶಕ್ತಿಯನ್ನು ಪಡೆದುಕೊಂಡೇ ಆ ಮಂತ್ರ ಅವನ ಬಾಯಿಯಿಂದ ಹೊರಹೊಮ್ಮುತ್ತದೆ. ಎಂತಲೇ ಆ ಶಕ್ತಿ ಆ ಮಂತ್ರದಲ್ಲಿಲ್ಲ— ಅದನ್ನು ಕಂಡುಹಿಡಿದ ಪುರುಷನಲ್ಲಿದೆ. ಮಂತ್ರ ಯಾವ ಭಾಷೆಯದೂ ಆಗಿರಬಹುದು— ಯಾವ ಅರ್ಥವುಳ್ಳದ್ದೂ ಆಗಿರಬಹುದು, ಅದು ಅಲ್ಲಿ ಮುಖ್ಯ ವಿಚಾರವಲ್ಲ- ಅದನ್ನು ಕಂಡುಹಿಡಿದವನ ಮನಸ್ಸಿನ ಶಕ್ತಿ ಎಷ್ಟು ಆಳವಾಗಿದೆ ಎಂಬುದು ಅಲ್ಲಿ ಗಮನಿಸಬೇಕಾದ ವಿಷಯ. ಇದನ್ನು ಒಬ್ಬ ಜೈನ ವಿದ್ವಾಂಸ ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ:

'ಯೇ ಹಿ ಸತ್ಯಸಂಕಲ್ಪಾಸ್ತ ಏವ ಮಂತ್ರಾನ್ ಕರ್ತುಂ ಶಕ್ನುವಂತಿ । ನಿರತಿಶಯಪ್ರಭಾವಸಮನ್ವಿತೈರ್ಹಿ ತೈರಮುಷ್ಮಾನ್ಮಂತ್ರಾದಸ್ಯೇದಂ ಫಲಂ ಭವತ್ವಿತ್ಯನುಸಂಧಾಯ ಯದಾ ಯಯಾಕಯಾಚಿದ್ಭಾಷಯಾ ಪ್ರಯುಜ್ಯಂತೇ ಮಂತ್ರಾಸ್ತದಾ ತೇಷಾಂ, ತತ್ಪ್ರಭಾವಾದೇವ ತಥಾವಿಧಾರ್ಥಕ್ರಿಯಾಕರಣಸಾಮರ್ಥ್ಯಂ ಸಂಭಾವ್ಯತೇ । ದೃಶ್ಯತೇ ಹಿ ಸಾಂಪ್ರತಮಪಿ ಮಹಾಪ್ರಭಾವಮಂತ್ರವಾದಿನ ಆಜ್ಞಾಪ್ರದಾನಾನ್ನಿರ್ವಿಷೀಕರಣಾದಿಕಮ್ । ಸ ಚೇತ್ಥಂಭೂತಃ ಪ್ರಭಾವೋ ನೇತರ-

ಪುರುಷಾಣಾಂ ನಮುಸ್ತಿ । ತೇನ ನ ಸರ್ವೇಷಾಂ ಮಂತ್ರಕರ್ತೃತ್ವಮ್ ।'

(ನ್ಯಾಯಾದ್ವಾಪರತ್ನಾಕರ)

ಎಲ್ಲರೂ ಇಂಥ ಇಚ್ಛಾಶಕ್ತಿಯನ್ನು ಪಡೆದಿಲ್ಲ. ಎಂತಲೇ ಎಲ್ಲರೂ ಇಂಥ ಮಂತ್ರವನ್ನು ಕಂಡುಹಿಡಿಯಲಾರರು. ಇದರಿಂದ ಮನಸ್ಸು ಎಷ್ಟು ಗಹನವೂ ಅದ್ಭುತವೂ ಆಗಿದೆ ಎಂಬುದನ್ನು ಗಮನಿಸಬಹುದು. ಅದು ಈಲೆಕ್ಟ್ರಿಸಿಟಿಯಂತೆ ವಿಕಿರಣಶೀಲವಾಗಿದೆ. ವೀಣೆಯಂತೆ ಅನುರಣನಶೀಲವಾಗಿದೆ. ಅದು ಆಕಾಶಕ್ಕಿಂತಲೂ ಮಹತ್ತರವಾಗಿದೆ. ಪರಮಾಣುವನ್ನು ಹೊಗುವಷ್ಟು ಅಣುತರವೂ ಆಗಿದೆ. ಎರಡು ಮನಸ್ಸುಗಳೂ ಸಮಾನಸ್ಥಿತಿಯಲ್ಲಿದ್ದಾಗ–ಸಹೃದಯಗಳಾಗಿದ್ದಾಗ– ಎರಡು ಮನಸ್ಸುಗಳನ್ನೂ ಸ್ನೇಹದ ಬಂಧನ ಬಿಗಿಹಿಡಿದಿದ್ದಾಗ– ಒಂದರಲ್ಲಿ ಎದ್ದ ಅಲೆ ಇನ್ನೊಂದನ್ನು ಅಪ್ಪಳಿಸಬಲ್ಲುದು. ಒಂದರಲ್ಲಿ ಎದ್ದ ದನಿ ಇನ್ನೊಂದರಲ್ಲಿ ಪಡಿನುಡಿಯಬಲ್ಲುದು. ನಮಗೆ ಪ್ರಿಯರಾದವರು ಏನಾದರೂ ಆಪತ್ತಿನಲ್ಲಿದ್ದಾಗ ಅವರು ನಮ್ಮನ್ನು ನೆನಸಿದಾಗ ನಮಗೆ ಬರುವ ಪ್ರೇರಣೆ– ಅಥವಾ ಬೀಳುವ ಕನಸು ಈ ಮುನ್ಸೂಚನೆಗಳೆಲ್ಲ ಈ 'ಅತೀಂದ್ರಿಯ ಪ್ರಜ್ಞೆ'ಯ ಮಾದರಿಗಳು. ನಾಗರಿಕತೆಯ ಪರದೆ–ಒಂದು ಮನಸ್ಸನ್ನು ಇನ್ನೊಂದರಿಂದ ಬೇರ್ಪಡಿಸಿದಾಗ, ನಾನು ನಾನಾಗಿಯೇ ಸ್ವಯಂಪೂರ್ಣನಾದ ಒಬ್ಬ ವಿಶಿಷ್ಟವ್ಯಕ್ತಿ ಎಂಬ ಭಾವನೆ ಮನಸ್ಸಿನ ಬಂಧನವನ್ನು ತುಂಡರಿಸಿದಾಗ ಈ 'ಟೆಲಿಪತಿ' ತನ್ನಷ್ಟಕ್ಕೆ ಮುದುಡಿಕೊಳ್ಳುತ್ತದೆ. ಆಗ ಅದು ಅರ್ಥವಿಲ್ಲದ ಒಂದು ಪದವಾಗಿಯೇ ಉಳಿದುಕೊಳ್ಳುತ್ತದೆ. ಹಳ್ಳಿಯಲ್ಲಿ ಒಬ್ಬ ಕಷ್ಟಕ್ಕೆ ಬಿದ್ದಾಗ-ಹತ್ತು ಕೈಗಳು ಅವನ ಸಹಕಾರಕ್ಕೆ ನಿಲ್ಲುವವು. ಅದೇ ಪೇಟೆಯಲ್ಲಿ ನಡುಬೀದಿಯಲ್ಲಿ ಒಬ್ಬ ತೆವಳುತಿದ್ದರೆ ಅವನ ಕಷ್ಟಕ್ಕಾಗಿ ಮರುಕವನ್ನೂ ಪಡದೆ 'ಸ್ಟಿಯರಿಂಗ್' ತಿರುಗಿಸಿ ನಡೆವ ಒರಟುತನ ಬಂದುಬಿಡುತ್ತದೆ. ಇದಕ್ಕೇನು ಕಾರಣ? ಹಳ್ಳಿಯ ಮನಸ್ಸು ಈಗಲೂ ಪರರ ಸಂವೇದನೆಯನ್ನು ಅರಿತುಕೊಳ್ಳಬಲ್ಲುದು. ಅದೇ ಪೇಟೆಯ ವಿಕೃತವಾತಾವರಣ ಈ ಮನಸ್ಸಿನ ಸಂಬಂಧವನ್ನು ಕಡಿದುಬಿಡುತ್ತದೆ.

ಮನಸ್ಸು ಎಂಬುದು ಒಂದು ತಂಬೂರಿಯಂತಿದೆ. ಸಮಾನ ಶ್ರುತಿಯಲ್ಲಿರುವ ಎರಡು ತಂಬೂರಿಗಳಲ್ಲಿ ಯಾವೊಂದನ್ನು ಮೀಟಿದರೂ ಸಮೀಪದಲ್ಲಿರುವ ಇನ್ನೊಂದು ತಂಬೂರಿ ಅದರಂತೆಯೇ ಅನುರಣಿತವಾಗುತ್ತದೆ. ಇದು ತಂಬೂರಿಗಳಲ್ಲಿರುವ ಸಹೃದಯತೆ. ಇಂಥದೆ ಸಹೃದಯತೆಯನ್ನು ಮನಸ್ಸಿನಲ್ಲೂ ಸಂಪಾದಿಸಿಕೊಳ್ಳಬೇಕು. ಇಲ್ಲದಿದ್ದರೆ ವಿರುದ್ಧ ಶ್ರುತಿಯಲ್ಲಿರುವ ತಂಬೂರಿ

ಗಳಂತೆ ಒಂದನ್ನೊಂದು ಅನುಕರಣಿಸಲಾರದು. ಒಂದೇ ಶ್ರುತಿಯಲ್ಲಿದ್ದರೂ-ಬೀಸುವ ಗಾಳಿಯು ಬಿರುಸುತನದಿಂದ ಸ್ವರ ವಿಸ್ವರವಾಗುವ ಸಂಭವವುಂಟು. ಅಂತೆಯೇ ವಾತಾವರಣದ ಪ್ರಭಾವದಿಂದ ಮನಸ್ಸು ಕೂಡ ತನ್ನ ಕೆಲಸದಲ್ಲಿ ವೈಮುಖ್ಯವನ್ನು ತೋರಿಸುವುದುಂಟು. ಇದರಿಂದಲೇ ನಮ್ಮ ಪ್ರಾಚೀನರು ಹೆಚ್ಚಾಗಿ ಭೋಗಜೀವನಕ್ಕೆ ತಿಲಾಂಜಲಿಯನ್ನಿತ್ತು-ಪೇಟೆಯನ್ನು ತೊರೆದು ಕಾಡಿನಲ್ಲಿ ಬಾಳಿದರು, ಕಂದಮೂಲಗಳನ್ನು ತಿಂದು ಬದುಕಿದರು, ಉಪವಾಸಾದಿಗಳನ್ನು ಮಾಡಿ ದೇಹಶೋಷ ಮಾಡಿಕೊಂಡರು. ನಮಗೆ-ಈ ಭೋಗ ಜೀವನವೇ ಪ್ರಧಾನವಾಗಿ ಪರಿಣಮಿಸಿದಾಗ ಅವರ ಸಿದ್ಧಿಯೂ ಕೂಡ ಕ್ಷುದ್ರವೆಂದೆನಿಸತೊಡಗಿದೆ. ಅವರ ವನ್ಯಜೀವನಕ್ಕೆ 'ಅನಾಗರಿಕತೆ' ಎಂಬ ಬಿರುದನ್ನು ದಯಪಾಲಿಸುತ್ತಿದ್ದೇವೆ! ಅವರ ಶರೀರನಿಗ್ರಹಕ್ಕೆ 'ಮರುಳು' ಎಂಬ ಗೌರವವನ್ನು ತೋರುತ್ತಿದ್ದೇವೆ! ಅವರು ಉಪವಾಸಮಾಡುತ್ತಿದ್ದುದು 'ಬುದ್ಧಿಯಿಲ್ಲದ ಕುರುಹು' ಎಂಬ ಸಿದ್ಧಾಂತಕ್ಕೆ ಬರುತ್ತಿದ್ದೇವೆ! ಈ ಕುರಿತು ಅಲೆಕ್ಸೀ ಕಾರೆಲ್ ಅವರು ಆಡಿರುವ ಮಾತುಗಳು ಮನನೀಯವಾಗಿವೆ:

* 'ದಿವ್ಯದೃಷ್ಟಿ, ಭಾವನಾಪ್ರಸಾರ ಮತ್ತು ಪರೇಂಗಿತಜ್ಞತೆ (Telepathy) ಗಳನ್ನು ಯಾವನೂ ಅಲ್ಲಗಳೆಯುವಂತಿಲ್ಲ. ಪಂಚೇಂದ್ರಿಯಗಳಿಗೆ ಸ್ಪಷ್ಟವಾಗಿ ಗೋಚರವಾಗದ ವಿಚಾರಗಳನ್ನರಿತುಕೊಳ್ಳುವ ವಿಶಿಷ್ಟಶಕ್ತಿಯೇ ದಿವ್ಯದೃಷ್ಟಿ. ಕಾಲದೇಶಗಳ ಯೌಗಿಕವಾದ ನಮ್ಮ ವಿಶ್ವದ ವಿಸ್ತಾರದಲ್ಲಿನ ಸಮಸ್ತ ವಿಷಯಗಳನ್ನು ದೂರದಲಿದ್ದೇ ಅರಿತುಕೊಳ್ಳುವ ಶಕ್ತಿಯೇ 'ಭಾವನಾಪ್ರಸಾರ' ಎನ್ನಬಹುದು. ಇವು ಸಾಮಾನ್ಯವಾಗಿ ಅನೇಕರಲ್ಲಿದ್ದರೂ ಕೆಲವರಲ್ಲಿ ಪ್ರಬಲವಾಗಿರುತ್ತವೆ. ಇಂಥವರು ನಿರಾಯಾಸವಾಗಿ ಈ ಅಸ್ಫುಟ ಶಕ್ತಿಯನ್ನು ಪಯೋಗಿಸಬಲ್ಲರು. ದಿವ್ಯದೃಷ್ಟಿಯುಳ್ಳವರು ಒಬ್ಬನ ಮುಖಾವಲೋಕನ ಮಾತ್ರದಿಂದ ಅವನ ಮನಸ್ಸಿನ ಹೊಲಬನ್ನು ಮಾಡಿಕೊಳ್ಳಬಲ್ಲರು.

'ಇಷ್ಟೇ ಅಲ್ಲದೆ ದಿವ್ಯದೃಷ್ಟಿಯುಳ್ಳ ಮಹನೀಯರು ತಾವಿದ್ದಲ್ಲಿಂದಲೇ ದೂರದೇಶದ ನಿಸರ್ಗಸೌಂದರ್ಯವನ್ನಾಗಲೀ, ಯಾವುದಾದರೂ ಘಟನೆಯ ವಿವರವನ್ನಾಗಲೀ, ಯಾವನೋ ಪರಿಚಿತ ಅಥವಾ ಅಪರಿಚಿತ ವ್ಯಕ್ತಿಯ ರೂಪರೇಖೆಗಳನ್ನಾಗಲೀ, ವಿಸ್ತರಿಸಲು ಶಕ್ತರಾಗುತ್ತಾರೆ. ಇದೇ ಅದ್ಭುತವೆನಿಸಿದರೆ 'ದೂರ ಭಾವನಾಪ್ರಸಾರ'ವು ಇದಕ್ಕೂ ಆಶ್ಚರ್ಯಕರವಾದುದು.

---

* 'Man the unknown' ಎಂಬ ಪುಸ್ತಕದ ಅನುವಾದವಾದ 'ಅವ್ಯಕ್ತಮಾನವ' ದಿಂದ.

ಸಾವಿರಾರು ಮೈಲುಗಳಾಚೆಗಿನ ವ್ಯಕ್ತಿಯೊಡನೆ ಕೇವಲ ಭಾವನಾತರಂಗಗಳ ಸಹಾಯದಿಂದ ಮಾತುಕತೆ ನಡೆಸಿದ ನಿದರ್ಶನಗಳೆಷ್ಟೋ ಇವೆ. ನಾವು ಏನನ್ನೋ ನಿಶ್ಚಯಿಸಿ, ಅದನ್ನು ದೂರಗತನಾದ ನಮ್ಮ ಸ್ನೇಹಿತನಿಗೆ ತಿಳಿಸಿದಂತೆಯೂ ಅವನು ಅದೇ ಸಮಯ ನಮ್ಮ ಇಂಗಿತವನ್ನು ಅಲ್ಲಿಂದಲೇ ಅರಿತುಕೊಂಡು, ಸಮರ್ಪಕವಾಗಿ ವರ್ತಿಸಿದಂತೆಯೂ ನಡೆದ ಘಟನೆಗಳು ಅನೇಕ ಇವೆ.

'ನಮ್ಮ ವಿಶ್ವಸಂಬಂಧವಾದ ಜ್ಞಾನದಲ್ಲೆಷ್ಟೋ ಪಾಲು ಬಾಹ್ಯೇಂದ್ರಿಯಗಳಿಗೆ ಅತೀತವಾದ ಮಾರ್ಗದಲ್ಲಿ ನಮಗೆ ಒದಗುತ್ತಿದೆ ಎಂಬುದು ಖಚಿತವಾಯಿತು. ನಡುವೆ ಎಷ್ಟೇ ಅಂತರವಿದ್ದರೂ ಒಬ್ಬನ ಭಾವನೆಯನ್ನು ಇನ್ನೊಬ್ಬನಿಗೆ ಪ್ರಸಾರಮಾಡಿ ಆತನ ಇಂಗಿತವನ್ನು ಈತನು ಅರಿತುಕೊಳ್ಳುವ ಭಾವನಾ ಪ್ರಸಾರವು ಕೂಡ ವಾಸ್ತವವಾದ ಜ್ಞಾನಸಿದ್ಧಿಯ ಮಾರ್ಗ ಎಂದು ಹೇಳದೆ ಗತ್ಯಂತರವಿಲ್ಲ. ಇದು ಆಧ್ಯಾತ್ಮಿಕದ ಒಂದು ಅಂಗ. ಮಾನವನ ಪ್ರತಿಭೆಯೊಡನೆ ಈ ವಿಶಿಷ್ಟಶಕ್ತಿಯೂ ಸೇರಿಕೊಂಡರೆ ಅಂತಹ ವ್ಯಕ್ತಿಯು ಅದ್ವಿತೀಯ ಮೇಧಾವಿಯಾಗುತ್ತಾನೆ. ಶಾಲೆ ಕಾಲೇಜುಗಳಲ್ಲಿ ಕಲಿತ ವಿದ್ಯೆಗಿಂತ ಹೆಚ್ಚಾಗಿ ಇದು ಮನುಷ್ಯನ ಬುದ್ಧಿಯನ್ನು ಹರಿತಮಾಡುವುದು.

'ಕೆಲವು ಧಾರ್ಮಿಕ ಚಟುವಟಿಕೆಗಳಿಂದ ನಮ್ಮ ಅಂಗಾಂಗಗಳ ರಚನೆಯಲ್ಲೂ, ಜೀವಕಾರ್ಯಗಳಲ್ಲೂ ಬದಲಾವಣೆಗಳು ತೋರುವುದುಂಟು. ಅಂಥ ಚಟುವಟಿಕೆಗಳಲ್ಲಿ ಪ್ರಾರ್ಥನೆಯು ಮುಖ್ಯವಾದುದು. ಸಾಧಕನ ಪ್ರಾರ್ಥನೆಯಿಂದಲೇ ಹಲವು ವಿಚಿತ್ರ ಪವಾಡಗಳು ಜರಗುತ್ತವೆ. ಶಸ್ತ್ರಚಿಕಿತ್ಸೆಯ ಬಳಿಕ ಉಳಿಯುವಷ್ಟು ಊನ ಉಬ್ಬರಗಳು ಪವಾಡ ಚಿಕಿತ್ಸೆಯ ಅನಂತರ ಉಳಿಯುವುದಿಲ್ಲವೆಂಬುದು ಎಷ್ಟು ಆಶ್ಚರ್ಯಕರವೋ ಅಷ್ಟೇ ಸತ್ಯವೂ ಆದ ಸಂಗತಿ. ನಿಸರ್ಗಕ್ಕಿಂತಲೂ ಉತ್ತಮವಾದ ರೀತಿಯಲ್ಲಿ ರೋಗಪರಿಹಾರಮಾಡುವ ಪ್ರಾರ್ಥನೆಯ ಶಕ್ತಿ ಅದ್ಭುತವಾದುದಲ್ಲವೆ? ಪ್ರಾರ್ಥನೆಯಿಂದ ಪವಾಡಗಳುಂಟಾಗುವುದು ಹೇಗೆ, ಏಕೆ? ಎಂಬ ಪ್ರಶ್ನೆಗೆ ಈ ಹೊತ್ತಿನ ವರೆಗೆ ಯಾರೂ ಉತ್ತರಕೊಟ್ಟವರಿಲ್ಲ. ಮನುಷ್ಯನ ನೈತಿಕ ಧಾರ್ಮಿಕ ಚಟುವಟಿಕೆಗಳು ಯಾವ ಪರಾತ್ಪರ ವಸ್ತುವನ್ನು ಪ್ರಧಾನವಾಗಿ ಭಾವಿಸಿರುವವೋ ಅದನ್ನು ಸ್ವಲ್ಪ ಮಟ್ಟಿಗೆ ಪ್ರಮಾಣೀಕರಿಸುತ್ತ, ವಿಜ್ಞಾನಿಗಳ ಕೈಯಿಂದ ಜಾರಿಕೊಂಡು ಜಾರುತೀಲವಾಗುವ ಈ ಚಿಕಿತ್ಸಾವೈಖರಿ ಅತ್ಯದ್ಭುತವಾದುದು, ಅಭೇದ್ಯವಾದುದು.

'ವಿಜ್ಞಾನದ ಧ್ಯೇಯವು ಉತ್ತಮವಾಗಿರುವುದು ನಿಜವಾದರೂ ಅದರಿಂದ ಮನುಷ್ಯನ ಬುದ್ಧಿಯು ಎಳ್ಳಷ್ಟೂ ಉನ್ನಯನವಾಗಲಿಲ್ಲ. ತಾತ್ಕಾಲಿಕವಾದ ತೃಪ್ತಿಸುಖಗಳ ಸಾಧನೆಗೋಸ್ಕರ ಸುಲಭವಾದ ಹಂಚಿಕೆಗಳನ್ನು ಹೂಡುವ ನಮ್ಮ ಜನತೆಯು ಸಂಸ್ಕೃತಿ ಹೇಯವಾದುದರಲ್ಲಿ ಆಶ್ಚರ್ಯವೇನು? ಅಮೇರಿಕ ದಂಥ ಸುಧಾರಿತ ರಾಷ್ಟ್ರಗಳಲ್ಲಿ ನಾಟಕಗೃಹ, ಸಿನೆಮಾಮಂದಿರ, ಮತ್ತು ವಿಲಾಸವಾಟಿಕೆಗಳಲ್ಲಿ ಆನಂದವನ್ನರಸುವ ಸಾಮಾನ್ಯ ಮನುಷ್ಯನು ವಿಶ್ವ ಸೌಂದರ್ಯದ ಬಗ್ಗೆ ಏನು ಕುತೂಹಲ ತಳೆದಾನು?

'ಶ್ರೇಷ್ಠಕಲಾವಿದರೂ ವಿಜ್ಞಾನಿಗಳೂ ಜನಜೀವನದ ಸುಖಕ್ಕೆ ಕಾರಣ ರಾದರೂ ಅವರಲ್ಲೆಷ್ಟು ಜನ ಕಡುಬಡವರಾಗಿ ಜೀವಿಸಬೇಕು? ಪಾತಕಿಗಳೂ ದಸ್ಯುಗಳೂ ಹಣದ ಪ್ರಾಬಲ್ಯದಿಂದ ಗಣ್ಯವ್ಯಕ್ತಿಗಳೆನಿಸಿ, ರಾಜಕಾರಣಿ ಗಳಿಂದಲೂ, ನ್ಯಾಯಾಧೀಶರಿಂದಲೂ, ಏಕೆ ಸರ್ವಜನರಿಂದಲೂ ಮನ್ನಣೆ ಯನ್ನು ಪಡೆದು ಮೆರೆಯುವುದೇ? ಇಂಥವರೇ ನಮ್ಮ ಜನಾಂಗದ ಎಳೆವರೆ ಯದ ಬಾಲಕರ ಆದರ್ಶ ವ್ಯಕ್ತಿಗಳಾದಲ್ಲಿ ಆ ಮಕ್ಕಳ ಭಾವಿಜೀವನವು ಎಷ್ಟು ಸುಖಮಯವಾದೀತು? ಧಾರ್ಮಿಕಜೀವನದಲ್ಲಿ ಅಡಕವಾದ ಅಂತ ರಂಗಜೀವನವನ್ನೂ, ರಹಸ್ಯವಾದವನ್ನೂ ಎಂಟೆದೆಯಿಂದ ಘಂಟಾಘೋಷ ವಾಗಿ ಅಲ್ಲಗಳೆಯುವ ಅಧಿಕಾರವು ಕ್ಷುಲ್ಲಕರಾಜಕಾರಣಿಗಳ ಕೈಗೆ ಬಂದಿ ತೆಂದ ಬಳಿಕ ಧರ್ಮವು ಹೇಗೆ ಉಳಿದೀತು? ಅಂತೂ ದುಡ್ಡೇ ದೇವರಾಗಿರುವ ಮಿಕ್ಕುದೆಲ್ಲ ಆನುಷಂಗಿಕವೆನಿಸುವ ಸಮಾಜದಲ್ಲಿ ಧನಿಕರು ಪ್ರತಿಷ್ಠಿತರಾದ ಕಾರಣದಿಂದ ಧನಮೋಹವು ರಾಜಕಾರಣಿಗಳೇಕೆ, ಮಠಾಧಿಪತಿಗಳನ್ನೂ ಸನ್ಯಾಸಿಗಳನ್ನೂ ಕೂಡಾ ಬಿಟ್ಟಿರುವುದಿಲ್ಲ. ತೀರ ನಿಮ್ನ ತರಗತಿಯ ಸಂಸ್ಕೃ ತಿಯ ಹೊನಲಿನಲ್ಲಿ ಮಹಾಪೂರದಲ್ಲಿ ಕೊಚ್ಚಿಹೋಗುತ್ತಿರುವ ನಮ್ಮ ತಲೆ ಮಾರು ಈ ಪ್ರಯತ್ನದಲ್ಲಿ ಯಶಸ್ಸು ಪಡೆದೀತೇ ಎಂಬುದು ಕೇವಲ ಪ್ರಶ್ನೆ ಯಾಗಿಯೇ ಉಳಿಯುತ್ತದೆ.

'ಎಲ್ಲ ಮತಗಳೂ ಉಪವಾಸವ್ರತವನ್ನು ಕೊಂಡಾಡುವುವು. ಇದನ್ನು ಎಲ್ಲ ಕಾಲಗಳಲ್ಲೂ, ದೇಶಗಳಲ್ಲೂ ಜನರು ಅತೀವ ಶ್ರದ್ಧೆಯಿಂದ ಆಚರಿಸುತ್ತಿದ್ದರು. ಆದರೆ ಇಂದಿನ ಶತಕದಲ್ಲಿ ಈ ವ್ರತವು ಸುಸಂಸ್ಕೃತರೆನಿ ಸಿದ ನಮ್ಮಿಂದ ತುಚ್ಛವೆಂದು ಪರಿಗಣಿಸಲ್ಪಟ್ಟಿದೆ. ಇದರ ಫಲವಾಗಿ ನಾವು ಬೇಕಷ್ಟು ನಷ್ಟವನ್ನು ಅನುಭವಿಸಿದ್ದೇವೆ.

'ಶಾರೀರಿಕ ವ್ಯಾಪ್ತಿಗಿಂತಲೂ ಹೆಚ್ಚಿನ ವ್ಯಾಪ್ತಿಯುಳ್ಳದ್ದು ನಮ್ಮ ಮನಸ್ಸು. ಇದಕ್ಕೆ ಅನಂತವಾದ ವ್ಯಾಪ್ತಿಯಿದೆಯೆಂದರೂ ಸಲ್ಲುವುದು. ಏತಕ್ಕೆಂದರೆ ದೂರಭಾವನಾಪ್ರಸಾರ ಮತ್ತು ಪರೇಂಗಿತಜ್ಞತೆಗಳ ಸಂದರ್ಭದಲ್ಲಿ ಒಬ್ಬ ಮನುಷ್ಯನು ತನ್ನ ಅಖಂಡ ಸ್ವತ್ವದ ಒಂದು ಭಾಗವನ್ನು ದೇಶದಲ್ಲೂ ವ್ಯಾಪಿಸುವಂತೆ ಮಾಡಿ ತನ್ನ ಸಹೃದಯನೊಬ್ಬನಲ್ಲಿ ರೂಢಿಸುವನು. ಇವುಗಳನ್ನೆಲ್ಲಾ ಪರ್ಯಾಲೋಚಿಸಿದರೆ, ನಮ್ಮಲ್ಲಿ ಭಾವನೆಗಳೂ, ಮನೋವ್ಯಾಪಾರಗಳೂ ವಿದ್ಯುತ್ತರಂಗಗಳಂತೆ ವಿಸ್ತರಿಸುತ್ತಿವೆಯೋ ಎಂಬ ಸಂಶಯವು ಮೂಡುತ್ತದೆ. ನಮ್ಮ ಮನಸ್ಸು ಶೈವಾಲ (Alga)ದಂತೆ ಮಸ್ತಿಷ್ಕದ ಕಣಗಳನ್ನು ಅಂಟಿಕೊಂಡಿದ್ದು, ಅಲ್ಲಿಂದ ನೀರಿನಲ್ಲಿ ತೇಲುವ ಶೈವಾಲದ ಕಳೆಗಳಂತಹ ಸೂಕ್ಷ್ಮ ತಂತುಗಳನ್ನು ತನ್ನ ಸುತ್ತಲಿನ ಸಾಗರೋಪಮವಾದ ವಿಶ್ವದಲ್ಲೆಲ್ಲಾ ತೇಲಗೊಡುತ್ತದೆ. ಆದರೆ ಶೈವಾಲವು ಎಂದೂ ಭೌತ ವಿಸ್ತಾರವನ್ನು ದಾಟುವಂತಿಲ್ಲ. ಮನಸ್ಸಾದರೋ ಕಾಲದೇಶಗಳ ಈ ಭೌತವಿಸ್ತಾರವನ್ನತಿಕ್ರಮಿಸಿ ಭಾವನಾಪ್ರಸಾರದಂತಹ ಭೌತವಿಶ್ವಾತೀತವಾದ ವ್ಯಾಪಾರಗಳನ್ನು ಪ್ರದರ್ಶಿಸುವುದು.

'ವಿಜ್ಞಾನಕ್ಕಿಂತಲೂ ದೊಡ್ಡದಾದ ಈ ಮಹತ್ತರ ಜ್ಞಾನವನ್ನು ಪುಸ್ತಕಾಲಯಗಳಲ್ಲಿ ಹೂತಿಟ್ಟರೆ ಪ್ರಯೋಜನವಿಲ್ಲ; ನಮ್ಮ ಬುದ್ಧಿಗೆ ಅದರ ಶಾಖವು ತಗಲಲೇಬೇಕು. ಮೊದಲ ಬಾರಿಗೆ ಅಸಾಧ್ಯವೆಂದು ಕಾಣಬಹುದಾದ ಈ ಬೌದ್ಧಿಕ ಸಾಹಸವು ೨೫ ವರ್ಷಗಳ ಏಕಾಗ್ರ, ನತತ ಅಧ್ಯವಸಾಯದಿಂದ ಎಷ್ಟಕ್ಕೂ ಸಾಧ್ಯವಿದೆ. ಈ ಶಾಸ್ತ್ರಗಳ ಮನನಕ್ಕೆ ಅವಶ್ಯವಿರುವ ಶಿಸ್ತು, ಸಂಯಮಗಳನ್ನು ಅಷ್ಟು ದೀರ್ಘಾವಧಿ ಯಾವನು ಪಾಲಿಸುವನೋ, ಅವನು ಜನಾಂಗದ ನಾಯಕನಾಗಲು ಅರ್ಹನಾಗುವನು. ಬ್ರಿಜ್ ಆಡುವುದು, ಕ್ರಿಕೆಟ್ ನೋಡುವುದು, ನಾಟಕ ಸಿನೆಮಾ ಗೃಹಗಳನ್ನು ಸಂದರ್ಶಿಸುವುದು, ವೈಜ್ಞಾನಿಕ ಅಥವಾ ರಾಜಕೀಯ ಸಂಗಗಳ ವ್ಯಾಸಪೀಠದಿಂದ ಉಪನ್ಯಾಸಗಳನ್ನು ನಿವೇದಿಸುವುದು, ಸಾಗರೋತ್ತರ ದೇಶಗಳಲ್ಲಿ ಪರ್ಯಟನೆಮಾಡುವುದು– ಮುಂತಾದ ಇಂದಿನ ಸರ್ವಸಾಮಾನ್ಯ ಧುರೀಣರ ಜೀವನ ಕ್ರಮವು ಇವರಿಗೆ ಸಲ್ಲದು. ಮಹಾರಾಷ್ಟ್ರವಾಗಿ ಮೆರೆದ ಯಾವ ದೇಶದ ಇತಿಹಾಸವನ್ನವಲೋಕಿಸಿದರೂ ಸಮಾಜದ ಹಿತಕ್ಕೋಸ್ಕರ ತ್ಯಾಗವನ್ನು ಮಾಡಿದ ಪುಣ್ಯಪುರುಷರು ಅಲ್ಲಿ ವಿಪುಲವಾಗಿ ಕಾಣಸಿಗುವರು. ನಮ್ಮ ವಿಶ್ವವಿದ್ಯಾಲಯಗಳಲ್ಲೂ, ಪ್ರಯೋಗಶಾಲೆಗಳಲ್ಲೂ ವಾಸಿಸುವ

ವಿಜ್ಞಾನಿಗಳ ಮುಖ್ಯ ದೋಷವೆಂದರೆ ಸಂಕುಚಿತ ದೃಷ್ಟಿ ಮತ್ತು ಅನುತ್ತುಂಗ ಧ್ಯೇಯ ಎಂಬೆರಡೇ. ದೂರದ ದಿಗಂತಕ್ಕೆ ಎದೆಚಾಚಿ ಮನಚಾಚಿದಾಗ, ನಕ್ಷತ್ರಲೋಕದ ಕಡೆಗೆ ದಿಟ್ಟಿ ಹರಿಯಿಸಿದಾಗ, ಮಹೋದ್ದೇಶಪ್ರೇರಿತರಾಗಿ ಯತ್ನೋತ್ಸುಕರಾದಾಗ ನಾವು ಬದುಕಿದ್ದೇವೆ, ಬೆಳೆಯುತ್ತಿದ್ದೇವೆ ಎನ್ನುವ ಅಧಿಕಾರ ನಮಗೆ ಬರುತ್ತದೆ. ಮಹಾಸಾಹಸಕ್ಕುಚಿತವಾದ ಮನೋಭಾವ ವುಳ್ಳವರಿಗೆ ಆತ್ಮಾರ್ಪಣೆಯು ತೀರ ಸುಲಭವೆನಿಸೀತು.'

ಅಲೆಕ್ಸೀ ಕಾರೆಲರ ಇಷ್ಟು ಮಾತುಗಳನ್ನು ಗಮನಿಸಿದಾಗ ನಮಗನ್ನಿಸು ವುದೇನು? ವಿಶ್ವದ ಯಾವ ಮೂಲೆಯಿಂದಲಾದರೂ ಬರುವ ಸತ್ಯದ ಸಂದೇಶ ಒಂದೇ ವಿಧವಾಗಿರುತ್ತದೆ. ಈ ಮಾತುಗಳು—ನಮ್ಮ ದೇಶದ ಜನರನ್ನು ಕಂಡು ಬರೆದುದಲ್ಲ. ಆದರೆ ಇದರಲ್ಲಿ ಪ್ರತಿವಾದಿತವಾದ ಸತ್ಯ ನಮ್ಮ ದೇಶದ ದೃಷ್ಟಿಯಿಂದಲೂ ಸತ್ಯವಾಗಿದೆ; ವಿಶ್ವಸತ್ಯವಾಗಿದೆ.

ವಿಲಾಸಜೀವನದಿಂದ ದೇಹ ಮತ್ತು ಮನಸ್ಸಿನ ಶಕ್ತಿಯನ್ನು ಕುಗ್ಗಿಸಿ ಕೊಳ್ಳುವುದೇ ನಾಗರಿಕತೆಯಾದರೆ-ಕೃತಕವಿಧಾನದಿಂದ ಯಾಂತ್ರಿಕತೆಯ ಬಾಳನ್ನು ಬಾಳುವುದೇ ನಾಗರಿಕತೆಯಾದರೆ- ಕೃತಕವಾಯುವನ್ನೇ ಉಸಿ ರಾಗಿ ಎಳೆದುಕೊಂಡು—ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ತನಗರಿವಿಲ್ಲದಂತೆ ನಿಸರ್ಗಕ್ಕೆ ವಿರುದ್ಧಮುಖವಾಗಿ ನಡೆವುದೇ ನಾಗರಿಕತೆಯಾದರೆ ಅಂಥ ನಾಗರಿ ಕತೆ ನಿರ್ನಾಮವಾದುದೇ ಆದರೆ ಯಾವ ರಾಷ್ಟ್ರಕ್ಕೆ ಹಾನಿಯಿದೆ? ಯಾವ ಜನಾಂಗಕ್ಕೆ ತೊಡಕಿದೆ? ಅಲೆಕ್ಸಿಂಕಾಲೆಲರಂಥ ವಿಜ್ಞಾನಿಗಳೂ-ತಂತ್ರ ಶಾಸ್ತ್ರವನ್ನು ಬಲ್ಲ ಪ್ರಾಚೀನವಿದ್ವಾಂಸರೂ ಜತೆಯಾಗಿ ನಮ್ಮ ಮೇಲೆ ಈ ಪ್ರಶ್ನೆಯನ್ನು ಹಾಕುತ್ತಿದ್ದಾರೆ. ಈ ಭೋಗಜೀವನವನ್ನು ಕ್ಷಣಕಾಲ ಬದಿ ಗೊತ್ತಿ ತ್ಯಾಗಜೀವನದ ರುಚಿಯನ್ನು ಕಾಣುವಂತೆ ಸಲಹೆಯೀಯುತ್ತಿದ್ದಾರೆ. ಅದರಿಂದ ತಂತ್ರಶಾಸ್ತ್ರಜ್ಞರು ನಿರೂಪಿಸಿದ ಭೋಗವನ್ನರಿಯುದ ಆ ಅಧಿಕಾರ ಸಂಪತ್ತಿ ಎಂಥದು ಎಂದು ನಾವು ಪರಾಮರ್ಶಿಸಬೇಕಾಗಿದೆ.

## ಅಧಿಕಾರಸಂಪತ್ತಿ

ಯಾವುದೇ ಒಂದು ತತ್ತ್ವಶಾಸ್ತ್ರವನ್ನು ಓದಿ ಶಿಷ್ಟ ಎನ್ನಿಸಿಕೊಳ್ಳಬೇಕಾದರೆ ಅವನಲ್ಲಿ ಎಂಥ ಗುಣಗಳಿರಬೇಕೆಂದು—ಪತಂಜಲಿ ಮಹರ್ಷಿ ತನ್ನ ವ್ಯಾಕರಣ ಭಾಷ್ಯದಲ್ಲಿ ನಿರೂಪಿಸಿದ್ದು ಬಹು ಸೊಗಸಾಗಿದೆ:

'ದಕ್ಷಿಣೇನ ಹಿಮವಂತಮುತ್ತರೇಣ ಪಾರಿಯಾತ್ರಮೇತಸ್ಮಿನ್ ಆರ್ಯಾವರ್ತೇ ನಿವಾಸಾ ಯೇ ಬ್ರಾಹ್ಮಣಾಃ ಕುಂಭೀಧಾನ್ಯಾ ಅಲೋಲುಪಾ ಅಗೃಹ್ಯಮಾಣ-ಕಾರಣಾಃ ಕಿಂಚಿದಂತರೇಣ ಕಸ್ಯಾಶ್ಚಿದ್ವಿದ್ಯಾಯಾಃ ಪಾರಂಗತಾಸ್ತತ್ರಭವಂತಃ ಶಿಷ್ಟಾಃ ।' (ಮಹಾಭಾಷ್ಯ)

ದಕ್ಷಿಣೋತ್ತರಗಳಲ್ಲಿ ಪಾರಿಯಾತ್ರ, ಹಿಮವಂತಗಳೇ ಎಲ್ಲೆಯಾಗಿರುವ ಈ ಆರ್ಯಾವರ್ತದಲ್ಲಿ ನೆಲೆಸಿರುವ, ಮಡಕೆಯಲ್ಲಷ್ಟು ತುಂಬಿಡುವ ಧಾನ್ಯ ಸಂಪತ್ತಿಯುಳ್ಳ, ಅದಕ್ಕಿಂತ ಹೆಚ್ಚಿನ ಐಸಿರಿಯಲ್ಲಿ ಹಂಬಲವೇ ಇಲ್ಲದ, ಯಾವುದೋ ಸ್ವಾರ್ಥದ ಕಾರಣದಿಂದ ದಂಭಕ್ಕಾಗಿಯಲ್ಲದೆ—ಕೇವಲ ಕರ್ತವ್ಯ ದೃಷ್ಟಿಯಿಂದ ಸದಾಚಾರನಿರತರಾದ, ಯಾವೊಂದು ಪೂರ್ವಗ್ರಹವೂ ಇಲ್ಲದೆ ತಲಸ್ಪರ್ಶಿಯಾಗಿ ಶಾಸ್ತ್ರವನ್ನು ಅಧ್ಯಯನಮಾಡಿದ ಪೂಜ್ಯರಾದ ಬ್ರಾಹ್ಮಣರು ಶಿಷ್ಟರೆನ್ನಿಸಿಕೊಳ್ಳುತ್ತಾರೆ. ಇಂಥವರು ಒಂದು ಶಾಸ್ತ್ರದ ಕುರಿತು ಅಧಿಕಾರವಾಣಿಯಿಂದ ಮಾತನಾಡಬಲ್ಲರು. ಒಂದು ಜನಾಂಗವನ್ನು ರಾಷ್ಟ್ರವನ್ನು ಹಿತದ ಪಥದೆಡೆಗೆ ಕೊಂಡೊಯ್ಯಬಲ್ಲರು. ನಮ್ಮ ಸೀಮಿತ ಬುದ್ಧಿಯ ಪ್ರತ್ಯಕ್ಷಾನುಮಾನಗಳಿಂದ ಬಾಧಿತವಾಗಲಾರದಷ್ಟು ಪ್ರಬಲವಾಗಿದೆ ಅಂಥವರ ಪ್ರಜ್ಞಾಶಕ್ತಿ. 'ಆವಿರ್ಭೂತ ಜ್ಯೋತಿ'ಗಳಾದ ಅಂಥ ಮಹಾಪುರುಷರು ಅತೀತಾನಾಗತಗಳನ್ನರಿತುಕೊಂಡು ಸಜ್ಜನರನ್ನು ಸನ್ಮಾರ್ಗಕ್ಕೆಳೆದು ಉದ್ಧರಿಸಬಲ್ಲರು:

'ಆವಿರ್ಭೂತಪ್ರಕಾಶಾನಾಮನುಪಪ್ಲುತಚೇತಸಾಮ್ ।
ಅತೀತಾನಾಗತಜ್ಞಾನಂ ಪ್ರತ್ಯಕ್ಷಾನ್ನ ವಿಶಿಷ್ಯತೇ ॥
ಅತೀಂದ್ರಿಯಾನಸಂವೇದ್ಯಾನ್ ಪಶ್ಯಂತ್ಯಾರ್ಷೇಣ ಚಕ್ಷುಷಾ ।
ಯೇ ಭಾವಾನ್ ವಚನಂ ತೇಷಾಂ ನಾನುಮಾನೇನ ಬಾಧ್ಯತೇ ॥'

ತತ್ತ್ವಶಾಸ್ತ್ರವನ್ನು ಅಧ್ಯಯನಮಾಡುವವರು ಎಷ್ಟು ಜಾಗರೂಕರಾಗಿರಬೇಕು ಎಂಬ ಕುರಿತು ನಮ್ಮ ಪುರಾಣಗಳೂ ವೇದವೂ ತುಂಬ ಎಚ್ಚರಿಕೆಯನ್ನಿತ್ತಿವೆ. ಕೆಳಗಿನ ಶ್ರುತಿ ಕೇವಲ ಗ್ರಂಥಪಠನತತ್ಪರರಾದವರನ್ನು ಕಟುವಾಗಿ ನಿಂದಿಸಿದೆ:

'ಸ್ಥಾಣುರಯಂ ಭಾರಹಾರಃ ಕಿಲಾಭೂತ್
ಅಧೀತ್ಯ ವೇದಂ ನ ವಿಜಾನಾತಿ ಯೋಽರ್ಥಮ್ ।
ಯೋಽರ್ಥಜ್ಞ ಇತ್ಸಕಲಂ ಭದ್ರಮಶ್ನುತೇ
ನಾಕಮೇತಿ ಜ್ಞಾನವಿಧೂತಪಾಪ್ಮಾ ॥'

ಅರ್ಥವನ್ನರಿಯದೆ ಬರಿಯ ಶಬ್ದಜಾಲವನ್ನು ಮಾತ್ರ ಗಿಳಿಪಾಠ ಮಾಡಿ

ದಂಥವನು ಆ ಪದಗಳ ಹೊರೆಯನ್ನಷ್ಟೆ ಹೊತ್ತುಕೊಂಡಂತಾಯಿತು. ಆದರೆ ಅರ್ಥವನ್ನು ಬಲ್ಲ ಪುಣ್ಯಾನುಭಾವನು ಜ್ಞಾನದ ಮಹಿಮೆಯಿಂದ ಎಲ್ಲ ಪಾಪಗಳನ್ನೂ ತೊಡೆದು ಐಹಿಕ ಪಾರತ್ರಿಕ ಸುಖಗಳಿಗೆ ಪಾತ್ರನಾಗುವನು. ಇದೇ ಅರ್ಥದ ಮಾತು ಶಾಂತಿಪರ್ವದಲ್ಲಿಯೂ ಕಂಡುಬರುವುದು:

'ಯೋ ಹಿ ವೇದೇ ಚ ಶಾಸ್ತ್ರೇ ಚ ಗ್ರಂಥಧಾರಣತತ್ಪರಃ ।
ನಚ ಗ್ರಂಥಾರ್ಥತತ್ವಜ್ಞಸ್ತಸ್ಯ ತದ್ಧಾರಣಂ ವೃಥಾ ॥' (ಮಹಾಭಾರತ)

ಒಟ್ಟಿನಲ್ಲಿ ಯಾರ ಮನೆ ಲೈಬ್ರರಿಯಾಗುವ ಬದಲು ಬುದ್ಧಿಯೇ ಒಂದು ಲೈಬ್ರರಿಯಾಗಿದೆಯೋ ಅಂಥ ಶಿಷ್ಯನನ್ನೆ ಆರಿಸಬೇಕು ಎನ್ನುವ ಜವಾಬು ದಾರಿಯ ಕೆಲಸವನ್ನು ಗುರುವಿನ ಮೇಲೆ ಹೊರಿಸಿದ್ದಾರೆ. ಅಂಥ ಶಿಷ್ಯ ದೊರಕದಿದ್ದಾಗ ಆ ವಿದ್ಯೆಯನ್ನು ಗುಪ್ತವಾಗಿಟ್ಟರೂ ಚಿಂತಿಲ್ಲ–ಮಾಣಿಕ್ಯ ವಂತೂ ಸರ್ವಥಾ ಮಂಗನ ಕೈಸೇರಬಾರದು.

'ಭವಂತೋ ಬಹುಲಾಃ ಸಂತು ವೇದೋ ವಿಸ್ತಾರ್ಯತಾಮಯಮ್ ।
ನಾಶಿಷ್ಯೇ ಸಂಪ್ರದಾತವ್ಯೋ ನಾವ್ರತೇ ನಾಕೃತಾತ್ಮನಿ ॥' (ಮಹಾಭಾರತ)

ಒಟ್ಟಿನಲ್ಲಿ ಶಿಷ್ಯಗುಣಗಳೆಂದರೇನು ಎಂಬುದನ್ನೂ ವ್ಯಾಸರು ಭಾರತದಲ್ಲಿ ಸೂಕ್ಷ್ಮವಾಗಿ ನಿರೂಪಿಸಿದ್ದಾರೆ:

'ಏತೇ ಶಿಷ್ಯಗುಣಾಃ ಸರ್ವೇ ವಿಜ್ಞಾತವ್ಯಾ ಯಥಾರ್ಥತಃ ।
ನಾಪರೀಕ್ಷಿತಚಾರಿತ್ರೇ ವಿದ್ಯಾ ದೇಯಾ ಕಥಂಚನ ॥
ಯಥಾ ಹಿ ಕನಕಂ ಶುದ್ಧಂ ತಾಪಚ್ಛೇದನಿಕರ್ಷಣೈಃ ।
ಪರೀಕ್ಷೇತ ತಥಾ ಶಿಷ್ಯಾನೀಕ್ಷೇತ್ಕುಲಗುಣಾದಿಭಿಃ ॥
ನ ನಿಯೋಜ್ಯಾಶ್ಚ ವಃ ಶಿಷ್ಯಾ ಅನಿಯೋಜ್ಯೇ ಮಹಾಭಯೇ ।
ಯಥಾಮತಿ ಯಥಾಪಾಠಂ ತಥಾ ವಿದ್ಯಾ ಫಲಿಷ್ಯತಿ ॥
ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।
ಶ್ರಾವಯೇಚ್ಚತುರೋ ವರ್ಣಾನ್ ಕೃತ್ವಾ ಬ್ರಾಹ್ಮಣಮಗ್ರತಃ ॥
ವೇದಸ್ಯಾಧ್ಯಯನಂ ಹೀದಂ ತಸ್ಯ ಕಾರ್ಯಂ ಮಹತ್ಸ್ಮೃತಮ್ ।
ಉಪಕುರ್ಯಾಚ್ಚ ಶಿಷ್ಯಾಣಾಮೇತಚ್ಚ ಹೃದಿ ಮೇ ಭವೇತ್ ॥'(ಶಾಂತಿಪರ್ವ)

ಯಾರಿಗೆ ಎಷ್ಟು ಯೋಗ್ಯತೆಯೋ– ಅವರು ಅಷ್ಟು ವಿದ್ಯೆಯನ್ನು ಈ ರೀತಿಯ ನಿಯತಿಯಿಂದ ಪಡೆಯಬಲ್ಲರು. ಎಷ್ಟೇ ಕಠಿನವ್ರತದಿಂದಲೂ ಎಲ್ಲರೂ ಸರಿಸಮಾನರಾಗುವುದು ಅಶಕ್ಯ. ಒಬ್ಬನು ಪಾಲಕಿಯನ್ನು ಹೊರ ಬೇಕು! ಇನ್ನೊಬ್ಬನು ಅದರಲ್ಲಿ ಕುಳಿತು ಮೋಜುಮಾಡುತ್ತಿರಬೇಕು!

ಇಲ್ಲದಿದ್ದರೆ ಪಾಲಕಿಯ ಗತಿಯೇನು? ಇದು ಪ್ರಕೃತಿನಿಯಮ. ಅದಕ್ಕಾಗಿ ಯಾರೂ ಬಿಗುಮಾನವನ್ನು ತಾಳಬೇಕಾಗಿಲ್ಲ, ಬೇಸರಿಸಲೂ ಬೇಕಾಗಿಲ್ಲ:

'ಉಪರ್ಯುಪರಿ ಲೋಕಸ್ಯ ಸರ್ವೋ ಗಂತುಂ ಸಮೀಹತೇ |
ಯತತೇ ಚ ಯಥಾಶಕ್ತಿ ನಚ ತದ್ವರ್ತತೇ ತಥಾ ||
ಮಹಚ್ಚ ಫಲವೈಷಮ್ಯಂ ದೃಶ್ಯತೇ ಕರ್ಮಸಂಧಿಷು |
ವಹಂತಿ ಶಿಬಿಕಾಮನ್ಯೇ ಯಾಂತ್ಯನ್ಯೇ ಶಿಬಿಕಾಗತಾಃ ||'

ಅದರಿಂದ–ತಮ್ಮ ಶಕ್ತಿಗನುಗುಣವಾಗಿ– ಪ್ರಮಾದರಹಿತನಾಗಿ ಪ್ರತಿಯೊಬ್ಬನೂ ಶಾಸ್ತ್ರವನ್ನು ಅಧ್ಯಯನಮಾಡಲೇಬೇಕು. ಅದು ಅವರಿಗೆ ದೊಡ್ಡ ಸಂಪತ್ತು, ದೊಡ್ಡ ಬಲ:

'ಕ್ಷಿತಿಂ ವಾ ದೇವಲೋಕಂ ವಾ ಗಮ್ಯತಾಂ ಯದಿ ರೋಚತೇ |
ಅಪ್ರಮಾದಶ್ಚ ವಃ ಕಾರ್ಯೋ ಬ್ರಹ್ಮ ಹಿ ಪ್ರಚುರಚ್ಛಲಮ್ ||
ಅನಾಮ್ನಾಯಮಲಾ ವೇದಾ ಬ್ರಾಹ್ಮಣಸ್ಯಾವ್ರತಂ ಮಲಮ್ |
ಮಲಂ ಪೃಥಿವ್ಯಾ ವಾಹೀಕಾ ಸ್ತ್ರೀಣಾಂ ಕೌತೂಹಲಂ ಮಲಮ್ ||
ರಾಜ್ಞಾಂ ಹಿ ಬಲಮೈಶ್ವರ್ಯಂ ಬ್ರಹ್ಮ ಬ್ರಹ್ಮವಿದಾಂ ಬಲಮ್ |
ರೂಪಯೌವನಸೌಭಾಗ್ಯಂ ಸ್ತ್ರೀಣಾಂ ಬಲಮನುತ್ತಮಮ್ ||'

ತಂತ್ರಮಂತ್ರಗಳಲ್ಲಿ ಅಧಿಕಾರಿಯಾದವನು ಹೇಗಿರಬೇಕು ಎನ್ನುವುದರ ಕುರಿತು ಒಂದು ಜೈನಗ್ರಂಥ ಈ ಕೆಳಗಿನಂತೆ ನಿರೂಪಿಸುತ್ತದೆ.

'ನಿರ್ಜಿತಮದನಾಟೋಪಃ ಪ್ರಶಮಿತಕೋಪೋ ವಿಮುಕ್ತವಿಕಥಾಲಾಪಃ |
ದೇವ್ಯರ್ಚನಾನುರಕ್ತೋ ಜಿನಪದಭಕ್ತೋ ಭವೇನ್ಮಂತ್ರೀ ||
ಮಂತ್ರಾರಾಧನಶೂರಃ ಪಾಪವಿದೂರೋ ಗುಣೇನ ಗಂಭೀರಃ |
ಮೌನೀ ಮಹಾಭಿಮಾನೀ ಮಂತ್ರೀ ಸ್ಯಾದೀದೃಶಃ ಪುರುಷಃ ||'
(ಭೈರವಪದ್ಮಾವತೀಕಲ್ಪ)

ಜೈನರ ಪದ್ಧತಿ ಏನೇ ಇರಲಿ, ಅವರ ಆರಾಧ್ಯದೈವ ಯಾವುದೇ ಇರಲಿ– ಅವರ ಆರಾಧಕನೂ, ಮಂತ್ರಜಾಪಕನೂ ಇತರ ತಂತ್ರಾನುಯಾಯಿಗಳಂತೆಯೇ 'ನಿರ್ಜಿತಮದನಾಟೋಪ'ನಾಗಿರಬೇಕು, 'ಪಾಪವಿದೂರ'ನಾಗಿರಬೇಕು. ಯಾವುದೇ ಮತವಿರಲಿ, ಪಂಥವಿರಲಿ– ಅದರ ಸಾಧಕನು ಅನುಸರಿಸಬೇಕಾದ ಸತ್ಯ ಒಂದೇ ಆಗಿದೆ ಎಂದು ನಾವು ಇದರಿಂದ ತಿಳಿಯಬಹುದು.

## ರಾಜಸ–ತಾಮಸ ತಂತ್ರಗಳು

ಬೆಳಕಿನ ಜತೆಗೆ ನೆರಳಿರುವಂತೆ, ಸುಖದೊಡನೆ ದುಃಖವಿರುವಂತೆ, ಸಜ್ಜನಿಕೆಯೊಡನೆ ದೌರ್ಜನ್ಯವಿರುವಂತೆ, ಥಳಕಿನ ಸೌಂದರ್ಯದ ಹಿಂದೆ ಕುಪ್ರವೃತ್ತಿ

ಯಿರುವಂತೆ, ಒಳಿತಿನ ಜೊತೆಗೇ ಕೆಡುಕು ಕೂಡ ಬೆಳೆದುಬರುತ್ತದೆ. ಇವುಗಳ ಮಿಶ್ರಣವೇ ಸಂಸಾರ. ಶುದ್ಧ ಒಳಿತು, ಶುದ್ಧ ಸುಖ, ಶುದ್ಧ ಸತ್ತ್ವ ಇವು ಈ ಜಗತ್ತಿಗೆ ಮೀರಿದ ಮಾತುಗಳು. ಈ ಮಾತು ತಂತ್ರಶಾಸ್ತ್ರಕ್ಕೂ ಅನ್ವಯಿಸದಿಲ್ಲ. ತಂತ್ರಶಾಸ್ತ್ರದ ವ್ಯಾಪಕತೆಯನ್ನು ಕಂಡು, ತಂತ್ರಶಾಸ್ತ್ರ ಸಮಾಜದ ಮೇಲೆ ಬೀರಿದ ಪ್ರಭಾವವನ್ನು ಕಂಡು, ಅದನ್ನು ದುರುಪಯೋಗ ಪಡಿಸುವ ವಿಧಾನಕ್ಕೂ ಎಡೆಯುಂಟಾಯಿತು. ತಂತ್ರಶಾಸ್ತ್ರದ ಹೆಸರಿನಿಂದ ಅಪಚಾರ ಮಾಡಿದರೆ ಅದಕ್ಕೆ ಸಮಾಜದ ಮನ್ನಣೆ ದೊರೆಯುತ್ತಿತ್ತು. ಇದನ್ನರಿತ ಕೆಲವು 'ಕುಪ್ರಸಿದ್ಧ'ರು ತಮ್ಮ ಸ್ವಾರ್ಥಸಾಧನೆಗೆ, ತಮ್ಮ ದೋಷ ಗಳನ್ನು ಮರೆಮಾಡುವುದಕ್ಕೆ, ತಮ್ಮ ದುರ್ವರ್ತನೆಗೆ ಈ ತಂತ್ರಶಾಸ್ತ್ರದ ಪವಿತ್ರ ಹೆಸರನ್ನೂ ಬಳಸಿಕೊಳ್ಳುವ ಸಾಹಸಕ್ಕೆ ಕೈಹಾಕಿದರು. ಅವರ ದೃಷ್ಟಿಯಲ್ಲಿ ಈ ತಂತ್ರವನ್ನು ಅಧ್ಯಯನಮಾಡುವ ವ್ಯಕ್ತಿ 'ದೂರತ್ಯಕ್ತಮನೋಭವ' ನಾಗಿರುವುದು ಬೇಡ, 'ಶುದ್ಧಾಂತಃಕರಣ'ನಾಗಿರುವುದೂ ಬೇಡ. ಅವ ನಲ್ಲಿರುವ ಸ್ತ್ರೀಲಂಪಟತೆ. ಭೋಗಾಭಿಲಾಷೆ, ಕಾಮತೃಷ್ಣೆ, ಇವೇ ಅವನು ಅಧಿಕಾರಿ ಎನ್ನುವುದಕ್ಕೆ ಜ್ಞಾಪಕಗಳು. ಮದ್ಯ, ಮಾಂಸ, ಮತ್ಸ್ಯ, ಮೈಥುನ ಮುದ್ರಾ– ಈ ಪಂಚಮಕಾರಗಳೇ ಅವನ ಸಾಧನಗಳು. ಈ ಪಂಚ ಮಕಾರಗಳಿಂದ ಅವನು ಶಾಸ್ತ್ರಾಧಿಕಾರವನ್ನು ಪಡೆಯುತ್ತಾನೆ. 'ಮಾಂ ಸ ಭಕ್ಷಯಿತಾಽಮುತ್ರ ಯಸ್ಯ ಮಾಂಸಮಿಹಾದ್ಮ್ಯಹಮ್ । ಇತಿ ಮಾಂಸಸ್ಯ ಮಾಂಸ- ತ್ವಮ್' ಎಂದು ನಿಂದಿತವಾದ ಮಾಂಸವೇ ಅವರಿಗೆ ಪೂಜ್ಯವಾದ ಭೋಜ್ಯ. ಯಾವುದರ ತ್ಯಾಗವನ್ನು ತಂತ್ರಾಧಿಕಾರದಲ್ಲಿ ಮೊದಲನೆಯದಾಗಿ ಪರಿಗಣಿಸಿ ದ್ದಾರೋ ಅಂಥ ಮಾಸಿನೀಸಂಗ ಇವರಿಗೆ ಅವರ್ಜನೀಯ. ಯಾವುದು ಮೋಹವನ್ನುಂಟುಮಾಡಿ ಬುದ್ಧಿನಾಶಕ್ಕೆ ಹೇತುವಾಗುವುದೋ ಅಂಥ ಮದ್ಯ ಇವರಿಗೆ ವಿಧಿಪ್ರಾಪ್ತವೂ ಹೃದ್ಯವೂ ಆಗಿದೆ. ಬರೇ ಮಾಂಸದಲ್ಲಿ ತೃಪ್ತರಾಗದೆ ಮತ್ಸ್ಯವೂ ಕೂಡ ಸೇವನೀಯ ಎಂಬ ಸಿದ್ಧಾಂತ ಇವ ರದು. ಅಕ್ಕಿ ಅವಲಕ್ಕಿ ಗೋಧಿ ಕಡಲೆ ಮೊದಲಾದವುಗಳ ಹುರಿಹಿಟ್ಟು (ಮುದ್ರಾ[1]) ಕೂಡ ಮಾದಕ ಎನ್ನುವ ಕಾರಣದಿಂದ ಇವರಿಗೆ ಸೇವ್ಯವಾಗಿದೆ! ಇವರು ತಮ್ಮಎಲ್ಲ ವಿಷಯತೃಷ್ಣೆಯನ್ನು ತಂತ್ರಶಾಸ್ತ್ರದ ಹೆಸರಿನಿಂದ

---

[1] 'ಪೃಥುಕಾಸ್ತಂಡುಲಾ ಭ್ರಷ್ಟಾ ಗೋಧೂಮಚಣಕಾದಯಃ ।
ತಸ್ಯ ನಾಮ ಭವೇನ್ಮುದ್ರಾ'

ಬಳಸುತ್ತಿದ್ದಾರೆ. ಈ ಸಂಘವೇ ಶಾಕ್ತಪಂಥ, ತಾಮಸರ ಅಥವಾ ಕಾಪಾಲಿಕರ ಪಂಥ!

ನಮ್ಮಲ್ಲಿ ಬೆಳೆದುಬಂದ ಕೃತ್ರಿಮ, 'ವಿಚ್‌ಕ್ರಾಫ್ಟ್' ಇವೆಲ್ಲ ಇದರ ಕೊಡುಗೆಗಳು. ಅಶ್ಲೀಲವಾದ ಆಚಾರ, ದ್ವೇಷಪೂರ್ಣವಾದ ಉದ್ದೇಶ ಮತ್ತು ಹಿಂಸಾಪ್ರಚುರವಾದ ಕೃತಿ—ಇವು ಇದರ ತತ್ವಗಳು. ಈ ಕಾಪಾಲಿಕರ ಪಂಥ ಎಷ್ಟು ಹೊಲಸಾಗಿದೆ ಎನ್ನುವುದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು. ಅವರು ಉಪಾಸಿಸುವ ದೇವತೆ ನಗ್ನವಾಗಿರಬೇಕು, ಋತುಮತಿಯಾಗಿದ್ದರೆ ಇನ್ನೂ ಚೆನ್ನು. ಇವುಗಳ ಜತೆಗೆ ವಿಧವೆ ಎನ್ನುವ ಕ್ವಾಲಿಫಿಕೇಶನ್ನೂ ಇದ್ದರೆ ತುಂಬ ಸೊಗಸು. ಇಂಥ ದೇವತೆಗಳನ್ನು ಸೃಷ್ಟಿಸಿಕೊಂಡು ಅವರಿಂದ ಲೋಕದಲ್ಲೆಲ್ಲ ಕಂಟಕವನ್ನು ಹಬ್ಬುವುದು ಈ 'ವಿಚ್ಚು'ಗಳ ಚಾಳಿ. ಉದಾಹರಣೆಗೆ ಈ ಕೆಳಗಿನ ಪದ್ಯವನ್ನು ಗಮನಿಸಿ:

'ಕೃಷ್ಣಾಂ ಕರಾಲವದನಾಂ ಭುಜಂಗೈರಭಿಮಂಡಿತಾಮ್ ।
ದಿಗಂಬರಾಂ ಮಹಾದುರ್ಗಾಂ ಚಿಂತಯೇದ್ದ್ವೇಷಣಾದಿಷು ॥'

ಈ ಪಂಥದವರು ಸಿದ್ಧಿವಿನಾಯಕನನ್ನು ಪೂಜಿಸುವಾಗಲೂ— ಅವರ ಮನಸ್ಸು ತಾಮಸ ಗಣಪತಿಯನ್ನೇ ಕಲ್ಪಿಸಿಕೊಳ್ಳುತ್ತದೆ. ಅವರು ಧ್ಯಾನಿಸುವ ಗಣಪತಿಯು ಒಂದು ಕೈಯಲ್ಲಿ ಕಳ್ಳುತುಂಬಿದ ಕಪಾಲವಿರಬೇಕು. ಅವನ ಬಳಿ ಬೆತ್ತಲೆಯಾಗಿ ಕುಳಿತಿರುವ ಆತನ ಹೆಂಡತಿ ಪುಷ್ಟಿ ಅವನನ್ನು ಅಪ್ಪಿಕೊಂಡಿರಬೇಕು. ಆಕೆಯ ಗುಹ್ಯಸ್ಥಾನವನ್ನು ಇವನು ತನ್ನ ಸೊಂಡಿಲಿನಿಂದ ಪೂಸುತ್ತಿರಬೇಕು. ಈತನ ಜನನೇಂದ್ರಿಯ ಆಕೆಯ ಕರಗತವಾಗಿರಬೇಕು. ಇಲ್ಲದಿದ್ದರೆ ಅವರಿಗೆ ಆ ಮಂತ್ರ ಹಿತವೂ ಅಲ್ಲ; ಸಿದ್ಧಿಪ್ರದವೂ ಅಲ್ಲ:

'ಬಿಭ್ರಾಣಂ ಮಧುಮತ್ಕಪಾಲಮನಿಶಮ್'
'ಪುಷ್ಟ್ಯಾಽಶ್ಲಿಷ್ಟತನುಮ್'
'ತದ್ಯೋನ್ಯಾಹಿತಪಾಣಿಮ್'
'ಅಂಕಸ್ಥಾಯಾಃ ಸರಸಿಜರುಚಃ ಸ್ವಧ್ವಜಾಲಾಂಬಿಪಾಣೇಃ
ದೇವ್ಯಾ ಯೋನೌ ವಿನಿಹಿತಕರಂ ರತ್ನಮೌಲಿಂ ಭಜಾಮಃ ॥'
'ಸಿಂದೂರಾರುಣವಿಗ್ರಹಸ್ತ್ರಿನಯನೋ ಯೋನ್ಯಸ್ತಶುಂಡೋ ಗಣಃ
ಪಲ್ಲಿಂಗಾಹಿತಪಾಣಿಮಂಬುಜಕರಾಂ ಪುಷ್ಟಿಂ ವಹನ್ ಸೋಽವತಾತ್ ॥'
'ಪುಷ್ಕರಸ್ಪೃಷ್ಟಸ್ವಪ್ರಮದಾವರಾಂಗಮನಯಾಽಶ್ಲಿಷ್ಟಂ ಧ್ವಜಾಗ್ರಸ್ಪೃಶಾ'

ಇವೆಲ್ಲಕ್ಕಿಂತಲೂ 'ಧೂಮಾವತಿ'ಯ ಕಲ್ಪನೆ ಇನ್ನೂ ವಿಚಿತ್ರವಾಗಿದೆ.

ಹಳ್ಳಿಹಳ್ಳಿಯಲ್ಲೂ– ವರ್ಣಭೇದವಿಲ್ಲದೆ ಪ್ರತಿಯೊಬ್ಬರಿಂದಲೂ ಪೂಜೆ ಕೊಂಡುಕೊಂಡು ಹೆಚ್ಚು ಪ್ರಚಾರವನ್ನು ಪಡೆದು ಬಂದಿದೆ ಈ ದೈವ. ಲಕ್ಷಾಂತರ ಜನರ ಬಾಯಲ್ಲಿ ಬಂದು 'ಧೂಮಾವತಿ'ಯೇ 'ಜುಮಾದಿ'ಯಾ ಯಿತು. ಈ 'ಜುಮಾದಿ'ಯೆಂಬ ಹೆಣ್ಣುದೈವದ ಲಕ್ಷಣವನ್ನೇ, ಉಪಾ ಸನೆಯ ವಿಧಿಯನ್ನೇ ಕೇಳಿದರೆ ಯಾರಾದರೂ ಸಂಕೋಚಪಟ್ಟುಕೊಳ್ಳ ಬೇಕು. ಆದರೆ ಕಾಪಾಲಿಕ ತಂತ್ರದಲ್ಲಿ ಅದಕ್ಕೆ ಉನ್ನತವಾದ ಸ್ಥಾನವಿದೆ. ಈ 'ಜುಮಾದಿ'ಯ ವಾಹನ ಕಾಗೆ, ಬಣ್ಣವೂ ಕಾಗೆಯದು, ಕಂಠವೂ ಕಾಗೆಯಂತೆ ಇಂಪಾಗಿದೆ, ಹಲ್ಲುಗಳಿಗೆ ಒಂದೊಂದಕ್ಕೂ ಅಜಗಜಾಂತರ, ನೋಡುವಾಗಲೇ ಉದ್ವೇಗವನ್ನುಂಟುಮಾಡುವ ರೂಪ, ಕಳೆಗುಂದಿದ ಮುಖ, ಉದ್ದವಾದ ದೇಹ, ಕೆದರಿದ ಕಣೆಯಂತಿರುವ ತಲೆಗೂದಲು, ಸ್ಪಷ್ಟ ವಾಗಿ ಕಾಣುತ್ತಿರುವ ವೈಧವ್ಯದ ಚಿಹ್ನೆ, ಗೆರಸೆಯಂಥ ಹೊಟ್ಟೆ, ಬಿರುಸಾದ ಮೂರು ಕಣ್ಣು, ಹಸಿವು ತೃಷೆಗಳಿಂದ ಬಳಲಿದರೂ ವಿಕೃತಕಾಮನೆಯಿಂದ ಬೆಳೆದು ನಿಂತ ಅಂಗಾಂಗಗಳು, ಬೆವರು ನಾರುವ ಮೈ, ಕೈಯಲ್ಲೊಂದು ಹಾವು– ಇದು ಜುಮಾದಿಯ ದಿವ್ಯರೂಪ:

> 'ಕಾಕಾರೂಢಾತಿಕೃಷ್ಣಾ ಪ್ರವಿರಲದಶನಾ ಮುಕ್ತಕೇಶೀ ವಿರಕ್ತಾ
> ಧೂಮ್ರಾಕ್ಷೀ ಕ್ಷುತ್ತೃಷಾರ್ತಾ ಪ್ರತಿಭಟಚಕಿತಾ ಚಂಚಲಾ ಕಾಮಲೋಲಾ।
> ಹೃಷ್ಟಾ ಪುಷ್ಟಾಽಲಸಾಂಗೀ ಶ್ರಮಜಲಮಲಿನಾ ವ್ಯಕ್ತದರ್ಪಾ ವಿರೂಪಾ
> ಭೂತಿಂ ಧೂಮಾವತೀ ವಃ ಪ್ರದಿಶತು ವಿಪುಲಾಂ ಧೂತಸರ್ಪಾಗ್ರಹಸ್ತಾ ॥'
>
> (ಧೂಮಾವತೀಕಲ್ಪ)

ಎಷ್ಟು ಜನ 'ಜುಮಾದಿ'ಯ ಪೂಜಾರಿಗಳಿಗೆ ಈ ರೂಪದ ಕಲ್ಪನೆಯಿದೆ? ಇಂಥ ದೇವತೆಗಳನ್ನು ಕಲ್ಪಿಸಬೇಕಾದರೆ ಕಲ್ಪಿಸಿದವನ ಮನಸ್ಸು ಎಷ್ಟು ಕಾಮೋಪಹತವಾಗಿರಬೇಡ? ಎಷ್ಟು ಕಲಿಲವಾಗಿರಬೇಡ? ಅವನು ಕಲ್ಪಿಸಿದ ದೇವತಾರೂಪ ಅವನ ಮನಸ್ಸಿನ ಸಂಸ್ಕೃತಿಯ ಮಟ್ಟದ ಕೈಗನ್ನಡಿ, ಅಳತೆ ಗೋಲು. ಇಂಥ ಕಾಪಾಲಿಕರೇ ತುಂಬಿದ ದೇಶ ಒಳ್ಳೆಯ ಸಂಸ್ಕೃತಿಯನ್ನು ಬೆಳಸುತ್ತಿದೆ ಎನ್ನುವಂತಿಲ್ಲ. ಬದಲಾಗಿ– ಸಂಸ್ಕೃತಚೇತನರು ತಲೆ ತಗ್ಗಿ ಸುವ ಪ್ರಸಂಗ. ಈ ಪರಂಪರೆ ನಮ್ಮಲ್ಲಿ ಅಷ್ಟೊಂದು ತೀವ್ರವಾಗಿ ಬೆಳೆದು ಬಂದಿಲ್ಲ ಎನ್ನುವುದು ಸಂತೋಷದ ಸಂಗತಿ. ಉಳಿದ ತಂತ್ರಗಳೆಲ್ಲ ಇದರ ಬೆಳವಣಿಗೆಗೆ ಕೊಡಲಿಯೇಟು ಹಾಕಿವೆಯೆನ್ನಬೇಕು. ಈ ತಂತ್ರದ ಪಂಚ ಮಕಾರದ ಪದ್ಧತಿಯನ್ನು ತಂತ್ರಾಂತರಗಳು ಖಂಡಿಸಿದ ರೀತಿಯನ್ನು ಇಲ್ಲಿ ಉದಾಹರಿಸಬಹುದು;

'ಯೈರೇವ ಪತನಂ ದ್ರವ್ಯೈಃ ಸಿದ್ಧಿಸ್ತೈರೇವ ಚೋದಿತಾ ।
ಶ್ರೀಕೌಲದರ್ಶನೇ ಚೈವ ಭೈರವೇಣ ಮಹಾತ್ಮನಾ ॥
ಮದ್ಯಪಾನೇನ ಮನುಜೋ ಯದಿ ಸಿದ್ಧಿಂ ಲಭೇತ ವೈ ।
ಮದ್ಯಪಾನರತಾಃ ಸರ್ವೇ ಸಿದ್ಧಿಂ ಗಚ್ಛಂತು ಪಾಮರಾಃ ॥
ಮಾಂಸಭಕ್ಷಣಮಾತ್ರೇಣ ಯದಿ ಪುಣ್ಯಾಮತಿರ್ಭವೇತ್ ।
ಲೋಕೇ ಮಾಂಸಾಶಿನಃ ಸರ್ವೇ ಪುಣ್ಯಭಾಜೋ ಭವಂತ್ವಿಹ ॥
ಸ್ತ್ರೀಸಂಭೋಗೇನ ದೇವೇಶಿ ಯದಿ ಮೋಕ್ಷಂ ವ್ರಜಂತಿ ವೈ ।
ಸರ್ವೇಽಪಿ ಜಂತವೋ ಲೋಕೇ ಮುಕ್ತಾಃ ಸ್ಯುಃ ಸ್ತ್ರೀನಿಷೇವಣಾತ್ ॥'
(ಕುಲಾರ್ಣವತಂತ್ರ)

ಪತನೋನ್ಮುಖನಾದ ಮನುಷ್ಯನನ್ನು ಪತನದ ಪಥಕ್ಕೆ ದುಮ್ಮಿಕ್ಕ ಬೇಕೆಂದೇ ಶ್ರೀಭೈರವನು ತನ್ನ ತಂತ್ರಗಳಲ್ಲಿ ಮಹಾಪಾತಕಗಳನ್ನೆಲ್ಲ ಪರಮ ಪವಿತ್ರಗಳೆಂದು ನಿರೂಪಿಸಿದ್ದಾನೆ. ಕಳ್ಳುಕುಡಿದ ಮಾತ್ರದಿಂದ ಸಿದ್ಧಿ ಲಭಿಸುವುದಾದರೆ 'ಪ್ರೊಹಿಬಿಷನ್' ಇಲ್ಲದ ಜನರೆಲ್ಲ ಯೋಗಸಿದ್ಧರೇ ಆಗಬೇಕಾಯಿತಲ್ಲ! ಮಾಂಸಭಕ್ಷಣ ಮಾತ್ರದಿಂದಲೇ ಸದ್ಬುದ್ಧಿ ಉದಿಸುವುದಾದರೆ-ಎಲ್ಲ ಮಾಂಸಾದರೂ ಪುಣ್ಯಾತ್ಮರೇಕಾಗಿಲ್ಲ! ಸ್ತ್ರೀಸಂಭೋಗದಿಂದ ನೀವಿ ಮೋಕ್ಷವಷ್ಟೇ ದೊರಕೀತು ಹೊರತು ಸಂಸಾರದಿಂದಲೇ ಮೋಕ್ಷ ದೊರೆಯದು. ಇಲ್ಲದಿದ್ದರೆ ಈ 'ಕಾಮಣ್ಣ'ಗಳನ್ನೆಲ್ಲ ಯಾವ ಮೋಕ್ಷದಲ್ಲಿ ತುಂಬಿಸುವುದು? ಹೀಗೆ ಈ ತಾಮಸ ತಂತ್ರವೆಲ್ಲ ಸುಳ್ಳಿನ ಬುರುಡೆಗಳೆಂದು ನಮ್ಮನ್ನು ಈ ತಂತ್ರ ಎಚ್ಚರಿಸುತ್ತದೆ.*

---

* ಆದರೆ ಕೆಲಜನ ಈ ತಂತ್ರದ ಮೇಲಿನ ಅಭಿಮಾನದಿಂದ ಪಂಚ ಮಕಾರದ ಅರ್ಥವನ್ನೆ ಬೇರೆ ಮಾಡುವಷ್ಟರ ವರೆಗೂ ಮುಂದುವರಿದಿದ್ದಾರೆ. ಅವರ ರೀತಿಯಂತೆ— ಬ್ರಹ್ಮಾನಂದವನ್ನು ಅನುಭವಿಸುವುದಕ್ಕೆ ಮದ್ಯವೆಂದು ಹೆಸರು, ಅಸತ್ಸಂಗದ ಮುದ್ರಣೆಗೆ ಮುದ್ರೆಯೆಂದು ಹೆಸರು, ಶಿವಶಕ್ತಿಯರ ಸಂಯೋಗಕ್ಕೆ ಮೈಥುನವೆಂದು ಹೆಸರು! ಒಳ್ಳೆಯ ಪ್ರಮೇಯವನ್ನು ಅಪಶಬ್ದದಿಂದ ವ್ಯವಹರಿಸಿ ಚಪಲ ತೀರಿಸಿಕೊಳ್ಳುವ ಹಂಬಲ ವೇನೋ ಇಂಥವರಿಗೆ!

'ಯದುಕ್ತಂ ಪರಮಂ ಬ್ರಹ್ಮ ನಿರ್ವಿಕಾರಂ ನಿರಂಜನಮ್ ।
ತಸ್ಮಿನ್ಪ್ರಮದನಜ್ಞಾನಂ ತನ್ಮದ್ಯಂ ಪರಿಕೀರ್ತ್ಯತೇ ॥
ಸತ್ಸಂಗೇಷು ಭವೇನ್ಮುಕ್ತಿರಸತ್ಸಂಗೇಷು ಬಂಧನಮ್ ।
ಮುದ್ರಾ ಸೈವ ಭವೇದ್ದೇವಿ ಯದಸತ್ಸಂಗಮುದ್ರಣಮ್ ॥
ಕುಲಕುಂಡಲಿನೀ ಶಕ್ತಿರ್ದೇಹೇ ದೇಹಸ್ಯ ಧಾರಿಣೀ ।
ತಥಾ ಶಿವಸ್ಯ ಸಂಯೋಗೋ ಮೈಥುನಂ ಪರಿಕೀರ್ತಿತಮ್ ॥'
(ಪಂಚಮಸ್ಕಾರಹಸ್ಯ)

'ದೀಯಂತೇ ಸಿದ್ಧಯಃ ಸರ್ವಾಃ ಕ್ಷೀಯಂತೇ ಗ್ರಂಥಯೋಽಪ್ಯತಃ |
ದೀಕ್ಷಾತ್ವಮೇವಂ ದೀಕ್ಷಾಯಾಃ'

ಎಂದು ವಿಷ್ಣುಸಂಹಿತೆಯಲ್ಲಿ ನಿರೂಪಿತವಾದಂತೆ ಪವಿತ್ರವಾದ ದೀಕ್ಷೆಯನ್ನು ಗುರುಮುಖದಿಂದ ಹೊಂದಿ ಅಧ್ಯಯನ ಮಾಡಬೇಕಾದ ಸತ್ತಂತ್ರಗಳೆಲ್ಲಿ? ಪಂಚಮಕಾರದ ಸಾಧನೆಯಿಂದ ಫಲಿಸುವ ಈ ಕಾತಂತ್ರಗಳೆಲ್ಲಿ?

ಆದರೆ ಈ ತಂತ್ರಗಳ ವ್ಯಾಪ್ತಿ ಅದ್ಭುತವಾಗಿದೆ. ಈ ಪದ್ಧತಿಯಲ್ಲಿ ಬೆಳೆದು ಬಂದ ಗ್ರಂಥಸಂಖ್ಯೆ ಅಪಾರವಾಗಿದೆ. ಡಾಮರತಂತ್ರ, ಯಾಮಲತಂತ್ರ, ನಾರದತಂತ್ರ, ಕಪಿಲತಂತ್ರ ವೀರಾಗಮ ಇವೆಲ್ಲ ಆ ತಂತ್ರಪ್ರಭೇದಗಳೇ. ಒಂದೊಂದರಲ್ಲೂ ಹತ್ತಾರು ಸಾವಿರ ಶ್ಲೋಕಗಳು. ಅವರ ಡಾಮರತಂತ್ರ ಒಂದೇ ಆರು ವಿಧವಾಗಿದೆ. ಮೊದಲನೆಯದು ಯೋಗ ಡಾಮರ. ಇದರ ಶ್ಲೋಕಸಂಖ್ಯೆ ೨೩೫೩೩. ಎರಡನೆಯದು ಶಿವಡಾಮರ, ಇದರ ಪರಿಮಾಣ ೧೧೦೦೭ ಶ್ಲೋಕಗಳು. ಮೂರನೆಯದು ದುರ್ಗಾಡಾಮರತಂತ್ರ, ಇದರ ಪರಿಮಾಣ ೧೧೫೦೦ ಶ್ಲೋಕಗಳು. ನಾಲ್ಕನೆಯದು ಸಾರಸ್ವತಡಾಮರ ತಂತ್ರ, ಇವರ ಶ್ಲೋಕಸಂಖ್ಯೆ ೯೯೦೫. ಐದನೆಯದು ಬ್ರಹ್ಮಡಾಮರ, ಇದರ ಶ್ಲೋಕಸಂಖ್ಯೆ ೭೧೦೫. ಕೊನೆಯದಾದ ಗಂಧರ್ವಡಾಮರ ಒಂದೇ ೬೦೦೬೦ ಶ್ಲೋಕಗಳನ್ನೊಳಗೊಂಡಿದೆ. ಇದೇ ಡಾಮರತಂತ್ರಗಳಲ್ಲೆಲ್ಲ ಶ್ರೇಷ್ಠ ವಾಗಿದೆ:

'ಡಾಮರಃ ಷಡ್ವಿಧೋ ಜ್ಞೇಯಃ ಪ್ರಥಮೋ ಯೋಗಡಾಮರಃ |
ಶ್ಲೋಕಾಸ್ತತ್ರ ತ್ರಯಸ್ತ್ರಿಂಶತ್ತಥಾ ಪಂಚ ಶತಾನಿ ಚ ||
ತ್ರಿವಿಂಶತಿಃ ಸಹಸ್ರಾಣಿ ಶ್ಲೋಕಾಶ್ಚೈವ ಹಿ ಸಂಖ್ಯಯಾ |
ಏಕಾದಶಸಹಸ್ರಾಣಿ ಸಂಖ್ಯಾತಾಃ ಶಿವಡಾಮರೇ ||
ಶ್ಲೋಕಾಃ ಸಪ್ತೈವ ನಿಶ್ಚಿತ್ಯ ಈಶ್ವರೇಣೈವ ಭಾಷಿತಾಃ ||
ತಾವಚ್ಛ್ಲೋಕಸಹಸ್ರಾಣಿ ಪಂಚಶ್ಲೋಕಶತಾನಿ ಚ |
ಗುಣೋತ್ತರಾಣಿ ದುರ್ಗಾಯಾ ಡಾಮರೇ ಕಥಿತಾನಿ ಚ ||
ನವಶ್ಲೋಕಸಹಸ್ರಾಣಿ ನವಶ್ಲೋಕಶತಾನಿ ಚ |
ಸಾರಸ್ವತೇ ತಥಾ ಶ್ಲೋಕಾಃ ಪಂಚೈವ ಪರಿಕೀರ್ತಿತಾಃ ||
ಸ್ವರಸಂಖ್ಯಸಹಸ್ರಾಣಿ ಶ್ಲೋಕಾನಾಂ ಬ್ರಹ್ಮಡಾಮರೇ |
ಪಂಚೋತ್ತರಶತಾನ್ಯತ್ರ ಸಂಖ್ಯಾತಾನಿ ಶಿವೇನ ತು ||
ಷಷ್ಟಿಃ ಶ್ಲೋಕಸಹಸ್ರಾಣಿ ಗಾಂಧರ್ವೇ ಡಾಮರೋತ್ತಮೇ |
ಶ್ಲೋಕಾಶ್ಚ ಷಷ್ಟಿಸಂಖ್ಯಾತಾ ಪ್ರೋಕ್ತಾಶ್ಚಾವ್ಯಕ್ತಯೋನಿನಾ||' (ವಾರಾಹೀ.)

ಡಾಮರದಂತೆಯೇ ಯಾಮಲತಂತ್ರವೂ ಆರು ತೆರನಾಗಿದೆ. ಆದಿ ಯಾಮಲ (ಶ್ಲೋ. ೩೫೩೦೦), ಬ್ರಹ್ಮ ಯಾಮಲ (ಶ್ಲೋ. ೨೪೨೦೦) ವಿಷ್ಣು ಯಾಮಲ (ಶ್ಲೋ. ೨೪೦೨೦), ರುದ್ರಯಾಮಲ (ಶ್ಲೋ. ೩೪೬೫), ಯಾಮಲಗಳಲ್ಲೆಲ್ಲ ಈ ರುದ್ರಯಾಮಲ ಕನಿಷ್ಠವಾಗಿದೆ. ಗಣೇಶಯಾಮಲ (ಶ್ಲೋ. ೧೦೩೨೨), ಆದಿತ್ಯಯಾಮಲ (ಶ್ಲೋ. ೧೨೦೦೦). ಇದನ್ನೇ ಜಾಮಲತಂತ್ರವೆಂದೂ ಕರೆವುದುಂಟು.

'ಯಾಮಲಾಃ ಷಟ್ ಸಮಾಖ್ಯಾತಾಸ್ತತ್ರಾದಾವಾದಿಯಾಮಲೇ ।
ದ್ವಾತ್ರಿಂಶಚ್ಚ ಸಹಸ್ರಾಣಿ ತ್ರಯಸ್ತ್ರಿಂಶತ್ ಶತಾನಿ ಚ ॥
ದ್ವಿತೀಯೇ ಬ್ರಹ್ಮಸಂಜ್ಞೇ ತು ದ್ವಾವಿಂಶತಿಶ್ಚ ಸಂಖ್ಯಯಾ ।
ಸಹಸ್ರಾಣಿ ಶತಾನ್ಯತ್ರ ತಾನ್ಯೇವ ಕಥಿತಾನಿ ಚ ॥
ತಾವತ್ಸಂಖ್ಯಸಹಸ್ರಾಣಿ ಶತಾನಿ ಪರಿಸಂಖ್ಯಯಾ ।
ವಿಂಶತಿಶ್ಚ ತಥಾ ಸಂಖ್ಯಾ ಶ್ಲೋಕಾಶ್ಚ ವಿಷ್ಣುಯಾಮಲೇ ॥
ಕಾಲಸಂಖ್ಯಸಹಸ್ರಾಣಿ ವೇದಸಂಖ್ಯಶತಾನಿ ಚ ।
ಪಂಚಷಷ್ಟಿಸ್ತಥಾ ಶ್ಲೋಕಾ ಕನಿಷ್ಠೇ ರುದ್ರಯಾಮಲೇ ॥
ನವಶ್ಲೋಕ ಸಹಸ್ರಾಣಿ ತ್ರಯೋದಶಶತಾನಿ ಚ ।
ದ್ವಾವಿಂಶತಿಸ್ತಥಾ ಶ್ಲೋಕಾ ಗಣೇಶಯಾಮಲೋತ್ತಮೇ ।
ರವಿಸಂಖ್ಯಸಹಸ್ರಾಣಿ ಆದಿತ್ಯಾಖ್ಯೇ ತು ಯಾಮಲೇ ॥' (ವಾರಾಹೀ.)

ಇನ್ನು ೫೦೬೫ ಶ್ಲೋಕಗಳನ್ನುಳ್ಳ 'ವಾಮಕೇಶ್ವರ'ತಂತ್ರ, ೧೩೨೨೦ ಶ್ಲೋಕಗಳನ್ನುಳ್ಳ ಮೃತ್ಯುಂಜಯತಂತ್ರ, ೮೩೦೭ ಶ್ಲೋಕಗಳ ಯೋಗಾರ್ಣವ ತಂತ್ರ, ೧೧೦೦೦ ಶ್ಲೋಕಗಳ ಮಾಯಾತಂತ್ರ, ೫೫೫೦ ಶ್ಲೋಕಗಳ ದಕ್ಷಿಣಾಮೂರ್ತಿತಂತ್ರ, ೧೧೦೧೩ ಶ್ಲೋಕಗಳ ಕಾಲಿಕಾತಂತ್ರ, ೩೦೦೦ ಶ್ಲೋಕಗಳ ಕಾಲೇಶ್ವರೀ ತಂತ್ರ, ೯೯೦೦ ಶ್ಲೋಕಗಳ ತಂತ್ರರಾಜತಂತ್ರ, ೨೨೦೨೦ ಶ್ಲೋಕಗಳುಳ್ಳ ಹರಗೌರೀತಂತ್ರ, ೧೦೦೦೬ ಶ್ಲೋಕಗಳ ಕುಬ್ಜಕಾತಂತ್ರ, ೨೪೨೦೦ ಶ್ಲೋಕಗಳ ಕಾತ್ಯಾಯನೀ ತಂತ್ರ, ೮೮೦೦ ಶ್ಲೋಕಗಳ ಪ್ರತ್ಯಂಗಿರಾತಂತ್ರ, ೫೫೦೫ ಶ್ಲೋಕಗಳುಳ್ಳ ಮಹಾಲಕ್ಷ್ಮೀತಂತ್ರ, ೮೦೦೭ ಶ್ಲೋಕಗಳ ತ್ರಿಪುರಾರ್ಣವತಂತ್ರ, ೨೨೦೫ ಶ್ಲೋಕಗಳುಳ್ಳ ಸರಸ್ವತೀತಂತ್ರ, ೨೯೩೨ ಶ್ಲೋಕಗಳುಳ್ಳ ಯೋಗಿನೀ ತಂತ್ರ, ೬೩೦೩ ಶ್ಲೋಕಗಳುಳ್ಳ ವಾರಾಹೀ ತಂತ್ರ, ೫೦೨೦೩ ಶ್ಲೋಕಗಳನ್ನುಳ್ಳ ಶ್ರೀ ನಾರಾಯಣ ತಂತ್ರ, ೪೪೯೧ ಶ್ಲೋಕಗಳುಳ್ಳ ಮೃಡಾನೀತಂತ್ರ—ಇವೆಲ್ಲ ಈ ತಂತ್ರಪರಂಪರೆಯ ಕೊಡುಗೆಗಳು. ಇದರಲ್ಲಿ ಒಂದೆರಡು ತಂತ್ರಗಳನ್ನುಳಿದರೆ ಮತ್ತೆಲ್ಲ ರಾಜಸ

ತಂತ್ರಗಳೋ ತಾಮಸತಂತ್ರಗಳೋ ಆಗಿವೆ. ಇವುಗಳ ಗಣನೆಯನ್ನೂ ಶ್ಲೋಕ ಸಂಖ್ಯೆಯನ್ನೂ ವಾರಾಹೀತಂತ್ರದಲ್ಲಿ ಕಾಣಬಹುದು.

ಇವುಗಳಲ್ಲದೆ- ಕಪಿಲ, ಜೈಮಿನಿ, ನಾರದ, ಗರ್ಗ, ಪುಲಸ್ತ್ಯ, ಯಾಜ್ಞವಲ್ಕ್ಯ ಮೊದಲಾದವರು ಬರೆದ ಉಪತಂತ್ರಗಳೂ ಹೇರಳವಾಗಿವೆಯೆಂದೂ ವಾರಾಹೀತಂತ್ರದಿಂದಲೇ ತಿಳಿದು ಬರುವುದು. ಆದರೆ ಇವುಗಳಲ್ಲಿ ಹೆಚ್ಚಿನವು ಈಗ ಉಪಲಬ್ಧವಿದ್ದಂತಿಲ್ಲ. ಶಿವಪ್ರೋಕ್ತಗಳಾದ ಪ್ರಧಾನತಂತ್ರಗಳು ಒಟ್ಟು ೬೪ ಎಂದು 'ಮಹಾಸಿದ್ಧಿಸಾರ'ತಂತ್ರದಲ್ಲಿ ಪರಗಣಿಸಿದ್ದಾರೆ. 'ಮಹಾ ಸಿದ್ಧಿಸಾರ' ಆ ೬೪ರ ಕೂಟದಲ್ಲಿ ಸೇರಿದ್ದೇ ಆಗಿದೆ. ಹೀಗೆ ರಾಜಸ-ತಾಮಸ ತಂತ್ರಗಳು ಊರೆಲ್ಲ ಬೆಳೆದು ಸಾತ್ತ್ವಿಕತೆಗೆ ಎಡೆಯಿಲ್ಲ ಎಂಬಂತೆ ಹಬ್ಬಿ ಕೊಂಡವು. ಶಾಕ್ತಪಂಥದ ಮೇಲಿನ ಅತ್ಯಭಿಮಾನದಿಂದ ವೀರಶಾಕ್ತರೂ ಶೈವತಂತ್ರಗಳ ಮೇಲಿನ ವ್ಯಾಮೋಹದಿಂದ'ವೀರಶೈವ'ರೂ ಉದಿಸಿಕೊಂಡರು. ಇವರು ತಮ್ಮ ತಂತ್ರಗಳಲ್ಲದೆ ಉಳಿದವುಗಳು ತಂತ್ರಗಳೇ ಅಲ್ಲ ಎಂದು ಸಾರಿ ದರು; ತಾವಲ್ಲದೆ ಅನ್ಯರು ತಾಂತ್ರಿಕರೇ ಅಲ್ಲ ಎಂದು ಸಾರಿದರು. ಅಭಿನವ ಗುಪ್ತ ತನ್ನ 'ತಂತ್ರಸಾರ'ದಲ್ಲಿ ತಂತ್ರದ ತತ್ತ್ವವನ್ನು ಶೈವರು ಮಾತ್ರ ಅರಿಯಬಲ್ಲರು, ಸದಾಗಮದ್ವೇಷಿಗಳೂ- ಸದ್ಗುರುದ್ವೇಷಿಗಳೂ ಆದ ವೈಷ್ಣವ ರಿಗೆ ಈ ತತ್ವ ತಿಳಿಯಲೇ ಆರದು ಎಂದಿದ್ದಾನೆ:

'ವೈಷ್ಣವಾದ್ಯಾ ಹಿ ತಾವನ್ಮಾತ್ರ ಏವಾಗಮೇ ರಾಗತತ್ತ್ವೇನ ನಿಯಮಿತಾ ಇತಿ ನೋರ್ಧ್ವದರ್ಶನೇಽಪಿ ತದುನ್ಮುಖತಾಂ ಭಜಂತೇ । ತತಃ ಸತ್ತರ್ಕಸದಾ-ಗಮಸದ್ಗುರುದ್ವೇಷಿಣ ಏವ । ತಸ್ಮಾತ್ ಶಾಂಭವದೃಢಶಕ್ತಿಪಾತಾವಿದ್ಧಾ ಏವ ಸದಾಗಮಾದಿಕ್ರಮೇಣ ವಿಕಲ್ಪಂ ಸಂಸ್ಕೃತ್ಯ ಪರಂ ಸ್ವರೂಪಂ ಪ್ರವಿಶಂತಿ ॥'

ಅದಕ್ಕೆ ಪಾರಮೇಶ್ವರತಂತ್ರದ ಸಂವಾದವನ್ನೂ ಆತ ಕೊಟ್ಟಿದ್ದಾನೆ:

'ವೈಷ್ಣವಾದ್ಯಾಃ ಸಮಸ್ತಾಸ್ತೇ ವಿದ್ಯಾರಾಗೇಣ ರಂಜಿತಾಃ ।<br>ನ ವಿಂದಂತಿ ಪರಂ ತತ್ವಂ ಸರ್ವಜ್ಞಜ್ಞಾನವರ್ಜಿತಾಃ ॥'

ಹೀಗೆ ಪ್ರತಿಯೊಬ್ಬರೂ ತಮ್ಮ ತಮ್ಮ ತಂತ್ರಕ್ಕೆಯೆ ಜೋತುಬಿದ್ದು ಹೋರಾಡುತ್ತಿದ್ದಾಗ ನಿಜವಾದ ತಂತ್ರಪಂಥ ಯಾವುದು ಎಂದು ನಿರ್ಣಯಿ ಸುವುದು ಕಷ್ಟಸಾಧ್ಯವಾಗುವುದು ಸಂಭವ. ಅದಕ್ಕೋಸ್ಕರ– ಈ ರಾಜಸ ತಾಮಸತಂತ್ರಗಳಿಂದ ವ್ಯಾಮೋಹಗೊಳ್ಳದಂತೆ ಸಾತ್ತ್ವಿಕತಂತ್ರ ಎಚ್ಚರಿಕೆ ಯನ್ನೀಯಲಿಕ್ಕೆ ಮರೆತಿಲ್ಲ:

'ಚತುಃಷಷ್ಟಿಶ್ಚ ತಂತ್ರಾಣಿ ಯಾಮಲಾದೀನಿ ಪಾರ್ವತಿ |
ಸಕಲಾನೀಹ ವಾರಾಹೇ ವಿಷ್ಣುಕ್ರಾಂತಾಸು ಭೂಮಿಷು ||
ಕಲ್ಪಭೇದೇನ ತಂತ್ರಾಣಿ ಕಥಿತಾನಿ ಚ ಯಾನಿ ಚ |
ಪಾಷಂಡಮೋಹನಾಯೈವ ವಿಫಲಾನೀಹ ಸುಂದರಿ ||' (ವಿಶ್ವಸಾರತಂತ್ರ)

ವಾಮಾಚಾರವನ್ನು ಪ್ರತಿಪಾದಿಸುವ ಈ ತಂತ್ರಗಳೆಲ್ಲ-ಮೋಹಕತಂತ್ರಗಳು ಎಂದು ಎಲ್ಲ ಸತ್ತಂತ್ರಗಳೂ ಐಕಮತ್ಯದಿಂದ ಪ್ರತಿಪಾದಿಸುತ್ತಿವೆ.

'ದೈತ್ಯಾನಾಂ ಮೋಹನಾರ್ಥಂ ತು ತಂತ್ರಶಾಸ್ತ್ರಂ ಶಿವೋದಿತಮ್ |'

ತಾಮಸಚೇತನಗಳನ್ನು ಮೋಹಗೊಳಿಸುವುದು ರುದ್ರನ ಕೆಲಸಗಳಲ್ಲೊಂದಂತೆ. ಇದೇ ಮಾತನ್ನು ಆಚಾರ್ಯರು ತನ್ನ ಭಾಷ್ಯದಲ್ಲಿ 'ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ' ಎಂಬ ಪ್ರಮಾಣವಚನದಿಂದ ಸಾಧಿಸಿದ್ದಾರೆ. ಶ್ರುತಿಗಳಿಗೂ ಸಾತ್ತ್ವಿಕಪುರಾಣಾದಿಗಳಿಗೂ ವಿರುದ್ಧವಾದ ಎಲ್ಲ ತಂತ್ರಗಳೂ ಅಗ್ರಾಹ್ಯಗಳು ಎನ್ನುವುದನ್ನು ಪುರಾಣಕಾರರಾದ ವ್ಯಾಸರೇ ಸಮರ್ಥಿಸಿದ್ದಾರೆ:

'ಯಾನಿ ಶಾಸ್ತ್ರಾಣಿ ದೃಶ್ಯಂತೇ ಲೋಕೇಽಸ್ಮಿನ್ ವಿವಿಧಾನಿ ಚ |
ಶ್ರುತಿಸ್ಮೃತಿವಿರುದ್ಧಾನಿ ತೇಷಾಂ ನಿಷ್ಠಾ ತು ತಾಮಸೀ ||
ಕರಾಲಭೈರವಂ ಚಾಪಿ ಯಾಮಲಂ ವಾಮಮಾಶ್ರಿತಮ್ |
ಏವಂವಿಧಾನಿ ಚಾನ್ಯಾನಿ ಮೋಹನಾರ್ಥಾನಿ ತಾನಿ ತು |
ಮಯಾ ಸೃಷ್ಟಾನಿ ಚಾನ್ಯಾನಿ ಮೋಹಾಯೈವ ಭವಾರ್ಣವೇ || (ದೇವೀಪು.)
'ಚಕಾರ ಮೋಹಶಾಸ್ತ್ರಾಣಿ ಕೇಶವಃ ಸಶಿವಸ್ತಥಾ |
ಕಾಪಿಲಂ ನಾಕುಲಂ ವಾಮಂ ಭೈರವಂ ಪೂರ್ವಪಶ್ಚಿಮಮ್ ||'(ಕೂರ್ಮಪು.)
'ಶೃಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಮ್ |
ಯೇಷಾಂ ಶ್ರವಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ |
ಪ್ರಥಮಂ ಹಿ ಮಯೈವೋಕ್ತಂ ಶೈವಂ ಪಾಶುಪತಾದಿಕಮ್ ||'(ಪಾದ್ಮಪು.)

ಮೇಲಿನ ಉದಾಹರಣೆಗಳಿಂದ ತಾಮಸಗ್ರಂಥಗಳನ್ನು ತ್ಯಜಿಸಿ ಸಾತ್ತ್ವಿಕ ಪುರಾಣಗಳಲ್ಲೂ ತಂತ್ರಗಳಲ್ಲೂ ನಿರೂಪಿಸಿದಂತೆ ನಡೆದರೆ ಒಳಿತನ್ನು ಸಂಪಾದಿಸಬಹುದು ಎಂದು ವಾದಿಸಿದ ಆಚಾರ್ಯರ ಮಾತು ಶಾಸ್ತ್ರಪುರಾಣಗಳಿಗೆ ಸಂವಾದಿಯಾಗಿದೆ ಎಂದು ತಿಳಿದು ಬಂತು. ಈ ತಾಮಸಗ್ರಂಥಗಳಲ್ಲಿಯೂ ಒಳ್ಳೆಯ ಅಂಶ ಅಲ್ಲಲ್ಲಿ ನುಸುಳಿಕೊಂಡಿದ್ದರೆ ಅದನ್ನು ನಾವು ಸಂತೋಷದಿಂದ ಸ್ವೀಕರಿಸಬೇಕು. 'ಸ್ತ್ರೀರತ್ನಂ ದುಷ್ಕುಲಾದಪಿ'. ಈ ಮಾತನ್ನೂ ಪ್ರಾಚೀನರೇ ಬರೆದಿಟ್ಟಿದ್ದಾರೆ.

ೞ

'ತಥಾऽಪಿ ಯೋऽಂಶೋ ಮಾರ್ಗಾಣಾಂ ವೇದೇನ ನ ವಿರುಧ್ಯತೇ ।
ಸೋऽಂಶಃ ಪ್ರಮಾಣಮಿತ್ಯುಕ್ತಃ ಕೇಷಾಂಚಿದಧಿಕಾರಿಣಾಮ್ ॥' (ಸೂತಸಂ.)

ಅದರಿಂದಲೇ ಆಚಾರ್ಯರು ಸ್ಕಾಂದಪುರಾಣ ಮೊದಲಾದ ತಾಮಸ ಗ್ರಂಥಗಳನ್ನೂ ಅಲ್ಲಲ್ಲಿ ಉಲ್ಲೇಖಿಸುವುದುಂಟು.

ಈ ರೀತಿಯಲ್ಲಿ ನಾವು ವಿಮರ್ಶಿಸುತ್ತ ಮುಂದೆ ಸಾಗಿದಾಗ– ಈ ಮಥನ ರಂಗದಲ್ಲಿ ಎಲ್ಲ ತಂತ್ರಗಳೂ ಮುದುಡಿಕೊಂಡು ಸಾತ್ತ್ವಿಕತಂತ್ರವೊಂದೇ ಕೊನೆಯ ವರೆಗೂ ಉಜ್ಜ್ವಲವಾಗಿ ತಲೆಯೆತ್ತಿ ನಿಲ್ಲ ಬಲ್ಲದು. ಪ್ರಾಚೀನರ ಆಶಯದಂತೆ ಶ್ರುತಿಸ್ಮೃತಿಗಳಲ್ಲಿ ನಿಷ್ಣಾತವಾಗದ ಪಾಮರವರ್ಗವೂ ಕೂಡ ಶ್ರೌತಕರ್ಮದಲ್ಲಿ ಅಧಿಕಾರ ಪಡೆಯಬೇಕು ಎನ್ನುವುದಕ್ಕಾಗಿ, ಆಚಾರ ಪರಾಙ್ಮುಖರಾದ ಜನರನ್ನು ಆಚಾರ ತತ್ಪರರನ್ನಾಗಿಸುವುದಕ್ಕೆ, ಐಹಿಕದಲ್ಲೆ ಮುಳುಗಿದವರಿಗೆ ಪಾರಲೌಕಿಕದತ್ತ ಮನಸೆಳೆವುದಕ್ಕೆ, ಕತ್ತಲಲ್ಲಿ ತೆವಳುತ್ತಿರು ವವರನ್ನು ಬೆಳಕಿನ ದಾರಿಯಲ್ಲಿ ನಡೆಸುವುದಕ್ಕೆ ಈ ಸತ್ತಂತ್ರಗಳು ಹುಟ್ಟಿ ಕೊಂಡಿವೆ:

'ಶ್ರುತಿಭ್ರಷ್ಟಃ ಸ್ಮೃತಿಪ್ರೋಕ್ತಪ್ರಾಯಶ್ಚಿತ್ತಪರಾಙ್ಮುಖಃ ।
ಕ್ರಮೇಣ ಶ್ರೌತಸಿದ್ಧ್ಯರ್ಥಂ ಬ್ರಾಹ್ಮಣಸ್ತಂತ್ರಮಾಶ್ರಯೇತ್ ॥
ಪಾಂಚರಾತ್ರಂ ಭಾಗವತಂ ತಂತ್ರಂ ವೈಖಾನಸಾಭಿಧಮ್ ।
ವೇದಭ್ರಷ್ಟಾನ್ ಸಮುದ್ದಿಶ್ಯ ಕಮಲಾಪತಿರುಕ್ತವಾನ್ ॥' (ಸಾಂಬಪುರಾಣ)

ಹೀಗೆ ಅಪಾರವಾದ ಅನಂತಶಾಖೆಗಳಿಂದ ಹೆಮ್ಮರವಾಗಿ ಬೆಳೆದ ತಂತ್ರ ಶಾಸ್ತ್ರವನ್ನು ಕಂಡು ಬೆರಗಾಗಿದ್ದಾಗ, ಯಾವುದು ಸಾರವತ್ತಾದುದೆಂದು ತಿಳಿ ಯಲು ಸಾಧ್ಯವಾಗದೆ ದಿಗಿಲಾಗಿದ್ದಾಗ, ಸಾರವತ್ತಾದ ಭಾಗವನ್ನಷ್ಟೆ ಈ ಸತ್ತಂತ್ರಗಳು ನಮಗೆ ತೋರಿದವು. ಅದರ ಅನುಸಾರವಾಗಿ ತಂತ್ರದ ಪರಂಪರೆಯನ್ನು ಬೆಳೆಸಿಕೊಳ್ಳುವುದು ನಮ್ಮ ಕೈಯಲ್ಲಿದೆ.

## ಮತಾಚಾರ್ಯರು ಮತ್ತು ತಂತ್ರಗ್ರಂಥ

ಬೆಳೆದು ಬಂದ ಯಾವ ಪರಂಪರೆಯೂ ಕೊನೆಯ ತನಕವೂ ಸುಗಮ ವಾಗಿ ಉಳಿವುದಿಲ್ಲ. ತಂತ್ರಶಾಸ್ತ್ರದ ಅವಸ್ಥೆಯೂ ಇದೇ ತೆರನಾಯಿತು. ಜನ ಅದರ ಕಡೆಗೆ ಕುದೃಷ್ಟಿಯನ್ನು ಬೀರಿದರು; ಅನಾದರವನ್ನು ತೋರಿ ದರು. 'ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ' ಕಾಲಚಕ್ರದ ಯಾವುದೋ ಒಂದು ಅರವನ್ನು ಆತುಕೊಂಡಿದ್ದ ತಂತ್ರಪರಂಪರೆ ಅದರೊಡನೆಯೇ ಮಗುಚಿಕೊಂಡಿತು. ಕುತಂತ್ರದ ಪ್ರಭಾವವೂ ಕ್ರಮಶಃ ಅಡಿಮೊಗ

ವಾಯಿತು. ತಂತ್ರಶಾಸ್ತ್ರದ ಉಜ್ಜ್ವಲತೆಯನ್ನು ಎತ್ತಿ ತೋರಿಸಬಲ್ಲ ಯೋಗಸಿದ್ಧರ ಆವಶ್ಯಕತೆ ಆಗ ಭಾರತದಲ್ಲುಂಟಾಯಿತು. ಮತ್ತೆ ಪುನಃ ಕಾಲಚಕ್ರ ತಿರುಗಿಕೊಂಡಿತು. ತಂತ್ರಶಾಸ್ತ್ರದ ಪುನರುತ್ಥಾನದ ಕಹಳೆ ಮೊಳಗಿತು. ಭಾರತದ ತತ್ತ್ವಶಾಸ್ತ್ರದ ಪರಂಪರೆಯ ಮಹಾಮೇಧಾವಿಗಳಲ್ಲಿ ಒಬ್ಬರೆನಿಸಿದ ಶಂಕರಾಚಾರ್ಯರು 'ಪ್ರಪಂಚಸಾರ' ಎಂಬ ಅಪೂರ್ವ ತಂತ್ರ ಗ್ರಂಥವನ್ನು ಜನತೆಗೆ ಕೊಟ್ಟು ಉಪಕರಿಸಿದರು. ಮತ್ತೊಮ್ಮೆ ತಂತ್ರದ ಸೊಡರು ಬೆಳಗಿಕೊಂಡಿತು. 'ಪ್ರಪಂಚಸಾರ'ವನ್ನು ಬರೆದವರು ಶಂಕರಾಚಾರ್ಯರಲ್ಲ ಎನ್ನುವ ವಾದವೂ ಇದೆ. ಆದರೆ ಪ್ರಾಚೀನರೆಲ್ಲ ಹೆಚ್ಚಿನ ಮಟ್ಟಿಗೆ ಶಂಕರಾಚಾರ್ಯರೇ ಅದನ್ನು ಬರೆದುದು ಎಂದು ಅಭಿಪ್ರಾಯ ಪಟ್ಟಂತೆ ಕಾಣಿಸುವುದರಿಂದ, 'ಶಾರದಾತಿಲಕ'ದಂಥ ಪ್ರಸಿದ್ಧ ತಂತ್ರಗ್ರಂಥಗಳೂ ಅದರ ಆಧಾರದಿಂದ ಬರೆದಂತೆ ತೋರುವುದರಿಂದ, ರಾಘವ ಭಟ್ಟ ತನ್ನ 'ಪದಾರ್ಥಾದರ್ಶ'ದಲ್ಲಿ 'ಪ್ರಪಂಚಸಾರ'ದ ಮಾತುಗಳನ್ನು ಅಲ್ಲಲ್ಲಿ 'ಯದಾಹುರಾಚಾರ್ಯಾಃ' ಎಂದು ಉಲ್ಲೇಖಿಸಿದ್ದರಿಂದ– ಆ ಗ್ರಂಥವನ್ನು ಶಂಕರಾಚಾರ್ಯರೇ ಬರೆದರು ಎಂದೆನ್ನಬಹುದು. ತಂತ್ರದ ನೆಲೆಯಲ್ಲಿ ನಿರ್ದಿಷ್ಟವಾದ ಮಾರ್ಗದರ್ಶನವನ್ನು ಈ ಪ್ರಪಂಚಸಾರ ಕೆಲವು ಶತಕಗಳ ವರೆಗೆ ಮಾಡಿತು. ಆಗ ಜನರಲ್ಲಿ ವೈಷ್ಣವಪಂಥದ ಪ್ರಭಾವ ಬೇರೂರಿತ್ತು. ಶಂಕರಾಚಾರ್ಯರಿಂದ ನೆಲೆಯುರಿತ ವೈಷ್ಣವತ್ವ ರಾಮಾನುಜರ ಕಾಲಕ್ಕೆ ಬೆಳೆದು ಆನಂದತೀರ್ಥರ ದರ್ಶನದಿಂದ ವಿರಾಡ್ರೂಪವನ್ನು ತಾಳಿ ನಿಂದಿತ್ತು. ಆಗ ಜನತೆಗೆ ಶುದ್ಧ ವೈಷ್ಣವಪಂಥದ ಶುದ್ಧ ಸಾತ್ತ್ವಿಕವಾದ ತಂತ್ರಗ್ರಂಥದ ಆವಶ್ಯಕತೆಯಿತ್ತು. ಆಚಾರ್ಯಶಂಕರರು ವೈಷ್ಣವರಾದರೂ ಶಾಕ್ತಪಂಥದಿಂದ ಪ್ರಭಾವಿತರಾಗಿ ತನ್ನ ತಂತ್ರಗ್ರಂಥವನ್ನು ಬರೆದಿದ್ದರು; ಎಂತಲೇ ಅವರು ಗ್ರಂಥದಲ್ಲಿ ಅಭಿಚಾರವಶೀಕರಣಗಳಂಥ ಕಾಪಾಲಿಕಾಚಾರಗಳನ್ನೂ ಪ್ರತಿಪಾದಿಸಿದ್ದರು. ಈ ಕುತಂತ್ರಗಳಿಂದ ದೂರವಾದ ಪವಿತ್ರಾಚಾರದ ಬಲದಿಂದ ಅಂತಃಕರಣಶುದ್ಧಿಯನ್ನು ಸಂಪಾದಿಸಿ, ನಮ್ಮಲ್ಲಿರುವ 'ವಿಲ್‌ಪವರ್' ಹೇಗೆ ಸದುಪಯೋಗವಾದೀತೋ ಅಂಥ ತೆರದಲ್ಲಿ ಬಾಳುವುದು ಹೇಗೆ? ನಿಗ್ರಹ–ಅನುಗ್ರಹಗಳಲ್ಲಿ ಸಮಾನವಾದ ಈ 'ಇಚ್ಛಾಶಕ್ತಿ'ಯನ್ನು ಅನುಗ್ರಹೈಕಸಾಧನವನ್ನಾಗಿ ಮಾಡುವ ಬಗೆ ಹೇಗೆ? ಎಂಬ ಚೋದ್ಯಗಳಿಗೆ ತಕ್ಕ ಪರಿಹಾರವನ್ನೀಯಬಲ್ಲ ಒಂದು ಸಾತ್ತ್ವಿಕತಮ ತಂತ್ರಗ್ರಂಥದ ಆವಶ್ಯಕತೆ ಆಗ ಉಂಟಾಯಿತು. ೧೩ನೆಯ ಶತಮಾನದ ಸಮಯ. ಆನಂದ

ತೀರ್ಥರು ಈ ಆವಶ್ಯಕತೆಯನ್ನರಿತು, ಶುದ್ಧಸಾತ್ತ್ವಿಕವಾದ ತಂತ್ರಸಾರದ ಆಧಾರದಿಂದ ಈ ತಂತ್ರಸಾರಸಂಗ್ರಹವನ್ನು ಬರೆದರು. ಈ ಗ್ರಂಥದಲ್ಲಿ ಅಭಿಚಾರದಂಥ ವಾಮಾಚಾರಗಳಿಗೆಡೆಯಿಲ್ಲ, ದಿಗಂಬರರಾಗಿ ಬೆತ್ತಲೆ ದೇವತೆಗಳನ್ನೋ ವಿಕೃತರೂಪದ ವಿಥವೆಯರನ್ನೋ ಧ್ಯಾನಿಸುವ ಹವ್ಯಾಸ ಕ್ಕೆಡೆಯಿಲ್ಲ. ಮನುಷ್ಯನು ತನಗೆ ಅವಶ್ಯಕವಾದ ಕರ್ಮಗಳನ್ನು ಮಾಡಲು, ನಿತ್ಯಕರ್ಮದಿಂದ ಚ್ಯುತನಾಗದಂತೆ ಬಾಳಲು ಎಷ್ಟರ ಆವಶ್ಯಕತೆಯಿದೆಯೋ, ಎಂಥ ಕರ್ಮ ಅವನ 'ಇಚ್ಛಾಶಕ್ತಿ'ಯ ಬೆಳವಣಿಗೆಗೆ ಪೂರಕವಾಗಿದೆಯೋ, ಎಂಥ ಆಚಾರದಿಂದ ಅವನ ಜೀವನದಲ್ಲಿ ಒಂದು ಸೊಗಸು, ತೃಪ್ತಿ, ಐಹಿಕ ಪಾರತ್ರಿಕಗಳ ಸಮನ್ವಯ ಸಾಧ್ಯವಾಗುವುದೋ, ಅಂಥ ಕರ್ಮಗಳನ್ನು ಅಂಥ ವಿಧಾನಗಳನ್ನು ಮಾತ್ರವೇ ಆಚಾರ್ಯರು ಇಲ್ಲಿ ಪ್ರತಿಪಾದಿಸಿದ್ದಾರೆ. ಅವರು ಈ ಗ್ರಂಥದ ನಾಲ್ಕನೆಯ ಅಧ್ಯಾಯದಲ್ಲಿ– ಉದ್ದಕ್ಕೂ ಎಲ್ಲ ದೇವತೆ ಗಳ ಮಂತ್ರಗಳನ್ನೂ ಬರೆದು ಕೊನೆಗೆ ಕೆಲವು ಹೋಮಾದಿವಿಧಿಗಳನ್ನೂ ಬರೆದು, ಉಪಸಂಹಾರರೂಪವಾಗಿ ಬರೆದ ಒಂದು ಮಾತಿನಿಂದ ಆಚಾರ್ಯರ ದೃಷ್ಟಿ ಎಂಥ ಅದ್ಭುತವಾದುದು, ಎಂಥ ವೈಜ್ಞಾನಿಕವಾದುದು ಎಂಬುದನ್ನು ತಿಳಿದು ದಿಗಿಲುಗೊಳ್ಳುತ್ತೇವೆ:

'ಅಕುರ್ವಂಶ್ಚ ಕ್ರಿಯಾ ಭಕ್ತ್ಯಾ ನಿರಪೇಕ್ಷೋ ಭಜನ್ ಹರಿಮ್ ।
ಸರ್ವಮೇತದವಾಪ್ನೋತಿ ವಿಶೇಷೇಣ ನ ಸಂಶಯಃ ॥'

ಈ ನೂರಾರು ಮಂತ್ರಗಳ ಜಪ, ಯಾವುದೋ ಒಂದು ಐಹಿಕಕಾಮನೆ ಗೋಸ್ಕರ ಹೋಮಾನುಷ್ಠಾನಾದಿಗಳು, ಅದರ ಸಿದ್ಧಿ, ಯಜ್ಞಯಾಗಾದಿಗಳು ಇವೆಲ್ಲ ಮನುಷ್ಯನಲ್ಲಿ ಒಂದು ತತ್ತ್ವದ ದಾರ್ಢ್ಯಕ್ಕಾಗಿ ವಿಹಿತಗಳಾಗಿವೆ. ಈ ನೈಮಿತ್ತಿಕ ಕರ್ಮಗಳನ್ನು ಮಾಡದೆ ಇದ್ದರೆ– ಆತನಿಗೇನೂ ಕರ್ಮ ಚ್ಯುತಿಯ ದೋಷ ತಟ್ಟಲಾರದು. ಆತ ಪತಿತನಾಗಲಾರ. ಪರತತ್ತ್ವದ ಮೇಲಿರತಕ್ಕ ಅಚಲಶ್ರದ್ಧೆ, ಪಕ್ವವಾದ ಅಂತಃಕರಣದಲ್ಲಿ ಮೂಡಿರುವ ಪ್ರಶಾಂತಿಮಯವಾದ ಅರಿವಿನ ಬೆಳಕು, ಆತನನ್ನು ಲೋಕದಿಂದ ಎತ್ತರಕ್ಕೇ ರಿಸಬಲ್ಲುದು. ಅವನು ತನ್ನಲ್ಲಿರುವ ಆ ಉನ್ನತಸಂಸ್ಕಾರದ ಬಲದಿಂದಲೇ ಈಯೆಲ್ಲ ಕರ್ಮಗಳ ಫಲವನ್ನೂ ಏಕೆ ಅದಕ್ಕೂ ಮಿಗಿಲಾದ ಫಲವನ್ನು ಪಡೆ ಯುವನು. ಹರಿಪ್ರೀತಿಗೆ ಪಾತ್ರನಾದವನ ಅನುಭಾವವೆಲ್ಲಿ? ಕಾಮ್ಯಕರ್ಮ ದಲ್ಲೇ ಪರಮಪದವಿಯನ್ನರಸುತ್ತಿರುವ ಈ ಮಂದಿಯೆಲ್ಲಿ? ಎಂದು ಆಚಾರ್ಯರು ತಂತ್ರಪಾರಮ್ಯವನ್ನು ಸ್ವಲ್ಪ ಅನಾದರದಿಂದಲೇ ಕಂಡಿದ್ದಾರೆ. ಮನುಷ್ಯನ

ಜೀವನತಾಂತ್ರಿಕವಾಗಿದ್ದಾಗ ಅದು ಯಾಂತ್ರಿಕವೂ ಆಗಿರುವುದು. ಯಾಂತ್ರಿಕವಾಗಿರದ, ನವೋನ್ಮೇಷಶಾಲಿಯಾದ, ಅಂತಃಕರಣಶುದ್ಧಿಗೆ ಸಾಧಕವಾದ ತಂತ್ರದ ಸಹಕಾರವಷ್ಟೇ ನಮಗೆ ಬೇಕಾದುದು. ಮನುಷ್ಯ ತಂತ್ರವನ್ನಾಳಬೇಕು; ತಂತ್ರವೇ ಮನುಷ್ಯನನ್ನಾಳಬಾರದು. ಆಚಾರ್ಯರು ನಮಗೆ ತಿಳಿಸಿದ ಈ ಸಮ್ಯಗ್ದೃಷ್ಟಿ–ಸಮ್ಯಕ್ಚಾರಿತ್ರಗಳು ಯಾವ ವೈಜ್ಞಾನಿಕವಿಚಾರಿಯನ್ನೂ ತಲೆದೂಗಿಸಬಲ್ಲುದು. ಅದು ನಿತ್ಯವೂ ನೂತನವಾದ ಪುರಾಣ ವಿಚಾರಧಾರೆ. ಎಂದೂ ಹಳಸದ ನುಡಿಮುತ್ತು.

ಭಾರತೀಯ ತತ್ತ್ವಶಾಸ್ತ್ರದ ಪರಂಪರೆಯಲ್ಲಿ ವಿಖ್ಯಾತನಾಮರಾದ ಶಂಕರ-ರಾಮಾನುಜ- ಮಧ್ವರಲ್ಲಿ ಆಚಾರ್ಯ ಶಂಕರರೂ, ಆಚಾರ್ಯ ಮಧ್ವರೂ ವೇದಾಂತಗಳಲ್ಲಿ ಹೇಗೋ ಹಾಗೆಯೇ ಈ ತಂತ್ರಪದ್ಧತಿಗಳಲ್ಲೂ ತಮ್ಮ ಪ್ರತಿಭೆಯ ವ್ಯಾಪ್ತಿಯನ್ನು ತೋರಿಸಿ ಅನುಯಾಯಿಗಳಿಗೆ ಮಹತ್ತರವಾದ ಉಪಕಾರವನ್ನೆಸಗಿದ್ದಾರೆ. ಆಚಾರ್ಯರಾಮಾನುಜರು ನಿತ್ಯಗ್ರಂಥ ಎಂಬೊಂದು ಆಚಾರಕ್ಕೆ ಸಂಬಂಧಪಟ್ಟ ಚಿಕ್ಕ ಕೃತಿಯನ್ನು ರಚಿಸಿದ್ದರೂ ಬೇರಾವ ವಿಶದವಾದ ತಂತ್ರಗ್ರಂಥವನ್ನೂ ಒರೆದಂತಿಲ್ಲ. ಆದರೂ– ಪಂಚರಾತ್ರದಂಥ ಸದಾಗಮಗಳು ಅಪ್ರಮಾಣ ಎಂಬ ಭಾವನೆ ಜನರಲ್ಲಿ ಮೂಡಿದ್ದಾಗ ಅದನ್ನು ತೀವ್ರವಾಗಿ ಖಂಡಿಸಿ, ತನ್ನ ಭಾಷ್ಯದಲ್ಲಿ ಅದರ ಪ್ರಾಮಾಣ್ಯವನ್ನು ವಿಸ್ತಾರವಾಗಿ ಸಮರ್ಥಿಸಿ, ಪಂಚರಾತ್ರ ಸಾತ್ತ್ವಿಕ ಪಂಥದ ತಂತ್ರ– ಅದನ್ನೇ ವೈಷ್ಣವರು ಬಳಸಬೇಕು, ಶಿವಪ್ರೋಕ್ತಗಳಾದ ತಂತ್ರಗಳೆಲ್ಲ– ಆ ಗ್ರಂಥಗಳಲ್ಲಿ ಹೇಳಿದಂತೆಯೇ ವ್ಯಾಮೋಹಕವಾಗಿವೆ ಎಂದು ಪ್ರಥಮವಾಗಿ ಪ್ರತಿಪಾದಿಸಿ ಸಾತ್ತ್ವಿಕ ತಂತ್ರದೆಡೆಗೆ ಜನರ ಗಮನವನ್ನು ಸೆಳೆದುದರಲ್ಲಿ ಅವರ ಪಾತ್ರವೇನೂ ಚಿಕ್ಕದಲ್ಲ.

## ತಂತ್ರಸಾರ–ತಂತ್ರಸಾರಸಂಗ್ರಹ

ಆಚಾರ್ಯರು ಈ ಗ್ರಂಥವನ್ನು ವಿಷ್ಣುಪ್ರೋಕ್ತವಾದ ತಂತ್ರಸಾರದಿಂದ ಆಯ್ದು ಬರೆದಿದ್ದಾರೆ ಎಂದು ಅವರ ಗ್ರಂಥಾರಂಭದಲ್ಲಿರುವ 'ಅಹ ದೇವೋ ರಮೋತ್ಸಂಗವಿಲಸತ್ಪಾದಪಲ್ಲವಃ' ಎಂಬ ಪದ್ಯದಿಂದಲೂ, 'ಅಥ ವಿಷ್ಣೂದಿತೇ ತಂತ್ರಸಾರೇ' ಎಂಬ ನಾಲ್ಕನೆ ಅಧ್ಯಾಯದ ಪ್ರಾರಂಭದಲ್ಲಿರುವ ಪದ್ಯದಿಂದಲೂ ತಿಳಿದುಬರುತ್ತದೆ. ಆದರೆ– ಆ ವಿಷ್ಣೂದಿತ ತಂತ್ರಸಾರ ನಮ್ಮ ಗಮನಕ್ಕೆಲ್ಲೂ ಬಿದ್ದಿಲ್ಲ. ಶೋಧನೆ ನಡೆಸಿದರೆ ಎಲ್ಲಾದರೂ ಪ್ರಾಚೀನ ಪುಸ್ತಕಾಲಯಗಳಲ್ಲಿ

ಸಿಗಲೂ ಬಹುದೇನೋ, ಸಿಕ್ಕದೆ ಇರುವ ಸಂಭವವೂ ಉಂಟು. ಆಚಾರ್ಯರು ಉದಾಹರಿಸಿದ ಹೆಚ್ಚಿನ ಪ್ರಮಾಣಗಳನ್ನು ನಾವಿಂದು ಕಳೆದುಕೊಂಡಿದ್ದೇವೆ. ಅದರ ಜತೆಗೆ ಈ ಗ್ರಂಥವೂ ಸೇರಿಕೊಂಡಿರಬಹುದು. ಪ್ರಾಚೀನ ಗ್ರಂಥಗಳ ಮೇಲೆ ನಮ್ಮ ಜನ ತಳೆದ ಅನಾಸ್ಥೆಯಿಂದಲೇ ಈ ದುರವಸ್ಥೆ ನಮಗೊದಗಿತು ಎನ್ನಬೇಕಾಗಿದೆ. ಅರಿಯದ ಜನ ಅಮೂಲ್ಯ ಪುಸ್ತಕಗಳನ್ನು ನೀರುಪಾಲು ಮಾಡಿದರು; ಅರಿತ ಜನವೂ– ಅದು ಓದುವುದಕ್ಕಿರುವ ಪುಸ್ತಕ ಎನ್ನುವ ಭಾವನೆಗಿಂತ ಮಿಗಿಲಾಗಿ ಪೂಜೆಗಿರುವ ಪುಸ್ತಕ ಎಂಬ ಕಲ್ಪನೆಯಿಂದ ಆ ಪರಂಪರೆಯನ್ನು ಕೆಡಿಸಿಬಿಟ್ಟರು.

ಇಲ್ಲಿ ಒಂದು ವಿಷಯವನ್ನು ಉಲ್ಲೇಖಿಸುವುದು ಅವಶ್ಯಕವಾಗಿದೆ. ಆಚಾರ್ಯರು ಕೆಲವು ಗ್ರಂಥಗಳನ್ನು ತಾಮ್ರದ ತಗಡಿನಲ್ಲಿ ಬರೆಯಿಸಿ 'ಸೇತುತಿಲ' (ಕಡ್ತಿಲ) ಎಂಬಲ್ಲಿ ಭೂಗತವಮಾಡಿಸಿದ್ದಾರೆ ಎಂದು ಪ್ರತೀತಿಯಿದೆ. ಇವತ್ತಿಗೂ ಆ ಕುಂಡಿಗೆ ತಾಮ್ರದ ಕಿಲುಬಿನ ವಾಸನೆ ಬರುವುದೂ ಇದಕ್ಕೆ ಸಾಕ್ಷಿಯಾಗಿದೆ. ಆಚಾರ್ಯರ ಶಿಷ್ಯರೇ ಆದ ಹೃಷೀಕೇಶತೀರ್ಥರು ಬರೆದ 'ಸಂಪ್ರದಾಯಪದ್ಧತಿ'ಯಲ್ಲೂ ಈ ಮಾತನ್ನು ಬರೆದಿದ್ದಾರೆ:

'ತತೋ ದಯಾವಾರಿನಿಧಿರ್ಗ್ರಾಮೇ ಸೇತುತಿಲಾಹ್ವಯೇ ।
ಸ್ವಶಾಸ್ತ್ರಗ್ರಂಥಮಕರೋದ್ಭೂಗತಂ ಪೂರ್ಣಶೇಮುಷಿಃ ॥'

ಇಲ್ಲಿ 'ಸ್ವಶಾಸ್ತ್ರಗ್ರಂಥ'ಗಳೆಂದರೆ ಅವರೇ ಬರೆದ ಸರ್ವಮೂಲಗ್ರಂಥಗಳೆಂದರ್ಥವಿರಲಾರದು. ಆ ಕೃತಿಗಳನ್ನು ಹೃಷೀಕೇಶರ ಕೈಯಿಂದಲೇ ಬರೆಯಿಸಿ ಪ್ರಚುರಪಡಿಸಿದ ಮೇಲೆ ಮತ್ತೆ ಅದನ್ನು ಭೂಗತಮಾಡುವ ಆವಶ್ಯಕತೆಯಾದರೂ ಏನಿರಬಹುದು? ಅದರಿಂದ ತನ್ನ ಶಾಸ್ತ್ರಕ್ಕೆ ಆಧಾರಗ್ರಂಥಗಳಾದ– ಈಗ ಉಪಲಬ್ಧವಿಲ್ಲದಿರುವ ಮೂಲರಾಮಾಯಣ ತಂತ್ರಸಾರಗಳಂಥ ಗ್ರಂಥಗಳನ್ನೆ ಅಲ್ಲಿ ಭೂಗತಮಾಡಿರಬಹುದೆ? ಇದು ವಿದ್ವಾಂಸರು ನಿರ್ಣಯಿಸಬೇಕಾದ ವಿಷಯ. ಅಂತೂ ಮೂಲಗ್ರಂಥ ಉಪಲಬ್ಧವಿರದಿದ್ದರೂ– ಈ ಸಂಗ್ರಹವೇ ಒಂದು ಸ್ವಯಂಪೂರ್ಣ ಕೃತಿಯಾಗಿದೆ. ಈಗ ಉಪಲಬ್ಧವಿರುವ ಇತರ ಸಾತ್ತ್ವಿಕ ತಂತ್ರಗಳಿಗೆ ಸಂವಾದಿಯಾಗಿರುವುದರಿಂದ ಯಾವನೂ ಈ ಗ್ರಂಥದ ಮೇಲೆ ನಿರ್ಮೂಲತ್ವಾಶಂಕೆಯನ್ನೂ ಮಾಡಲಾರ.

## ಗ್ರಂಥಪ್ರಮೇಯ

೪೦೦ ಶ್ಲೋಕಗಳ ಈ ಚಿಕ್ಕ ಗ್ರಂಥದಲ್ಲಿ ಏನಿದೆ? ಎಂದು ಪ್ರಶ್ನೆಯೇಳು

ವುದು ಸಹಜ. ಆದರೆ ಈ ಚಿಕ್ಕ ಗ್ರಂಥದಲ್ಲಿ ಏನಿಲ್ಲ? ಸಾವಿರಾರು ಶ್ಲೋಕ ಗಳ ಮಹಾತಂತ್ರಗಳಲ್ಲಿ ಏನನ್ನು ಪ್ರತಿಪಾದಿಸುತ್ತವೆಯೋ ಅದೆಲ್ಲ ಇದರ ಲ್ಲಡಕವಾಗಿದೆ. ಒಂದನೆಯ ಅಧ್ಯಾಯದಲ್ಲಿ— ಮಹಾಮಂತ್ರಗಳು— ಮತ್ತು ಪೂಜಾವಿಧಾನವನ್ನು ನಿರೂಪಿಸಿದ ಕ್ರಮ ಅಚ್ಚುಕಟ್ಟು ಇನ್ನಾವ ತಂತ್ರ ಗಳಲ್ಲೂ ಕಾಣಸಿಗದು. ಎರಡನೆಯ ಅಧ್ಯಾಯದಲ್ಲಿ ಕೇವಲ ೨೩ ಶ್ಲೋಕ ಗಳಲ್ಲಿ ಹೋಮವಿಧಾನಗಳನ್ನೂ, ಕುಂಡದ ಅಳತೆಗಳಲ್ಲವನ್ನೂ ಸಂಗ್ರಹಿಸಿದ ಕ್ರಮ ಅನ್ಯಾದೃಶವಾಗಿದೆ. ಇಷ್ಟು ಚೊಕ್ಕವಾಗಿ ಇಷ್ಟು ಚಿಕ್ಕದಾಗಿ ನಿರೂ ಪಿಸಬಲ್ಲ ಇನ್ನೊಂದು ತಂತ್ರಗ್ರಂಥ ಉದಾಹರಣೆಗಾದರೂ ಎಲ್ಲಿದೆ? ಈ ಗ್ರಂಥದ ಮೂರನೆಯ ಅಧ್ಯಾಯವೊಂದೇ ಒಂದು ಖನಿಯಂತಿದೆ. ದೇವಾ ಲಯಕ್ಕೆ ಸಂಬಂಧಪಟ್ಟ ಎಲ್ಲ ತಂತ್ರಗಳೂ ಆದರಲ್ಲಡಕವಾಗಿವೆ. ದೇವ ಸ್ಥಾನವನ್ನು ಎಲ್ಲಿ ಕಟ್ಟಬೇಕು? ಅದರ ಉದ್ದಳತೆಗಳೇನು? ಪ್ರತಿಮೆಯನ್ನು ಯಾವ ಶಿಲೆಯಿಂದ ಎಲ್ಲಿ ಕಡೆಯಬೇಕು? ಹೇಗೆ ಕಡೆಯಬೇಕು? ಅದರ ಅಂಗಾಂಗಗಳ ಅಳತೆ– ಲಕ್ಷಣಗಳೇನು? ಪ್ರತಿಷ್ಠೆಯ ವಿಧಿಯೇನು? ಮಂಡಲ ಗಳೆಂದರೇನು? ಸಹಸ್ರಕಲಶಾಭಿಷೇಕ ಮೊದಲಾದ ವಿಶೇಷ ವಿಧಿಗಳ ರೀತಿ ಯೆಂಥದು? ಉತ್ಸವ, ಜೀರ್ಣೋದ್ಧಾರ, ಅವಭೃತಸ್ನಾನಗಳ ರೀತಿ ಎಂಥದು? ಇವೆಲ್ಲವನ್ನೂ ಒಂದು ಅಧ್ಯಾಯದಲ್ಲಿ ಸಂಗ್ರಹಿಸಿದ ರೀತಿ ಸೊಗ ಸಾಗಿದೆ! ಒಟ್ಟಿನಲ್ಲಿ ದೇವಸ್ಥಾನಕ್ಕೆ ಸಂಬಂಧಪಟ್ಟ ವಿಷಯ ಏನುಬೇಕೆಂದರೂ ಅದು ಇಲ್ಲಿದೆ! 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ಕ್ವಚಿತ್'

ಎಲ್ಲ ತಂತ್ರಗಳೂ ಒಂದಲ್ಲ ಒಂದು ವಿಷಯವನ್ನು ಹಿಡಿದು ಹೊರಟಿರು ತ್ತವೆ ಹೊರತು ಇಷ್ಟು ವ್ಯಾಪಕವಾಗಿ ವಿಶ್ವತೋಮುಖವಾಗಿ– ನಿರ್ದಿಷ್ಟ ವಾಗಿ ವಿಷಯಗಳನ್ನು 'ಇದಮಿತ್ಥಂ' ಎಂದು ಪ್ರತಿಪಾದಿಸುವ ತಂತ್ರಗ್ರಂಥ ಪ್ರಾಯಃ ದುರ್ಲಭ. ದೇವಸ್ಥಾನದ ತಂತ್ರಗಳನ್ನಾದರೂ ತಂತ್ರಸಮು ಚ್ಚಯಾದಿಗಳಿಂದ ತಿಳಿದುಕೊಳ್ಳಬಹುದು– ಆದರೆ ವಾಸ್ತುಶಿಲ್ಪ, ಮೂರ್ತಿ ಶಿಲ್ಪದ ಕುರಿತು ಇಷ್ಟು ಅಧಿಕಾರವಾಣಿಯಿಂದ, ಸ್ಪಷ್ಟೋಕ್ತಿಯಿಂದ– ಕೆಲವೇ ಮಾತುಗಳಲ್ಲಿ ನಿರೂಪಿಸಿದ ತಂತ್ರಗ್ರಂಥವೆಲ್ಲಿದೆ? ಶಿಲ್ಪಶಾಸ್ತ್ರದ ಕುರಿತು ಸಂಸ್ಕೃತ ಸಾಹಿತ್ಯದಲ್ಲಿ ದೊರೆವ ಗ್ರಂಥಗಳು ಬೆರಳೆಣಿಕೆಗೆ ಸಿಕ್ಕುವಂಥವು. ವ್ಯಾಸರು ಪುರಾಣಗಳಲ್ಲಿ ಬರೆದ ಅಳತೆಗಳೂ ಅಸ್ಪಷ್ಟಗಳಾ ಗಿದ್ದು ವ್ಯಾಖ್ಯಾನಸಾಪೇಕ್ಷಗಳಾಗಿವೆ. ಅದರಿಂದ ಶಿಲ್ಪಶಾಸ್ತ್ರದ ಕುರಿತು ಇಷ್ಟು ವಿವರಗಳನ್ನಿತ್ತಿರುವುದು ಆಚಾರ್ಯರ ಕೃತಿಯ ಒಂದು ವೈಶಿಷ್ಟ್ಯ

ವಾಗಿದೆ. ಆಚಾರ್ಯರ ಈ ನಿರೂಪಣೆ ಎಷ್ಟು ಪ್ರೌಢವಾಗಿದೆಯೆಂದರೆ ಚಿತ್ರಕಲೆಯಲ್ಲಿ ಪ್ರವೇಶವಿಲ್ಲದ ಯಾವೊಬ್ಬನೂ ಆ ಭಾಗವನ್ನು ಚೊಕ್ಕವಾಗಿ ಅರ್ಥಮಾಡಿಕೊಳ್ಳಲಾರ! ಎಂದ ಮೇಲೆ ಆಚಾರ್ಯರಿಗೆ ಶಿಲ್ಪಶಾಸ್ತ್ರದಲ್ಲಿ ಎಷ್ಟು ಪರಿಜ್ಞಾನವಿರಬೇಡ! ಎಲ್ಲಿಯ ವೇದಾಂತ? ಎಲ್ಲಿಯ ತಂತ್ರಶಾಸ್ತ್ರ? ಎಲ್ಲಿಯ ಶಿಲ್ಪಕಲೆ? ಈ ವಿಶ್ವತೋಮುಖವಾದ ಪಾಂಡಿತ್ಯವನ್ನು ಒಬ್ಬ ಮನುಷ್ಯ ಒಂದು ಜೀವನದಲ್ಲಿ ಪಡೆಯಲು ಸಾಧ್ಯವೇ ಎಂದು ನಾವು ಬೆರಗಾಗು ವಂತಿದೆ. ಹೆಚ್ಚು ನಾಗರಿಕತೆಯೇನೂ ಮೂಡಿರದ ಉಡುಪಿಯ ಬಳಿಯ ಹಳ್ಳಿಯೊಂದರಲ್ಲಿ, ಅನಾಗರಿಕರ– ಅವಿದ್ಯಾವಂತರ ಪರಿಸರದಲ್ಲಿ ಇದ್ದ ವ್ಯಕ್ತಿ ಯೊಂದು– ಇಂಥ ಲೋಕಾತೀತ ಪಾಂಡಿತ್ಯವನ್ನು ಪಡೆದಿತ್ತು ಎಂದಾಗ ಆ ವ್ಯಕ್ತಿಯೂ ಲೋಕಾತೀತನೇ ಇರಬೇಕು ಎನ್ನುವ ಭಾವನೆ ವಿಚಾರಿಗಳಲ್ಲಿ ಮೂಡುತ್ತದೆ. ಯಾವ ಯೋಗಸಿದ್ಧ ಆಚಾರ್ಯರಿಗೆ ತಂತ್ರಶಾಸ್ತ್ರಗಳನ್ನು ಪ ದೇಶಿಸಿದ? ಯಾವ ಕಲಾವಿದ ಆಚಾರ್ಯರಿಗೆ ಈ ಕಲೆಗಳ ಅರಿವನ್ನು ತಂದು ಕೊಟ್ಟ? ಇದಕ್ಕೆ ಇತಿಹಾಸ ಏನುತ್ತರವೀಯಬಲ್ಲುದು? ಲೋಕೋತ್ತರ ವಾದ ಅತೀಂದ್ರಿಯಪ್ರಜ್ಞೆ ಮೊದಲಾದುವನ್ನು ಒಪ್ಪದೆ– ವೈಜ್ಞಾನಿಕರು ಇದಕ್ಕೆ ಏನುತ್ತರವನ್ನು ಕೊಡುವುದು ಸಾಧ್ಯ? ಶಂಕರಾಚಾರ್ಯರು– ಮಧ್ವಾಚಾರ್ಯರಂಥ ಅಲೌಕಿಕ ಪ್ರತಿಭಾನವುಳ್ಳ ವ್ಯಕ್ತಿಗಳನ್ನು ಪಡೆದ ಭಾರತಕ್ಕೆ ಈ ಲೋಕೋತ್ತರ ಪ್ರಜ್ಞೆಯ ಮೇಲೆ ಸಂಶಯವಿಲ್ಲ. ಮನುಷ್ಯನ ಅಳತೆಗೆ ಅಳವಿಗೆ ಮೀರಿದ ಯಾವುದೋ ಒಂದು ಪ್ರಜ್ಞಾಶಕ್ತಿಯ ಸನ್ನಿಧಾನ ವನ್ನು ಭಾರತದ ಜನ ನೆಮ್ಮುತ್ತಾರೆ. ನಾಸ್ತಿಕ್ಯಪ್ರಚುರವಾದ ಅಧ್ಯಯನ ದಿಂದ ಆಸ್ತಿಕ್ಯದ ಮೇಲೆ ಸವಾಲೆತ್ತಲು ಬಂದ ವಿವೇಕಾನಂದರಿಗೆ– ಶ್ರೀರಾಮ ಕೃಷ್ಣ ಪರಮಹಂಸರು ಯಾವ ಸರ್ವಮೂಲದ ಪಾಠವನ್ನು ಹೇಳಿ ಆಸ್ತಿಕ ನನ್ನಾಗಿ ಮಾಡಿದರು? ಅದರಿಂದಲೇ ಭಾರತದ ಜನ ಸ್ಥಿತಪ್ರಜ್ಞಾವಸ್ಥೆಯನ್ನು ನೆಮ್ಮುತ್ತಾರೆ. ಅದು ಎಂದೂ ನಿಷ್ಫಲವಾಗಲಾರದು. ಅವನು ಆಚರಿಸಿದ ಅಲ್ಪಯೋಗದಿಂದಲೂ ಅವನು ಅನಂತ ಫಲವನ್ನು ಪಡೆಯಬಲ್ಲ:

'ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥' (ಗೀತಾ)

ಇಲ್ಲಿ ಒಂದು ವಿಷಯವನ್ನು ತಿಳಿಸುವುದು ಆವಶ್ಯಕ. ಯೋಗಸಿದ್ಧಿಗೂ ತತ್ತ್ವಜ್ಞಾನಕ್ಕೂ ವಿಶೇಷ ಸಂಬಂಧವಿಲ್ಲ. ಮನಸ್ಸಿನ ಏಕಾಗ್ರತೆಯಿಂದ, ದೇಹದ ನಾಡಿಗಳ ಸಂಯಮನದಿಂದ ಒಂದು ತರದ ಯೋಗಸಿದ್ಧಿಯಾಗ

ಬಹುದು, ಆದರೆ ತತ್ತ್ವಜ್ಞಾನ ಇದಕ್ಕಿಂತ ವಿಲಕ್ಷಣವಾಗಿದೆ. 'ಯಮೇವೈಷ ವೃಣುತೇ ತೇನ ಲಭ್ಯಃ' ಅದರಿಂದ ಯೋಗಸಿದ್ಧರು ಎನ್ನುವವರು ಬೇರೆ ಬೇರೆ ಪಂಥಾನುಯಾಯಿಗಳಿರಬಹುದು. ಅದರಿಂದ 'ಏಕಮೇವ' ತತ್ತ್ವಕ್ಕೆ ಯಾವ ಹತಿಯೂ ಇಲ್ಲ. ಅದರಿಂದ ಸಾಮಾನ್ಯಜನ ಈ ವಿರುದ್ಧ ಪಂಥಗಳಿಂದ ದಿಗ್ಭ್ರಾಂತರಾಗಬೇಕಿಲ್ಲ.

ಪ್ರಕೃತ—ಈ ಕೃತಿಯ ಮೂರನೆಯ ಅಧ್ಯಾಯದಂತೆಯೇ ನಾಲ್ಕನೆಯ ಅಧ್ಯಾಯವೂ ಒಂದು ಅಮೂಲ್ಯ ಸಂಗ್ರಹ. ಕಲಿಯುಗದಲ್ಲೂ ಅತಿರಸ್ಕೃತಫಲಗಳಾದ ಪ್ರಧಾನಗಳಾದ ಎಲ್ಲ ಮಂತ್ರಗಳನ್ನೂ ಆಚಾರ್ಯರು ಇಲ್ಲಿ ಉದಾಹರಿಸಿದ್ದಾರೆ. ಸುಮಾರು ೭೦ ಮಂತ್ರಗಳನ್ನು ಈ ಒಂದು ಅಧ್ಯಾಯದಲ್ಲಿ ಆಚಾರ್ಯರು ಸಂಗ್ರಹಿಸಿದ್ದಾರೆ. ಎಲ್ಲ ಸಾತ್ತ್ವಿಕ ಮಂತ್ರಗಳೂ ಇದರಲ್ಲಿ ಅಂತರ್ಭೂತವಾದಂತೆಯೆ! ಆಚಾರ್ಯರು ಇಲ್ಲಿ ಉದಾಹರಿಸದ ಮಂತ್ರಗಳೂ ಇವೆ. ಅನ್ಯೋನ್ಯಲೈಂಗಿಕ ವ್ಯಾಪಾರ ನಿರತರಾದ ಗಣಪತಿ—ಪುಷ್ಟಿಯರ ಮಂತ್ರವನ್ನೊ, ಉಚ್ಛಿಷ್ಟಗಣಪತಿಯ ಮಂತ್ರವನ್ನೊ ಆಚಾರ್ಯರು ಇಲ್ಲಿ ಉಲ್ಲೇಖಿಸಿಲ್ಲ. ಬೆತ್ತಲೆಯಾದ ಕಿಡಿಗಣ್ಣಿನ ದುರ್ಗೆಯ ಮಂತ್ರವನ್ನು ಉಲ್ಲೇಖಿಸಿಲ್ಲ. ವಿಧವೆಯಾದ ಧೂಮಾವತಿಯ ಮಂತ್ರವನ್ನು ಉಲ್ಲೇಖಿಸಿಲ್ಲ. ಭೈರವಿ ಚಾಮುಂಡೆಯರ ಮಂತ್ರವನ್ನೇ— ಛಿನ್ನಮೂರ್ಧ-ಬಗಲೆಯರ ಮಂತ್ರವನ್ನೇ ಉಲ್ಲೇಖಿಸಿಲ್ಲ. ಆದರೆ ಇವನ್ನು ಉಲ್ಲೇಖಿಸದೆ-ಶುದ್ಧ ಸಾತ್ತ್ವಿಕ ತಂತ್ರವನ್ನು ಮೊಟ್ಟಮೊದಲು ಬರೆದು ಕಾತಂತ್ರದಿಂದ ಮೋಹಿತರಾದ ಜನರಿಗೆ ಒಳಿತಿನ ದಾರಿಯನ್ನು ತೋರಿಸಿದ್ದೇ ಆಚಾರ್ಯರ ಈ ಕೃತಿಯ ವೈಶಿಷ್ಟ್ಯ ಎಂದ ಮೇಲೆ ಈ ಕುದೈವಗಳ ಮಂತ್ರ ಆಚಾರ್ಯರ ತಂತ್ರದಲ್ಲಿ ಸುಳಿಯಲೂ ಆರದು.

ಆಚಾರ್ಯರ ಈ ಕೃತಿಯಲ್ಲಿ ಇನ್ನೂ ಒಂದು ಗಮನಿಸಬೇಕಾದ ಅಂಶವಿದೆ. ಆಚಾರ್ಯರೇ ಅಂದಂತೆ ಇದು ಸಂಕ್ಷೇಪ ಶಾಸ್ತ್ರ. ಇದರ ಒಂದೊಂದು ಶಬ್ದವೂ ತನ್ನ ಅರ್ಥವ್ಯಾಪ್ತಿಯಿಂದ ಬಹು ವಿಸ್ತಾರವಾಗಿದೆ. ಅಲ್ಪಾಕ್ಷರವೂ ಬಹ್ವರ್ಥವೂ ಆದ ಈ ಗ್ರಂಥದ ಅಲ್ಪಾಕ್ಷರತ್ವಕ್ಕೂ ಒಂದು ಅರ್ಥವಿದೆ, ಆನುಪೂರ್ವಿಗೂ ಒಂದು ಅರ್ಥವಿದೆ. ಉದಾಹರಣೆಗೆ ನಾಲ್ಕನೆಯ ಅಧ್ಯಾಯದ ಕೊನೆಯಲ್ಲಿ— ನಾಲ್ಕೈದು ಶ್ಲೋಕಗಳಲ್ಲಿ ನಿರೂಪಿತವಾದ ನ್ಯಾಸಸ್ಥಾನಗಳು. ಈ ಪದ್ಯಗಳಲ್ಲಿರುವ ಪ್ರತಿಯೊಂದು ಪದದ ಆನುಪೂರ್ವಿಗೂ ಒಂದು ವಿಶಿಷ್ಟವಾದ ಅರ್ಥವಿದೆ. ಪೂರ್ವದಲ್ಲಿ ಪ್ರತಿಪಾದಿತಗಳಾದ ಸುಮಾರು ೭೦ ಮಂತ್ರ

ಗಳಿಗೆಲ್ಲ ಒಂದೇ ಬಾರಿ– ಇಷ್ಟು ಮಿತವಾದ ಪದಗಳಿಂದ– ನಾಲ್ಕೈದು ಪದ್ಯ ಗಳಲ್ಲೆ ನ್ಯಾಸದ ವಿಧಿ–ಸ್ಥಾನಗಳನ್ನು ತುಂಬಬೇಕಾದರೆ ಆ ಪಾಂಡಿತ್ಯ ಎಂಥದು! ನಾನು ಅಭ್ಯಸಿಸಿದ ಬೇರೆ ಎಲ್ಲ ತಂತ್ರಗಳಲ್ಲೂ ಇಷ್ಟು ವಿಷಯ ವನ್ನು ನಿರೂಪಿಸುವುದಕ್ಕಾಗಿ ಕಮ್ಮಿಯೆಂದರೆ ೨೦೦ ಪದ್ಯಗಳನ್ನಾದರೂ ಉಪಯೋಗಿಸಿದ್ದಾರೆ. ಆ ಇನ್ನೂರು ಪದ್ಯಗಳಲ್ಲಿ ಉಕ್ತವಾದವುಗಳಲ್ಲಿ ಒಂದಂಶವನ್ನೂ ಬಿಡದೆ ಈ ಐದಾರು ಪದ್ಯಗಳಲ್ಲಿ ಆಚಾರ್ಯರು ನಿರೂಪಿಸಿ ದ್ದಾರೆ. ಆಚಾರ್ಯರ ಕ್ಲೃಪ್ತಿ ಅಂಥದು! ಇಂಥ ಪಾಂಡಿತ್ಯವನ್ನು ಅರಿತು ಅರಗಿಸಿಕೊಳ್ಳದ ಜನ ಅದರ ಕಡೆಗೆ ಅನಾದರದ ದೃಷ್ಟಿಯನ್ನು ಬೀರಿದರೆ ಅದು ಯಾರ ತಪ್ಪು? 'ನೈಷ ಸ್ಥಾಣೋರಪರಾಧಃ ಯದೇನಮಂಧೋ ನ ಪಶ್ಯತಿ'. ಕುರುಡ ಮರಕ್ಕೆ ಡಿಕ್ಕಿ ಹೊಡೆದು ತಲೆ ಜಜ್ಜಿಕೊಂಡಾಗ ಮರವನ್ನು ಹಳಿದರೇನು ಬಂತು?

## ಮೂಲ ಮತ್ತು ಅನುವಾದ

ಇಂಥ ಒಂದು ಅಪೂರ್ವಕೃತಿ, ಕನ್ನಡಿಗರೇ ಆದ ಆಚಾರ್ಯರು ಬರೆದ ಮಹಾಕೃತಿ ಕನ್ನಡಕ್ಕೆ ಬರದಿರುವುದು ನ್ಯಾಯವೇ? ಎಂಬ ಆಶಯದಿಂದ ಇದನ್ನು ಕನ್ನಡಿಸುವುದಕ್ಕೆ ಯತ್ನಿಸಿದೆ. ಆಚಾರ್ಯರ ಎಲ್ಲ ಆಶಯಗಳನ್ನು ಕನ್ನಡಿಸುವುದು ಅಳತೆಮೀರಿದ ವಿಚಾರ. ಆದರೂ ನಮ್ಮ ಬುದ್ಧಿ ಗ್ರಹಿಸು ವಷ್ಟನ್ನಾದರೂ ತಿಳಿದುಕೊಂಡು ಅದನ್ನು ತಿಳಿಯದ ಜನಕ್ಕೆ ತಿಳಿಸಬೇಕು, ನಾವು ತಿಂದು ತಣಿದ ಹಣ್ಣಿನ ರುಚಿಯನ್ನು ನಾಲ್ಕು ಮಂದಿಗೆ ತೋರಿಸ ಬೇಕು, ಎನ್ನುವ ಅಪೇಕ್ಷೆ ಈ ಅನುವಾದಕ್ಕೆ ಪ್ರೇರಣೆಯನ್ನಿತ್ತಿತು. ಮೂಲದ ಯಥಾಶ್ರುತ ಅರ್ಥವನ್ನು ಒತ್ತಟ್ಟಿಗೆ ಬರೆದು ಜತೆಗೆ ತಂತ್ರದ ಸಮಗ್ರದೃಷ್ಟಿಯ ಅಧ್ಯಯನದ ಆವಶ್ಯಕತೆಯ ದೃಷ್ಟಿಯಿಂದ ಬಹುತಂತ್ರತುಲನಾತ್ಮಕವಾದ, ಪರಿಶೀಲನಾತ್ಮಕವಾದ ಟಿಪ್ಪಣಿಯನ್ನು ಜತೆಗೆ ಸೇರಿಸಿದೆ. ವಿಶೇಷವಿಚಾರ ಗಳೇನಿದ್ದರೂ ಅವನ್ನು ಕೊನೆಯಲ್ಲಿ ವಿಸ್ತೃತವಾದ ಪರಿಶಿಷ್ಟದಲ್ಲಿ ಕಾಣಿಸಿ ದ್ದೇನೆ. ಅಂತೂ ಈ ಕೃತಿಯಲ್ಲಿ–ಪ್ರಾಚೀನರ ಪರಂಪರೆಯ ಸಮಾವೇಶವಿದೆ, ತಿಳಿವಿನ ತಣ್ಪಿದೆ, ಜ್ಞಾನದ ಭಂಡಾರವಿದೆ. ನಾವು 'ಅಡಗೂಲಜ್ಜಿ'ಯ ಕತೆ ಯನ್ನು ನೆಮ್ಮುವ ಹಳಬರಲ್ಲ, ೨೦ನೆಯ ಶತಮಾನದ ಸುಧಾರಕರು ಎಂದು ಕೊಳ್ಳುವ ಜನರೂ ಮನಸ್ಸಿಟ್ಟು ಪರಾಮರ್ಶಿಸಬೇಕಾದ ಪ್ರಮೇಯವಿದೆ.

---

ಶ್ರೀಃ



॥ ಶ್ರೀಕೃಷ್ಣಾಯ ನಮಃ ॥

## ಶ್ರೀಮದಾನಂದತೀರ್ಥಭಗವತ್ಪಾದಕೃತಃ

# ತಂತ್ರಸಾರಸಂಗ್ರಹಃ

---

### ಸಾರಸಂಗ್ರಹಃ

ಯತ್ಪಪಾಥ ಭಗವದ್ಗುಣಪಾಥೋ
ಯತ್ಸತಾಮುಪಚಿಕಿಥ ಪ್ರಿಯತತ್ತ್ವಮ್ ।
ವಿಪ್ಲವೇಽಪಿ ಜಗತಾಂ ಯದಜಾಗ-
ಸ್ತೇನ ಮಧ್ವ ಸುಹೃದಧ್ವನಿ ಭೂಯಾಃ ॥ ೧ ॥

ಯಜ್ಜಗಂಥ ಭವಸಾಗರಪಾರಂ
ಯಜ್ಜಿಗೇಥ ಸದಸಿ ಪ್ರತಿಪಕ್ಷಮ್ ।
ಯನ್ಮಮಾರ್ಜಿಥ ಸತಾಮವಿತೃಪ್ತಿಂ
ತತ್ತ್ವಯಿ ಸ್ವಯಮನಕ್ತಿ ಮನೋ ಮೇ ॥ ೨ ॥

ಹರಿಚರಣಮೇವ ನಂತುಂ ಜಿಹ್ರೀಮಸ್ತದ್ಬಲೇನ ವಾ ರಂತುಮ್ ।
ಅಪಿಪೀಮಹಿ ವಯಮಸ್ಮಾನ್ ತಚ್ಛಿಷ್ಯೋಽಹಂ ಗುರುರ್ಭವಾನೇವ ॥ ೩ ॥

ಕೃಷ್ಣಸ್ಯ ತಂತ್ರಸಾರಂ ಯತ್ಸಂಜಗ್ರಹಿಥ ತಸ್ಯ ಸುಪ್ರಿಯಃ ಶಿಷ್ಯಃ ।
ವಶ್ಯಸ್ತವ ಚಾಮುಷ್ಯ ವ್ಯಾಚಿಖ್ಯಾಸಾಮಿ ಮುಗ್ಧವೈದುಷ್ಯಃ ॥ ೪ ॥

ಆನಂದತೀರ್ಥಗ್ರಥಿತೇ ತಂತ್ರಸಾರಸ್ಯ ಸಂಗ್ರಹೇ ।
ಪಾಂಡಿತ್ಯದುರಭಿಷ್ವಂಗಾತ್ಕೇ ಕೇ ನಾಬಿಭ್ರಮನ್ಮುಧಾ ॥ ೫ ॥

## ಪ್ರಥಮೋಽಧ್ಯಾಯಃ

**ಜಯತ್ಯಬ್ಜಭವೇಶೇಂದ್ರವಂದಿತಃ ಕಮಲಾಪತಿಃ ।**
**ಅನಂತವಿಭವಾನಂದಶಕ್ತಿಜ್ಞಾನಾದಿಸದ್ಗುಣಃ ॥ ೧ ॥**

ಬ್ರಹ್ಮರುದ್ರಾದಿಗಳಿಂದ ಪ್ರಣತನೂ, ಜ್ಞಾನಾನಂದಾದಿ ಅನಂತಗುಣಭರಿತನೂ ಆದ ಲಕ್ಷ್ಮೀರಮಣನೇ ಸರ್ವೋತ್ತಮನು.

**ವಿಧಿಂ ವಿಧಾಯ ಸರ್ಗಾದೌ ತೇನ ಪೃಷ್ಟೋಽಬ್ಜಲೋಚನಃ ।**
**ಪ್ರಾಹ ದೇವೋ ರಮೋತ್ಸಂಗವಿಲಸತ್ಪಾದಪಲ್ಲವಃ ॥ ೨ ॥**

ರಮೆಯ ತೊಡೆಯಲ್ಲಿ ನಸೆಯಾದ ಪಾದವಿಟ್ಟು ಪವಡಿಸಿದ, ತಾವರೆಗಣ್ಣಿನ ಶ್ರೀಹರಿ ಸೃಷ್ಟಿಯ ಮೊದಲು ತನ್ನಿಂದ ಉದಿಸಿದ ಚತುರ್ಮುಖನಿಂದ ತತ್ತ್ವದ ಕುರಿತು ಕೇಳಲ್ಪಟ್ಟವನಾಗಿ ಇಂತೆಂದನು.

**ಅಹಮೇಕೋಽಖಿಲಗುಣೋ ವಾಚಕಃ ಪ್ರಣವೋ ಮಮ ।**
**ಅಕಾರಾದ್ಯತಿಶಾಂತಾಂತಃ ಸೋಽಯಮಷ್ಟಾಕ್ಷರೋ ಮತಃ ॥ ೩ ॥**

ಗುಣಪೂರ್ಣನಾದವನು ನಾನೊಬ್ಬನೆ. ಅಕಾರ, ಉಕಾರ, ಮಕಾರ, ನಾದ, ಬಿಂದು, ಕಲಾ[೧], ಶಾಂತ, ಅತಿಶಾಂತ[೨] ಎಂಬ ಎಂಟು ಅಕ್ಷರಗಳನ್ನೊಳಗೊಂಡ ‘ಓಂಕಾರ’ವೂ ನನ್ನನ್ನೇ ಪ್ರತಿಪಾದಿಸುತ್ತದೆ.

**ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್ ।**
**ಪರಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ॥ ೪ ॥**

ಆ ಎಂಟು ವರ್ಣಗಳುಳ್ಳ ಓಂಕಾರ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಆತ್ಮ, ಅಂತರಾತ್ಮ, ಪರಾತ್ಮ[೩], ಜ್ಞಾನಾತ್ಮ ಎಂಬ ನನ್ನ[೪] ಎಂಟು ರೂಪಗಳನ್ನು ಪ್ರತಿಪಾದಿಸುತ್ತದೆ.

---

೧ ಇದನ್ನೆ ‘ಘೋಷ’ ಎಂದೂ ಕರೆವುದುಂಟು. ಎಂತಲೇ ಬೃಹದಾರಣ್ಯಕಭಾಷ್ಯದ ಟಿಪ್ಪಣಿಯಲ್ಲಿ ‘ಅಕಾರೋಕಾರಮಕಾರನಾದಬಿಂದುಘೋಷಶಾಂತಾತಿಶಾಂತಾಃ’ ಎಂದೂ ಪಾಠವಿದೆ.

೨ ಓಂಕಾರದ ಮತ್ತು ವರ್ಣಗಳ ಕುರಿತಾದ ತಾಂತ್ರಿಕವಿವರಣೆಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

೩ ಈ ರೂಪವನ್ನು ‘ಪರಮಾತ್ಮ’ ಎಂದೂ ಕರೆವುದುಂಟು.

೪ ಇಲ್ಲಿ ಬರತಕ್ಕ ‘ನನ್ನ’, ‘ನಾನು’ ಮುಂತಾದ ಸರ್ವನಾಮಪದವು ಎಲ್ಲ ಕಡೆಯಲ್ಲೂ ಇದು ಭಗವದ್ವಚನವಾಗಿರುವುದರಿಂದ ಭಗವದ್ರೂಪವನ್ನೇ ಹೇಳುತ್ತದೆ.

**ತದ್ರೂಪಭೇದಾಃ ಪಂಚಾಶನ್ಮೂರ್ತಯೋ ಮಮ ಚಾಪರಾಃ ।**
**ಪಂಚಾಶದ್ವರ್ಣವಾಚ್ಯಾಸ್ತಾ ವರ್ಣಾಸ್ತಾರಾರ್ಣ[1]ಭೇದಿತಾಃ ॥ ೫ ॥**

ಈ ಎಂಟು ರೂಪಗಳಿಂದ ವ್ಯಕ್ತಗಳಾದ ನನ್ನ ಐವತ್ತು ರೂಪಗಳುಂಟು. ಪ್ರಣವದ[2] ಎಂಟು ಅಕ್ಷರಗಳಿಂದ ವ್ಯಕ್ತಗಳಾದ 'ಅಕಾರ'ದಿಂದ 'ಳಕಾರ'ದ ವರೆಗಿನ ಐವತ್ತು ಅಕ್ಷರಗಳು ಈ ಐವತ್ತು ರೂಪಗಳನ್ನು ಪ್ರತಿಪಾದಿಸುತ್ತವೆ.

**ದ್ವಿರಷ್ಟಪಂಚಕಚತುಃಪಂಚೇತ್ಯೇವಾಷ್ಟವರ್ಗಗಾಃ ।**

ಹದಿನಾರು ಸ್ವರಾಕ್ಷರಗಳು ಒಂದು ಗುಂಪು, ಕವರ್ಗದಿಂದ ಪವರ್ಗದ ವರೆಗಿನ ಐವ್ವೈದು ಅಕ್ಷರಗಳ ಐದು ಗುಂಪು, ಯರಲವಗಳದೊಂದು, ಶಷಸಹಳ— ಈ ಐದು ಅಕ್ಷರಗಳದೊಂದು; ಹೀಗೆ ಐವತ್ತು ಅಕ್ಷರಗಳು ಎಂಟು ಗುಂಪಾಗಿವೆ.

**ಅಜ ಆನಂದ ಇಂದ್ರೇಶಾವುಗ್ರ ಊರ್ಜ ಋತಂಭರಃ ॥ ೬ ॥**

**ೠಘಲ್ಲೃಶೌ ಲ್ಲೄಜಿರೇಕಾತ್ಮೈರ ಓಜೋಭೃದೌರಸಃ ।**
**ಅಂತೋಽರ್ಧಗರ್ಭಃ ಕಪಿಲಃ ಖಪತಿರ್ಗರುಡಾಸನಃ ॥ ೭ ॥**

**ಘರ್ಮೋ ಙಸಾರಶ್ಚಾರ್ವಂಗಶ್ಛಂದೋಗಮ್ಯೋ ಜನಾರ್ದನಃ ।**
**ಝಟಿತಾರಿರ್ಞಮಷ್ಟಂಕೀ ಠಲಕೋ ಡರಕೋ ಢರೀ ॥ ೮ ॥**

**ಣಾತ್ಮಾ ತಾರಸ್ಥಭೋ ದಂಡೀ ಧನ್ವೀ ನಮ್ಯಃ ಪರಃ ಫಲೀ ।**
**ಬಲೀ ಭಗೋ ಮನುರ್ಯಜ್ಞೋ ರಾಮೋ ಲಕ್ಷ್ಮೀಪತಿರ್ವರಃ ॥ ೯ ॥**

**ಶಾಂತಸಂವಿಚ್ಛಡ್ಗುಣಶ್ಚ ಸಾರಾತ್ಮಾ ಹಂಸಳಾಳುಕೌ ।**
**ಪಂಚಾಶನ್ಮೂರ್ತಯಸ್ತ್ವೇತಾ ಮಮಾಕಾರಾದಿಲಕ್ಷಕಾಃ ॥ ೧೦ ॥**

ಅಕಾರಾದಿವರ್ಣವಾಚ್ಯಗಳಾದ ಆ ಐವತ್ತು ರೂಪಗಳ ಹೆಸರು ಈತೆರನಾಗಿದೆ[3]

---

೧ ತಾರಃ=ಓಂಕಾರಃ । ಅರ್ಣಃ=ವರ್ಣಃ । "ಅರ್ಣಃ=A letter (of the alphabet); ಪಂಚಾಶದರ್ಣೋ ಮನುರೀರಿತಃ" (V. S. Apte)

೨ ಓಂಕಾರವನ್ನೆ ಪ್ರಣವವೆಂದೂ ತಾರವೆಂದೂ ಕರೆಯುತ್ತಾರೆ.

೩ ಈ ಹೆಸರುಗಳ ಅರ್ಥವಾಗಲಿ, ಈ ರೂಪಗಳ ನಿರ್ದಿಷ್ಟ ಲಕ್ಷಣವಾಗಲಿ ಎಲ್ಲೂ ಸ್ಪಷ್ಟವಾಗಿದ್ದಂತಿಲ್ಲ. ಎಂತಲೇ ಇವುಗಳ ಅರ್ಥವನ್ನು ಇಲ್ಲಿ ವಿವರಿಸಿಲ್ಲ. ಕೆಲವು ಹೆಸರುಗಳ ನಿಷ್ಪತ್ತಿ ಬೇರೆಡೆ ಉಲ್ಲಿಖಿತವಾಗಿದ್ದರೆ ಅದನ್ನು ಮಾತ್ರ ಬರೆಯಲಾಗಿದೆ. ಶಂಕರಾಚಾರ್ಯರ ನಿಷ್ಪತ್ತಿಯನ್ನೂ ಅವಿರುದ್ಧವಾಗಿದ್ದಲ್ಲಿ ಉಲ್ಲೇಖಿಸಿದ್ದೇನೆ.

### ೧ ಅಕಾರ

೧ ಅಜಃ[1]
೨ ಆನಂದಃ[2]
೩ ಇಂದ್ರಃ
೪ ಈಶಃ
೫ ಉಗ್ರಃ[3]
೬ ಊರ್ಜಃ
೭ ಋತಂಭರಃ
೮ ೠಘಃ[4]
೯ ಌಶಃ[5]
೧೦ ೡಜಿಃ[6]
೧೧ ಏಕಾತ್ಮಾ

---

೧ 'ಅಜಃ ಸರ್ವೇಶ್ವರಃ ಸಿದ್ಧಃ'
'ಅಜೋ ಮಹಾರ್ಹಃ ಸ್ವಾಭಾವ್ಯಃ' (ಸಹಸ್ರನಾಮ)
'ನ ಜಾಯತ ಇತ್ಯಜಃ, ನ ಜಾತೋ ನ ಜನಿಷ್ಯತ ಇತಿ ಶ್ರುತೇಃ'
(ಶಾಂಕರಸಹಸ್ರನಾಮಭಾಷ್ಯ)
'ನಹಿ ಜಾತೋ ನ ಜಾಯೇಽಹಂ ನ ಜನಿಷ್ಯೇ ಕದಾಚನ ।
ಕ್ಷೇತ್ರಜ್ಞಃ ಸರ್ವಭೂತಾನಾಂ ತಸ್ಮಾದಹಮಜಃ ಸ್ಮೃತಃ ॥' (ಮಹಾಭಾರತ)
೨ 'ಆನಂದೋ ನಂದನೋ ನಂದಃ' (ಸ. ನಾ.)
'ಆನಂದಃ ಸ್ವರೂಪಮಸ್ಯೇತ್ಯಾನಂದಃ । ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತೀತಿ ಶ್ರುತೇಃ' (ಶಾಂ. ಭಾ.)
೩ 'ಉಗ್ರಃ ಸಂವತ್ಸರೋ ದಕ್ಷಃ' (ಸ. ನಾ.)
'ಸೂರ್ಯಾದೀನಾಮಪಿ ಭಯಹೇತುತ್ವಾದುಗ್ರಃ । ಭೀಷೋದೇತಿ ಸೂರ್ಯ ಇತಿ ಶ್ರುತೇಃ' (ಶಾಂ. ಭಾ.)
೪ ೠಃ=A Danava or demon. (V. S. Apte)
೫ ಌ=ind. the earth (V S. Apte) ಶಂ=ಸುಖಂ ತಸ್ಯಾ ಅನೇನ ತಾದೃಶಃ ।
೬ ೡ=Siva (V. S. Apte) 'ಜಿ ಜಯೇ'. ಇಲ್ಲಿ ಪಾಣಿನಿಯ ಸಿದ್ಧಾಂತದಂತೆ ೡ ಎಂಬ ದೀರ್ಘಾಕ್ಷರವಿಲ್ಲ. 'ಌವರ್ಣಸ್ಯ ದೀರ್ಘಾಭಾವಾತ್' (ಸಿ. ಕೌ.) ಆದರೆ ಈ ಅಕ್ಷರ ತಂತ್ರಶಾಸ್ತ್ರದಲ್ಲಿ ಪರಿಗೃಹೀತವಾಗಿದೆ. ಅಭಿನವಗುಪ್ತನೆಂಬ ಶೈವತಾಂತ್ರಿಕನೂ ತನ್ನ 'ತಂತ್ರಸಾರ' ಎಂಬ ಗ್ರಂಥದಲ್ಲಿ ೡ ಎಂಬ ಅಕ್ಷರವನ್ನುಲ್ಲೇಖಿಸಿದ್ದಾನೆ—
'ತದೇತದ್ವರ್ಣಚತುಷ್ಟಯಂ ಉಭಯಚ್ಛಾಯಾಧಾರಿತ್ವಾತ್ ನಪುಂಸಕಮ್।'
ಮಹಾಮಹೋಪಾಧ್ಯಾಯ ಕೃಷ್ಣಾನಂದವಾಗೀಶಭಟ್ಟಾಚಾರ್ಯನು ಬರೆದ 'ತಂತ್ರಸಾರ'ದಲ್ಲೂ 'ರಾಶಿಚಕ್ರ'ದಲ್ಲಿ ೡಕಾರವು ಸೇರಿದೆ– "ಋ ಌ ೡ ಮಿಥುನಃ ।"
ಮುಗ್ಧಬೋಧವ್ಯಾಕರಣದಲ್ಲಿಯೂ ೡಕಾರ ಅಂಗೀಕೃತವಾಗಿದೆ. ಎಂತಲೇ 'ೡಕಾರಃ ತಂತ್ರಮತೇ ಮುಗ್ಧಬೋಧಮತೇ ಚ ಸ್ವರವರ್ಣಭೇದಃ' ಎಂದು ವಾಚಸ್ಪತ್ಯದಲ್ಲಿ ಉಲ್ಲೇಖವಿದೆ.
ಌ ೡ ಈ ಅಕ್ಷರಗಳನ್ನು ಸಾಮಾನ್ಯವಾಗಿ ಕೆಲವರು 'ಲ್ಋ' 'ಲ್ೠ' ಎಂಬಂತೆ ಉಚ್ಚರಿಸುವುದುಂಟು. ಆದರೆ ಅವುಗಳನ್ನು ಸಾಮಾನ್ಯವಾಗಿ 'ಲ್' 'ಳ್' ಎಂದೇ

೧೨ ಐರಃ

೧೩ ಓಜೋಭೃತ್[೧]

೧೪ ಔರಸಃ[೨]

೧೫ ಅಂತಃ[೩]

೧೬ ಅರ್ಥಗರ್ಭಃ

## ೨ ಉಕಾರ

೧೭ ಕಪಿಲಃ[೪]

೧೮ ಖಪತಿಃ[೫]

೧೯ ಗರುಡಾಸನಃ

೨೦ ಘರ್ಮಃ

೨೧ ಙನಾರಃ[೬]

## ೩ ಮಕಾರ

೨೨ ಚಾರ್ವಂಗಃ

೨೩ ಛಂದೋಗವ್ಯಃ

---

ಉಚ್ಚರಿಸುವುದು ನ್ಯಾಯ. ಆದರಿಂದಲೇ ಈ ಎರಡು ಅಕ್ಷರಗಳನ್ನು 'ದುಃಸ್ಪೃಷ್ಟ' ಗಳೆಂದು ಶಿಕ್ಷಾಶಾಸ್ತ್ರದಲ್ಲಿ ವ್ಯವಹರಿಸಿದ್ದಾರೆ– 'ದುಃಸ್ಪೃಷ್ಟಶ್ಚೇತಿ ವಿಜ್ಞೇಯಃ ಲೃಕಾರಃ' ಎಂದು. ದುಃಸ್ಪೃಷ್ಟ ಎಂದರೆ ಈಷತ್ಸ್ಪೃಷ್ಟ ಎಂದೇ ಅರ್ಥ. ಯ ರ ಲ ವಗಳು ಮಾತ್ರ ಈಷತ್ಸ್ಪೃಷ್ಟಗಳು ಎಂದು ಶಿಕ್ಷಾಪದ್ಧತಿ.

'ಅಚೋಽಸ್ಪೃಷ್ಟಾ ಯಣಸ್ತ್ವೀಷತ್'

(ಸ್ವರಗಳು ಅಸ್ಪೃಷ್ಟಗಳಾಗಿವೆ. ಯ ರ ಲ ವಗಳು ಈಷತ್ಸ್ಪೃಷ್ಟಗಳು.) ಈಷತ್ಸ್ಪೃಷ್ಟಗಳಾದ ರ ಲಗಳ ಸಾಮ್ಯವಿಲ್ಲದಿದ್ದರೆ ಋ, ಲೃಗಳೂ ಈಷತ್ಸ್ಪೃಷ್ಟವಾಗಲು ಸಾಧ್ಯವಿಲ್ಲ. ಎಂತಲೇ ಅವುಗಳನ್ನು ಸಾಮಾನ್ಯವಾಗಿ 'ರ್' 'ಲ್' ಎಂಬಂತೇ ಉಚ್ಚರಿಸುವುದು ಸರಿಯಾಗಿ ಭಾಸವಾಗುತ್ತದೆ. ಅದರಿಂದಲೇ ಅಭಿನವಗುಪ್ತನು ಈ ಅಕ್ಷರಗಳನ್ನು 'ಉಭಯಚ್ಛಾಯಾಧಾರಿತ್ವಾತ್ ನಪುಂಸಕಂ' ಎಂದು ಉಲ್ಲೇಖಿಸಿದ. ಸ್ವರದಂತೆಯೂ ವ್ಯಂಜನದಂತೆಯೂ ಭಾನವಾಗುವುದರಿಂದ ಸ್ವಂತ ವ್ಯಕ್ತಿತ್ವವಿಲ್ಲದ ಈ ವರ್ಣ ಉಭಯಚ್ಛಾಯಾಧಾರಿಯೂ ನಪುಂಸಕವೂ ಆಗಿದೆ.

೧ 'ಓಜಸ್ತೇಜೋದ್ಯುತಿಧರಃ' (ಸ. ನಾ.)
'ಬಲಂ ಬಲವತಾಂ ಚಾಹಮಿತಿ ವಚನಾತ್' (ಶಾಂ. ಭಾ.)

೨ 'ಔ=Name of Shesha or Ananta' (V.S.Apte) ಸ ಏವ ರಸಾಯತೇ.

೩ ಪಾಣಿನಿಯ ನಿಯಮದ ಪ್ರಕಾರ ಈ ಶಬ್ದವನ್ನು 'ಅನ್ತ' ಎಂದು ಬರೆಯಬೇಕು. ಆಗ 'ಅಂ' ಎಂಬ ಅಕ್ಷರದ ಪ್ರಸಂಗವೇ ಉಳಿವುದಿಲ್ಲ. ಎಂತಲೇ ಎರಡು ಬಗೆಯಾಗಿ ಬರೆವುದೂ ಪ್ರಾಮಾಣಿಕಪದ್ಧತಿಯೆಂದು ಒಪ್ಪಬಹುದು.

೪ 'ಮಹರ್ಷಿಃ ಕಪಿಲಾಚಾರ್ಯಃ', 'ಸನಾತ್ಸನಾತನತಮಃ ಕಪಿಲಃ' (ಸ. ನಾ.)
'ಋಷಿಂ ಪ್ರಸೂತಂ ಕಪಿಲಮ್' (ಶ್ವೇತಾಶ್ವತರ). 'ಸಿದ್ಧಾನಾಂ ಕಪಿಲೋ ಮುನಿಃ' (ಗೀತಾ). 'ಕಪಿಲಾವತಾರೇ ಕಪಿಲನಾಮವಾನ್' (ಲಕ್ಷ್ಮಾಲಂಕಾರ).

೫ ಖಂ=ಇಂದ್ರಿಯಮ್

೬ 'ಙ=Desire, wish' (V· S. Apte)

೨೪ ಜನಾರ್ದನಃ[೧]

೨೫ ಝಾಟಿತಾರಿಃ

೨೬ ಞಾಮಃ[೨]

### ೪ ನಾದ

೨೭ ಟಂಕೀ[೩]

೨೮ ಠಲಕಃ

೨೯ ಡರಕಃ

೩೦ ಢರೀ

೩೧ ಣಾತ್ಮಾ[೪]

### ೫ ಬಿಂದು

೩೨ ತಾರಃ[೫]

೩೩ ಥಭಃ[೬]

೩೪ ದಂಡೀ

೩೫ ಧನ್ವೀ

೩೬ ನಮ್ಯಃ

### ೬ ಕಲಾ

೩೭ ಪರಃ

೩೮ ಫಲೀ[೭]

೩೯ ಬಲೀ

೪೦ ಭಗಃ[೮]

---

೧ 'ವಿಷ್ವಕ್ಸೇನೋ ಜನಾರ್ದನಃ' (ಸ. ನಾ.)

'ಜನಾನ್=ದುರ್ಜನಾನ್ ಅರ್ದಯತಿ=ಹಿನಸ್ತಿ, ನರಕಾದೀನ್ ಗಮಯತೀತಿ ವಾ ಜನಾರ್ದನಃ' (ಶಾಂ ಭಾ )

'ದುಷ್ಟಂ ಜನಂ ಮರ್ದಯತಿ' (ಲಕ್ಷ್ಮಾಲಂಕಾರ)

೨ 'ಞಾ=ಗಾಯನೇ' (ವಾಚಸ್ಪತ್ಯ) ಮೀಯತೇ ತೇನ.

೩ 'ಟಂಕ' ಎಂಬ ಶಬ್ದವು ಸಂಸ್ಕೃತದಲ್ಲಿ ಕೊಡಲಿ, ಖಡ್ಗ ಮೊದಲಾದ ಆಯುಧಗಳ ವಾಚಕವಾದರೂ ಅದರ ನಿರ್ದಿಷ್ಟವಾದ ಅರ್ಥ ಬೇರೆ. ಸುಮಾರು ಕೊಡಲಿಯಂತಿರುವ ಕಲ್ಲನ್ನು ಭೇದಿಸುವ ಆಯುಧಕ್ಕೆ 'ಟಂಕ' ಎಂದು ಹೆಸರು. ಒಟ್ಟಿನಮೇಲೆ 'ಟಂಕ' ಒಂದು ಆಯುಧವಿಶೇಷ ಎಂದಿಷ್ಟೇ ಇಟ್ಟುಕೊಳ್ಳುವುದು ಚೆನ್ನು.

೪ 'ಣಃ=Knowledge' (V. S. Apte)

೫ 'ಅಶೋಕಸ್ತಾರಣಸ್ತಾರಃ'

'ಭೂರ್ಭುವಃಸ್ವಸ್ತರುಸ್ತಾರಃ' (ಸ. ನಾ.)

ಗರ್ಭಜನ್ಮಜರಾಮೃತ್ಯುಲಕ್ಷಣಾದ್ಭಯಾತ್ತಾರಯತೀತಿ ತಾರಃ (ಶಾಂ. ಭಾ.)

೬ 'ಥ=ಮಂಗಲೇ' (ವಾಚಸ್ಪತ್ಯ) ತಾದೃಶೀ ಭಾ ಯಸ್ಯ.

೭ ಫಲೀ=ಪ್ರಶಸ್ತಫಾಲಃ । ಫಾಲೇಽಪಿ ಫಲಶಬ್ದೋಽಸ್ತಿ ಹೇಮಚಂದ್ರಾದೀನಾಮತ್ । ಪ್ರಶಂಸಾಯಾಮಿನಿಃ ।

೮ 'ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ॥
ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ ॥
ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಾಂಸ್ಯಶೇಷತಃ ।
ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ ॥' (ವಿಷ್ಣುಪುರಾಣ)

೪೧ **ಮನುಃ**[1]

**೭ ಶಾಂತ**

೪೨ **ಯಜ್ಞಃ**[2]

೪೩ **ರಾಮಃ**[3]

೪೪ **ಲಕ್ಷ್ಮೀಪತಿಃ**

೪೫ **ವರಃ**

**೮ ಅತಿಶಾಂತ**

೪೬ **ಶಾಂತಸಂವಿತ್**[4]

೪೭ **ಷಡ್ಗುಣಃ**

೪೮ **ಸಾರಾತ್ಮಾ**

೪೯ **ಹಂಸಃ**[5]

೫೦ **ಳಾಳುಕಃ**[6]

**ನಾರಾಯಣಾಷ್ಟಾಕ್ಷರಶ್ಚ ತಾರಾಷ್ಟಾಕ್ಷರಭೇದವಾನ್ ।**
**ಆದ್ಯೈಸ್ತಾರಚತುರ್ವರ್ಣೈರ್ಭಿನ್ನಾ ವ್ಯಾಹೃತಯಃ ಕ್ರಮಾತ್ ॥ ೧೧ ॥**

ನಾರಾಯಣಾಷ್ಟಾಕ್ಷರಮಂತ್ರದ ಎಂಟು ಅಕ್ಷರಗಳು ಓಂಕಾರದ ಎಂಟು ಅಕ್ಷರಗಳಿಂದಲೇ ವ್ಯಕ್ತವಾಗಿವೆ.[7] ಹೀಗೆಯೇ ವ್ಯಾಹೃತಿಗಳೂ ಓಂಕಾರದ ಮೊದಲಿನ ನಾಲ್ಕು ವರ್ಣಗಳಿಂದ ಕ್ರಮವಾಗಿ (ಅಕಾರದಿಂದ 'ಭೂಃ', ಉಕಾರದಿಂದ 'ಭುವಃ', ಮಕಾರದಿಂದ 'ಸ್ವಃ', ನಾದದಿಂದ 'ಭೂರ್ಭುವಃಸ್ವಃ') ಅಭಿವ್ಯಕ್ತವಾಗಿವೆ.

---

೧ 'ವಿಶ್ವಕರ್ಮಾ ಮನುಃ' (ಸ ನಾ )

'ಮನು ಅವಬೋಧನ ಇತಿ ಧಾತೋಃ ಸರ್ವಜ್ಞಃ' (ಶಾಂ. ಭಾ.)

೨ 'ಯಜ್ಞ ಇಜ್ಯೋ ಮಹೇಜ್ಯಶ್ಚ', 'ಯಜ್ಞೋ ಯಜ್ಞಪತಿರ್ಯಜ್ವಾ' (ಸ. ನಾ.) 'ಯಜ್ಞೋ ವೈ ವಿಷ್ಣುಃ' (ತೈ.ಸಂ.) 'ಯಜ್ಞಃ=ಯಜನಯೋಗ್ಯಃ' (ಲಕ್ಷ್ಮಾಲಂಕಾರ)

೩ 'ರಾಮೋ ವಿರಾಮಃ' (ಸ. ನಾ.)

'ನಿತ್ಯಾನಂದಲಕ್ಷಣೇಽಸ್ಮಿನ್ ಯೋಗಿನೋ ರಮಂತ ಇತಿ ರಾಮಃ । ಸ್ವೇಚ್ಛಯಾ ರಮಣೀಯಂ ವಪುರ್ವಹನ್ವಾ ದಾಶರಥೀ ರಾಮಃ ।' (ಶಾಂ. ಭಾ.)

'ರಮಂತೇ ಯೋಗಿನೋ ಯಸ್ಮಿನ್ನಿತ್ಯಾನಂದೇ ಚಿದಾತ್ಮನಿ ।
ಇತಿ ರಾಮಪದೇನೈತತ್ ಪರಂ ಬ್ರಹ್ಮಾಭಿಧೀಯತೇ ॥' (ಪದ್ಮಪುರಾಣ)

೪ 'ವೇದೋಕ್ತಶತಾನಂದಪರಂಪರಾಯಾ ಅಂತಃ=ಅಂತಿಮಃ' (ಲಕ್ಷ್ಮಾಲಂಕಾರ)

೫ 'ಮರೀಚಿರ್ದಮನೋ ಹಂಸಃ' (ಸ. ನಾ.) 'ಹಂಸಃ ಶುಚಿಷತ್' (ಕಠ)

೬ ಲೌಕಿಕ ವ್ಯವಹಾರಗಳಲ್ಲಿ 'ಳ' ಎಂಬಕ್ಷರ ಸಂಸ್ಕೃತದಲ್ಲಿ ಇಲ್ಲ. ಆದರೆ ವೈದಿಕ ಪ್ರಯೋಗದಲ್ಲಿ ಧಾರಾಳವಾಗಿದೆ. ಎಂತಲೇ ಈ ಪದದ ಅರ್ಥವನ್ನು ಲೌಕಿಕವಾಗಿ ನಿರೂಪಿಸುವುದು ಕ್ಲಿಷ್ಟ. 'ಲಾಲುಕಾ' ಎಂದರೆ ಕಂಠಾಭರಣವೆಂದರ್ಥವಿದೆ. ಅದನ್ನು ಧರಿಸಿದವನು 'ಲಾಲುಕ'ನಾಗಬಹುದು. ಲಾಲುಕನೇ ಳಾಳುಕನಾಗಿರಬಹುದೇನೊ!

೭ ಅಷ್ಟಾಕ್ಷರವು ಓಂಕಾರದಿಂದಲೇ ವ್ಯಕ್ತವಾಗಿರುವುದರಿಂದ ಓಂಕಾರದ ವರ್ಣದೇವತೆಗಳೇ ಈ ಮಂತ್ರದ ಅಕ್ಷರಗಳಿಂದಲೂ ಪ್ರತಿಪಾದ್ಯರಾಗಿದ್ದಾರೆ.

**ಅನಿರುದ್ಧಾದಿಕಾಸ್ತಾಸಾಂ ದೇವತಾ ವ್ಯುತ್ಕ್ರಮೇಣ ವಾ ।**
**ತಾಶ್ಚತುರ್ಮೂರ್ತಯಸ್ತ್ವೇವ ದ್ವಾದಶಾರ್ಣಪದೋದಿತಾಃ ॥ ೧೨ ॥**

ಆ ವ್ಯಾಹೃತಿಗಳಿಗೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಎಂಬ ಭಗವದ್ರೂಪಗಳು ದೇವತೆಗಳು. 'ಓಂ ನಮೋ ಭಗವತೇ ವಾಸುದೇವಾಯ' ಎಂಬ ವಾಸುದೇವದ್ವಾದಶಾಕ್ಷರಮಂತ್ರದ ನಾಲ್ಕು ಪದಗಳಿಂದಲೂ ವ್ಯತ್ಯಸ್ತವಾಗಿ ಈ ರೂಪಗಳೇ ('ಓಂ'ಕಾರದಿಂದ ವಾಸುದೇವ, 'ನಮಃ' ಪದದಿಂದ ಸಂಕರ್ಷಣ, 'ಭಗವತೇ' ಪದದಿಂದ ಪ್ರದ್ಯುಮ್ನ 'ವಾಸುದೇವಾಯ' ಪದದಿಂದ ಅನಿರುದ್ಧ) ಪ್ರತಿಪಾದಿತವಾಗಿವೆ.

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿಭ್ಯಸ್ತಥೈವ ಚ ।**
**ವಿಭೇದೋ ದ್ವಾದಶಾರ್ಣಾನಾಂ ಕೇಶವಾದ್ಯಾಶ್ಚ ದೇವತಾಃ ॥ ೧೩ ॥**

ವಾಸುದೇವಮಂತ್ರದ ಹನ್ನೆರಡು ವರ್ಣಗಳು ಅಷ್ಟಾಕ್ಷರಮಂತ್ರದ ಎಂಟು ಅಕ್ಷರಗಳಿಂದಲೂ ನಾಲ್ಕು ವ್ಯಾಹೃತಿಗಳಿಂದಲೂ ವ್ಯಕ್ತವಾಗಿವೆ. ಈ ಹನ್ನೆರಡು ವರ್ಣಗಳಿಗೆ ಕೇಶವಾದಿದ್ವಾದಶಮೂರ್ತಿಗಳೇ[1] ದೇವತೆಗಳು.

**ನಾರಾಯಣಾಷ್ಟಾಕ್ಷರಾಚ್ಚ ವ್ಯಾಹೃತಿತ್ರಿಗುಣಾತ್ಪುನಃ ।**
**ವೇದಮಾತಾ ತು ಗಾಯತ್ರೀ ದ್ವಿಗುಣಾ ದ್ವಾದಶಾಕ್ಷರಾತ್ ॥ ೧೪ ॥**

ಮೂರು ಬಾರಿ ಉಚ್ಚರಿಸಲ್ಪಟ್ಟ ಅಷ್ಟಾಕ್ಷರಮಂತ್ರಗಳಿಂದ, ವೇದಗಳಿಗೆ ಮಾತೃಸ್ಥಾನೀಯವಾದ, ಇಪ್ಪತ್ತನಾಲ್ಕು ಅಕ್ಷರಗಳುಳ್ಳ ಗಾಯತ್ರೀ ಮಹಾಮಂತ್ರವು ಅಭಿವ್ಯಕ್ತವಾಗಿದೆ.

**ಚತುರ್ವಿಂಶನ್ಮೂರ್ತಯೋಽಸ್ಯಾಃ ಕಥಿತಾ ವರ್ಣದೇವತಾಃ ।**
**ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ ॥ ೧೫ ॥**

ಕೇಶವಾದಿ ಚತುರ್ವಿಂಶತಿಮೂರ್ತಿಗಳೇ[2] ಗಾಯತ್ರಿಯ ವರ್ಣದೇವತೆಗಳು. ಗಾಯತ್ರಿಯ ಮೂರು ಪಾದಗಳಿಂದ ಪುರುಷಸೂಕ್ತದ ಮೂರು ವರ್ಗಗಳೂ, ಅವುಗಳಿಂದ ವೇದಗಳೂ ಅಭಿವ್ಯಕ್ತವಾಗಿವೆ.

---

೧ ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ, ಇವು ದ್ವಾದಶಮೂರ್ತಿಗಳು.

೨ ಕೇಶವಾದಿದ್ವಾದಶಮೂರ್ತಿಗಳು ಮತ್ತು ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಕೃಷ್ಣ, ಸೇರಿ ೨೪ ಮೂರ್ತಿಗಳು.

**ವೈದಿಕಾಃ ಸರ್ವಶಬ್ದಾಶ್ಚ ತಸ್ಮಾತ್ಸರ್ವಾಭಿಧೋಽಸ್ಮ್ಯಹಮ್ ।**
**ಪಂಚಾಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋಽಪಿ ಚ ॥ ೧೬ ॥**

ಇತಿಹಾಸಪುರಾಣಾದಿಸಮಸ್ತಶಬ್ದಪ್ರಪಂಚವೂ ವೇದಗಳಿಂದಲೇ ಅಭಿವ್ಯಕ್ತವಾಗಿದೆ. ನನ್ನ ಮುಖ್ಯ ವಾಚಕವಾದ ಓಂಕಾರದಿಂದ ಅಭಿವ್ಯಕ್ತಗಳಾದ ಐವತ್ತು ಅಕ್ಷರಗಳೇ ಶಬ್ದಪ್ರಪಂಚವನ್ನೆಲ್ಲ ವ್ಯಾಪಿಸಿರುವುದರಿಂದಲೂ ನಾನು ಸರ್ವಶಬ್ದವಾಚ್ಯನಾಗಿದ್ದೇನೆ.

**ಋಷಿಶ್ಚ ದೇವತೈಕೋಽಹಂ ತಾರಾದೀನಾಂ ವಿಶೇಷತಃ ।**
**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ ॥**

ಈ ಎಲ್ಲ ಮಂತ್ರಗಳಿಗೆ ಮುಖ್ಯತಃ ದ್ರಷ್ಟೃ ಮತ್ತು ಪ್ರತಿಪಾದ್ಯದೇವತೆ ನಾನೇ ಆಗಿದ್ದೇನೆ. ಓಂಕಾರ ಮತ್ತು ಅಷ್ಟಾಕ್ಷರಗಳ ಛಂದಸ್ಸು 'ದೈವೀ-ಗಾಯತ್ರೀ' ಎಂದು ಕರೆಯಲ್ಪಡುತ್ತದೆ.

**ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।**
**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥ ೧೮ ॥**
**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ।**
**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಃಶೇಷಶಕ್ತಿಮಾನ್ ॥ ೧೯ ॥**

ಉದಿಸುವ ಸೂರ್ಯನಂತೆ ಹೊಳೆವ, ಜ್ಞಾನಾನಂದಸ್ವರೂಪನಾದ, ಚಕ್ರ-ಶಂಖಗದಾಪದ್ಮಗಳನ್ನು ಧರಿಸಿರುವ, ಶ್ರೀಭೂಮಿಯರಿಂದ ಆಲಿಂಗಿತನಾದ, ವಿಶ್ವತೈಜಸಾದ್ಯಷ್ಟಮೂರ್ತಿಗಳ ನಡುವೆ ಕುಳಿತಿರುವ, ಬ್ರಹ್ಮ-ವಾಯು-ರುದ್ರ-ಶೇಷ-ಗರುಡ-ಇಂದ್ರಾದಿಗಳಿಂದ ಸೇವ್ಯನಾದ, ಪರಿಪೂರ್ಣಶಕ್ತಿಯಾದ ನನ್ನನ್ನು ಭಕ್ತಿಯಿಂದ ಧ್ಯಾನಿಸಬೇಕು.

**ಮೂರ್ತಯೋಽಷ್ಟಾವಪಿ ಧ್ಯೇಯಾಶ್ಚಕ್ರಶಂಖವರಾಭಯೈಃ ।**
**ಯುಕ್ತಾಃ ಪ್ರದೀಪವರ್ಣಾಶ್ಚ ಸರ್ವಾಭರಣಭೂಷಿತಾಃ ॥ ೨೦ ॥**

ದೀಪದಂತೆ ಬೆಳಗುವವರೂ, ಸರ್ವಾಭರಣಭೂಷಿತರೂ, ಚಕ್ರ, ಶಂಖ, ವರ, ಅಭಯಗಳನ್ನು ಧರಿಸಿರುವವರೂ ಆದ ವಿಶ್ವಾದಿ ಎಂಟು ಮೂರ್ತಿಗಳನ್ನೂ ಧ್ಯಾನಿಸಬೇಕು.

**ತಾದೃಗ್ರೂಪಾಶ್ಚ ಪಂಚಾಶಜ್ಜ್ಞಾನಮುದ್ರಾಭಯೋದ್ಯತಾಃ ।**
**ಟಂಕೀ ದಂಡೀ ಚ ಧನ್ವೀ ಚ ತತ್ತದ್ಯುಕ್ತಾಸ್ತು ವಾಮತಃ ॥ ೨೧ ॥**

ಅಜಾದಿಪಂಚಾಶನ್ಮೂರ್ತಿಗಳೂ ಕೂಡ ಮೇಲಿನ ರೂಪಗಳಂತೆಯೇ ಪ್ರಕಾಶಮಾನವಾಗಿವೆ. ತಮ್ಮೆರಡು ಕೈಗಳಿಂದ ಜ್ಞಾನಮುದ್ರೆ, ಅಭಯ ಮುದ್ರೆಗಳನ್ನು ಧರಿಸಿವೆ. ಆದರೆ ಟಂಕಿ, ದಂಡಿ, ಧನ್ವಿ ಈ ಮೂರು ರೂಪ ಗಳು ಮಾತ್ರ ಎಡದ ಕೈಯಲ್ಲಿ ಅಭಯಮುದ್ರೆಯ ಸ್ಥಾನದಲ್ಲಿ ಕೊಡಲಿಯನ್ನೂ, ದಂಡವನ್ನೂ, ಧನುಸ್ಸನ್ನೂ ಹಿಡಿದುಕೊಂಡಿವೆ.

**ವಾಸುದೇವಾದಿಕಾಃ ಶುಕ್ಲರಕ್ತಪೀತಾಸಿತೋಜ್ಜ್ವಲಾಃ ।**
**ಚಕ್ರಶಂಖಗದಾಬ್ಜೇತಃ ಪ್ರಥಮೋ ಮುಸಲೀ ಹಲೀ ॥ ೨೨ ॥**
**ಸಚಕ್ರಶಂಖಸ್ತ್ವಪರಸ್ತೃತೀಯಃ ಶಾರ್ಙ್ಗಬಾಣವಾನ್ ।**
**ಸಶಂಖಚಕ್ರಸ್ತುರ್ಯಸ್ತು ಚಕ್ರಶಂಖಾಸಿಚರ್ಮವಾನ್ ॥ ೨೩ ॥**

ಚತುರ್ಮೂರ್ತಿಗಳಲ್ಲಿ ವಾಸುದೇವನ ವರ್ಣ ಬಿಳಿ, ಸಂಕರ್ಷಣನದು ಕೆಂಪು, ಪ್ರದ್ಯುಮ್ನನದು ಹಳದಿ, ಅನಿರುದ್ಧನದು ನೀಲ. ವಾಸುದೇವನು ಚಕ್ರಶಂಖಗದಾಪದ್ಮಗಳನ್ನು ಧರಿಸಿದ್ದಾನೆ; ಸಂಕರ್ಷಣನು ಚಕ್ರಶಂಖಹಲ-ಮುಸಲಗಳನ್ನು ಧರಿಸಿದ್ದಾನೆ; ಪ್ರದ್ಯುಮ್ನನು ಶಂಖಚಕ್ರಧನುರ್ಬಾಣ ಗಳನ್ನು ಧರಿಸಿದ್ದಾನೆ; ಅನಿರುದ್ಧನು ಚಕ್ರಶಂಖಖಡ್ಗಚರ್ಮಧಾರಿಯಾಗಿದ್ದಾನೆ.

**ಕೇಶವೋ ಮಧುಸೂದನಃ ಸಂಕರ್ಷಣದಾಮೋದರೌ ।**
**ಸವಾಸುದೇವಪ್ರದ್ಯುಮ್ನಾ ದಕ್ಷೋರ್ಧ್ವಕರಶಂಖಿನಃ ॥ ೨೪ ॥**

ಕೇಶವ, ಮಧುಸೂದನ, ಸಂಕರ್ಷಣ, ದಾಮೋದರ, ವಾಸುದೇವ, ಪ್ರದ್ಯುಮ್ನ—ಈ ಆರು ಮೂರ್ತಿಗಳು ಮೇಲಿನ ಬಲಗೈಯಲ್ಲಿ ಶಂಖವನ್ನು ಧರಿಸಿವೆ.

**ವಿಷ್ಣುರ್ಮಾಧವಾನಿರುದ್ಧಪುರುಷೋತ್ತಮಾಧೋಕ್ಷಜಾಃ ।**
**ಜನಾರ್ದನಶ್ಚ ವಾಮೋರ್ಧ್ವಕರಸ್ಥಿತದರಾ ಮತಾಃ ॥ ೨೫ ॥**

ವಿಷ್ಣು, ಮಾಧವ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ಜನಾ-ರ್ದನ—ಈ ಆರು ಮೂರ್ತಿಗಳು ಮೇಲಿನ ಎಡಗೈಯಲ್ಲಿ ಶಂಖವುಳ್ಳವುಗಳು.

**ಗೋವಿಂದಶ್ಚ ತ್ರಿವಿಕ್ರಮಃ ಸಶ್ರೀಧರಹೃಷೀಕೇಶಾಃ ।**
**ನೃಸಿಂಹಶ್ಚಾಚ್ಯುತಶ್ಚೈವ ವಾಮಾಧಃಕರಶಂಖಿನಃ ॥ ೨೬ ॥**

ಗೋವಿಂದ, ತ್ರಿವಿಕ್ರಮ, ಶ್ರೀಧರ, ಹೃಷೀಕೇಶ, ನೃಸಿಂಹ, ಅಚ್ಯುತ—ಈ ಆರು ರೂಪಗಳು ಕೆಳಗಿನ ಎಡಗೈಯಲ್ಲಿ ಶಂಖವನ್ನು ಧರಿಸಿವೆ.

**ವಾಮನಃ ಸನಾರಾಯಣಃ ಪದ್ಮನಾಭ ಉಪೇಂದ್ರಕಃ ।**
**ಹರಿಃ ಕೃಷ್ಣಶ್ಚ ದಕ್ಷಾಧಃಕರೇ ಶಂಖಧರಾಮತಾಃ ॥ ೨೭ ॥**

ವಾಮನ, ನಾರಾಯಣ, ಪದ್ಮನಾಭ, ಉಪೇಂದ್ರ, ನೃಸಿಂಹ, ಅಚ್ಯುತ– ಈ ಆರು ರೂಪಗಳು ಕೆಳಗಿನ ಬಲಗೈಯಲ್ಲಿ ಶಂಖವನ್ನು ಧರಿಸಿವೆ.

**ಶಂಖಚಕ್ರಗದಾಪದ್ಮಧರಾಶ್ಚೈತೇ ಹಿ ಸರ್ವಶಃ ।**
**ಕ್ರಮವ್ಯುತ್ಕ್ರಮಪದ್ಮಾದಿಗದಾದಿವ್ಯುತ್ಕ್ರಮಸ್ತಥಾ ।**
**ಅರ್ಧಕ್ರಮಃ[೧] ಸಾಂತರಶ್ಚ[೨] ಷಟ್ಸು ಷಟ್ಸ್ವರಿಪೂರ್ವಿಣಾಮ್[೩] ॥೨೮॥**

ಶಂಖಚಕ್ರಗದಾಪದ್ಮಧಾರಿಗಳಾದ ಈ ೨೪ ಮೂರ್ತಿಗಳ ಪ್ರತ್ಯೇಕ ಲಕ್ಷಣವು ಈ ತೆರನಾಗಿದೆ. ಆರಾರು ಮೂರ್ತಿಗಳ ನಾಲ್ಕು ಗುಂಪು ಹಿಂದೆ ಮಾಡಲಾಗಿದೆ. ಅವುಗಳಲ್ಲಿ ಒಂದೊಂದನ್ನು ಹೀಗೆ ಗುರುತಿಸಬಹುದು—

೧ ಶ್ಲೋಕದಲ್ಲಿ ಮೊದಲು ಹೇಳಿದಂತೆ ಕ್ರಮವಾಗಿ ಚಕ್ರಗದಾಪದ್ಮಗಳು.
೨ ವ್ಯುತ್ಕ್ರಮವಾಗಿ ಪದ್ಮಗದಾಚಕ್ರಗಳು.
೩ ಪದ್ಮಾದಿವ್ಯುತ್ಕ್ರಮವಾಗಿ ಪದ್ಮಚಕ್ರಗದಾಗಳು.
೪ ಗದಾದಿವ್ಯುತ್ಕ್ರಮವಾಗಿ ಗದಾಚಕ್ರಪದ್ಮಗಳು.
೫ ಅರ್ಧಕ್ರಮವಾಗಿ ಚಕ್ರಪದ್ಮಗದಾಗಳು.
೬ ಸಾಂತರವಾಗಿ ಗದಾಪದ್ಮಗಳನ್ನು ನಡುವಿನಲ್ಲಿರಿಸಿ ಗದಾಪದ್ಮಚಕ್ರಗಳು.

ಈ ಆರು ರೂಪಗಳಲ್ಲೂ ಮೊದಲನೆಯ ಆಯುಧ ಶಂಖವೇ ಆಗಿದೆ. ಉಳಿದ ಆಯುಧಗಳ ಕ್ರಮ ಮೇಲೆ ಹೇಳಿದಂತಿದೆ.

ಮೂಲೋಕ್ತವಾದ ಆಯುಧಲಕ್ಷಣಗಳನ್ನು ಈ ರೀತಿ ನಿಷ್ಕರ್ಷಿಸಬಹುದು:[೪]

| | | |
|---|---|---|
| ೧ | ಕೇಶವ | ಶಂಖಚಕ್ರಗದಾಪದ್ಮ[೫] |
| ೨ | ನಾರಾಯಣ | ಪದ್ಮಗದಾಚಕ್ರಶಂಖ |
| ೩ | ಮಾಧವ | ಚಕ್ರಶಂಖಪದ್ಮಗದಾ |

---

೧ ಅರ್ಧಕ್ರಮಃ=ಶಂಖಚಕ್ರಯೋಃ ಕ್ರಮಃ । ಗದಾಪದ್ಮಯೋರ್ವ್ಯುತ್ಕ್ರಮಃ ।

೨ ಸಾಂತರಃ=ಅಂತರಾ ಗದಾಪದ್ಮವಿಯೋಜಿತೌ ಶಂಖಚಕ್ರೌ ।

೩ ಅರಿಪೂರ್ವಿಣಾಂ=ಚಕ್ರಾದೀನಾಮಾಯುಧಾನಾಮ್ ।

೪ ಚತುರ್ವಿಂಶತಿ ಮೂರ್ತಿಗಳ ಲಕ್ಷಣೋಪೇತವಾದ ಚಿತ್ರವನ್ನೂ, ವಿಷಯವಿವರಣೆಯನ್ನೂ ಪರಿಶಿಷ್ಟದಲ್ಲಿ ಕಾಣಬಹುದು.

೫ ಮೇಲಿನ ಬಲಗೈಯಿಂದ ಆಯುಧಗಳನ್ನು ಪ್ರದಕ್ಷಿಣಾಕಾರವಾಗಿ ಪರಿಗಣಿಸಬೇಕು.

| | | |
|---|---|---|
| ೪ | ಗೋವಿಂದ | ಗದಾಪದ್ಮಶಂಖಚಕ್ರ |
| ೫ | ವಿಷ್ಣು | ಪದ್ಮಶಂಖಚಕ್ರಗದಾ |
| ೬ | ಮಧುಸೂದನ | ಶಂಖಪದ್ಮಗದಾಚಕ್ರ |
| ೭ | ತ್ರಿವಿಕ್ರಮ | ಗದಾಚಕ್ರಶಂಖಪದ್ಮ |
| ೮ | ವಾಮನ | ಚಕ್ರಗದಾಪದ್ಮಶಂಖ |
| ೯ | ಶ್ರೀಧರ | ಚಕ್ರಗದಾಶಂಖಪದ್ಮ |
| ೧೦ | ಹೃಷೀಕೇಶ | ಚಕ್ರಪದ್ಮಶಂಖಗದಾ |
| ೧೧ | ಪದ್ಮನಾಭ | ಪದ್ಮಚಕ್ರಗದಾಶಂಖ |
| ೧೨ | ದಾಮೋದರ | ಶಂಖಗದಾಚಕ್ರಪದ್ಮ |
| ೧೩ | ಸಂಕರ್ಷಣ | ಶಂಖಪದ್ಮಚಕ್ರಗದಾ |
| ೧೪ | ವಾಸುದೇವ | ಶಂಖಚಕ್ರಪದ್ಮಗದಾ |
| ೧೫ | ಪ್ರದ್ಯುಮ್ನ | ಶಂಖಗದಾಪದ್ಮಚಕ್ರ |
| ೧೬ | ಅನಿರುದ್ಧ | ಗದಾಶಂಖಪದ್ಮಚಕ್ರ |
| ೧೭ | ಪುರುಷೋತ್ತಮ | ಪದ್ಮಶಂಖಗದಾಚಕ್ರ |
| ೧೮ | ಅಧೋಕ್ಷಜ | ಗದಾಶಂಖಚಕ್ರಪದ್ಮ |
| ೧೯ | ನರಸಿಂಹ | ಪದ್ಮಗದಾಶಂಖಚಕ್ರ |
| ೨೦ | ಅಚ್ಯುತ | ಪದ್ಮಚಕ್ರಶಂಖಗದಾ |
| ೨೧ | ಜನಾರ್ದನ | ಚಕ್ರಶಂಖಗದಾಪದ್ಮ |
| ೨೨ | ಉಪೇಂದ್ರ | ಗದಾಚಕ್ರಪದ್ಮಶಂಖ |
| ೨೩ | ಹರಿ | ಚಕ್ರಪದ್ಮಗದಾಶಂಖ |
| ೨೪ | ಕೃಷ್ಣ | ಗದಾಪದ್ಮಚಕ್ರಶಂಖ |

**ವರ್ಣಾನಾಂ ದೇವತಾನಾಂ ಚ ನಿತ್ಯತ್ವಾನ್ನ ಕ್ರಮಃ ಸ್ವತಃ ।**
**ವ್ಯಕ್ತಿಕ್ರಮಂ ಬ್ರಹ್ಮಬುದ್ಧಾವಪೇಕ್ಷ್ಯ ಕ್ರಮ ಉಚ್ಯತೇ ॥ ೨೯ ॥**

ವಸ್ತುತಃ ಅಕಾರಾದಿವರ್ಣಗಳೂ, ಅವುಗಳ ದೇವತೆಗಳೂ ನಿತ್ಯಗಳಾದುದರಿಂದ ಒಂದರ ನಂತರ ಇನ್ನೊಂದು ಹುಟ್ಟಿತು ಎನ್ನುವಂತಿಲ್ಲ. ಎಲ್ಲ ವರ್ಣಗಳೂ ಎಲ್ಲ ಭಗವದ್ರೂಪಗಳೂ ಎಲ್ಲ ಕಾಲದೇಶಗಳಲ್ಲೂ ಇವೆ. ಆದರೂ ಬ್ರಹ್ಮದೇವರ ಬುದ್ಧಿಯಲ್ಲಿ ಅಭಿವ್ಯಕ್ತಿಯಾಗುವ ಕ್ರಮವನ್ನಿಟ್ಟುಕೊಂಡು ವರ್ಣಗಳಲ್ಲೂ ದೇವತೆಗಳಲ್ಲೂ ಪೂರ್ವಾಪರಭಾವವನ್ನು ಹೇಳುವರು.

**ಸಮಾಸವ್ಯಾಸಯೋಗೇನ ವ್ಯಾಹೃತೀನಾಂ ಚತುಷ್ಟಯಮ್ ।**
**ಸತ್ಯಂ ಚಾಂಗಾನಿ ತಾರಸ್ಯ ಪ್ರೋಚ್ಯಂತೇಽಷ್ಟಾಕ್ಷರಸ್ಯ ಚ ॥ ೩೦ ॥**
**ಕೃದ್ಧಮಹಾವೀರದ್ಯುಸಹಸ್ರಸಹಿತೋಲ್ಕಕಾಃ ।**
**ಚತುರ್ಥ್ಯಂತಾ ಹೃದಾದೀನಿ ಪೃಥಗ್ರೂಪಾಣಿ ತಾನಿ ಚ ।**
**ವಿಷ್ಣೋರೇವಾತ್ಮಭೇದೇಽಪಿ ತದೈಶ್ವರ್ಯಾತ್ತದನ್ಯವತ್ ॥ ೩೧ ॥**

'ಭೂಃ' 'ಭುವಃ' 'ಸ್ವಃ' ಎಂದು ಪ್ರತ್ಯೇಕವಾಗಿ ಮೂರು ವ್ಯಾಹೃತಿಗಳು; 'ಭೂರ್ಭುವಃಸ್ವಃ' ಎಂದು ಸಮುದಿತವಾದ ಒಂದು ವ್ಯಾಹೃತಿ–ಹೀಗೆ ನಾಲ್ಕು ವ್ಯಾಹೃತಿಗಳೂ 'ಸತ್ಯಂ' ಎಂಬ ಪದವೂ ಓಂಕಾರದ ಅಂಗನ್ಯಾಸ ಮಂತ್ರಗಳು.[೧]

ಚತುರ್ಥೀ ವಿಭಕ್ತ್ಯಂತಗಳಾದ 'ಕೃದ್ಧೋಲ್ಕಾಯ', 'ಮಹೋಲ್ಕಾಯ', 'ವೀರೋಲ್ಕಾಯ', 'ದ್ಯೂಲ್ಕಾಯ', 'ಸಹಸ್ರೋಲ್ಕಾಯ'–ಇವು ಐದು ಅಷ್ಟಾಕ್ಷರದ ಅಂಗನ್ಯಾಸಮಂತ್ರಗಳು.[೨] ಹೃದಯಾದಿಗಳಲ್ಲಿ ಸನ್ನಿಹಿತವಾಗಿರುವುದರಿಂದ ಹೃದಯಾದಿಪದವಾಚ್ಯಗಳೂ ಕೃದ್ಧೋಲ್ಕಾದಿನಾಮಕಗಳೂ ಆದ ಬೇರೆ ಐದು ಭಗವದ್ರೂಪಗಳುಂಟು. ವಸ್ತುತಃ ಭಗವದ್ರೂಪಗಳೆಲ್ಲ ಒಂದೇ ಆದರೂ ಆತನ ಅಚಿಂತ್ಯಶಕ್ತಿಯಿಂದಲೇ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುವುವು.

**ಚಕ್ರಶಂಖವರಾಭೀತಿಹಸ್ತಾನ್ಯೇತಾನಿ ಸರ್ವಶಃ ।**
**ಮೂಲರೂಪಸವರ್ಣಾನಿ ಕೃಷ್ಣವರ್ಣಾ ಶಿಖೋಚ್ಯತೇ ।**
**ಚತುರ್ವಿಂಶನ್ಮೂರ್ತಯಶ್ಚ ಮೂಲರೂಪಸವರ್ಣಕಾಃ ॥ ೩೨ ॥**

ಕೃದ್ಧೋಲ್ಕಾದಿಪಂಚರೂಪಗಳೂ ಚಕ್ರ, ಶಂಖ, ವರ, ಅಭಯಮುದ್ರೆಗಳನ್ನು ಧರಿಸಿವೆ. ಕೇಶವಾದಿಚತುರ್ವಿಂಶತಿಮೂರ್ತಿಗಳು ಮತ್ತು ಕೃದ್ಧೋಲ್ಕ, ಮಹೋಲ್ಕ, ದ್ಯೂಲ್ಕ, ಸಹಸ್ರೋಲ್ಕರು ಮೂಲರೂಪದಂತೆ ಸೂರ್ಯಸದೃಶ

---

೧ ಅಂಗನ್ಯಾಸ ಈ ತೆರನಾಗಿದೆ— ಭೂಃ ಹೃದಯಾಯ ನಮಃ । ಭುವಃ ಶಿರಸೇ ಸ್ವಾಹಾ । ಸ್ವಃ ಶಿಖಾಯೈ ವೌಷಟ್ । ಭೂರ್ಭುವಃಸ್ವಃ ಕವಚಾಯ ಹುಮ್ । ಸತ್ಯಂ ಅಸ್ತ್ರಾಯ ಫಟ್ ॥

೨ ಅಷ್ಟಾಕ್ಷರದ ಅಂಗನ್ಯಾಸ ಈ ತೆರನಾಗಿದೆ— ಕೃದ್ಧೋಲ್ಕಾಯ ಹೃದಯಾಯ ನಮಃ । ಮಹೋಲ್ಕಾಯ ಶಿರಸೇ ಸ್ವಾಹಾ । ವೀರೋಲ್ಕಾಯ ಶಿಖಾಯೈ ವೌಷಟ್ । ದ್ಯೂಲ್ಕಾಯ ಕವಚಾಯ ಹುಮ್ । ಸಹಸ್ರೋಲ್ಕಾಯ ಅಸ್ತ್ರಾಯ ಫಟ್ ॥

ಅಂಗನ್ಯಾಸದ ವಿವರಗಳ ಮತ್ತು ಮಂತ್ರಾರ್ಥಗಳ ಕುರಿತು ಟಿಪ್ಪಣಿಯನ್ನು ಪರಿಶಿಷ್ಟದಲ್ಲಿ ಕಾಣಬಹುದು.

ಪ್ರಕಾಶರು. ಶಿಖೆಯಲ್ಲಿ ಸನ್ನಿಹಿತವಾದ ವೀರೋಲ್ಕವೆಂಬ ಭಗವದ್ರೂಪ ಪಾತ್ರ ಕಪ್ಪುಬಣ್ಣವುಳ್ಳದ್ದಾಗಿದೆ.

**ಆದಿವರ್ಣತ್ರಯಂ ನಾಭಿಹೃಚ್ಛಿರಸ್ಸು ಯಥಾಕ್ರಮಮ್ ।**
**ನ್ಯಸನೀಯಂ ಚ ತದ್ವರ್ಣದೇವತಾಧ್ಯಾನಪೂರ್ವಕಮ್ ॥ ೩೩ ॥**

ಓಂಕಾರದ ಮೊದಲ ಮೂರು ವರ್ಣಗಳಾದ ಅಕಾರ, ಉಕಾರ, ಮಕಾರಗಳ ನ್ಯಾಸವನ್ನು ಅವುಗಳ ದೇವತೆಗಳಾದ ವಿಶ್ವತೈಜಸಪ್ರಾಜ್ಞರನ್ನು ಧ್ಯಾನಿಸಿ ನಾಭಿಹೃದಯಶಿರಸ್ಸುಗಳಲ್ಲಿ ಮಾಡಬೇಕು.[೧]

**ಪಜ್ಜಾನುನಾಭಿಹೃದಯವಾಜ್ಯಾಸಾನೇತ್ರಕೇಷು ಚ ।**
**ಅಷ್ಟಾಕ್ಷರಾಣಾಂ ನ್ಯಾಸಃ ಸ್ಯಾದ್ವ್ಯಾಹೃತೀನಾಂ ಪ್ರಜಾಪತಿಃ ॥ ೩೪ ॥**
**ಮುನಿಶ್ಛಂದಸ್ತು ಗಾಯತ್ರೀ ದೇವತಾ ಭಗವಾನ್ ಹರಿಃ ।**
**ಉದ್ಯದಾದಿತ್ಯವರ್ಣಶ್ಚ ಜ್ಞಾನಮುದ್ರಾಭಯೋದ್ಯತಃ ॥ ೩೫ ॥**

ಅಷ್ಟಾಕ್ಷರಮಂತ್ರದ ಎಂಟು ಅಕ್ಷರಗಳ ನ್ಯಾಸವನ್ನು ಕ್ರಮವಾಗಿ ಕಾಲು, ಮೊಣಕಾಲು, ಹೊಕ್ಕುಳು, ಎದೆ, ಬಾಯಿ, ಮೂಗು, ಕಣ್ಣು, ತಲೆಗಳಲ್ಲಿ ಮಾಡಬೇಕು[೨]. ವ್ಯಾಹೃತಿಗಳಿಗೆ ಬ್ರಹ್ಮನು ಋಷಿ[೩], ಛಂದಸ್ಸು ಗಾಯತ್ರಿ[೪], ಉದಿಸುತ್ತಿರುವ ಸೂರ್ಯನಂತೆ ಪ್ರಕಾಶಮಾನನಾದ, ಜ್ಞಾನಮುದ್ರೆ ಅಭಯಮುದ್ರೆಗಳನ್ನು ಧರಿಸಿರುವ ಭಗವಾನ್ ಶ್ರೀಹರಿಯೇ ದೇವತೆ.[೫]

**ತಾರೇಣ ವ್ಯಾಹೃತೀಭಿಶ್ಚ ಜ್ಞೇಯಾನ್ಯಂಗಾನಿ ಪಂಚ ಚ ।**
**ನಾಭಿಹೃತ್ಕೇಷು ಸರ್ವೇಷು ಚತಸ್ರೋ ವ್ಯಾಹೃತೀರ್ನ್ಯಸೇತ್ ॥೩೬॥**

---

೧ ನ್ಯಾಸವು ಈ ರೀತಿಯಾಗಿದೆ– ಅಂ ವಿಶ್ವಾಯ ನಮಃ (ನಾಭೌ) । ಉಂ ತೈಜಸಾಯ ನಮಃ (ಹೃದಯೇ) । ಮಂ ಪ್ರಾಜ್ಞಾಯ ನಮಃ (ಶಿರಸಿ) ॥

೨ ನ್ಯಾಸಕ್ರಮ ಈ ತೆರನಾಗಿದೆ—ಓಂ ವಿಶ್ವಾಯ ನಮಃ (ಪಾದಯೋಃ) । ನಂ ತೈಜಸಾಯ ನಮಃ(ಜಾನ್ವೋಃ) । ಮೋಂ ಪ್ರಾಜ್ಞಾಯ ನಮಃ(ನಾಭೌ) । ನಾಂ ತುರ್ಯಾಯ ನಮಃ (ಹೃದಯೇ) । ರಾಂ ಆತ್ಮನೇ ನಮಃ (ವಾಚಿ) । ಯಂ ಅಂತರಾತ್ಮನೇ ನಮಃ (ನಾಸಾಯಾಂ) । ಣಾಂ ಪರಮಾತ್ಮನೇ ನಮಃ (ನೇತ್ರಯೋಃ) । ಯಂ ಜ್ಞಾನಾತ್ಮನೇ ನಮಃ (ಶಿರಸಿ) ॥ 'ವಿನ್ಯಸೇದ್ವರ್ಣಮೇಕೈಕಂ ಬಿಂದ್ವಂತಂ' ಎಂದಿರುವುದರಿಂದ ಪ್ರತಿವರ್ಣದ ಕೊನೆಗೂ ಬಿಂದುವನ್ನು ಸೇರಿಸಿಕೊಳ್ಳಬೇಕು.

೩ ಮಂತ್ರದ್ರಷ್ಟೃ ಎಂಬ ಅರ್ಥದಲ್ಲಿ ಋಷಿಪದವನ್ನು ಶಾಸ್ತ್ರದಲ್ಲಿ ಬಳಸುತ್ತಾರೆ.

೪ ಛಂದಸ್ಸಿನ ವಿವರವನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

೫ ಪ್ರತಿಪಾದ್ಯದೇವತೆಯನ್ನು ದೇವತೆಯೆಂದು ವ್ಯವಹರಿಸುವರು.

ಓಂಕಾರದಿಂದಲೂ ನಾಲ್ಕು ವ್ಯಾಹೃತಿಗಳಿಂದಲೂ ವ್ಯಾಹೃತಿಯ ಅಂಗ-ನ್ಯಾಸವನ್ನೆಸಗಬೇಕು. ಅಥವಾ ಹೊಕ್ಕುಳು, ಎದೆ, ಶಿರಸ್ಸು, ಸರ್ವಾಂಗಗಳಲ್ಲಿ ನಾಲ್ಕು ವ್ಯಾಹೃತಿಗಳನ್ನು ನ್ಯಾಸಮಾಡಬೇಕು.[೧]

**ದ್ವಾದಶಾರ್ಣಸ್ಯ ಜಗತೀ ಛಂದೋಽನ್ಯತ್ಪೂರ್ವವತ್ಸ್ಮೃತಮ್ ।**
**ಅಚ್ಛವರ್ಣೋಽಭಯವರಕರೋ ಧ್ಯೇಯೋಽಮಿತದ್ಯುತಿಃ ॥ ೩೭ ॥**

ವಾಸುದೇವದ್ವಾದಶಾಕ್ಷರದ ಛಂದಸ್ಸು 'ಜಗತೀ' ಎಂಬುದು. ಋಷಿದೇವತೆಗಳೆಲ್ಲ ಓಂಕಾರದಂತೆಯೆ. ಈ ಮಂತ್ರದಲ್ಲಿ ಧ್ಯೇಯವಾದ ಭಗವದ್ರೂಪ ಶುಭ್ರವೂ, ಅತಿಪ್ರಕಾಶಮಾನವೂ ಆಗಿದ್ದು ಅಭಯಮುದ್ರೆವರಮುದ್ರೆಗಳನ್ನು ಧರಿಸಿಕೊಂಡಿದೆ.

**ಪದೈರ್ವ್ಯಸ್ತೈಃ ಸಮಸ್ತೈಶ್ಚ ಜ್ಞೇಯಾನ್ಯಂಗಾನಿ ಪಂಚ ಚ ।**
**ಅಷ್ಟಾಕ್ಷರಾಣಾಂ ಸ್ಥಾನೇಷು ಬಾಹ್ವೋರೂರ್ವೋಶ್ಚ ವಿನ್ಯಸೇತ್ ॥**

ವಾಸುದೇವಮಂತ್ರದ ಪದಗಳು ಪ್ರತ್ಯೇಕವಾಗಿ ನಾಲ್ಕು, ಒಟ್ಟು ಒಂದು—ಹೀಗೆ ಐದು ಅಂಗನ್ಯಾಸಮಂತ್ರಗಳು. ಅಕ್ಷರನ್ಯಾಸದಲ್ಲಿ ಅಷ್ಟಾಕ್ಷರಕ್ಕೆ ಹೇಳಿರುವ ಎಂಟು ಸ್ಥಾನಗಳು ಮತ್ತು ಎರಡು ತೋಳು, ಎರಡು ತೊಡೆ—ಹೀಗೆ ಹನ್ನೆರಡು ಸ್ಥಾನಗಳು.[೨]

---

೧ ಮೊದಲನೆಯ ಪಕ್ಷದಲ್ಲಿ ಅಂಗನ್ಯಾಸ— ಓಂ ಹೃದಯಾಯ ನಮಃ । ಭೂಃ ಶಿರಸೇ ಸ್ವಾಹಾ । ಭುವಃ ಶಿಖಾಯೈ ವೌಷಟ್ । ಸ್ವಃ ಕವಚಾಯ ಹುಮ್ । ಭೂರ್ಭುವಃಸ್ವಃ ಅಸ್ತ್ರಾಯ ಫಟ್ ॥ ಎರಡನೆಯ ಪಕ್ಷದಲ್ಲಿ— ಭೂಃ ಅನಿರುದ್ಧಾಯ ನಮಃ (ನಾಭೌ) । ಭುವಃ ಪ್ರದ್ಯುಮ್ನಾಯ ನಮಃ (ಹೃದಯೇ) । ಸ್ವಃ ಸಂಕರ್ಷಣಾಯ ನಮಃ (ಶಿರಸಿ) । ಭೂರ್ಭುವಃಸ್ವಃ ವಾಸುದೇವಾಯ ನಮಃ (ನಾಭ್ಯಾದಿಸರ್ವಾಂಗೇಷು) ॥

೨ ಅಂಗನ್ಯಾಸ ಈ ತೆರನಾಗಿದೆ— ಓಂ ಹೃದಯಾಯ ನಮಃ । ನಮಃ ಶಿರಸೇ ಸ್ವಾಹಾ । ಭಗವತೇ ಶಿಖಾಯೈ ವೌಷಟ್ । ವಾಸುದೇವಾಯ ಕವಚಾಯ ಹುಮ್ । ಓಂ ನಮೋ ಭಗವತೇ ವಾಸುದೇವಾಯ ಅಸ್ತ್ರಾಯ ಫಟ್ ॥

ಅಕ್ಷರನ್ಯಾಸದ ಕ್ರಮ— ಓಂ ಕೇಶವಾಯ ನಮಃ (ಪಾದಯೋಃ) । ನಂ ನಾರಾಯಣಾಯ ನಮಃ (ಜಾನ್ವೋಃ) । ಮೋಂ ಮಾಧವಾಯ ನಮಃ (ನಾಭೌ) । ಭಂ ಗೋವಿಂದಾಯ ನಮಃ (ಹೃದಯೇ) । ಗಂ ವಿಷ್ಣವೇ ನಮಃ (ವಾಚಿ) । ವಂ ಮಧುಸೂದನಾಯ ನಮಃ(ನಾಸಾಯಾಂ)। ತೇಂ ತ್ರಿವಿಕ್ರಮಾಯ ನಮಃ(ನೇತ್ರಯೋಃ) । ವಾಂ ವಾಮನಾಯ ನಮಃ (ಶಿರಸಿ) । ಸುಂ ಶ್ರೀಧರಾಯ ನಮಃ (ದಕ್ಷಿಣಬಾಹೌ) । ದೇಂ ಹೃಷೀಕೇಶಾಯ ನಮಃ(ವಾಮಬಾಹೌ)। ವಾಂ ಪದ್ಮನಾಭಾಯ ನಮಃ (ದಕ್ಷಿಣೋರೌ)। ಯಂ ದಾಮೋದರಾಯ ನಮಃ (ವಾಮೋರೌ) ॥

**ವಿಶ್ವಾಮಿತ್ರಸ್ತು ಸಂಧ್ಯಾರ್ಥೇ ತದನ್ಯತ್ರ ಪ್ರಜಾಪತಿಃ ।**
**ಮುನಿರ್ದೇವಸ್ತು ಸವಿತೃನಾಮಾ ಸ್ರಷ್ಟೃತ್ವತೋ ಹರಿಃ ॥ ೩೯ ॥**

ಸಂಧ್ಯಾಕಾಲದಲ್ಲಿ ಜಪಿಸುವ, ವ್ಯಾಹೃತಿಯಿಂದ ಕೂಡಿದ ಗಾಯತ್ರಿಗೆ ವಿಶ್ವಾಮಿತ್ರನು ಋಷಿ. ವ್ಯಾಹೃತಿಯಿಲ್ಲದ ಗಾಯತ್ರಿಗೆ ಬ್ರಹ್ಮನು ಋಷಿ. ಜಗತ್ಸೃಷ್ಟಿಕಾರಣನಾದುದರಿಂದ 'ಸವಿತಾ' ಎನ್ನಿಸಿಕೊಂಡ ಶ್ರೀಹರಿಯೇ ದೇವತೆ.

**ಪ್ರೋದ್ಯದಾದಿತ್ಯವರ್ಣಶ್ಚ ಸೂರ್ಯಮಂಡಲಮಧ್ಯಗಃ ।**
**ಚಕ್ರಶಂಖಧರೋಽಂಕಸ್ಥದೋರ್ದ್ವಯೋ ಧ್ಯೇಯ ಏವ ಚ ॥ ೪೦ ॥**

ಉದಿಸುವ ಸೂರ್ಯನಂತೆ ಬೆಳಗುವ, ಸೂರ್ಯಮಂಡಲದ ನಡುವೆ ಕುಳಿತಿರುವ, ಎರಡು ಕೈಗಳಿಂದ ಚಕ್ರಶಂಖಗಳನ್ನು ಧರಿಸಿ ಉಳಿದೆರಡು ಕೈಗಳನ್ನು ತೊಡೆಯಮೇಲಿರಿಸಿಕೊಂಡಿರುವ ಭಗವದ್ರೂಪವನ್ನು ಧ್ಯಾನಿಸಬೇಕು.

**ಸತಾರಾಶ್ಚ ವ್ಯಾಹೃತಯೋ ಗಾಯತ್ರ್ಯಂಗಾನಿ ಪಂಚ ಚ ।**
**ದೋಃಪತ್ಸಂಧಿಷು ಸಾಗ್ರೇಷು ನಾಭಿಹೃನ್ಮುಖಕೇಷು ಚ ॥ ೪೧ ॥**
**ವರ್ಣನ್ಯಾಸಶ್ಚ ಕರ್ತವ್ಯಃ**

ಓಂಕಾರದಿಂದ ಕೂಡಿದ ನಾಲ್ಕು ವ್ಯಾಹೃತಿಗಳೇ ವ್ಯಾಹೃತಿಯಂತೆ ಗಾಯತ್ರಿಯಲ್ಲೂ ಅಂಗನ್ಯಾಸಮಂತ್ರಗಳು. ಕೈಬೆರಳುಗಳ ಸಂಧಿ ಮತ್ತು ತುದಿ, ಕಾಲ್ಬೆರಳುಗಳ ಸಂಧಿ ಮತ್ತು ತುದಿ ಒಟ್ಟಿಗೆ ನೇರಿ ಇಪ್ಪತ್ತು, ಮತ್ತು ಹೊಕ್ಕುಳು, ಎದೆ, ಮುಖ, ಶಿರಸ್ಸು—ಹೀಗೆ ಇಪ್ಪತ್ತನಾಲ್ಕು ಸ್ಥಾನಗಳಲ್ಲಿ ಕ್ರಮವಾಗಿ ಅಕ್ಷರನ್ಯಾಸವನ್ನು ಮಾಡಬೇಕು.[೧]

**ತಾರವನ್ನಿಖಿಲಂ ಸ್ಮೃತಮ್ ।**
**ಪಂಚಾಶದಕ್ಷರಾಣಾಂ ಚ ಪುಂಸೂಕ್ತಸ್ಯಾಪಿ ಸರ್ವಶಃ ।**
**ಅನುಷ್ಟುಭಶ್ಚ ತ್ರಿಷ್ಟುಪ್ ಚ ಛಂದೋಽಸ್ಯ ತ್ರಿಷ್ಟುಭೋಽಪಿ ವಾ ॥**

ಮಾತೃಕಾಮಂತ್ರಗಳಿಗೂ ಪುರುಷಸೂಕ್ತಕ್ಕೂ ಋಷಿ, ದೇವತೆ, ಧ್ಯಾನ,

---

೧ ನ್ಯಾಸಕ್ರಮವನ್ನು ವಾಸುದೇವಮಂತ್ರದಲ್ಲಿ ಬರೆದಂತೆಯೇ ಊಹಿಸಿಕೊಳ್ಳಬಹುದು. ಗಾಯತ್ರಿಯ ಪ್ರತಿ ಅಕ್ಷರಕ್ಕೂ ಬಿಂದು ಸೇರಿಸಿ, ಮೊದಲು ಓಂಕಾರವನ್ನು ಉಚ್ಚರಿಸಿ, ಮುಂದೆ ವರ್ಣದೇವತೆಯನ್ನೂ ಸೇರಿಸಿ 'ಓಂ ತಂ ಕೇಶವಾಯ ನಮಃ' ಎಂದು ಮೊದಲಾಗಿ ಮೇಲೆ ಹೇಳಿದ ಇಪ್ಪತ್ತನಾಲ್ಕು ಎಡೆಗಳಲ್ಲಿ ನ್ಯಾಸವನ್ನೆಸಗಬೇಕು.

ಅಂಗನ್ಯಾಸ ಎಲ್ಲವೂ ಪ್ರಣವದಂತೆಯೇ ಮಾಡಬೇಕು. ಪುರುಷಸೂಕ್ತದ ಮೊದಲ ಹದಿನೈದು ಋಕ್ಕುಗಳ ಛಂದಸ್ಸು ಅನುಷ್ಟುಪ್. ಕೊನೆಯ ಒಂದು ಋಕ್ಕಿನ ಛಂದಸ್ಸು ಮಾತ್ರ ತ್ರಿಷ್ಟುಪ್. ಯಜುಃಶಾಖೆಯ ಪ್ರಕಾರ ಹದಿನೆಂಟು ಋಕ್ಕುಗಳಿರುವುದರಿಂದ ಆ ಪಕ್ಷದಲ್ಲಿ ಕೊನೆಯ ಮೂರು ಋಕ್ಕುಗಳ ಛಂದಸ್ಸೂ ತ್ರಿಷ್ಟುಪ್ ಆಗಿರುತ್ತದೆ.

**ವಿಷ್ಣುಶಬ್ದಶ್ಚತುರ್ಥ್ಯಂತೋ ಹೃದಯೋಽತಃ[1] ಷಡಕ್ಷರಃ ।**
**ತಾರವತ್ಸರ್ವಮಸ್ಯಾಪಿ ಶ್ಯಾಮೋ ಧ್ಯೇಯೋ ಹರಿಃ ಸ್ವಯಮ್ ॥**

'ವಿಷ್ಣವೇ' ಎಂದು ಚತುರ್ಥೀವಿಭಕ್ತಿಯ ವಿಷ್ಣುಶಬ್ದ ಮತ್ತು 'ನಮಃ' ಶಬ್ದ ಸೇರಿ ವಿಷ್ಣುಷಡಕ್ಷರಮಂತ್ರವಾಗುವುದು. ಇದರ ಋಷಿ-ಛಂದಸ್ಸು ಎಲ್ಲ ಪ್ರಣವದಂತೆಯೇ. ಆದರೆ ಧ್ಯೇಯವಾದ ಭಗವದ್ರೂಪ ನೀಲವರ್ಣವಾಗಿದೆ.

**ವರ್ಣಾ ಏವ ಷಡಂಗಾನಿ ಷಣ್ಣಯೋರ್ಭೇದಯೋಗತಃ ।**
**ಪಜ್ಜಾನುನಾಭಿಹೃನ್ನಾಸಾಕೇಷು ನ್ಯಾಸಶ್ಚ ವರ್ಣಶಃ ॥ ೪೪ ॥**

ಷಕಾರ-ಣಕಾರಗಳನ್ನು ಬೇರೆ ಬೇರೆ ಎಣಿಸಿ ಆ ಆರು ವರ್ಣಗಳಿಂದ ಷಡಂಗನ್ಯಾಸವನ್ನು ಮಾಡಬೇಕು.[2] ಕಾಲು, ಮೊಣಕಾಲು, ಹೊಕ್ಕುಳು, ಎದೆ, ಮೂಗು, ತಲೆಗಳಲ್ಲಿ ವರ್ಣನ್ಯಾಸವನ್ನೂ ಮಾಡಬೇಕು.[3]

**ಏತೇ ತು ಸರ್ವಮಂತ್ರಾಣಾಂ ಮೂಲಮಂತ್ರಾ ವಿಶೇಷತಃ ।**
**ಏತಜ್ಜ್ಞಾನಾತ್ಸಮಸ್ತಂ ಚ ಜ್ಞಾತಂ ಸ್ಯಾಚ್ಛಬ್ದಗೋಚರಮ್ ।**
**ಏತಜ್ಜಪಾತ್ಸಮಸ್ತಾನಾಂ ಮಂತ್ರಾಣಾಂ ಜಾಪಕೋ ಭವೇತ್ ॥**

ಈ ಮಂತ್ರಗಳು ಉಳಿದೆಲ್ಲ ಮಂತ್ರಗಳಿಗೆ ಮೂಲಭೂತಗಳಾಗಿವೆ. ಇವುಗಳನ್ನು ಅರಿತುಕೊಂಡರೆ ಉಳಿದೆಲ್ಲ ಮಂತ್ರಾರ್ಥಗಳನ್ನೂ ಅರಿತುಕೊಂಡಂತೆ. ಇವುಗಳನ್ನು ಜಪಿಸಿದರೆ ಉಳಿದೆಲ್ಲ ಮಂತ್ರಗಳನ್ನು ಜಪಿಸಿದಂತೆ. ಉಳಿದೆಲ್ಲ ಮಂತ್ರಗಳ ಫಲವೂ ಇವುಗಳಲ್ಲೆ ಅಡಕವಾಗಿದೆ.

---

೧ 'ಹೃದಯ' ಎಂಬ ಶಬ್ದವನ್ನು ಶಾಸ್ತ್ರದಲ್ಲಿ 'ನಮಃ ಶಬ್ದ'ವೆಂಬರ್ಥದಲ್ಲಿ ಬಳಸುತ್ತಾರೆ.

೨ ಷಡಂಗನ್ಯಾಸದ ಕ್ರಮ— ವಿಂ ಹೃದಯಾಯ ನಮಃ । ಷಂ ಶಿರಸೇ ಸ್ವಾಹಾ । ಣಂ ಶಿಖಾಯೈ ವೌಷಟ್ । ವೇಂ ಕವಚಾಯ ಹುಮ್ । ನಂ ನೇತ್ರಾಭ್ಯಾಂ ವಷಟ್ । ಮಂ ಅಸ್ತ್ರಾಯ ಫಟ್ ॥

೩ ವರ್ಣನ್ಯಾಸದ ಕ್ರಮ— ವಿಂ ವಿಶ್ವಾಯ ನಮಃ (ಪಾದಯೋಃ) । ಷಂ ತೈಜಸಾಯ ನಮಃ (ಜಾನ್ವೋಃ) । ಣಂ ಪ್ರಾಜ್ಞಾಯ ನಮಃ (ನಾಭೌ) । ವೇಂ ತುರ್ಯಾಯ ನಮಃ (ಹೃದಯೇ) । ನಂ ಆತ್ಮನೇ ನಮಃ (ನಾಸಯೋಃ) । ಮಂ ಅಂತರಾತ್ಮನೇ ನಮಃ (ಶಿರಸಿ)॥

## ಪೂಜಾಕ್ರಮ

**ಪೂಜ್ಯಶ್ಚ ಭಗವಾನ್ನಿತ್ಯಂ ಚಕ್ರಾಬ್ಜಾದಿಕಮಂಡಲೇ ।**
**ಚಲೇ ವಾ ಹೃದಯೇ ವಾಽಪಿ ಜಲೇ ವಾ ಕೇವಲಸ್ಥಲೇ ॥ ೪೬ ॥**

ಚಕ್ರ, ಅಬ್ಜ, ಭದ್ರಕ ಮೊದಲಾದ ಮಂಡಲದಲ್ಲಾಗಲಿ[೧], ಗುರು, ಯತಿ ಮೊದಲಾದ ಚಲಪ್ರತಿಮೆಯಲ್ಲಾಗಲಿ[೨], ಹೃದಯದಲ್ಲಾಗಲಿ, ನೀರಿನಲ್ಲಾಗಲಿ, ಭೂಸ್ಥಂಡಿಲದಲ್ಲಾಗಲಿ ಹರಿಯನ್ನು ನಿತ್ಯವೂ ಪೂಜಿಸುತ್ತಿರಬೇಕು[೩].

**ಅಷ್ಟಾಕ್ಷರೇಣ ಸಂಪೂಜ್ಯ ಪ್ರಥಮಂ ದೇವತಾಂ ಪರಾಮ್ ।**
**ಮಧ್ಯೇ ಸವ್ಯೇ ಗುರೂಂಶ್ಚೈವ ದಕ್ಷಿಣೇ ಸರ್ವದೇವತಾಃ ॥ ೪೭ ॥**
**ಪುನಃ ಸವ್ಯೇ ಸರ್ವಗುರೂನಾಗ್ನೇಯಾದಿಷು ಚ ಕ್ರಮಾತ್ ।**
**ಗರುಡಂ ವ್ಯಾಸದೇವಂ ಚ ದುರ್ಗಾಂ ಚೈವ ಸರಸ್ವತೀಮ್ ॥ ೪೮ ॥**
**ಧರ್ಮಂ ಜ್ಞಾನಂ ಚ ವೈರಾಗ್ಯಮೈಶ್ವರ್ಯಂ ಚೈವ ಕೋಣಗಾನ್ ।**
**ತದಂತಃ ಪೂರ್ವದಿಕ್ಪೂರ್ವಮಧರ್ಮಾದೀಂಶ್ಚ ಪೂಜಯೇತ್ ॥೪೯॥**

ಪೀಠ ಸ್ಥಾಪನ ಪ್ರದೇಶದ ಮಧ್ಯದಲ್ಲಿ ಪರದೇವತೆಯಾದ ಶ್ರೀನಾರಾಯಣನನ್ನು ಅಷ್ಟಾಕ್ಷರದಿಂದ ಅಭಿಮಂತ್ರಿಸಿ, ಎಡಬದಿಯಲ್ಲಿ ಪ್ರಧಾನವಾಯುವನ್ನೂ[೪], ಬಲಬದಿಯಲ್ಲಿ ಸರ್ವದೇವತೆಗಳನ್ನೂ[೫], ಪುನಃ ಎಡಬದಿಯಲ್ಲಿ

---

೧ ಚಕ್ರಾದಿ ದೇವತಾಯಂತ್ರಗಳ ಸ್ವರೂಪ ಮೂರನೆಯ ಅಧ್ಯಾಯದ ೬೬, ೬೭ನೇ ಶ್ಲೋಕಗಳಲ್ಲಿ ಬರುತ್ತದೆ.

'ಕಾಮಕ್ರೋಧಾದಿದೋಷೋತ್ಥ ಸರ್ವದುಃಖನಿಯಂತ್ರಣಾತ್ ।
ಯಂತ್ರಮಿತ್ಯಾಹುರೇತಸ್ಮಿನ್ ದೇವಃ ಪ್ರೀಣಾತಿ ಪೂಜಿತಃ ॥' (ಗೌತಮೀತಂತ್ರ)

೨ 'ಚಲಂ ಸನ್ಯಾಸಿನಾಂ ರೂಪಮಚಲಂ ಪ್ರತಿಮಾದಿಕಮ್ ।'

೩ 'ನಿರ್ವರ್ತಿತಾತ್ಮನಿಯಮೋ ದೇವಮರ್ಚೇತ್ಸಮಾಹಿತಃ ।
ಅರ್ಚಾಯಾಂ ಸ್ಥಂಡಿಲೇ ಸೂರ್ಯೇ ಜಲೇ ವಹ್ನೌ ಗುರಾವಪಿ ॥' (ಭಾಗವತ)

೪ ಗುರೂನ್=ಆದ್ಯಗುರುಂ ಮುಖ್ಯವಾಯುಂ, ಬಹುವಚನಂ ತು ಸರ್ವಗುರುತ್ವಾದೇವ.

೫ ಸರ್ವದೇವತೆಗಳು ಎನ್ನುವಲ್ಲಿ ಎರಡು ಪಕ್ಷವಿದೆ. ಇಲ್ಲಿ ಸರ್ವದೇವತಾಪದದಿಂದ ಬ್ರಹ್ಮವಿಷ್ಣುರುದ್ರರನ್ನು ಮಾತ್ರ ಗ್ರಹಿಸಬೇಕೆಂದು ಒಂದು ಪಕ್ಷ. ಎಲ್ಲ ದೇವತೆಗಳನ್ನೂ ಇಟ್ಟುಕೊಳ್ಳಬಹುದೆಂದು ಇನ್ನೊಂದು ಪಕ್ಷ. ಎರಡನೆಯ ಪಕ್ಷವೇ ಆಚಾರ್ಯರ ಮಾತಿನಿಂದ ಸ್ಪಷ್ಟವಾಗಿ ಕಾಣುತ್ತದೆ. ವಿಷ್ಣುತೀರ್ಥರ ವಚನವೂ ಇದೇ ತೆರನಾಗಿದೆ—

'ಮಧ್ಯೇ ನಾರಾಯಣಂ ದೇವಂ ಪೂಜಯೇದ್ವಾಮತೋ ಗುರೂನ್ ।
ದಕ್ಷಿಣೇ ದೇವತಾಃ ಸರ್ವಾಃ ಗುರುಭ್ಯಃ ಪೂರ್ವಪೂರ್ವವತ್ ॥'

ಸರ್ವಗುರುಗಳನ್ನೂ[1], ಆಗ್ನೇಯಾದಿ ನಾಲ್ಕು ಕೋಣಗಳ ಕೆಳಭಾಗದಲ್ಲಿ ಕ್ರಮವಾಗಿ ಗರುಡ, ವ್ಯಾಸ, ದುರ್ಗಾ, ಸರಸ್ವತಿಯರನ್ನೂ, ಮೇಲ್ಭಾಗದಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳ ಅಭಿಮಾನಿದೇವತೆಗಳನ್ನೂ, ಅವುಗಳ ನಡುವೆ ಪೂರ್ವಾದಿ ದಿಕ್ಕುಗಳಲ್ಲಿ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯಾಭಿಮಾನಿಗಳನ್ನೂ ಪೂಜಿಸಬೇಕು[2].

**ಅಪೂಜಿತಾ ಅಧರ್ಮಾದಿದಾತಾರಸ್ತೇ ತಥಾಽಭಿಧಾಃ ।**
**ನಿರ್ಋತಿಶ್ಚೈವ ದುರ್ಗಾ ಚ ಕಾಮೋ ರುದ್ರಶ್ಚ ದೇವತಾಃ ॥ ೫೦ ॥**

ಅಧರ್ಮಕ್ಕೆ ನಿರ್ಋತಿಯೂ, ಅಜ್ಞಾನಕ್ಕೆ ದುರ್ಗೆಯೂ, ಅವೈರಾಗ್ಯಕ್ಕೆ ಕಾಮನೂ, ಅನೈಶ್ವರ್ಯಕ್ಕೆ ರುದ್ರನೂ ದೇವತೆಗಳು. ಪೂಜಿಸದಿದ್ದರೆ ಅಧರ್ಮಾದಿಗಳನ್ನು ತಂದೊಡ್ಡುವುದರಿಂದ ಅವರನ್ನು ಆ ಹೆಸರಿನಿಂದಲೇ ಕರೆಯುವರು.

**ಯಮವಾಯುಶಿವೇಂದ್ರಾಶ್ಚ ಜ್ಞೇಯಾ ಧರ್ಮಾದಿದೇವತಾಃ ।**
**ಪರಮಃ ಪುರುಷೋ ಮಧ್ಯೇ ಶಕ್ತ್ಯಾಧಾರರೂಪಿಣೇ ॥ ೫೧ ॥**

ಧರ್ಮಕ್ಕೆ ಯಮನೂ, ಜ್ಞಾನಕ್ಕೆ ವಾಯುವೂ, ವೈರಾಗ್ಯಕ್ಕೆ ರುದ್ರನೂ, ಐಶ್ವರ್ಯಕ್ಕೆ ಇಂದ್ರನೂ ಅಭಿಮಾನಿಗಳು. ಪೀಠಮಧ್ಯದ ಸರಳರೇಖೆಯಲ್ಲಿ

---

ಆದರೆ ಪಾದ್ಮತಂತ್ರದ ವಚನವು ಮೊದಲನೆಯ ಪಕ್ಷಕ್ಕೆ ಸಂವಾದಿಯಾಗಿದೆ—

'ಅರ್ಚಯೇದ್ಗಂಧಪುಷ್ಪಾದ್ಯೈಃ ಪೀಠಪಾರ್ಶ್ವೇ ತು ಸವ್ಯಕೇ ।
ವಾಯುಮಾದ್ಯಗುರುಂ ಲೋಕೇ ಪೀಠಪಾರ್ಶ್ವೇ ತು ದಕ್ಷಿಣೇ ॥
ಬ್ರಹ್ಮಾಣಂ ವಿಷ್ಣುಮೀಶಂ ಚ ಸಮಾರಾಧ್ಯ ತಥೋತ್ತರೇ ।
ಸನತ್ಕುಮಾರಂ ಸನಕಂ ಸನಂದನಸನಾತನೌ ॥'

೧ ಸರ್ವಗುರುಗಳು ಎಂಬಲ್ಲೂ ಎರಡು ಪಕ್ಷವಿದೆ. ಪಾದ್ಮತಂತ್ರದ ವಚನದಂತೆ ಸನತ್ಕುಮಾರ, ಸನಕ, ಸನಂದನ, ಸನಾತನರಷ್ಟೇ ಸರ್ವಗುರುವದದಿಂದ ಗ್ರಾಹ್ಯರೆಂದು ಒಂದು ಪಕ್ಷವಾದರೆ ಎಲ್ಲ ಗುರುಗಳನ್ನೂ ಧ್ಯಾನಿಸಬೇಕು ಎನ್ನುವುದು ಇನ್ನೊಂದು ಪಕ್ಷ. ಎರಡನೆಯ ಪಕ್ಷವೇ ಸೊಗಸಾಗಿದೆ. ಕೃಷ್ಣಾಚಾರ್ಯಸ್ಮೃತಿಮುಕ್ತಾವಲಿಯಲ್ಲೂ ಇದೇ ರೀತಿಯಲ್ಲಿ ಪೀಠಪೂಜೆಯನ್ನು ವಿವರಿಸಿದ್ದಾರೆ.

೨ ಪೂಜಾಪದ್ಧತಿಯ ವಿವರಗಳನ್ನೂ, ಮಂತ್ರಗಳನ್ನೂ, ವಿಧಾನಗಳನ್ನೂ ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಲಿಯ ಆಹ್ನಿಕಪ್ರಕರಣ ಮತ್ತು ಆಹ್ನಿಕಮಂಜರಿ ಮೊದಲಾದ ಗ್ರಂಥಗಳಲ್ಲಿ ನೋಡಿಕೊಳ್ಳಬೇಕು.

ಬ್ರಹ್ಮಾಂಡದ ಅಡಿಯಲ್ಲಿ ಪರಮಪುರುಷನಾದ ನಾರಾಯಣನೂ ಆ ಮೇಲೆ ಆಧಾರಶಕ್ತಿಯಾದ ಲಕ್ಷ್ಮೀದೇವಿಯೂ ಇರುವರೆಂದು ಧ್ಯಾನಿಸಬೇಕು[೧].

**ಕೂರ್ಮೋಽನಂತಶ್ಚ ಪೃಥಿವೀ ಕ್ಷೀರಸಾಗರ ಏವ ಚ ।**
**ಶ್ವೇತದ್ವೀಪೋ ಮಂಡಪಶ್ಚ ದಿವ್ಯರತ್ನಮಯೋ ಮಹಾನ್ ॥ ೫೨ ॥**
**ಪದ್ಮನೇತತ್ತ್ರಯಂ ದೇವೀ ರಮ್ಯೈವ ಬಹುರೂಪಿಣೀ ।**
**ಸೂರ್ಯಸೋಮಹುತಾಶಾಶ್ಚ ಪದ್ಮೇ ಶ್ರೀಸ್ತ್ರಿಗುಣಾತ್ಮಿಕಾ ॥ ೫೩ ॥**

ಆಧಾರಶಕ್ತಿಯ ಮೇಲೆ ಬ್ರಹ್ಮಾಂಡಾಧಾರವಾದ ಕೂರ್ಮರೂಪವನ್ನೂ[೨], ಅದರ ಪುಚ್ಛವನ್ನಾಶ್ರಯಿಸಿರುವ ಶೇಷನನ್ನೂ, ಶೇಷನ ಹೆಡೆಯಲ್ಲಿ ಪೃಥಿವಿಯನ್ನೂ, ಅಲ್ಲಿ ಕ್ಷೀರಸಾಗರವನ್ನೂ, ಕ್ಷೀರಸಾಗರದಲ್ಲಿ ಶ್ವೇತದ್ವೀಪವನ್ನೂ, ಅಲ್ಲಿ ದಿವ್ಯ ರತ್ನಖಚಿತವಾದ ಮಂಟಪವನ್ನೂ ಧ್ಯಾನಿಸಿ, ಆ ಮಂಟಪದಲ್ಲಿ (ಚತುಷ್ಕೋಣಾಕಾರದ ಪೀಠದ ಮೇಲಿರುವ) ಪದ್ಮದಲ್ಲಿ[೩] ಆಸೀನನಾದ

---

೧ ಬ್ರಹ್ಮಾಂಡಕಟಾಹದಿಂದ ಹಿಡಿದು ನಾವು ಪೂಜೆಗಾಗಿ ಅಣಿಗೊಳಿಸಿದ ಅಣುಪೀಠದ ವರೆಗೂ ವ್ಯಾಪಿಸಿದ ಭಗವಚ್ಛಕ್ತಿಯ ಅನಂತ ಸಂಸ್ಥಾನವನ್ನು ಚಿಂತಿಸುವುದೇ ಈ ಪೂಜೆಯ ಉದ್ದೇಶ ಎಂತಲೇ ಬ್ರಹ್ಮಾಂಡಕಟಾಹವನ್ನು ತಲೆಯಲ್ಲಿ ಧರಿಸಿಕೊಂಡು ನಮ್ಮನ್ನೆಲ್ಲ ಸಲಹುತ್ತಿರುವ ಭಗವದ್ರೂಪದಿಂದ ಮೊದಲ್ಗೊಂಡು ಬ್ರಹ್ಮಾಂಡದ ಅಣುಮಾತ್ರವಾದ ನಮ್ಮ ಪೀಠದಲ್ಲೂ ಸನ್ನಿಹಿತವಾದ ಭಗವದ್ರೂಪದ ವರೆಗೆ ನಮ್ಮ ಧ್ಯಾನಕ್ರಮ ಮುಂದುವರಿಯಬೇಕು. ಇದೇ ಭಗವದ್ರೂಪದ ವಿಭೂತಿಸತ್ತ್ವ. ನಮ್ಮ ಪೀಠದಲ್ಲಿ ಕುಳಿತ ಭಗವದ್ರೂಪ ಬ್ರಹ್ಮಾಂಡವನ್ನು ಧರಿಸಿದೆ. ಬ್ರಹ್ಮಾಂಡವನ್ನು ಧರಿಸಿದ ಭಗವದ್ರೂಪ ನಮ್ಮ ಚಿಕ್ಕ ಪೀಠದಲ್ಲಿ ಶೋಭಿಸುತ್ತದೆ. ಆದರೆ ಒಂದು ದಿಗಂತಗಳನ್ನೆಲ್ಲ ವ್ಯಾಪಿಸಿದ ವಿಶ್ವದರ್ಶನವಾದರೆ– ಒಂದು ಅಂಗೈಯಗಲದ ಚಿಕ್ಕ ದೇಹದ ಅರ್ಚಾವತಾರ. ಇದು ಪೀಠಪೂಜೆಯಲ್ಲಿ ನಾವು ಅರಿತುಕೊಳ್ಳಬೇಕಾದ ಮಹಿಮೆ. ಇದೇ ಈ ಪೂಜೆಯ ಪದ್ಧತಿಯ ಹಿನ್ನೆಲೆ

೨ ಬ್ರಹ್ಮಾಂಡಾಧಾರಭೂತವಾದ ವಿಷ್ಣು ಕೂರ್ಮನ ಮೇಲೆ ಬ್ರಹ್ಮಾಂಡದ ಒಳಗಿನ ಅಗಾಧ ಜಲಾಧಾರವಾದ ಮತ್ತೊಂದು ವಿಷ್ಣುಕೂರ್ಮರೂಪ, ಅದರ ಮೇಲೆ ವಾಯು ಕೂರ್ಮ, ಅದರ ಪುಚ್ಛದಲ್ಲಿ ಶೇಷ–ಹೀಗೆ ಇಲ್ಲಿ ಕೂರ್ಮಪದದಿಂದ ಮೂರು ಕೂರ್ಮಗಳು ವಿವಕ್ಷಿತವಾಗಿವೆ.

'ಬಿಭರ್ತ್ಯಂಡಂ ಹರಿಃ ಕೂರ್ಮ ಅಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ॥
ಯ ಏವ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।
ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ॥' (ಬೃಹದ್ಭಾಷ್ಯ)

೩ ಇಲ್ಲೂ ಪದ್ಮಪದದಿಂದ ಷಡ್ದಲಪದ್ಮವೊಂದು ಅದರ ಮೇಲಿರುವ ಅಷ್ಟದಲಪದ್ಮ

ಭಗವಂತನನ್ನು ಧ್ಯಾನಿಸಬೇಕು. ಶ್ವೇತದ್ವೀಪ, ಮಂಟಪ, ಪದ್ಮ ಇವು ಮೂರಕ್ಕೂ ಬಹುರೂಪಿಣಿಯಾದ ರಮೆಯೇ ದೇವತೆ. ಪದ್ಮದ ಆರು ದಲಗಳಲ್ಲಿ (ಎದುರು ಬದಿಯಿಂದ ಕ್ರಮವಾಗಿ) ಸೂರ್ಯ, ಚಂದ್ರ, ಅಗ್ನಿಗಳನ್ನೂ, ತ್ರಿಗುಣಾಭಿಮಾನಿನಿಯರಾದ ಶ್ರೀ, ಭೂ, ದುರ್ಗೆಯರನ್ನೂ ಧ್ಯಾನಿಸಬೇಕು.

**ಆತ್ಮಾಂತರಾತ್ಮಪರಮಜ್ಞಾನಾತ್ಮಾನಸ್ತು ಮೂರ್ತಯಃ ।**
**ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ಯೋಗಾ ತಥೈವ ಚ ॥೫೪॥**
**ಪ್ರಹ್ವೀ ಸತ್ಯಾ ತಥೇಶಾನಾಽನುಗ್ರಹಾ ಚೇತಿ ಶಕ್ತಯಃ ।**
**ಅಷ್ಟದಿಕ್ಷು ಚ ಮಧ್ಯೇ ಚ ಸ್ವರೂಪಾಣ್ಯೇವ ತಾ ಹರೇಃ ॥ ೫೫ ॥**

(ಪೂರ್ವಾದಿದಿಕ್ಕುಗಳಲ್ಲಿ ಕ್ರಮವಾಗಿ) ಪದ್ಮದಲ್ಲಿ ಆತ್ಮ, ಅಂತರಾತ್ಮ, ಜ್ಞಾನಾತ್ಮ, ಪರಮಾತ್ಮ ಎಂಬ ಭಗವದ್ರೂಪಗಳನ್ನು ಧ್ಯಾನಿಸಬೇಕು. ಅಷ್ಟದಲಪದ್ಮದ ಎಂಟು ದಲಗಳಲ್ಲಿ (ಪೂರ್ವದಿಂದ ಮೊದಲುಗೊಂಡು ಕ್ರಮವಾಗಿ) ಭಗವತ್ಸ್ವರೂಪಗಳಾದ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ ಎಂಬ ಎಂಟು ಶಕ್ತಿಗಳನ್ನೂ, ಮಧ್ಯದಲ್ಲಿ ಅನುಗ್ರಹಾ ಎಂಬ ಶಕ್ತಿಯನ್ನೂ ಧ್ಯಾನಿಸಬೇಕು.

**ತತೋಽನಂತಂ ಯೋಗಪೀಠಸ್ವರೂಪಂ ಪೂಜಯೇದ್ಧರೇಃ ।**
**ತತ್ರಾಽವಾಹ್ಯ ಹರಿಂ ಚಾರ್ಘ್ಯಂ ಪಾದ್ಯಮಾಚಮನೀಯಕಮ್ ॥**
**ಮಧುಪರ್ಕಂ ಪುನಶ್ಚಾಽಚಾಂ ಸ್ನಾನಂ ವಾಸೋ ವಿಭೂಷಣಮ್ ।**
**ಉಪವೀತಾಸನೇ ದತ್ವಾ ಗಂಧಪುಷ್ಪೇ ತಥೈವ ಚ ॥ ೫೬ ॥**
**ಲಕ್ಷ್ಮೀಧರೇ ಯಜೇತ್ತತ್ರ ಪಾರ್ಶ್ವಯೋರುಭಯೋರ್ಹರೇಃ ।**
**ಹೃದಯಾದೀಂಸ್ತಥೇಂದ್ರಾದಿದಿಕ್ಷ್ವಸ್ತ್ರಂ ಕೋಣಕೇಷು ಚ ॥ ೫೭ ॥**

ಪದ್ಮಮಧ್ಯದಲ್ಲಿ ಆಸನರೂಪವಾದ ಅನುಗ್ರಹಾಖ್ಯಶಕ್ತಿಯಲ್ಲಿ ಹರಿಯ ಯೋಗಾಸನದಂತಿರುವ ತಲ್ಪಾಕಾರನಾದ ಶೇಷನನ್ನು ಪೂಜಿಸಬೇಕು.

---

ವೊಂದು—ಹೀಗೆ ಎರಡು ಪದ್ಮಗಳನ್ನು ಇಟ್ಟುಕೊಳ್ಳಬೇಕು. ಎಂತಲೇ ಮೊದಲಿನ ಪದ್ಮದ ಆರು ದಲಗಳಲ್ಲಿ ಸೂರ್ಯಚಂದ್ರಾದಿಗಳನ್ನೂ ಮತ್ತಿನ ಪದ್ಮದ ಎಂಟು ದಲಗಳಲ್ಲಿ ವಿಮಲಾ ಉತ್ಕರ್ಷಿಣೀ ಮೊದಲಾದ ಶಕ್ತಿಗಳನ್ನೂ ಧ್ಯಾನಿಸುವಂತೆ ಮೇಲಿನ ಶ್ಲೋಕಗಳಲ್ಲಿ ಪ್ರತಿಪಾದಿತವಾಗಿದೆ.

'ಚತುಷ್ಕೋಣಂ ತು ಪೀಠಂ ಸ್ಯಾತ್ ಷಟ್ಕೋಣಂ ತಸ್ಯ ಮಧ್ಯತಃ ।
ತನ್ಮಧ್ಯೇಽಷ್ಟದಲಂ ಪದ್ಮಂ ತತ್ರ ಪದ್ಮೇಶಮರ್ಚಯೇತ್ ॥' (ತಂತ್ರತಿಲಕ)

ಆ ಯೋಗಪೀಠದಲ್ಲಿರುವ ಭಗವತ್ಪ್ರತಿಮೆಯಲ್ಲಿ ಶ್ರೀಹರಿಯನ್ನು ಆವಾಹಿಸಿ, ಅರ್ಘ್ಯ, ಪಾದ್ಯ, ಆಚಮನ, ಮಧುಪರ್ಕಗಳನ್ನಿತ್ತು, ಮತ್ತೆ ಪುನಃ ಆಚಮನೀಯವನ್ನಿತ್ತು, ಅಭಿಷೇಕಗೈದು, ವಸ್ತ್ರಾಭರಣಗಳಿಂದ ಅಲಂಕರಿಸಿ, ಯಜ್ಞೋಪವೀತ, ಆಸನಗಳನ್ನೂ ಗಂಧಪುಷ್ಪಗಳನ್ನೂ ಅರ್ಪಿಸಬೇಕು. ಶ್ರೀಹರಿಯ ಎಡ ಬಲಗಳಲ್ಲಿ[೧] ಲಕ್ಷ್ಮೀದೇವಿಯನ್ನೂ ಭೂದೇವಿಯನ್ನೂ ಪೂಜಿಸಬೇಕು.[೨] (ಎರಡನೆಯ ಆವರಣರೂಪವಾಗಿ) ಹೃದಯಾದಿ ನಾಮಕಗಳಾದ ಕೃದ್ಧೋಲ್ಕ, ಮಹೋಲ್ಕ, ವೀರೋಲ್ಕ, ದ್ಯುಲ್ಕರೂಪಗಳನ್ನೂ ಪೂರ್ವಾದಿ ದಿಕ್ಕುಗಳಲ್ಲಿ ಪೂಜಿಸಬೇಕು. ಅಸ್ತ್ರನಾಮಕವಾದ ಸಹಸ್ರೋಲ್ಕರೂಪವನ್ನು ಆಗ್ನೇಯಾದಿ ಕೋಣಗಳಲ್ಲಿ ಧ್ಯಾನಿಸಬೇಕು.

**ವಾಸುದೇವಾದಿಕಾನ್ ದಿಕ್ಷು ಕೇಶವಾದೀಂಶ್ಚ ರಾಶಿಷು ।**

ಆ ಮೇಲೆ (ತೃತೀಯಾವರಣ ರೂಪವಾಗಿ) ಪೂರ್ವಾದಿಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರನ್ನು ಪೂಜಿಸಬೇಕು[೩]. ಅನಂತರ (ಚತುರ್ಥಾವರಣರೂಪವಾಗಿ) ಕೇಶವಾದಿ ದ್ವಾದಶ ಮೂರ್ತಿಗಳನ್ನು ದಿಕ್ಕು

---

೧ 'ಅಥಾವರಣಪೂಜಾಯಾಂ ಲಕ್ಷ್ಮೀಂ ವಾಮೇ ಹರೇರ್ಯಜೇತ್ ।
ಧರಾಂ ಚ ದಕ್ಷಿಣೇ ಪಾರ್ಶ್ವೇ ತತಃ ಪೂರ್ವಾದಿದಿಕ್ಷು ಚ ॥
ಕೃದ್ಧೋಲ್ಕಾಯ ಮಹೋಲ್ಕಾಯ ವೀರೋಲ್ಕಾಯ ನಮಸ್ತತಃ ।
ದ್ಯುಲ್ಕಾಯ ಚ ನಮಸ್ಕುರ್ಯಾದುದೀಚ್ಯಾಂ ದಿಕ್ಷು ಚ ಕ್ರಮಾತ್ ।
ಸಹಸ್ರೋಲ್ಕಾಯೇತಿ ಚತುರ್ನಮ ಆಗ್ನ್ಯಾದಿಕೋಣತಃ ॥' (ಪದ್ಯಮಾಲಾ)

೨ ಆವರಣಪೂಜೆಯ ಮಂತ್ರವಿಧಾನಗಳನ್ನು ಬೇರೆ ಪೂಜಾಗ್ರಂಥಗಳಿಂದ ತಿಳಿದುಕೊಳ್ಳಬೇಕು

೩ ಇಲ್ಲಿ ದಿಕ್ಕುಗಳಲ್ಲಿ ವಾಸುದೇವಾದಿಗಳನ್ನು ಪೂಜಿಸಿದಂತೆ, ಆಗ್ನೇಯ, ನೈಋತ್ಯ, ವಾಯುವ್ಯ, ಈಶಾನ್ಯಗಳಲ್ಲಿ ಮಾಯಾ. ಜಯಾ, ಕೃತಿ, ಶಾಂತಿಯರನ್ನೂ ಪೂಜಿಸಬೇಕು. ಆಚಾರ್ಯರು ಹೇಳಿರದಿದ್ದರೂ ತಂತ್ರಸಾರದ ವ್ಯಾಖ್ಯಾರೂಪವಾದ 'ಪದ್ಯಮಾಲಾ'ದಲ್ಲಿ ಟೀಕಾಕೃತ್ಪಾದರು ಈ ಮಾತನ್ನು ಬರೆದಿರುವುದರಿಂದ ಈ ಸಂಪ್ರದಾಯವು ಗ್ರಾಹ್ಯವಾಗಿದೆ. ಆಚಾರ್ಯರ ಮೂಲದಲ್ಲೂ ಇದನ್ನು ಉಪಲಕ್ಷಣತಯಾ ಇಟ್ಟುಕೊಳ್ಳಬಹುದು. 'ಅಸ್ಯ ಸಂಕ್ಷೇಪಶಾಸ್ತ್ರತ್ವಾತ್ ನ ವಿಸ್ತರವಿರೋಧಿತಾ' ಎಂದು ಆಚಾರ್ಯರೇ ಮುಂದೆ ಹೇಳುವರು. ಪದ್ಯಮಾಲಾದ ವಚನ ಈ ರೀತಿಯಾಗಿದೆ—

**'ಪುನಃ ಪೂರ್ವಾದಿಕಾಷ್ಠಾಸು ವಾಸುದೇವಾದಿಕಾನ್ಯಜೇತ್ ।**
**ಮಾಯಾಂ ಜಯಾಂ ಕೃತಿಂ ಶಾಂತಿಂ ಯಜೇತ್ಕೋಣೇಷು ಚ ಕ್ರಮಾತ್ ॥'**

ಗಳಲ್ಲಿ ಎರಡೆರಡು ಮೂರ್ತಿಗಳಂತೆಯೂ ವಿದಿಕ್ಕುಗಳಲ್ಲಿ ಒಂದೊಂದರಂತೆಯೂ ಧ್ಯಾನಿಸಬೇಕು[೧].

---

೧ ಕೇಶವಾದಿ ಮೂರ್ತಿಗಳ ಆವರಣ ಕ್ರಮವೂ ಪದ್ಯಮಾಲಾದಲ್ಲಿ ಸ್ಫುಟವಾಗಿದೆ—

'ಕೇಶವಾದ್ಯಾಸ್ತತೋ ಮೂರ್ತೀರ್ದ್ವಾದಶ ಕ್ರಮತೋ ಯಜೇತ್ ।
ದಿಶಿ ದ್ವೇ ದ್ವೇ ಕೋಣ ಏಕ ಈಶೇ ದಾಮೋದರೋ ಭವೇತ್ ॥'

ಇಲ್ಲಿ ಮೂಲದಲ್ಲಿ ಪ್ರಚಲಿತವಾದ ಪಾಠ 'ಕೇಶವಾದೀಂಸ್ತತಃಪರಂ' ಎಂದಿದೆ. ಈ ಪಾಠವನ್ನೆ ಎಲ್ಲ ವ್ಯಾಖ್ಯಾನಕಾರರೂ ಆಯ್ದುಕೊಂಡಿದ್ದಾರೆ. ಈ ಪಕ್ಷದಲ್ಲಿ ಯಾವ ದಿಕ್ಕಿನಲ್ಲಿ ಯಾವ ಮೂರ್ತಿಗಳ ಆವರಣ ಎನ್ನುವ ಕುರಿತು ಮೂಲದಲ್ಲಿ ಏನೂ ಉಲ್ಲೇಖ ವಿಲ್ಲ ಎಂದಹಾಗಾಗುವುದು. ಆದರೆ ಮೂಲ ಕೋಶಗಳಲ್ಲಿ 'ಕೇಶವಾದೀಂಶ್ಚ ರಾಶಿಷು' ಎಂದೇ ಪಾಠವಿದೆ. ಎಂದ ಮೇಲೆ ಈ ಪಾಠವೇ ಸಾಧುವಿರಬೇಕು. ಆದರೆ ಇಲ್ಲಿ 'ರಾಶಿಷು' ಎನ್ನುವ ಪದದ ಅರ್ಥವೇನಿರಬಹುದು? ಅದು ಆವರಣಕ್ರಮವನ್ನು ಹೇಗೆ ಸೂಚಿಸ ಬಲ್ಲುದು? ಎನ್ನುವುದು ಒಂದು ಸಮಸ್ಯೆಯಂತೆಯೇ ಇದೆ. ಈ ಸಂದರ್ಭದಲ್ಲಿ ನಮಗೆ ಯಾವ ವ್ಯಾಖ್ಯಾನಕಾರರೂ ಸಹಕಾರಮಾಡಲಾರರು. ಏಕೆಂದರೆ ಅವರೆಲ್ಲ 'ತತಃಪರಂ' ಎಂಬ ಸುಲಭ ಪಾಠವನ್ನೆ ನೆಚ್ಚಿಕೊಂಡು ಈ ಜವಾಬ್ದಾರಿಯಿಂದ ನುಸುಳಿಕೊಂಡಿದ್ದಾರೆ. ಎಂದಮೇಲೆ ಇದಕ್ಕೇನರ್ಥವಿರಬಹುದು? ಆದರೆ ಇಲ್ಲಿ 'ರಾಶಿಷು' ಎಂಬ ಮೂರಕ್ಷರವೇ ಕೇಶವಾದಿಗಳ ಆವರಣಕ್ರಮವನ್ನು ಸಮರ್ಪಕವಾಗಿ ನಿರ್ದೇಶಿಸಬಲ್ಲುದು, ಅಂಥ ಅರ್ಥ ವ್ಯಾಪ್ತಿಯನ್ನು ನಾವು ಅದರಲ್ಲಿ ಕಂಡುಕೊಳ್ಳಬಹುದು ಎಂದಾಗ ಯಾರಿಗಾದರೂ ಅಚ್ಚರಿಯಾಗಬಹುದು! ಆ ಅರ್ಥ ಏನದು?

'ರಾಶಿಷು ಯಃ ಕ್ರಮಃ ತೇನ ಕ್ರಮೇಣ ದಿಕ್ಷು ಕೇಶವಾದೀನ್ ಯಜೇತ್' ಅಥವಾ 'ಮೇಷಾದಿರಾಶ್ಯಾಶ್ರಿತೇಷು ದಿಕ್ಷು ತೇನೈವ ಕ್ರಮೇಣ ಕೇಶವಾದೀನ್ ಯಜೇತ್' ಎಂದಿಷ್ಟರ್ಥವನ್ನು ಆ ಪದದಲ್ಲಿ ಮೊದಲು ತುಂಬಬೇಕು. ಜ್ಯೋತಿಃ ಶಾಸ್ತ್ರದ ಪ್ರಕಾರ ರಾಶಿಗಳಿಗೆ ಪ್ರತ್ಯೇಕವಾದ ದಿಕ್ಕುಗಳಿವೆ. ಅವು ಕೇಶವಾದಿಗಳ ಆವರಣ ಕ್ರಮದಂತೆಯೇ ಇವೆ. ಮೇಷ, ವೃಷಭ, ಇವೆರಡು ಪೂರ್ವದಲ್ಲೂ, ಮಿಥುನ ಆಗ್ನೇಯ ದಲ್ಲೂ, ಕರ್ಕಾಟಕ, ಸಿಂಹ, ದಕ್ಷಿಣದಲ್ಲೂ, ಕನ್ಯಾ ನೈರ್ಋತ್ಯದಲ್ಲೂ, ತುಲಾ, ವೃಶ್ಚಿಕ ಗಳು ಪಶ್ಚಿಮದಲ್ಲೂ, ಧನುಸ್ಸು ವಾಯುವ್ಯದಲ್ಲೂ, ಮಕರ, ಕುಂಭಗಳು ಉತ್ತರದಲ್ಲೂ ಮೀನವು ಈಶಾನ್ಯದಲ್ಲೂ ಇದೆಯೆಂದು ಜ್ಯೋತಿಃಶಾಸ್ತ್ರದ ಸಿದ್ಧಾಂತ. ಆವರಣ ಪೂಜೆ ಯಲ್ಲಿ ಕೇಶವಾದಿಗಳನ್ನು ಧ್ಯಾನಿಸುವುದೂ ಇದೇ ತೆರನಾಗಿ— ದಿಕ್ಕುಗಳಲ್ಲಿ ಎರಡೆರಡು ಮೂರ್ತಿಗಳಂತೆ ಮತ್ತು ವಿದಿಕ್ಕುಗಳಲ್ಲಿ ಒಂದೊಂದು ಮೂರ್ತಿಯಂತೆ.

ರಾಶಿಗಳ ದಿಗ್ವಿಭಾಗದ ಕುರಿತು ಪ್ರಶ್ನಮಾರ್ಗದಲ್ಲಿ ಹೀಗೆ ಉಲ್ಲೇಖವಿದೆ—

'ಐಂದ್ರ್ಯಾಂ ಮೇಷವೃಷಾವಗ್ನಿಕೋಣೇ ಮಿಥುನಭಂ ಸ್ಥಿತಮ್ ।
ಯಾಮ್ಯಾಂ ಕರ್ಕಟಸಿಂಹೌ ಸ್ತೋ ನೈರ್ಋತ್ಯಾಂ ದಿಶಿ ಕನ್ಯಕಾ ॥

**ಮತ್ಸ್ಯಕೂರ್ಮವರಾಹಾಂಶ್ಚ ನಾರಸಿಂಹಂ ಚ ವಾಮನಮ್ ॥ ೫೯ ॥**
**ಭಾರ್ಗವಂ ರಾಘವಂ ಕೃಷ್ಣಂ ಬುದ್ಧಂ ಕಲ್ಕಿನಮೇವ ಚ ।**
**ಅನಂತಂ ವಿಶ್ವರೂಪಂ ಚ ತದ್ಬಹಿಃ ಪೂಜಯೇತ್ಕ್ರಮಾತ್ ॥ ೬೦ ॥**

ಕೇಶವಾದಿ ದ್ವಾದಶ ಮೂರ್ತಿಗಳ ಹೊರಭಾಗದಲ್ಲಿ (ಪಂಚಮಾವರಣ ರೂಪವಾಗಿ) ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಅನಂತ, ವಿಶ್ವರೂಪ–ಈ ಹನ್ನೆರಡು ರೂಪಗಳನ್ನು (ಹಿಂದೆ ಹೇಳಿದ ಕ್ರಮದಂತೆಯೇ) ಪೂಜಿಸಬೇಕು.

**ಅನಂತಬ್ರಹ್ಮವಾಯ್ವೀಶಾನ್ ವೀಶಂ ಚಾಗ್ರೇ ಪ್ರಪೂಜಯೇತ್ ।**
**ವಾರುಣೀಂ ಚೈವ ಗಾಯತ್ರೀಂ ಭಾರತೀಂ ಗಿರಿಜಾಮಪಿ ॥ ೬೧ ॥**
**ಕೋಣೇಷು ವೀಂದ್ರವಾಮೇ ಚ ಸುಪರ್ಣೀಂ ಪ್ರಯಜೇದಪಿ ।**

ಅನಂತರ (ಷಷ್ಠಾವರಣರೂಪವಾಗಿ) ನಾಲ್ಕು ದಿಕ್ಕುಗಳಲ್ಲಿ ಶೇಷ, ಬ್ರಹ್ಮ, ವಾಯು, ರುದ್ರರನ್ನೂ ಮಧ್ಯದಲ್ಲಿ ದೇವರ ಮುಂಭಾಗದಲ್ಲಿ ಗರುಡನನ್ನೂ ಪೂಜಿಸಬೇಕು. ನಾಲ್ಕು ಮೂಲೆಗಳಲ್ಲಿ ವಾರುಣಿ, ಗಾಯತ್ರಿ, ಭಾರತಿ, ಗಿರಿಜೆಯರನ್ನೂ. ನಡುವೆ ಗರುಡನ ಎಡಬದಿಯಲ್ಲಿ ಸುಪರ್ಣಿಯನ್ನೂ ಪೂಜಿಸಬೇಕು.[1]

---

ವಾರುಣ್ಯಾಂ ತು ತುಲಾಕೀಟೌ ವಾಯುಕೋಣೇ ಧನುಃಸ್ಥಿತಿಃ ।
ಸೌಮ್ಯಾಂ ಮೃಗಘಟೌ ಸ್ಯಾತಾಮೈಶಾನ್ಯಾಂ ದಿಶಿ ಮೀನಭಮ್ ॥'
'ಪ್ರಾಚ್ಯಾದಿಗೃಹೇ ಕ್ರಿಯಾದಯಃ ದ್ವೌ ದ್ವೌ ಕೋಣಗತಾ ದ್ವಿಮೂರ್ತಯಃ ।'
(ಬೃಹಜ್ಜಾತಕ)

(ಕ್ರಿಯಾದಯಃ=ಮೇಷಾದಯಃ ।
'ಕ್ರಿಯತಾಬುರಿಜಿತುಮಕುಳೀರಲೇಯಪಾಥೋನಜೂಕಕೌರ್ಪ್ಯಾಖ್ಯಾಃ ।
ತೌಕ್ಷಿಕ ಆಕೋಕೇರೋ ಹೃದ್ರೋಗಶ್ಚಾಂತ್ಯಭಂ ಚೇತ್ಥಮ್ ।' (ಬೃಹಜ್ಜಾತಕ)
ದ್ವಿಮೂರ್ತಯಃ=ಮಿಥುನಕನ್ಯಾಧನುರ್ಮೀನಾಃ ।)

ಈ ರೀತಿಯಾಗಿ ಜ್ಯೋತಿಃಶಾಸ್ತ್ರದ ಸಹಕಾರದಿಂದ ಸುಂದರವಾದ ಅರ್ಥ ಸಿದ್ಧವಾಗುತ್ತದೆ. ಈ ಅರ್ಥ ಕ್ಲಿಷ್ಟವಾಗಿದೆ ಎಂಬುದೇನೋ ನಿಜ. ಆದರೆ ಉಪದೇಶಮಾತ್ರಗಮ್ಯವಾದ ಇಂಥ ತಂತ್ರಶಾಸ್ತ್ರದಲ್ಲಿ ಕ್ಲಿಷ್ಟತೆಯೂ ಒಂದು ಭೂಷಣವಲ್ಲವೆ? ಅದರಿಂದ ಈ ಅರ್ಥ ಇಲ್ಲಿ ಸಮರ್ಪಕವಾಗಿದೆ ಎಂದೆನ್ನಿಸುತ್ತದೆ. ಹೀಗೆ ಮೂರಕ್ಷರಗಳಲ್ಲಿ ಒಂದು ಕ್ರಮವನ್ನೆ ತುಂಬಬರುವಾಗ 'ತತಃಪರಂ' ಎಂದು ಪಾಠವಿಟ್ಟುಕೊಂಡು ಹಾರಿಸುವುದು ಯಾವ ಚೆನ್ನು?

[1] 'ಸುಪರ್ಣೀಂ ಪ್ರಯಜೇದಪಿ' ಎಂಬಲ್ಲಿ ಪ್ರಚಲಿತ ಪಾಠ 'ಸೌಪರ್ಣೀಂ ಪೂಜಯೇದಪಿ' ಎಂದು. ಆದರೆ ತಾಳೆಗರಿಯ ಪುಸ್ತಕಗಳಲ್ಲಿ 'ಸುಪರ್ಣೀಂ ಪ್ರಯಜೇದಪಿ'

**ಇಂದ್ರಾದೀನ್ ಶೇಷವಿಧ್ಯಂತಾನ್ ಸಭಾರ್ಯಾನ್ ಸಪರಿಗ್ರಹಾನ್ ॥**

ಅದರ ಹೊರಗಿನ ಏಳನೆಯ ಆವರಣದಲ್ಲಿ ಇಂದ್ರಾದ್ಯಷ್ಟದಿಕ್ಪಾಲಕರನ್ನೂ, ಊರ್ಧ್ವಾಧೋದಿಗಧಿಪತಿಗಳಾದ ಬ್ರಹ್ಮಶೇಷರನ್ನೂ[೧] ಅವರ ಪತ್ನೀಪರಿವಾರ ಆಯುಧ[೨]ಗಳೊಡನೆ ಅವರವರ ದಿಕ್ಕುಗಳಲ್ಲಿ ಧ್ಯಾನಿಸಬೇಕು.

## ನೈವೇದ್ಯ–ಧೂಪದೀಪ

**ಧೂಪದೀಪೌ ತತೋ ದತ್ವಾ ನೈವೇದ್ಯಂ ಮೂಲಮಂತ್ರತಃ ।**
**ಅನೇನ ಕ್ರಮಯೋಗೇನ ಜುಹುಯಾತ್ಸಂಸ್ಕೃತೇಽನಲೇ ॥ ೬೩ ॥**

ಈ ತೆರನಾಗಿ ಆವರಣಪೂಜೆಯನ್ನು ಮಾಡಿದ ನಂತರ ಧೂಪದೀಪಗಳ

---

ಎಂದೇ ಇದೆ ಗರುಡಪತ್ನಿಗೆ 'ಸೌಪರ್ಣೀ' ಎಂಬಂತೆ 'ಸುಪರ್ಣೀ' ಎಂಬ ಹೆಸರೂ ಕೂಡುತ್ತದೆ—

'ಸುಪರ್ಣೋಽಸ್ತ್ಯಸ್ಯಾಃ ಪತಿತ್ವೇನೇತಿ ಸುಪರ್ಣೀ ।'

೧ ಇಲ್ಲಿ ಎರಡು ಪಕ್ಷವಿದೆ ಊರ್ಧ್ವದಿಕ್ಕಿನಲ್ಲಿ ಬ್ರಹ್ಮ ಅಧೋದಿಕ್ಕಿನಲ್ಲಿ ಶೇಷ ಎಂದು ಒಂದಾದರೆ– ನೈರ್ಋತ್ಯ ಪಶ್ಚಿಮಗಳ ಮಧ್ಯದಲ್ಲಿ ಶೇಷನೂ, ಈಶಾನ್ಯ ಪೂರ್ವಗಳ ಮಧ್ಯದಲ್ಲಿ ಬ್ರಹ್ಮನೂ ಪೂಜ್ಯರು ಎಂದು ಇನ್ನೊಂದು ಪಕ್ಷ ಮೊದಲನೆಯದು ಯೋಗದೀಪಿಕಾಕಾರರಾದ ನಾರಾಯಣಪಂಡಿತಾಚಾರ್ಯರದು— 'ಅಥಊರ್ಧ್ವಮಹಿರ್ವಿಧಿಃ' ಎರಡನೆಯದು ವಿಷ್ಣುತೀರ್ಥರ ಮತ—

'ಅನಂತಂ ವರುಣಸ್ಯಾಪಿ ನಿರ್ಋತೇರ್ಮಧ್ಯತೋ ಯಜೇತ್ ।
ದೇವೇಂದ್ರೇಶಾನಯೋರ್ಮಧ್ಯೇ ಬ್ರಹ್ಮಾಣಂ ಚ ಪ್ರಪೂಜಯೇತ್ ॥'

ಎಂತಲೇ ಈ ಎರಡು ಪಕ್ಷಕ್ಕೂ ಅನುಗುಣವಾಗುವಂತೆ ಪದ್ಮಮಾಲಾದಲ್ಲಿ ಉಲ್ಲೇಖವಿದೆ–

'ಪಶ್ಚಾತ್ಪುರಸ್ತಾಚ್ಛೇಷಂ ಚ ವಿಧಿಂ ಚೈವ ಸಭಾರ್ಯಕಮ್ ।'

೨ ಇಂದ್ರಾದಿಗಳ ಆಯುಧಾದಿಗಳನ್ನು ಕೆಳಗಿನ ಪ್ರಮಾಣದಿಂದ ತಿಳಿಯಬಹುದು—

'ಇಂದ್ರಂ ಸುರಾಧಿಪಂ ಪೀತಂ ವಜ್ರಹಸ್ತಂ ಸುವಾಹನಮ್ ।
ಅಗ್ನಿಂ ತೇಜೋಧಿಪಂ ರಕ್ತಂ ಶಕ್ತಿಹಸ್ತಂ ಸುಭೂಷಣಮ್ ॥
ಯಮಂ ಪ್ರೇತಾಧಿಪಂ ಕೃಷ್ಣಂ ದಂಡಹಸ್ತಂ ಸಮರ್ಚಯೇತ್ ।
ರಕ್ಷೋಧಿಪಂ ನಿರ್ಋತಿಂ ಚ ಖಡ್ಗಹಸ್ತಂ ಸುಧೂಮ್ರಕಮ್ ॥
ಪಾಶಹಸ್ತಂ ಸುಶುಭ್ರಾಂಗಂ ವರುಣಂ ಚಾಂಭಸಾಂ ಪತಿಮ್ ।
ವಾಯುಂ ಪ್ರಾಣಾಧಿಪಂ ಧೂಮ್ರಮಂಕುಶಾಢ್ಯಕರಂ ಯಜೇತ್ ॥
ನಕ್ಷತ್ರಾಣಾಂ ಪತಿಂ ಸೋಮಂ ಶುಕ್ಲವರ್ಣಂ ಗದಾಧರಮ್ ।
ವಿದ್ಯಾಧಿಪಂ ತಥೇಶಾನಂ ಸ್ವಚ್ಛಂ ಶೂಲಕರಂ ಯಜೇತ್ ॥
ನಾಗಾಧಿಪಂ ತಥಾಽನಂತಂ ಗೌರಂ ಚಕ್ರಕರಂ ಯಜೇತ್ ।
ಲೋಕಾಧಿಪಂ ವಿಧಾತಾರಂ ರಕ್ತಂ ಪದ್ಮಕರಂ ಯಜೇತ್ ॥' (ಶಾರದಾತಿಲಕ)

ನ್ನರ್ಪಿಸಿ ಅಷ್ಟಾಕ್ಷರದಿಂದ[೧] ನೈವೇದ್ಯವನ್ನು ಪ್ರೋಕ್ಷಿಸಿ ಸಮರ್ಪಿಸಬೇಕು. ಸಂಸ್ಕಾರಪೂತವಾದ ಅಗ್ನಿಯಲ್ಲೂ ಇದೇ ರೀತಿಯಾಗಿ ಭಗವಂತನನ್ನು ಪೂಜಿಸಿ ನಿತ್ಯಹೋಮವನ್ನು ಮಾಡುತ್ತಿರಬೇಕು.

**ಪುಷ್ಪಾಂಜಲಿಶ್ಚ ಹೋಮಶ್ಚ ಮೂಲೇನಾಷ್ಟೋತ್ತರಂ ಶತಮ್ ।**
**ಸಕೃತ್ಸಕೃತ್ಪುಷ್ಪಮನ್ಯೈರ್ಹೋಮಸ್ತಸ್ಯ ಚತುರ್ಗುಣಃ ॥ ೬೪ ॥**

ಅಷ್ಟಾಕ್ಷರ ಮಂತ್ರವನ್ನು ಜಪಿಸಿ ೧೦೮ ಬಾರಿ ಪುಷ್ಪಾಂಜಲಿಯನ್ನೂ ಹೋಮವನ್ನೂ ಮಾಡಬೇಕು. ಉಳಿದ ಮಂತ್ರಗಳಿಂದ ಒಂದೊಂದು ಬಾರಿ ಪುಷ್ಪಾಂಜಲಿಯನ್ನೂ ನಾಲ್ಕು ಬಾರಿ ಹೋಮವನ್ನೂ ಮಾಡಬೇಕು.

**ವಿಸರ್ಜಯಿತ್ವಾ ನೈವೇದ್ಯಂ ಮೂಲೇನ ತ್ರಿಃ ಸಮರ್ಚ್ಯ ಚ ।**
**ಧೂಪದೀಪೌ ಪುನರ್ದತ್ವಾ ಪುನರ್ಮೂಲೇನ ಪೂರ್ವವತ್ ॥ ೬೫ ॥**
**ಅರ್ಚಯಿತ್ವಾ ಹರಿಂ ಧ್ಯಾತ್ವಾ ಜಪೇದಷ್ಟೋತ್ತರಂ ಶತಮ್ ।**
**ಪುನರ್ಧ್ಯಾಯೇದ್ಧರಿಂ ಸರ್ವದೇವದೇವೇಶ್ವರಂ ಪ್ರಭುಮ್ ॥ ೬೬ ॥**

ಅನಂತರ ನೈವೇದ್ಯವನ್ನು ವಿಸರ್ಜಿಸಿ, ಮೂಲಮಂತ್ರವಾದ ಅಷ್ಟಾಕ್ಷರ ದಿಂದ ಮೂರು ಬಾರಿ ಪುಷ್ಪಾಂಜಲಿಯನ್ನರ್ಪಿಸಿ, ಮತ್ತೆ ಪುನಃ ಧೂಪದೀಪ ಗಳಿಂದ ಪೂಜಿಸಿ, ಪುನಃ ಮೂಲಮಂತ್ರದಿಂದ ಮೂರು ಬಾರಿ ಪುಷ್ಪಾಂಜಲಿ ಯನ್ನರ್ಪಿಸಬೇಕು. ಮತ್ತೆ ಪ್ರದಕ್ಷಿಣನಮಸ್ಕಾರಾದಿಪೂರ್ವಕವಾಗಿ ಹರಿ ಯನ್ನು ಧ್ಯಾನಿಸಿ ೧೦೮ ಬಾರಿ ಮೂಲಮಂತ್ರವನ್ನು ಜಪಿಸಬೇಕು. ಮತ್ತೆ ಪುನಃ ತನ್ನ ಹೃದಯದಲ್ಲಿ ಆವಾಹಿಸುವುದಕ್ಕೋಸ್ಕರ ಸರ್ವೋತ್ತಮನಾದ ಜಗತ್ಪ್ರಭುವಾದ ಶ್ರೀಹರಿಯನ್ನು ಧ್ಯಾನಿಸಬೇಕು.

## ಫಲಶ್ರುತಿ

**ಜಪಧ್ಯಾನಹುತಾರ್ಚಾದೀನೇವಂ ಯಃ ಕುರುತೇ ಸದಾ ।**
**ಧರ್ಮಾರ್ಥಕಾಮಮೋಕ್ಷಾಣಾಂ ಭಾಜನಂ ಸ್ಯಾತ್ಸ ಏವ ಹಿ ॥ ೬೭ ॥**

ಯಾವನು ಈ ರೀತಿಯಾಗಿ ಜಪಹೋಮಾದಿಗಳನ್ನು ಮಾಡುವನೋ ಅವನೇ ಪುರುಷಾರ್ಥ ಚತುಷ್ಟಯಗಳಿಗೂ ಅರ್ಹನಾಗಿದ್ದಾನೆ.

**ಸರ್ವೋತ್ತಮಂ ಹರಿಂ ಜ್ಞಾತ್ವಾ ಯ ಏವಂ ಭಕ್ತಿಪೂರ್ವಕಮ್ ।**
**ಜಪಧ್ಯಾನಾದಿಭಿರ್ನಿತ್ಯಂ ಪೂಜಯೇನ್ನಾಸ್ಯ ದುರ್ಲಭಮ್ ॥ ೬೮ ॥**

---

೧ 'ಓಂ ನಮೋ ನಾರಾಯಣಾಯೇತಿ ಮೂಲಮಂತ್ರ ಉದಾಹೃತಃ ।'
(ಯೋಗದೀಪಿಕಾ)

ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿದು ಈ ರೀತಿಯಾಗಿ ಭಕ್ತಿಪೂರ್ವಕವಾಗಿ ಭಗವಂತನನ್ನಾರಾಧಿಸುವ ಪುಣ್ಯಪುರುಷನಿಗೆ ದುರ್ಲಭವೆಂಬುದಿಲ್ಲ.

**ಭಕ್ತಿಂ ಕೃತ್ವಾಽನ್ಯದೇವೇಷು ಬ್ರಹ್ಮರುದ್ರಾದಿಕೇಷ್ವಪಿ ।**
**ಸರ್ವೋತ್ಕರ್ಷಮವಿಜ್ಞಾಯ ವಿಷ್ಣೋರ್ಯಾತಿ ತಮೋ ಧ್ರುವಮ್॥**

ಶ್ರೀಹರಿ ಸರ್ವೋತ್ತಮ ಎಂಬುದನ್ನರಿಯದೆ ಯಾವ ದೇವತೆಗಳನ್ನು ಭಜಿಸಿದರೂ ತಮಸ್ಸಿನಿಂದ ಪಾರಾಗುವಂತಿಲ್ಲ.

**ನ ಯಜ್ಞಾ ನಚ ತೀರ್ಥಾನಿ ನೋಪವಾಸವ್ರತಾನಿ ಚ ।**
**ದೈವತಾನಿ ಚ ಸರ್ವಾಣಿ ತ್ರಾತುಂ ತಂ ಶಕ್ನುಯುಃ ಕ್ವಚಿತ್ ॥ ೨೦ ॥**

ಯಜ್ಞಗಳಾಗಲಿ, ಪುಣ್ಯತೀರ್ಥಗಳಾಗಲಿ, ವ್ರತೋಪವಾಸಾದಿಗಳಾಗಲಿ, ದೇವತೆಗಳಾಗಲಿ, ಏನೇ ಆಗಲಿ, ಯಾರೇ ಆಗಲಿ, ವಿಷ್ಣುವಿಮುಖನಾದ ಜೀವನನ್ನು ರಕ್ಷಿಸಲಾರರು.

**ಹರಿರ್ಹಿ ಸರ್ವದೇವಾನಾಂ ಪರಮಃ ಪೂರ್ಣಶಕ್ತಿಮಾನ್ ।**
**ಸ್ವತಂತ್ರೋಽನ್ಯೇ ತದ್ವಶಾ ಹಿ ಸರ್ವೇಽತಃ ಸ ಜಗದ್ಗುರುಃ ॥ ೨೧ ॥**

ಎಲ್ಲ ದೇವತೆಗಳಿಂದ ಶ್ರೇಷ್ಠನೂ, ಪೂರ್ಣಶಕ್ತಿಯುಳ್ಳ, ಸ್ವತಂತ್ರನೂ ಆದವನು ಶ್ರೀಹರಿಯೊಬ್ಬನೆ. ಉಳಿದವರೆಲ್ಲ ಅವನ ಅಡಿಯಾಳುಗಳು. ಎಂತಲೇ ಶ್ರೀಹರಿಯೇ ಜಗದ್ಗುರುವೆನಿಸಿದ್ದಾನೆ.

**ಬ್ರಹ್ಮಾದಯಶ್ಚ ತದ್ಭಕ್ತ್ಯಾ ಭಾಗಿನೋ ಭೋಗಮೋಕ್ಷಯೋಃ ।**
**ತಸ್ಮಾಜ್ಜ್ಞೇಯಶ್ಚ ಪೂಜ್ಯಶ್ಚ ವಂದ್ಯೋ ಧ್ಯೇಯಃ ಸದಾ ಹರಿಃ ॥೨೨॥**

ಬ್ರಹ್ಮಾದಿಗಳೂ ಕೂಡ ಭಗವಂತನ ಆರಾಧನೆಯಿಂದಲೇ ಸುಖಭೋಗವನ್ನುಣ್ಣುತ್ತಾರೆ, ಮೋಕ್ಷವನ್ನು ಪಡೆಯುತ್ತಾರೆ. ಅದರಿಂದ ಶ್ರೀಹರಿಯ ಮಹಿಮೆಯನ್ನು ತಿಳಿದುಕೊಳ್ಳಬೇಕು, ಶ್ರೀಹರಿಯನ್ನೇ ಎಂದೆಂದೂ ಪೂಜಿಸಬೇಕು, ವಂದಿಸಬೇಕು, ಧ್ಯಾನಿಸಬೇಕು.

ಇತಿ ಪ್ರಥಮೋಽಧ್ಯಾಯಃ

---

## ದ್ವಿತೀಯೋಽಧ್ಯಾಯಃ

**ಯಸ್ಯ ಕಸ್ಯಾಪಿ ಮಂತ್ರಸ್ಯ ನ್ಯಾಸಃ ಪಂಚಾಶದಕ್ಷರೈಃ ।**
**ವೀರ್ಯದಃ ಕೇಽಭಿತೋವಕ್ತ್ರಮಕ್ಷಿಕರ್ಣೇಷು ನಾಸಯೋಃ ॥ ೧ ॥**
**ಗಂಡಯೋರೋಷ್ಠಯೋರ್ದಂತಪಂಕ್ತ್ಯೋರ್ಮೂರ್ಧನಿ ವಾಚಿ ಚ ।**
**ದೋಃಪತ್ಸಂಧಿಷು ಸಾಗ್ರೇಷು ಪಾರ್ಶ್ವಯೋಃ ಪೃಷ್ಠಗುಹ್ಯಯೋಃ ॥**
**ತುಂದೇ ಚ ಹೃದಿ ಧಾತೂನಾಂ ಸಪ್ತಕೇ ಪ್ರಾಣಜೀವಯೋಃ ।**
**ಸಕ್ಷಕಾರಾನ್ನ್ಯಸೇದ್ವರ್ಣಾನ್ನೃಸಿಂಹಃ ಕ್ಷಸ್ಯ ದೇವತಾ ॥ ೩ ॥**

ಯಾವುದಾದರೂ ಮಂತ್ರದ ತುದಿಮೊದಲಲ್ಲಿ, ಹಿಂದೆ ಹೇಳಿರುವ ಐವತ್ತು ಅಕ್ಷರಗಳಿಂದ ಮತ್ತು ಕ್ಷಕಾರದಿಂದ ಅಂಗನ್ಯಾಸವನ್ನು ಮಾಡಬೇಕು.[೧] ಕ್ಷಕಾರದ ದೇವತೆ ನರಸಿಂಹ.[೨] ಹೀಗೆ ನ್ಯಾಸಮಾಡುವುದರಿಂದ ಮಂತ್ರವು ವಿಶೇಷ ಫಲಪ್ರದವಾಗುವುದು.

ನ್ಯಾಸಸ್ಥಾನಗಳು—

| | |
|---|---|
| ೧ ಹಣೆಯ ಮೇಲ್ಬದಿ | ೧೫ ಶಿರಸ್ಸು |
| ೨ ಮುಖ | ೧೬ ಬಾಯಿ |
| ೩,೪ ಕಣ್ಣುಗಳು | ೧೭-೨೬ ಕೈಬೆರಳಿನ ಸಂಧಿಗಳು ಮತ್ತು ತುದಿ |
| ೫,೬ ಎರಡು ಕಿವಿ | ೨೭-೩೬ ಕಾಲ್ಬೆರಳಿನ ,, ,, |
| ೭,೮ ಮೂಗಿನ ಸೊಳ್ಳೆಗಳು | ೩೭-೩೮ ಹೊಟ್ಟೆಯ ಎರಡು ಬದಿಗಳು |
| ೯,೧೦ ಎಡಬಲ ಕೆನ್ನೆ | ೩೯ ಹೊಟ್ಟೆಯ ಹಿಂಬದಿ |
| ೧೧,೧೨ ತುಟಿಗಳು | ೪೦ ಗುಹ್ಯ |
| ೧೩,೧೪ ಹಲ್ಲಿನ ಎರಡು ಸಾಲು | ೪೧ ಕೆಳಹೊಟ್ಟೆ |

---

೧ 'ಓಂ ಅಂ ಅಜಾಯ ನಮಃ', 'ಓಂ ಆಂ ಆನಂದಾಯ ನಮಃ' ಎಂದು ಮೊದಲಾಗಿ ನ್ಯಾಸಕಾಲದಲ್ಲಿ ಹೇಳುವ ಮಂತ್ರಗಳು.

೨ ಕಕಾರಷಕಾರಗಳ ಸಂಯುಕ್ತರೂಪವಾದ ಕ್ಷಕಾರಕ್ಕೆ ಕಾನನರಾಜನಾದ ಸಿಂಹ ಮತ್ತು ಪುರುಷನ ಸಂಯುಕ್ತರೂಪನಾದ ನೃಸಿಂಹನು ದೇವತೆ ಎನ್ನುವುದು ಔಚಿತ್ಯಪೂರ್ಣವಾಗಿದೆ. ಅದೂ ಅಲ್ಲದೆ ರೂಪದ್ವಯಸಂಧಾನರೂಪನಾದ ನರಸಿಂಹನು ಸಂಧಿದೇವತೆ ಎಂದು 'ವರ್ಣಯೋಃಅಂತರೇ ಸ್ಥಿತಮ್ । ನೃಸಿಂಹರೂಪಂ' ಮೊದಲಾದ ಪ್ರಮಾಣದಿಂದ ತಿಳಿದುಬರುವುದರಿಂದಲೂ ಕಕಾರಷಕಾರಗಳ ಸಂಧಿರೂಪವಾದ ಕ್ಷಕಾರಕ್ಕೆ ನೃಸಿಂಹನು ದೇವತೆ ಎನ್ನುವುದು ಉಚಿತವಾಗಿದೆ.

೪೨ ಹೃದಯ ೫೦ ವಾಯು
೪೩-೪೯ ಸಪ್ತಧಾತುಗಳು[೧] ೫೧ ಜೀವ

**ಜಪೇ ನ್ಯಾಸೇ ಚ ವಿಹಿತಃ ಕ್ಷೋಽಕ್ಷರಾಣಾಂ ಸದಾಽಂತತಃ ।**

ಕ್ಷಕಾರದ ಜಪವನ್ನಾಗಲಿ, ನ್ಯಾಸವನ್ನಾಗಲಿ ಮೊದಲಿನ ಐವತ್ತು ಅಕ್ಷರಗಳ ಜಪನ್ಯಾಸಗಳು ಮುಗಿದ ನಂತರವೇ ಮಾಡಬೇಕು.

**ಪ್ರಾಣಾಯಾಮೋ ರೇಚಯಿತ್ವಾ ಪೂರಯಿತ್ವಾ ಚ ಕುಂಭಕೇ ॥ ೪ ॥**

ಬಲಮೂಗಿನಿಂದ ಗಾಳಿಯನ್ನು ಹೊರಬಿಟ್ಟು ಎಡಮೂಗಿನಿಂದ ಶುದ್ಧ ವಾಯುವನ್ನು ಒಳಗೆಳೆದುಕೊಂಡು ಸುಷುಮ್ನಾನಾಡಿಯಲ್ಲಿ ವಾಯು ನಿರೋಧಮಾಡುವುದಕ್ಕೆ ಪ್ರಾಣಾಯಾಮವೆಂದು ಹೆಸರು.[೨]

---

೧ 'ತ್ವಕ್‌ಚರ್ಮಮಾಂಸರುಧಿರಮಜ್ಜಾಮೇದೋಽಸ್ಥಿ ಧಾತವಃ' (ಭಾಗವತ)

ತೊಗಲಿನಲ್ಲಿ ವ್ಯಾಪಿಸಿರುವ, ಸ್ಪರ್ಶಜ್ಞಾನವನ್ನುಂಟುಮಾಡುವ, ವಾಯ್ವಾತ್ಮಕವಾದ ಸೂಕ್ಷ್ಮೇಂದ್ರಿಯಕ್ಕೆ 'ತ್ವಕ್' ಎನ್ನುವರು. ಸ್ಥೂಲವಾದ ತೊಗಲಿಗೆ 'ಚರ್ಮ' ಎನ್ನುವರು. ಈಗ ಸಾಮಾನ್ಯವಾಗಿ ಈ ಎರಡು ಶಬ್ದಗಳೂ ಒಂದೇ ಅರ್ಥದಲ್ಲಿ ಬಳಕೆಯಲ್ಲಿವೆ.

'ಅಸ್ಥಿ ಯತ್ಸ್ವಗ್ನಿನಾ ಪಕ್ವಂ ತಸ್ಯ ಸಾರೋ ದ್ರವೋ ಘನಃ ।
ಯಃ ಸ್ವೇದವತ್ಪೃಥಗ್ಭೂತಃ ಸ ಮಜ್ಜೇತ್ಯಭಿಧೀಯತೇ ॥'
'ಸ್ಥೂಲಾದಿಷು ವಿಶೇಷೇಣ ಮಜ್ಜಾ ತ್ವಾಭ್ಯಂತರೇ ಸ್ಥಿತಃ ।'
'ಮೇದಸ್=ಮಾಂಸಜನ್ಯೇ ಧಾತುಭೇದೇ (ವಸಾ)' (ವಾಚಸ್ಪತ್ಯ)

೨ 'ಕುಂಭಕಃ ಪೂರಕೋ ರೇಚಃ ಪ್ರಾಣಾಯಾಮಸ್ತ್ರಿಲಕ್ಷಣಃ ।
ಪೂರಕಃ ಪೂರಣಂ ವಾಯೋಃ ಕುಂಭಕಃ ಸ್ಥಾಪನಂ ಕ್ವಚಿತ್ ॥
ಬಹಿರ್ನಿಃಸಾರಣಂ ತಸ್ಯ ರೇಚಕಃ ಪರಿಕೀರ್ತಿತಃ ।
ದಕ್ಷಿಣೇ ರೇಚಯೇದ್ವಾಯುಂ ವಾಮೇನಾಽಪೂರಿತೋದರಃ ।
ಕುಂಭೇನ ಧಾರಯೇನ್ನಿತ್ಯಂ ಪ್ರಾಣಾಯಾಮಂ ವಿದುರ್ಬುಧಾಃ ॥
ಅಂಗುಷ್ಠೇನ ಪುಟಂ ಗ್ರಾಹ್ಯಂ ನಾಸಾಯಾ ದಕ್ಷಿಣಂ ಪುನಃ ।
ಕನಿಷ್ಠಾನಾಮಿಕಾಭ್ಯಾಂ ಚ ವಾಮಂ ಪ್ರಾಣಸ್ಯ ಸಂಗ್ರಹೇ ॥
ಅಂಗುಷ್ಠತರ್ಜನೀಭ್ಯಾಂ ತು ಋಗ್ವೇದೀ ನಾಮಗಾಯನಃ ।
ಅಂಗುಷ್ಠಾನಾಮಿಕಾಭ್ಯಾಂ ತು ಗ್ರಾಹ್ಯಂ ಸರ್ವೈರಥರ್ವಭಿಃ ॥'
'ಪ್ರಾಣೋ ವಾಯುರಿತಿ ಪ್ರೋಕ್ತ ಆಯಾಮಸ್ತನ್ನಿರೋಧನಮ್ ।
ಪ್ರಾಣಾಯಾಮ ಇತಿ ಪ್ರೋಕ್ತೋ ಯೋಗಿನಾಂ ಯೋಗಸಾಧನಮ್ ॥'
'ದಕ್ಷಿಣೇ ರೇಚಕಂ ಕುರ್ಯಾದ್ವಾಮೇನಾಽಪೂರ್ಯ ಚೋದರಮ್ ।
ಕುಂಭಕೇನ ಜಪಂ ಕುರ್ಯಾತ್ಪ್ರಾಣಾಯಾಮಸ್ಯ ಲಕ್ಷಣಮ್ ॥'
'ಪ್ರಾಣಾಯಾಮಸ್ತ್ರಿಧಾ ಪ್ರೋಕ್ತೋ ರೇಚಕುಂಭಕಪೂರಕೈಃ' । (ಗ್ರಹಯಾಮಲ)

**ತಾರೈಸ್ತ್ರಿದ್ವಾದಶಾವೃತ್ತ್ಯೈದ್ವ್ಯೇಕದ್ವಾದಶಕೇನ ವಾ ।**
**ತತ್ತನ್ಮಂತ್ರೇಣ ವಾ ಕಾರ್ಯೋ ಗಾಯತ್ರ್ಯಾ ದಶತಾರಕೈಃ ॥ ೫ ॥**

೩೬ ಓಂಕಾರಗಳಿಂದ, ೨೪ ಓಂಕಾರಗಳಿಂದ, ಅಥವಾ ೧೨ ಓಂಕಾರಗಳಿಂದ ಲಾದರೂ ಪ್ರಾಣಾಯಾಮವನ್ನೆಸಗಬೇಕು. ಯಾವ ಮಂತ್ರವನ್ನು ಜಪಿ

---

'ಸವ್ಯಾಹೃತಿಂ ಸಪ್ರಣವಾಂ ಗಾಯತ್ರೀಂ ಶಿರಸಾ ಸಹ ।
ತ್ರಿಃ ಪಠೇದಾಯತಪ್ರಾಣಃ ಪ್ರಾಣಾಯಾಮಃ ಸ ಉಚ್ಯತೇ ॥' (ವಿಷ್ಣುಧರ್ಮೋತ್ತರ)
'ಗಾಯತ್ರೀಂ ಶಿರಸಾ ಸಾರ್ಧಂ ಜಪೇದ್ವ್ಯಾಹೃತಿಪೂರ್ವಿಕಾಮ್ ।
ಪ್ರತಿಪ್ರಣವಸಂಯುಕ್ತಾಂ ತ್ರಿರಯಂ ಪ್ರಾಣಸಂಯಮಃ ॥' (ಬೃಹದ್ವಿಷ್ಣು)
'ಪ್ರಾಣಸಂಧಾರಣಂ ಮಾಸಂ ಕುಶಾಗ್ರಚ್ಯುತಬಿಂದುನಾ ।
ಯಃ ಕುರ್ಯಾದಂಭಸಾ ರಾಜನ್ ಪ್ರಾಣಾಯಾಮಶ್ಚ ತತ್ಸಮಃ ॥' (ಅಗ್ನಿಪುರಾಣ)
'ಪ್ರಾಣಾಯಾಮಾ ಬ್ರಾಹ್ಮಣಸ್ಯ ತ್ರಯೋಽಪಿ ವಿಧಿವತ್ಕೃತಾಃ ।
ವ್ಯಾಹೃತಿಪ್ರಣವೈರ್ಯುಕ್ತಾ ವಿಜ್ಞೇಯಂ ಪರಮಂ ತಪಃ ॥' (ಮನು)
'ಏತದಾದ್ಯಂ ತಪಃ ಶ್ರೇಷ್ಠಮೇತದ್ಧರ್ಮಸ್ಯ ಲಕ್ಷಣಮ್ ।' (ಬೋಧಾಯನ)
'ಪ್ರಾಣಾಯಾಮೈರ್ದಹೇದ್ದೋಷಾನ್ಮನೋವಾಗ್ದೇಹಸಂಭವಾನ್ ।' (ಬೃಹಸ್ಪತಿ)
'ಪ್ರಾಣಾಯಾಮತ್ರಯಂ ಕುರ್ಯಾನ್ಮೂಲೇನ ಪ್ರಣವೇನ ವಾ ।' (ಕಾಲೀಹೃದಯ)
'ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ ।'(ಪಾತಂಜಲಯೋಗಸೂತ್ರ)
'ಬಾಹ್ಯಸ್ಯ ವಾಯೋರಾಚಮನಂ ಶ್ವಾಸಃ । ಕೋಷ್ಠಸ್ಥವಾಯೋರ್ನಿಃಸಾರಣಂ ಪ್ರಶ್ವಾಸಃ । ತಯೋರ್ಗತಿವಿಚ್ಛೇದ. ಉಭಯಾಭಾವಃ ಪ್ರಾಣಾಯಾಮಃ ॥'(ಭಾಷ್ಯ)
'ರೇಚಕಃ ಪೂರಕಶ್ಚೈವ ಕುಂಭಕಶ್ಚ ತ್ರಿಧಾ ಸ್ಮೃತಃ ।
ಪ್ರಾಣಾಯಾಮಃ' ಇತ್ಯುತ್ತರತ್ರ ಸ್ವಯಂ ವಕ್ಷ್ಯತಿ ।
'ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ಚ ವಾಮತಃ ।
ಕುಂಭಕಶ್ಚ ಸುಷುಮ್ನಾಯಾಂ ವಿಷ್ಣುಂ ವಾಯುಂ ಚ ಸಂಸ್ಮರೇತ್ ॥' ಇತಿ ಚ ।
'ದಕ್ಷಿಣೇ ರೇಚಯೇದ್ವಾಯುಂ ರೇಚನಾದ್ರೇಚಕಃ ಸ್ಮೃತಃ ।
ವಾಮೇನ ಪೂರಯೇದ್ವಾಯುಂ ಪೂರಣಾತ್ಪೂರಕಃ ಸ್ಮೃತಃ ।' ಇತ್ಯನ್ಯತ್ರ
'ಪ್ರಾಣಃ ಸ್ವದೇಹಗೋ ವಾಯುಸ್ತಸ್ಯ ವಾಯೋರ್ನಿರೋಧನಮ್ ।
ತದ್ರೇಚಕಂ ಪೂರಕಂ ಚ ಕುಂಭಕಂ ಚ ತ್ರಿಧೋಚ್ಯತೇ ॥
ನಾಸಿಕಾಪುಟಮಂಗುಲ್ಯಾ ಪೀಡ್ಯೈಕಮಪರೇಣ ತು ।
ಔದರಂ ರೇಚಯೇದ್ವಾಯುಂ ತತೋಽಯಂ ರೇಚಕಃ ಸ್ಮೃತಃ ॥
ಬಾಹ್ಯೇನ ಮರುತಾ ದೇಹಂ ದೃತಿವತ್ಪರಿಪೂರಯೇತ್ ।
ನಾಸಾಪುಟೇನಾಪರೇಣ ಪೂರಣಾತ್ಪೂರಕೋ ಮತಃ ॥
ನ ಮುಂಚತಿ ನ ಗೃಹ್ಣಾತಿ ವಾಯುಮಂತರ್ಬಹಿಃಸ್ಥಿತಮ್ ।
ಸಂಪೂರ್ಣಕುಂಭವತ್ತಿಷ್ಠೇದಚಲಃ ಸ ತು ಕುಂಭಕಃ ॥' (ವಾಯುಪುರಾಣ)

ಸುವೆವೋ ಅದೇ ಮಂತ್ರವನ್ನು ಮೇಲೆ ಹೇಳಿದಷ್ಟು ಬಾರಿ ಜಪಿಸುವುದು ಇನ್ನೊಂದು ಪಕ್ಷ. ಹತ್ತು ಓಂಕಾರಗಳಿಂದ ಕೂಡಿದ ಗಾಯತ್ರಿಯಿಂದಲೂ ಪ್ರಾಣಾಯಾಮವು ವಿಹಿತವಾಗಿದೆ[1].

**ಆದಾವೇವ ಜಪೇ ಕುರ್ಯಾಚ್ಛೋಷಣಂ ದಹನಂ ಪ್ಲುತಿಮ್ ।**
**ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಮ್ ॥ ೬ ॥**

ಜಪಕಾಲದಲ್ಲಿ ಮೊದಲಾಗಿ– ವಾಯು, ಅಗ್ನಿ, ವರುಣರ ಬೀಜಾಕ್ಷರ[2] ಗಳಿಂದ ಉದರ ಹೃದಯ ಶಿರಸ್ಸುಗಳಲ್ಲಿ ಹರಿಯನ್ನು ಧ್ಯಾನಿಸಿ ಪಾಪಪುರುಷನ ಶೋಷಣವನ್ನೂ ದಹನವನ್ನೂ ಶರೀರಕ್ಷಾಲನವನ್ನೂ ಮಾಡಬೇಕು.

---

೧ ಈ ಕೊನೆಯ ಪಕ್ಷವೇ ಈಗ ಪ್ರಚಲಿತವಾಗಿದೆ. ಒಂದಿನ ಶ್ಲೋಕದ ಟಿಪ್ಪಣಿಯಲ್ಲಿ ಉದಾಹರಿಸಿದ್ದ ಪ್ರಮಾಣಗಳೂ ಈ ಮಂತ್ರವನ್ನೇ ವಿಧಿಸಿವೆ ಎಂಬುದನ್ನು ಗಮನಿಸಬೇಕು.

ಮಂತ್ರ ಈ ತೆರನಾಗಿದೆ— "ಓಂ ಭೂಃ । ಓಂ ಭುವಃ । ಓಂ ಸ್ವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋಜ್ಯೋತೀ-ರಸೋಽಮೃತಂ ಬ್ರಹ್ಮ ಭೂರ್ಭುವಃಸ್ವರೋಮ್ ॥"

ಬೇರೆಬೇರೆ ಮಂತ್ರಗಳನ್ನು ಜಪಿಸುವಾಗ ಆಯಾ ಮಂತ್ರಗಳಿಂದಲೇ ಪ್ರಾಣಾಯಾಮವನ್ನಾಚರಿಸುವುದೂ ಈಗ ಬಳಕೆಯಲ್ಲಿದೆ. ಕೇವಲ ಓಂಕಾರದಿಂದ ಪ್ರಾಣಾಯಾಮವನ್ನಾಚರಿಸುವುದು ಸನ್ಯಾಸಿಗಳಿಗೆ ಮಾತ್ರ ವಿಹಿತವಾದುದೆಂದು ಸಂಪ್ರದಾಯಜ್ಞರ ಮತ. ಗೃಹಸ್ಥರಿಗೂ ನಿಷಿದ್ಧವಲ್ಲವೆಂಬ ಮತವೂ ಇದೆ

'ಭೂರ್ಭುವಃಸ್ವರ್ಮಹರ್ಜನಸ್ತಪಃ ಸತ್ಯಂ ತಥೈವ ಚ ।
ಸಪ್ತೋಂಕಾರಸಮಾಯುಕ್ತಂ ತಥಾ ತತ್ಸವಿತುಃ ಪರಮ್ ।
ಓಮಾಪೋ ಜ್ಯೋತಿರಿತ್ಯೇತತ್ ಶಿರಃ ಪಶ್ಚಾತ್ಪ್ರಯೋಜಯೇತ್ ॥'

(ಯೋಗಯಾಜ್ಞವಲ್ಕ್ಯ)

೨ 'ಓಂ ಯಂ' ಎಂಬುದು ವಾಯುಬೀಜ. 'ಓಂ ರಂ' ಎಂಬುದು ಅಗ್ನಿಬೀಜ. 'ಓಂ ವಂ' ಎಂಬುದು ವರುಣಬೀಜ.

'ತತಶ್ಚ ಬ್ರಹ್ಮಹತ್ಯೇತಿ ಧ್ಯಾಯೇತ್ಸ್ವಂ ಪಾಪಪೂರುಷಮ್ ।
ಆನೀಯ ನಾಭಿದೇಶಂ ತಂ ವಾಯುಬೀಜೇನ ಶೋಷಯೇತ್ ।
ಹೃದ್ಯಗ್ನಿಬೀಜತೋ ದಗ್ಧ್ವಾ ಭಸ್ಮ ವಾಮನಸಾ ತ್ಯಜೇತ್ ॥
ವಾರುಣೇನಾಥ ಬೀಜೇನ ಶಿರಃಸ್ಥಾಮೃತಧಾರಯಾ ।
ಪ್ಲಾವಯೇತ್ಸರ್ವಗಾತ್ರಾಣಿ ಕೃತ್ವಾಽಽತ್ಮಾನಂ ತತೋ ಹೃದಿ ॥' (ಪದ್ಯಮಾಲಾ)

ಜಪಕಾಲದ ಮಂತ್ರವಿಶೇಷಗಳನ್ನು 'ಕೃಷ್ಣಾಚಾರ್ಯಸ್ಮೃತಿಮುಕ್ತಾವಲಿ'ಯ ಆಹ್ನಿಕ ಪ್ರಕರಣ ಮತ್ತು 'ಆಹ್ನಿಕಮಂಜರಿ' ಮೊದಲಾದ ಗ್ರಂಥಗಳಿಂದ ತಿಳಿದುಕೊಳ್ಳಬಹುದು.

**ಏಕಪಂಚಾಶದ್ವರ್ಣಾನಾಂ ಚತುರ್ವಿಂಶಚ್ಚ ಮೂರ್ತಯಃ ।**
**ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥ ೭ ॥**
**ಕೋಲೋ ನೃಸಿಂಹಃ ಸಬಟುರ್ಜಾಮದಗ್ನ್ಯರಘೂದ್ವಹೌ ।**
**ವಾಸಿಷ್ಠಯಾದವೌ ಕೃಷ್ಣಾವಾತ್ರೇಯೋ ಬುದ್ಧಕಲ್ಕಿನೌ ॥ ೮ ॥**
**ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶನಾಮಕಾಃ[1] ।**

೫೧ ಅಕ್ಷರಗಳ ಅಜಾದಿ ನರಸಿಂಹಾಂತ ೫೧ ಮೂರ್ತಿಗಳು, ಕೇಶವಾದಿ ಚತುರ್ವಿಂಶತಿಮೂರ್ತಿಗಳು(೭೫), ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮರೂಪಗಳು(೭೯), ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಮೂರ್ತಿಗಳು(೮೩), ವಿಶ್ವತೈಜಸಪ್ರಾಜ್ಞತುರೀಯರೂಪಗಳು(೮೭), ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ವ್ಯಾಸ, ಕೃಷ್ಣ, ದತ್ತಾತ್ರೇಯ, ಬುದ್ಧ, ಕಲ್ಕಿ, ಶಿಂಶುಮಾರ ಈ ೧೩ ರೂಪಗಳು(೧೦೦), ಹೀಗೆ ಭಗವಂತನ ನೂರು ರೂಪಗಳು ಕಲಶದಲ್ಲಿ ಸನ್ನಿಹಿತವಾಗಿದ್ದು ಕಲಶನಾಮಕವಾಗಿವೆ.

**ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ॥ ೯ ॥**
**ಪೂರ್ವೋಕ್ತವಿಧಿನಾಽಭ್ಯರ್ಚ್ಯ[2] ಪ್ರತಿಮಾಂ ಶಿಷ್ಯಮೇವ ಚ ।**
**ಸ್ನಾಪಯೇತ್ಪೂರ್ವಮುಚ್ಚಾರ್ಯಾ ಜಪೋಽನೂನಃ ಸಹಸ್ರತಃ ॥೧೦॥**
**ಮೂಲಮಂತ್ರಸ್ಯ ಚಾಂಗಾನಾಂ[3] ನ್ಯಾಸಃ ಸ್ನಾನಾದನಂತರಮ್ ।**
**ಪ್ರತಿಮಾಯಾಂ ಸನ್ನಿಧಿಕೃಚ್ಛಿಷ್ಯೇ ಮಾಹಾತ್ಮ್ಯಕೃದ್ಭವೇತ್ ॥೧೧॥**

ಈ ನೂರು ಮೂರ್ತಿಗಳಿಂದೊಡಗೂಡಿದ, ಮೂಲರೂಪಿಯಾದ ನಾರಾಯಣನನ್ನು ಕುಂಭೋದಕದಲ್ಲಿ ಆವಾಹಿಸಿ, ಹಿಂದೆ ಹೇಳಿದಂತೆ ಅಷ್ಟಾಕ್ಷರಗಳಿಂದ ಪೂಜಿಸಿ, ಸಂಸ್ಕಾರಪೂತವಾದ ಆ ಕಲಶದಿಂದ ಪ್ರತಿಮೆಯನ್ನು ಅಭಿ

---

೧ 'ಸುಖರೂಪತ್ವಾತ್ ಕಲಶನಾಮಕಾಃ' (ನಾರಾಯಣೀಯ) । ಕೇನ=ಸುಖೇನ ಲಸಂತೀತಿ ಕಲಶನಾಮಕಾಃ=ಕಲಶನಾಮಿಕಾಃ ಕಲಾಃ । ಯದ್ವಾ ಕಲಾಭೂತಾ ಅಜಾದಯಃ ಕಲಶನಾಮಕಾ ಇತಿ ಪುಂಸ್ತ್ವಂ ಯುಜ್ಯತೇ ।

೨ 'ಪೂರ್ವೋಕ್ತವಿಧಿನೇತಿ । ಅಷ್ಟಾಕ್ಷರೇಣ ಸಂಪೂಜ್ಯೇತ್ಯಾದ್ಯುಕ್ತವಿಧಿನಾ, ಲಕ್ಷ್ಮೀಧರೇ ಇತ್ಯಾದಿನಾ, ಧೂಪದೀಪೌ ತತೋ ದತ್ವೇತ್ಯಾದಿನಾ ಚೋಕ್ತ-ಪ್ರಕಾರೇಣ್ಯಾತ್ಯರ್ಥಃ ।' (ನಾರಾಯಣೀಯ)

೩ 'ಅಂಗಾನಾಂ, ವಿಭಕ್ತಿವಿಪರಿಣಾಮೇನಾಂಗೇಷು ನ್ಯಾಸಃ= ತತ್ವಾನಾಂ ಮಾತೃಕಾಣಾಂ ಚ ನ್ಯಾಸಃ ಕಾರ್ಯ ಇತಿ ಶೇಷಃ ।' (ಛಲಾರೀಯ)

ಷೇಚಿಸಬೇಕು. ವೈಷ್ಣವದೀಕ್ಷೆಯನ್ನು ಪಡೆಯುವ ಶಿಷ್ಯನಿಗೆ ದೀಕ್ಷಾಭಿಷೇಕವನ್ನೂ ಈ ತೆರನಾಗಿಯೇ ಮಾಡಬೇಕು. ಅಭಿಷೇಕದ ಮೊದಲು ಒಂದು ಸಾವಿರಕ್ಕೆ ಕಮ್ಮಿಯಿಲ್ಲದೆ ಮೂಲಮಂತ್ರ ಜಪವೂ, ಅಭಿಷೇಕದ ನಂತರ ಅಂಗಗಳಲ್ಲಿ ತತ್ತ್ವನ್ಯಾಸ-ಮಾತೃಕಾನ್ಯಾಸಗಳೂ ವಿಹಿತವಾಗಿವೆ. ಈ ತೆರನಾದ ಅಭಿಷೇಕದಿಂದ ಪ್ರತಿಮೆಯಲ್ಲಿ ಭಗವತ್ಸನ್ನಿಧಾನವುಂಟಾಗುವುದು. ಶಿಷ್ಯನಲ್ಲಿ ಜ್ಞಾನಭಕ್ತ್ಯಾದಿ ಗುಣಗಳಿಂದ ಮಹತ್ತ್ವವುಂಟಾಗುವುದು.

**ಕಲಶಃ[1] ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಭಗಮ್[2] ।**
**ಯೋಗ್ಯತಾಂ[3] ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಕಾರಯೇತ್ ॥೧೨॥**

ಕಲಶಾಭಿಷೇಕದಿಂದ ಕೀರ್ತಿ, ಆಯುಸ್ಸು, ಬುದ್ಧಿ, ಸ್ಮರಣಶಕ್ತಿ, ಕಾಂತಿ, ಸಂಪತ್ತು ಹೆಚ್ಚುವವು. ಯೋಗ್ಯತೆ ಅಭಿವ್ಯಕ್ತವಾಗುವುದು. ಪಾಪವೆಲ್ಲ ನಾಶವಾಗಿ ಪುಣ್ಯವೃದ್ಧಿಯಾಗುವುದು.

## ಹೋಮಪದ್ಧತಿ

**ಉಪಸರ್ಗೇಷು ಜಾತೇಷು ದೈವಭೂತಾತ್ಮಹೇತುಷು ।**
**ಆಯುಷೇ ವಾಽಥ ಶಾಂತ್ಯೈ[4] ವಾ ಶ್ರಿಯೇ ವಾ ಪುಣ್ಯವೃದ್ಧಯೇ ।**
**ಯೋಗ್ಯತಾಯೈ ಮಂತ್ರಸಿದ್ಧ್ಯೈ ವಿಷ್ಣೋಃ ಪ್ರೀತ್ಯರ್ಥಮೇವ ವಾ ॥**
**ಜುಹುಯಾತ್ಸಹಸ್ರಮಯುತಂ ಲಕ್ಷಂ ಕೋಟಿಮಥಾಪಿ ವಾ ।**
**ಪೂರ್ವವತ್ಸಂಸ್ಕೃತೇ ವಹ್ನೌ ಧ್ಯಾತ್ವಾ ದೇವಂ ಜನಾರ್ದನಮ್ ॥೧೪॥**

ದೈವಿಕ, ಭೌತಿಕ ಅಥವಾ ಮಾನಸಿಕವಾದ[5] ಪೀಡೆಗಳುಂಟಾದಾಗ ಆಯು

೧ 'ಕಲಶಃ=ಕಲಶಾಭಿಷೇಕಃ' 'ಯದ್ವಾ ಕಲಶಃ=ಕಲಶನಾಮಕಃ ಅಜಾದಿರೂಪಸಮುದಾಯಃ ।' (ನಾರಾಯಣೀಯ)

೨ 'ಭಗಮ್=ಐಶ್ವರ್ಯಾದಿಷಟ್ಕಮ್ ।' (ನಾರಾಯಣೀಯ)
'ಭಗಮ್=ಐಶ್ವರ್ಯಮ್ ।' (ಛಲಾರೀಯ)

೩ ಯೋಗ್ಯತಾಂ=ಯೋಗ್ಯತಾಭಿವ್ಯಕ್ತಿಮ್ ।

೪ 'ಶಾಂತ್ಯೈ=ಸುಖಾರ್ಥಮ್ । ಯದ್ವಾ ಶಾಂತಿಃ=ನಿವೃತ್ತಿಃ । ವಿಭಕ್ತಿವಿಪರಿಣಾಮಃ। ಜಾತಾನಾಮುಪಸರ್ಗಾಣಾಂ ಶಾಂತ್ಯೈ=ನಿವೃತ್ತ್ಯೈಯಿತ್ಯರ್ಥಃ ॥' (ನಾರಾ.)

೫ ಅತಿವೃಷ್ಟಿ, ಅನಾವೃಷ್ಟಿ, ದುರ್ಭಿಕ್ಷೆ—ಇವೆಲ್ಲ ದೈವಿಕ ಪೀಡೆಗಳು. ಅನ್ನಪಾನಾದಿಗಳ ವ್ಯತ್ಯಾಸದಿಂದ ಬರುವಂಥ ಜ್ವರಾದಿಗಳು ಭೌತಿಕ ಪೀಡೆಗಳು. ಮನೋಜನ್ಯವಾದ ದುಃಸ್ವಪ್ನ ಮೊದಲಾದ ಪೀಡೆಗಳು ಮಾನಸಿಕ ಪೀಡೆಗಳು. ಇದಕ್ಕೆ ಇನ್ನೊಂದು ತೆರನಾದ ಅರ್ಥವನ್ನೂ ಹೇಳುವರು. ದೈವಿಕ ಅಂದರೆ ಗ್ರಹಗಳಿಂದ ಉಂಟಾದ ಪೀಡೆ—ಧೂಮಕೇತು,

ವೃದ್ಧಿ, ಶಾಂತಿ, ಪುಣ್ಯಾಭಿವೃದ್ಧಿ, ಯೋಗ್ಯತಾಭಿವ್ಯಕ್ತಿಗಳಿಗಾಗಿಯೂ, ಮಂತ್ರವು ಫಲಪ್ರದವಾಗುವುದಕ್ಕಾಗಿಯೂ, ವಿಷ್ಣುಪ್ರೀತಿಗೋಸ್ಕರವಾಗಿಯೂ ಹಿಂದೆ ಹೇಳಿದಂತೆ ಸಂಸ್ಕಾರಪೂತವಾದ ಅಗ್ನಿಯಲ್ಲಿ ಭಗವಂತನನ್ನು ಧ್ಯಾನಿಸಿ ಯಥಾಶಕ್ತಿ ಸಹಸ್ರ ದಶಸಹಸ್ರ ಹೋಮವನ್ನಾಗಲಿ, ಲಕ್ಷಹೋಮವನ್ನಾಗಲಿ, ಕೋಟಿಹೋಮವನ್ನಾಗಲಿ ಆಚರಿಸಬೇಕು.

**ಕೃತ್ವಾ ತ್ರಿಮೇಖಲಂ ಕುಂಡಂ ಚತುರ್ವಿಂಶಾಂಗುಲೋಚ್ಛ್ರಿತಮ್ ।**
**ತಾವತ್ಖಾತಂ ಚತುಷ್ಕೋಣಮುಚ್ಛ್ರಿತಂ ದ್ವಾದಶೈವ ವಾ ॥ ೧೫ ॥**
**ದ್ವ್ಯಂಗುಲಂ ತ್ರ್ಯಂಗುಲಂ ವಾಽಪಿ ಚತುರಂಗುಲಮೇವ ವಾ ।**
**ವಿಸ್ತಾರೋ ಮೇಖಲಾನಾಂ ಸ್ಯಾದಂತ್ಯಾ ವಾ[1] ಚತುರಂಗುಲಾ ।**

---

ಗ್ರಹಣ, ಮುಂತಾದುವು. ಭೌತಿಕವೆಂದರೆ ಆಕಾಶದಲ್ಲಿ ಸೂರ್ಯನಿಗೆ ಪರಿವೇಷ ಕಂಡು ಬರುವುದು, ಮುಂತಾದುವು. ಆತ್ಮ ಎಂದರೆ ಭೂಮಿ; ಆದರಿಂದ ಭೂಕಂಪಾದಿಗಳು ಆತ್ಮಪೀಡೆಗಳು.

'ದೈವಯೋಗತಃ ಜಾತೇಷು ಮಹಾವಾಯುಮಹಾವೃಷ್ಟಿದುರ್ಭಿಕ್ಷಮಾರಿಕಾದಿಷು, ಭೂತಹೇತುಷು=ಅನ್ನಾಗ್ನ್ಯುದಕಾದಿಭೂತಜಾತೇಷು ಸ್ಫೋಟಕಾಹಿಕ್ಯಾಜ್ವರಾದಿಷು, ಆತ್ಮಹೇತುಷು=ಮನೋಜಾತೇಷು ದುಃಸ್ವಪ್ನಾದಿಷು, ಉಪಸರ್ಗೇಷು=ದುಃಖೇಷು, ಜಾತೇಷು ಸತ್ಸು । ಯದ್ವಾ ದೈವಹೇತುಷು=ದಿವಿ ಸೂರ್ಯಾದಿಗ್ರಹಜಾತೇಷು ಧೂಮಕೇತ್ವಾದಿಷು, ಭೂತಮ್=ಅಂತರಿಕ್ಷಮ್, ತತ್ರ ಜಾತೇಷು ಸೂರ್ಯಪರಿವೇಷಾದಿಷು, ಆತ್ಮಾ=ಭೂಮಿಃ, ತತ್ರ ಜಾತೇಷು ಭೂಕಂಪಾದಿಷು, ಉಪಸರ್ಗೇಷು=ಅರಿಷ್ಟಸೂಚಕೇಷೂತ್ಪಾತೇಷು ಜಾತೇಷ್ವಿತ್ಯರ್ಥಃ ।' (ಛಲಾರೀಯ)

'ಸ್ವರ್ಭಾನುಕೇತುನಕ್ಷತ್ರಗ್ರಹತಾರಾರ್ಕಚಂದ್ರಜಮ್ ।
ದಿವಿ ಚೋತ್ಪದ್ಯತೇ ಯಸ್ಮಾತ್ತದ್ದಿವ್ಯಮಿಹ ಭಾಷಿತಮ್ ॥
ಯದಭ್ರಸಂಧ್ಯಾದಿಗ್ದಾಹಪರಿವೇಷಾದಯಸ್ತಥಾ ।
ಯದಂತರಿಕ್ಷಸಂಜಾತಂ ನಾಭಸಂ ತತ್ರ ಚಕ್ಷತೇ ।
ಭೂಮಾವುತ್ಪದ್ಯತೇ ಯತ್ತು ತದ್ಭೌಮಂ ಪರಿಕೀರ್ತಿತಮ್ ॥' (ಬೃಹಸ್ಪತಿ)

೧ ಚತುರಂಗುಲಾ ವಾ=ಚತುರಂಗುಲ್ಯೈವ ।

'ವಾಶಬ್ದ ಏವಾರ್ಥಃ । ತಥಾಚ ಚತುರಂಗುಲ್ಯೈವೇತ್ಯರ್ಥಃ ।' (ನಾರಾ.)

ಛಲಾರೀಯ ವ್ಯಾಖ್ಯಾನರೀತ್ಯಾ 'ಚತುರಂಗುಲಾ' ಎನ್ನುವುದಕ್ಕೆ ನಿಯಮೇನ ಚತುರಂಗುಲವುಳ್ಳದ್ದೆಂದರ್ಥ. ಆ ಪಕ್ಷದಲ್ಲಿ ವಾಶಬ್ದಕ್ಕೆ ಅವಧಾರಣಾರ್ಥಕತ್ವ ಇರದಿದ್ದರೂ 'ಸರ್ವಂ ವಾಕ್ಯಂ ಸಾವಧಾರಣಂ' ಎಂಬ ನ್ಯಾಯದಿಂದ ಆ ಅರ್ಥ ಸರಿಕೂಡುವುದು.

'ಅಂತ್ಯಾ ವಾ=ಬಾಹ್ಯಾ ವಾ, ನಿಯತಚತುರಂಗುಲೇತಿ|ಆದ್ಯದ್ವಿತೀಯಯೋಃ

**ಚತುರ್ವಿಂಶಾಂಗುಲಂ ವಾ ತದ್ವಿಸ್ತಾರೋ ದ್ವಾದಶೈವ ವಾ¹ ॥ ೧೬ ॥**
**ಅಶ್ವತ್ಥಪತ್ರಾಕೃತಿಃ ಸ್ಯಾನ್ಮೂಲತೋ ದ್ವಾದಶಾಂಗುಲಾ ।**
**ಯೋನಿಃ ಖಾತೇ ಚ ವಿನತಾ ಪ್ರವಿಷ್ಟಾ ದ್ವ್ಯಂಗುಲಂ ತಥಾ ॥ ೧೭ ॥**
**ತದಾತ್ಮನಿ ಹರಿಂ ಧ್ಯಾತ್ವಾ ಕುಂಡೇ ದೇವೀಂ ಶ್ರಿಯಂ ತಥಾ ।**
**ವಿಷ್ಣುವೀರ್ಯಾತ್ಮಕಂ ವಹ್ನಿಂ ನಿಕ್ಷಿಪೇತ್ತ್ರಣವೇನ ಹ ॥ ೧೮ ॥**

ಮೂರು ಮೇಖಲೆ(ಕುಂಡದ ಸುತ್ತಲಿನ ದಂಡೆ)ಗಳುಳ್ಳ ಚತುಷ್ಕೋಣಾಕಾರವಾದ ಕುಂಡವನ್ನು ಮಾಡಬೇಕು. ಈ ಕುಂಡದ ಮೇಲುಬದಿ ೨೪ ಅಂಗುಲ (ಒಂದು ಮೊಳ) ಉನ್ನತವಿದ್ದರೆ ಕೆಳಗೆಯೂ ಅಷ್ಟೇ ಅಗೆದು ಕಟ್ಟಬೇಕು. ಎತ್ತರ ೧೨ ಅಂಗುಲಗಳಷ್ಟಿದ್ದರೆ ನಾಕೆಂದು ಇನ್ನೊಂದು ಪಕ್ಷವಿದೆ.²

---

ದ್ವ್ಯಂಗುಲಾದಿನಿಯಮಾತಿಕ್ರಮೇಽಪಿ ಅಂತ್ಯಾಯಾಶ್ಚತುರಂಗುಲತ್ವಂ ನಿಯತಮೇವೇತ್ಯಾಶಯಃ ।' (ಛಲಾರೀಯ)

೧ ಇದು ಕುಂಡದ ವಿಸ್ತಾರವನ್ನು ಹೇಳತಕ್ಕ ವಾಕ್ಯ ಎಂದು ಒಂದು ಪಕ್ಷ; ಮೇಖಲೆಯ (ವೇದಿಕೆಯ) ವಿಸ್ತಾರವನ್ನೆ ಹೇಳುತ್ತದೆ ಎಂದು ಇನ್ನೊಂದು ಪಕ್ಷ. 'ವಾಕ್ಯಾರ್ಥವಿವೃತಿ'ಯಲ್ಲಿ ಇದು ಕುಂಡದ ವಿಸ್ತಾರವೆಂದೆ ಹೇಳಿದೆ. ಛಲಾರಿ ಟಿಪ್ಪಣಿಯಲ್ಲಿ ಮಾತ್ರ ಇದು ಮೇಖಲೆಯ ವಿಸ್ತಾರ ಎಂಬ ಪಕ್ಷವನ್ನು ಬರೆದು ಕುಂಡದ ವಿಸ್ತಾರವನ್ನು ತಿಳಿಸುವುದೂ ಇರಬಹುದು ಎಂದು ಎರಡು ಪಕ್ಷವನ್ನೂ ಉಲ್ಲೇಖಿಸಿದ್ದಾರೆ. ಇದು ಕುಂಡದ ವಿಸ್ತಾರ ಎಂಬ ಪಕ್ಷವು ಎರಡು ವ್ಯಾಖ್ಯಾನಗಳಲ್ಲೂ ಪರಿಗೃಹೀತವಾದ್ದರಿಂದ ನಾವು ಅದನ್ನೇ ಬಳಸಿಕೊಂಡಿದ್ದೇವೆ. ಇಲ್ಲಿ ೨೪ ಅಂಗುಲ ಎತ್ತರದ ಕುಂಡದ ವಿಸ್ತಾರ ೨೪ ಅಂಗುಲ, ೧೨ ಅಂಗುಲ ಎತ್ತರದ ಕುಂಡದ ವಿಸ್ತಾರ ೧೨ ಅಂಗುಲ. ಹೀಗೊಂದು ವ್ಯವಸ್ಥೆಯನ್ನಿಟ್ಟುಕೊಳ್ಳಬೇಕು. ಅಂತೂ ಕುಂಡದ ಎತ್ತರ ಎಷ್ಟೊ ಅಷ್ಟೇ ವಿಸ್ತಾರ.

೨ ಇಲ್ಲಿ ಎರಡು ಪಕ್ಷವಿದೆ. ಒಂದು–ಮೇಲಿನ ಎತ್ತರ ೧೨ ಅಂಗುಲವಾದಂತೆ ಕೆಳಗೂ ೧೨ ಅಂಗುಲದಷ್ಟೇ ಗುಂಡಿಯನ್ನು ಮಾಡಬೇಕು ಎಂದು. ಇನ್ನೊಂದು– ಮೇಲೆ ೧೨ ಅಂಗುಲವಾದರೂ ಕೆಳಗಿನ ಕ್ರಮದಲ್ಲಿ ವ್ಯತ್ಯಾಸವಿಲ್ಲ, ಅದು ೨೪ ಅಂಗುಲವೇ ಇರಬೇಕು ಎಂದು. ಇದರಲ್ಲಿ ಎರಡನೆಯ ಪಕ್ಷವೇ ಸಾಧುವೆಂದು ಭಾಸವಾಗುತ್ತದೆ. ಅದರಿಂದಲೇ ಆಚಾರ್ಯರು-'ಉಚ್ಛ್ರಿತಂ ದ್ವಾದಶೈವ ವಾ' ಎಂದು ಎತ್ತರದ ಮಾನವನ್ನೇ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಇಲ್ಲದಿದ್ದರೆ 'ಉಚ್ಛ್ರಿತಂ' ಎನ್ನುವ ಪದ ಅಲ್ಲಿ ಅವಶ್ಯಕವಿಲ್ಲ. ಅಥವಾ ಎತ್ತರ ತಗ್ಗು ಇವೆರಡನ್ನೂ ಸೂಚಿಸುವ 'ಉಚ್ಛ್ರಿತಂ ಖಾತಂ ಚ' ಎಂಬ ಎರಡು ಪದವನ್ನೂ ಇಡಬೇಕು ಎಂದು ಕಾಣುತ್ತದೆ.

'ಕುಂಡವಿಸ್ತಾರಮಾಹ । ಚತುರ್ವಿಂಶೇತಿ । ತದ್ವಿಸ್ತಾರಃ ಕುಂಡವಿಸ್ತಾರಃ । ದ್ವಾದಶಾಂಗುಲೋಚ್ಛ್ರಾಯಪಕ್ಷೇ ಕುಂಡವಿಸ್ತಾರಮಾಹ । ದ್ವಾದಶೈವೇತಿ ।'
(ನಾರಾಯಣೀಯ)

ಮೇಖಲೆಗಳ ಅಗಲವು ಕ್ರಮವಾಗಿ ಎರಡು, ಮೂರು, ನಾಲ್ಕು ಅಂಗುಲಗಳೆಂದು ಒಂದು ಪಕ್ಷ. ಮೊದಲಿನೆರಡು ಮೇಖಲೆಗಳ ಅಳತೆಯ ವಿಷಯದಲ್ಲಿ ಪಕ್ಷಾಂತರವಿದೆ. ಆದರೆ ಕೊನೆಯ ಮೇಖಲೆ ಮಾತ್ರ ನಾಲ್ಕು ಅಂಗುಲದ್ದೇ ಆಗಿರಬೇಕು. ಇನ್ನು ಕುಂಡದ ಅಗಲ ೨೪ ಅಂಗುಲಗಳಾಗಲಿ, ೧೨ ಅಂಗುಲಗಳಾಗಲಿ ಇರಬೇಕು. ಮೇಖಲೆಯ ಮೇಲ್ಬದಿಯಲ್ಲಿ ಅಶ್ವತ್ಥದ ಎಲೆಯ ಆಕಾರದಲ್ಲಿ ಹನ್ನೆರಡಂಗುಲ ಉದ್ದವಾದ ಯೋನಿಯೊಂದನ್ನು ರಚಿಸಬೇಕು.[೧] ಅದರ ಹತ್ತಂಗುಲಗಳು ಮೇಖಲೆಯ ಮೇಲೂ ಉಳಿದೆರಡಂಗುಲಗಳು ಕುಂಡದ ಒಳಗಡೆಗೆ ಬಗ್ಗಿಯೂ ನಿರ್ಮಿತವಾಗಿರಬೇಕು. ಹೀಗೆ ಪರಮಾತ್ಮನ ಸನ್ನಿಧಾನ ಯೋಗ್ಯವಾದುದರಿಂದ ಪ್ರತಿಮಾಸ್ಥಾನೀಯವಾದ ಕುಂಡದಲ್ಲಿ ಶ್ರೀಹರಿಯನ್ನೂ, ಅವನೊಡನೆ ರಮಿಸುತ್ತಿರುವ ರಮೆಯನ್ನೂ ಧ್ಯಾನಿಸಿ ವಿಷ್ಣುವೀರ್ಯರೂಪವಾದ ಅಗ್ನಿಯನ್ನು ಆ ಕುಂಡದಲ್ಲಿ ಓಂಕಾರಪೂರ್ವಕವಾಗಿ ಕ್ಷೇಪಿಸಬೇಕು.[೨]

---

'ತಥಾಚ ವಾಶಬ್ದೌ ವ್ಯವಸ್ಥಿತವಿಕಲ್ಪಾರ್ಥೌ ।' (ಛಲಾರೀಯ)

ಮೇಖಲೆಯ ವಿಸ್ತಾರವನ್ನು ಹೇಳುತ್ತದೆ ಎನ್ನುವ ಪಕ್ಷದಲ್ಲಿ—ಆ ಪರಿಮಾಣವನ್ನು ಮೂರು ಮೇಖಲೆಗಳಲ್ಲಿ ಸರಿಯಾಗಿ ಹಂಚಿಕೊಳ್ಳಬೇಕು. ಮೇಖಲೆಯ ಒಟ್ಟು ವಿಸ್ತಾರ ೨೪ ಅಂಗುಲವೆಂದಾದಾಗ ಪ್ರತಿಯೊಂದು ಮೇಖಲೆಯ ವಿಸ್ತಾರ ೮ ಅಂಗುಲ. ಒಟ್ಟು ಹರವು ೧೨ ಅಂಗುಲವಾದಾಗ ಪ್ರತಿಯೊಂದರ ಹರವು ೪ ಅಂಗುಲ.

'ತದ್ವಿಸ್ತಾರಃ=ತಿಸೃಣಾಂ ಮೇಖಲಾನಾಂ ಮಿಲಿತ್ವಾ ವಿಸ್ತಾರಃ, ಚತುರ್ವಿಂಶಾಂಗುಲಂ ವಾ ಸ್ಯಾತ್ । ಏಕೈಕಸ್ಯಾಃ ಅಷ್ಟಾಂಗುಲತ್ವಮಿತಿ ಭಾವಃ । ಪಕ್ಷಾಂತರಮಾಹ । ದ್ವಾದಶೈವೇತಿ । ಪ್ರತ್ಯೇಕಂ ಚತುರಂಗುಲತ್ವಮಿತಿ ಭಾವಃ ।' (ಛಲಾರೀಯ)

೧ ಇಲ್ಲಿ 'ಯೋನಿ' ಎಂಬ ಶಬ್ದದಿಂದ ಕುಂಡದ ಎದುರು ಬದಿಯಲ್ಲಿ. ಆಜ್ಯಾಹುತಿಯನ್ನು ಸುರಿಯಲು ಮಾಡಿರುವ ಅಶ್ವತ್ಥದಲದಂತೆ ಆಕಾರವುಳ್ಳ ವಸ್ತುವಿಶೇಷವನ್ನು ನಿರ್ದೇಶಿಸಿದ್ದಾರೆ. ಅದರ ಉದ್ದಗಲಗಳು ಮುಂದಿನ ಪ್ರಮಾಣದಲ್ಲಿ ಸ್ಪಷ್ಟವಾಗಿವೆ—

'ದೈರ್ಘ್ಯಾತ್ ಸೂರ್ಯಾಂಗುಲಾ ಯೋನಿಸ್ತ್ರ್ಯಂಶೋನಾ ವಿಸ್ತರೇಣ ತು ।
ಏಕಾಂಗುಲೋಚ್ಛ್ರಿತಾ ಸಾ ತು ಪ್ರವಿಷ್ಟಾಽಭ್ಯಂತರೇ ತಥಾ ॥
ಕುಂಭದ್ವಯಸಮಾಯುಕ್ತಾ ಚಾಶ್ವತ್ಥದಲವನ್ನತಾ ।
ಅಂಗುಷ್ಠಮೇಖಲಾಯುಕ್ತಾ ಮಧ್ಯೇಽತ್ವಾಜ್ಯಧೃತಿಸ್ತಥಾ॥' (ತ್ರೈಲೋಕ್ಯಸಾರ)

೨ ಪ್ರಾಚೀನರ ಈ ಹೋಮಪದ್ಧತಿಯ ಹಿನ್ನೆಲೆಯಲ್ಲಿ ಒಂದು ಸುಂದರವಾದ ರೂಪಕದ ಕಲ್ಪನೆಯಿದೆ. ಹೋಮಕಾಲದಲ್ಲಿ ಕುಂಡದ ಬಳಿಯಿಟ್ಟುಕೊಳ್ಳುವ ಭಗವತ್ಪ್ರತೀಕದಲ್ಲಾಗಲಿ, ಕುಂಡದಲ್ಲೇ ಆಗಲಿ ಪರಮಾತ್ಮನ ಲೀಲಾವಿಭೂತಿಯನ್ನು ನೆನೆದುಕೊಂಡು

ಹೋಮಕಾರ್ಯವನ್ನೆಸಗಬೇಕು. ಕುಂಡದಲ್ಲಿ ರಮಾದೇವಿ ಸನ್ನಿಹಿತಳಾಗಿದ್ದಾಳೆ. ತನ್ನ ಪೂಜಾಪ್ರತೀಕದಲ್ಲಿ ಸನ್ನಿಹಿತನಾದ ಶ್ರೀಹರಿ ಅಗ್ನಿರೂಪವಾದ ತನ್ನ ವೀರ್ಯವನ್ನು ಯೋನಿಪ್ರತಿನಿಧಿಯಾದ ಯೋನಿಯ ಮೂಲಕ ರಮೆಯ ಗರ್ಭದಲ್ಲಿಡುವನು. ಇದು ಹೋಮದ ಅಗ್ನಿಪ್ರತಿಷ್ಠೆಯಲ್ಲಿ ಹಿಂದಿನವರು ಕಂಡುಕೊಂಡ ಅರ್ಥ. ಇದು 'ಜಗತಃ ಪಿತರೌ' ಎನ್ನಿಸಿಕೊಂಡ ಲಕ್ಷ್ಮೀನಾರಾಯಣರ ಕ್ರೀಡಾಂಗಣ, ಇದು ಜಗದ್ವ್ಯಾಪಾರದ ಮೊದಲ ಮೆಟ್ಟಿಲು. ಇದರಿಂದ ಜಗತ್ತು ಹುಟ್ಟಿ ನಿರ್ಮಿತವಾಯಿತು. ಆದ್ದರಿಂದ ಇದು ಭಗವಂತನ ಸೃಷ್ಟಿವ್ಯಾಪಾರದ ಅನುಸಂಧಾನದ ಒಂದು ರೀತಿ. ಈ ಅರ್ಥವನ್ನು ಕಲ್ಪಿಸಿಕೊಂಡಾಗ ಪುರುಷಸೂಕ್ತದ ಅರ್ಥ ಇನ್ನಷ್ಟು ಸ್ಪಷ್ಟವಾಗುವುದು ಆ ಸೂಕ್ತವೂ ಇದೇ ರೀತಿಯಲ್ಲಿ ರೂಪಕವಾಗಿ ಯಜ್ಞವನ್ನು ನಿರೂಪಿಸುತ್ತದೆ 'ಯಜ್ಞೇನ ಯಜ್ಞಮಯಜಂತ ದೇವಾಃ', 'ತಸ್ಮಾದ್ಯಜ್ಞಾತ್ಸರ್ವಹುತಃ । ಋಚಃ ಸಾಮಾನಿ ಜಜ್ಞಿರೇ।' ಎಲ್ಲ ಜಗತ್ತೂ ಸರ್ವಭಕ್ಷಕನಾದ ಯಜ್ಞರೂಪಿ ವಿಷ್ಣುವಿನಿಂದ ಉಂಟಾಯಿತು. ಅಪೌರುಷೇಯಗಳಾದ ವೇದಗಳು ಕೂಡ ಅವನ ಬಾಯಿಂದಲೇ ಹೊಮ್ಮಿದುವು. ಈ ಮಹಾಯಜ್ಞಕ್ಕೆ ಜಗತ್ತೇ ಕುಂಡವಾಗಬಲ್ಲುದು. ಅದಕ್ಕೆ ನಮ್ಮಂತೆ ತುಪ್ಪ, ಕಟ್ಟಿಗೆ, ಹವಿಸ್ಸು ಯಾವುದೂ ಬೇಕಾಗುವುದಿಲ್ಲ. ವಸಂತವೇ ತುಪ್ಪವಾಗಬಲ್ಲುದು, ಗ್ರೀಷ್ಮವೇ ಕಟ್ಟಿಗೆಯಾಗಬಲ್ಲುದು, ಶರತ್ತೇ ಹವಿಸ್ಸಾಗಬಲ್ಲುದು, ಕಾಲಪುರುಷನನ್ನೇ ಹೋಮಿಸಿ ಜಗಜ್ಜಾಲವನ್ನು ನಿರ್ಮಿಸಬಹುದು. ಇಂಥ ಮಹಾಹೋಮಗಳ ಅನುಸಂಧಾನಕ್ಕಾಗಿ ಮಾಡುವ ಅಣುರೂಪದ ಹೋಮಗಳೇ ನಮ್ಮ ಹೋಮಗಳು. ಇದು ಹೋಮದ ಹಿನ್ನೆಲೆ. ಈ ಸಂದರ್ಭದಲ್ಲಿ ಇದಕ್ಕೆ ಸಂವಾದಿಯಾದ ಗೀತೆಯ ಮಾತನ್ನು ಇಲ್ಲಿ ಉದಾಹರಿಸಬಹುದು—

'ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥'
'ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ।'

ಸರ್ವಗತವಾದ ಬ್ರಹ್ಮ ಯಜ್ಞದಲ್ಲಿ ಪ್ರತಿಷ್ಠಿತವಾಗಿದೆ. ಇದರಿಂದ ನಿಮಗೆ ಬೇಕಾದುದನ್ನೆಲ್ಲ ಉತ್ಪಾದಿಸಿರಿ ಎನ್ನುವ ಗೀತೆಯ ಮಾತನ್ನೂ, ಯಜ್ಞದ ಹಿನ್ನೆಲೆಯನ್ನೂ ಅನುಸಂಧಾನ ಮಾಡಿಕೊಂಡಾಗ ಪ್ರಾಚೀನರ ರೂಪಕ ಇನ್ನಷ್ಟು ಸ್ಫುಟವಾಗಿ, ಸೊಗಸಾಗಿ ಭಾಸವಾಗುವುದು. ಅದರಿಂದಲೇ ಶ್ರುತಿ ಶ್ರೀಹರಿಯನ್ನು 'ಯಜ್ಞೋ ವೈ ವಿಷ್ಣುಃ' ಎಂದು ಸ್ತುತಿಸುತ್ತದೆ; ಸಹಸ್ರನಾಮ 'ಯಜ್ಞೋ ಯಜ್ಞಪತಿರ್ಯಜ್ವಾ' ಎಂದು ಹೊಗಳುತ್ತದೆ. ಅಗ್ನಿರೂಪವಾದ ವೀರ್ಯವನ್ನು ಕುಂಡದಲ್ಲಿ ಪ್ರತಿಷ್ಠಾಪಿಸಿ 'ಯಜ್ವ' ಎನ್ನಿಸಿಕೊಂಡವನೂ ಅವನೇ ತಾನೆ. ಯೋಗದೀಪಿಕಾದಲ್ಲಿ ಈ ಮಾತು ಸ್ಪಷ್ಟವಾಗಿ ಬರುತ್ತದೆ—

'ರಮಮಾಣಂ ಸ್ಮರೇದ್ದೇವ್ಯಾ ಪರಂ ನಾರಾಯಣಂ ತತಃ ।
ಅಂಗಾರಾನ್ ಸುಶುಭಾನ್ ಶುದ್ಧಾನ್ ಶರಾವೇ ಪರಿಪೂರ್ಯ ಚ ॥
ಯೋನೌ ನ್ಯಸ್ಯ ಹರೇರ್ವೀರ್ಯಮಿತಿ ಸ್ಮೃತ್ವಾ ಸಮರ್ಚಯೇತ್ ।'

**ಕುರ್ಯಾತ್ಕ್ರಿಯಾಃ ಷೋಡಶ ಚ ವ್ಯಾಹೃತೀಭಿಃ ಪೃಥಕ್ ಪೃಥಕ್ ।**
**ವಹ್ನೇಸ್ತದ್ಗಹರೇಃ ಪ್ರೀತಿಂ ಕುರ್ವನ್ ದ್ರವ್ಯೈರ್ಯಜೇತ್ತತಃ ॥ ೧೯ ॥**

ವ್ಯಾಹೃತಿ ಮಂತ್ರಗಳಿಂದ ಪ್ರತ್ಯೇಕವಾಗಿ ಆಹುತಿಯಿತ್ತು ಗರ್ಭಾಧಾನಾದಿ ಷೋಡಶ¹ಸಂಸ್ಕಾರಗಳನ್ನೂ ಮಾಡಬೇಕು, ಮತ್ತು ಅಗ್ನಿಗೂ ಅಂತರ್ಯಾಮಿಯಾದ ಪರಶುರಾಮರೂಪಿ ಭಗವಂತನ ತೃಪ್ತಿಗಾಗಿ ವಿವಿಧ ದ್ರವ್ಯಗಳಿಂದ ಹೋಮಿಸಬೇಕು.

---

ಕುಂಡೇ ನ್ಯಸೇದ್ಧರಿರ್ಗರ್ಭಮಾಧತ್ತೇತಿ ವಿಚಿಂತಯೇತ್ ॥' (ಯೋಗದೀ.)

ಇಲ್ಲಿ ಮೂಲದಲ್ಲಿರುವ 'ತದಾತ್ಮನಿ' ಎಂಬ ಪದಕ್ಕೆ ಪರಮಾತ್ಮನ ಪ್ರತೀಕರೂಪವಾದ ಕುಂಡ ಅಥವಾ ಪ್ರತಿಮೆಯೆಂದು ಅರ್ಥವಿಟ್ಟುಕೊಂಡು ಈ ಅರ್ಥ ಬರೆದುದಾಗಿದೆ. ಆದರೆ 'ಆತ್ಮನಿ' ಎನ್ನುವುದಕ್ಕೆ ಇನ್ನೊಂದು ಸ್ವರಸವಾದ ಅರ್ಥವಿದೆ 'ಆತ್ಮನಿ' ಎಂದರೆ 'ತನ್ನಲ್ಲಿ' (ಯಜಮಾನನಲ್ಲಿ) ಎಂದೂ ಅರ್ಥ. ನಾರಾಯಣೀಯ ವ್ಯಾಖ್ಯಾನದಲ್ಲಿ ಈ ಅರ್ಥವನ್ನು ಬರೆದಿದ್ದಾರೆ— 'ಆತ್ಮನಿ=ಸ್ವಾತ್ಮನಿ' (ನಾರಾಯಣೀಯ). ತನ್ನಲ್ಲಿ ಭಗವಂತನ ಸನ್ನಿಧಾನವನ್ನೂ ಕುಂಡದಲ್ಲಿ ರಮೆಯನ್ನೂ ಧ್ಯಾನಿಸಿ ಯಾಗಮಾಡುವ ಪದ್ಧತಿಯೂ ಸುಂದರವಾಗಿದೆ. ಅದು ತಪ್ಪೇನೂ ಇಲ್ಲ. ಆದರೆ ಹಾಗೆ ಧ್ಯಾನಿಸುವಾಗ ಎಲ್ಲಿ ಅಭೇದಾನುಸಂಧಾನದ ದುರ್ಭಾವನೆ ಮನಸ್ಸಿನಲ್ಲಿ ಮೂಡೀತೋ ಎನ್ನುವ ಭಯದಿಂದಲೇ ಇರಬೇಕು—ವ್ಯಾಖ್ಯಾನಕಾರರು ಆ ಅರ್ಥವನ್ನು ಹೆಚ್ಚಾಗಿ ಬಳಸಿಕೊಳ್ಳಲಿಲ್ಲ. ನಾರಾಯಣೀಯದಲ್ಲೂ ಈ ಅರ್ಥವನ್ನು ಬರೆದ ನಂತರ 'ಯದ್ವಾಪಕ್ಷ'ವನ್ನು ಸೇರಿಸಿ 'ತದಾತ್ಮನಿ=ತಾದೃಗ್ಲಕ್ಷಣೋಪೇತಸ್ವರೂಪೇ ಕುಂಡೇ' ಎಂದು ವ್ಯಾಖ್ಯಾನಿಸಿದ್ದಾರೆ. ಅಂತೂ ಈ ಎರಡು ಪಕ್ಷಗಳನ್ನೂ ಪ್ರಾಮಾಣಿಕಗಳೆನ್ನಬಹುದು.

೧ ಷೋಡಶ ಸಂಸ್ಕಾರಗಳು—

'ಷೋಡಶ ಚೇತಿ । ಗರ್ಭಾಧಾನಪುಂಸವನಸೀಮಂತವೈಷ್ಣವಬಲಿಜಾತಕರ್ಮನಾಮಕರಣನಿಷ್ಕ್ರಮಣಾನ್ನಪ್ರಾಶನಚೌಲೋಪನಯನಮಹಾನಾಮ್ನೀಮಹಾವ್ರತಸ್ನಾತಕಗೋದಾನಿಕಸಮಾವರ್ತನವಿವಾಹರೂಪಾನ್ ಷೋಡಶಸಂಸ್ಕಾರಾನಿತ್ಯರ್ಥಃ ।' (ನಾರಾಯಣೀಯ)

'ಗರ್ಭಾಧಾನಂ ಪುಂಸವನಂ ಸೀಮಂತೋ ವೈಷ್ಣವೋ ಬಲಿಃ ।
ಜಾತಕಂ ನಾಮ ನಿಷ್ಕ್ರಮೋಽನ್ನಾಶನಂ ಚೌಲಕರ್ಮ ಚ ॥
ಉಪನೀತಿರ್ಮಹಾನಾಮ್ನೀ ಮಹಾವ್ರತಮತಃ ಪರಮ್ ।
ಉಪನಿಷಚ್ಚ ಗೋದಾನಂ ಸಮಾವರ್ತನಮೇವ ಚ ।
ವಿವಾಹಶ್ಚೈವಮಿತ್ಯೇತಾಃ ಕುರ್ಯಾತ್ತು ಷೋಡಶಕ್ರಿಯಾಃ ॥'(ವಿಷ್ಣುತೀರ್ಥೀಯ)
'ಗರ್ಭಾಧಾನಂ ಕೃತಂ ಸ್ವಾಮಿನ್ನಿತಿ ಬದ್ಧಾಂಜಲಿಃ ಸ್ಮರೇತ್ ।
ಏವಂ ಪುಂಸವನಂ ಕಾರ್ಯಂ ಸೀಮಂತೋನ್ನಯನಂ ತಥಾ ॥

**ಆಜ್ಯೇನ ವಾ ಪಾಯಸೇನ ಸಮಿದ್ಭಿಃ ಕ್ಷೀರಿಣಾಮಥ ।[೧]**
**ತಿಲೈರ್ವಾ ತಂಡುಲೈರ್ವಾಽಪಿ ಮಧುರೈಸ್ತ್ರಿಭಿರೇವ[೨] ವಾ ॥ ೨೦ ॥**
**ಬ್ರಹ್ಮವೃಕ್ಷ[೩]ಸಮಿದ್ಭಿರ್ವಾ ಸಮಿದ್ಭಿರ್ವಾಽಮೃತೋದ್ಭವೈಃ ।**
**ಅಮೃತಾಃ ಸಮಿಧೋ ಜ್ಞೇಯಾಃ ಸರ್ವತ್ರ ಚತುರಂಗುಲಾಃ ॥ ೨೧ ॥**

ತುಪ್ಪ, ಪರಮಾನ್ನ, ತುಂಡರಿಸಿದಾಗ ಬುಡದಲ್ಲಿ ಹಾಲಿನಂಥ ದ್ರವವನ್ನು ಸುರಿಸುವ ಅಶ್ವತ್ಥ ಮೊದಲಾದ ಮರಗಳ ಸಮಿತ್ತು, ಎಳ್ಳು, ಅಕ್ಕಿ, ಹಾಲು ತುಪ್ಪ ಜೇನುಗಳ ಬೆರಕೆಯಾದ 'ಮಧುರತ್ರಯ', ಪಲಾಶದ ಸಮಿತ್ತು, ಇವು ಗಳಲ್ಲಿ ಯಾವೊಂದೂ ಹೋಮದ್ರವ್ಯಕ್ಕೆ ವಿಹಿತಗಳಾಗಿವೆ. ಅಮೃತಬಳ್ಳಿಯ

---

ಅಥ ವಿಷ್ಣುಬಲಿಂ ಚೈವ ಜಾತಕರ್ಮ ತತಃ ಪರಮ್ ।
ಉಪನಿಷ್ಕ್ರಮಣಂ ನಾಮಕರಣಂ ಚ ತತಃ ಪರಮ್ ॥
ಅನ್ನಪ್ರಾಶನಚೌಲೇ ಚ ತಥೋಪನಯನಂ ಮಹತ್ ।
ಮಹಾವ್ರತಾನಿ ಚತ್ವಾರಿ ವಿವಾಹೋ ವಿಹೃತಿರ್ವಸೋಃ ॥
ಷೋಡಶೈತಾಃ ಕ್ರಿಯಾಃ ಕಾರ್ಯಾಃ ।' (ಯೋಗದೀಪಿಕಾ)
'ಗರ್ಭಾಧಾನಮೃತೌ ಪುಂಸಃ ಸವನಂ ಸ್ಯಂದನಾತ್ಪುರಾ ।
ಷಷ್ಠೇಽಷ್ಟಮೇ ವಾ ಸೀಮಂತಃ ಪ್ರಸವೇ ಜಾತಕರ್ಮ ಚ ॥
ಅಹನ್ಯೇಕಾದಶೇ ನಾಮ ಚತುರ್ಥೇ ಮಾಸಿ ನಿಷ್ಕ್ರಮಃ ।
ಷಷ್ಠೇಽನ್ನಪ್ರಾಶನಂ ಮಾಸಿ ಚೂಡಾ ಕಾರ್ಯಾ ಯಥಾಕುಲಮ್ ।
ಏವಮೇನಃ ಶಮಂ ಯಾತಿ ಬೀಜಗರ್ಭಸಮುದ್ಭವಮ್ ॥' (ಯಾಜ್ಞವಲ್ಕ್ಯ)

ಇಲ್ಲಿ 'ಯೋಗದೀಪಿಕಾ'ದಲ್ಲಿ 'ಉಪನಿಷ್ಕ್ರಮಣಂ ನಾಮಕರಣಂ' ಎಂಬುದನ್ನು ಮುಂದುಹಿಂದಾಗಿ ಇಟ್ಟುಕೊಳ್ಳಬೇಕು. ಉಪನಿಷ್ಕ್ರಮಣದ ಮೊದಲೇ ನಾಮಕರಣ ಸಂಪ್ರದಾಯ ಮತ್ತು ಪ್ರಮಾಣಗಳಿಂದ ಸಿದ್ಧ. ಷೋಡಶ ಸಂಸ್ಕಾರಗಳ ವಿವರವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

೧ 'ಕ್ಷೀರಿಣಾಂ ಸಮಿದ್ಭಿಃ=ಅಶ್ವತ್ಥೋದುಂಬರಪ್ಲಕ್ಷಾದಿಭಿಃ ।' (ನಾರಾಯಣೀಯ)

೨ 'ಆಜ್ಯಂ ಕ್ಷೀರಂ ಮಧು ತಥಾ ಮಧುರತ್ರಯಮುಚ್ಯತೇ ।' (ಕಾತ್ಯಾಯನ)
'ಮಧುರೈಃ=ಮಧುಶರ್ಕರಾಗುಡೈಃ, ಯದ್ವಾ ಮಧ್ವಾಜ್ಯಕ್ಷೀರೈಃ ।' (ಛಲಾ.)
ಆದರೆ ನಾರಾಯಣೀಯದಲ್ಲಿ ಮಧುರತ್ರಯವನ್ನು ಬೇರೆ ರೀತಿಯಾಗಿ ಉಲ್ಲೇಖಿಸಿದ್ದಾರೆ. ಸಕ್ಕರೆ, ಜೇನು, ಹಾಲು ಅಥವಾ ಸಕ್ಕರೆ, ತುಪ್ಪ, ಹಾಲು ಇವು ಮಧುರತ್ರಯ ಎಂದು ಅವರ ಪಕ್ಷ.
ಮಧುರೈಸ್ತ್ರಿಭಿರಿತಿ ಶರ್ಕರಾಮಧುಕ್ಷೀರೈಃ, ಶರ್ಕರಾಘೃತಕ್ಷೀರೈರ್ವಾ ।' (ನಾರಾಯಣೀಯ)

೩ 'ಬ್ರಹ್ಮವೃಕ್ಷಃ=The Palasa tree' (V. S. Apte)

ಸಮಿತ್ತುಗಳನ್ನು ಮಾತ್ರ ಯಾವಾಗಲೂ ನಾಲ್ಕು ಅಂಗುಲದವುಗಳನ್ನೇ ಉಪಯೋಗಿಸಬೇಕು.

**ಏವಮೇವ ತು ದೀಕ್ಷಾಯಾಮಾಜ್ಯೇನೈವಾಽಹುತಿಕ್ರಿಯಾ ।**
**ಪೂಜಾ[೧] ಚ ಕಾರ್ಯಾ ವಿಧಿವತ್ಪೂರ್ವಂ ಸರ್ವಹುತೇಷ್ವಪಿ ॥ ೨೨ ॥**

ವೈಷ್ಣವದೀಕ್ಷೆಯು[೨] ಕಾಲದಲ್ಲಿ ಮಾಡುವ ಹೋಮದ ವಿಧಾನವೂ ಇದೇ ತೆರನಾಗಿದೆ. ಆದರೆ ಆಹುತಿಯನ್ನು ಮಾತ್ರ ತುಪ್ಪದಿಂದಲೇ ಕೊಡಬೇಕು. ಈ ಎಲ್ಲ ಹೋಮಗಳ ಮೊದಲೂ ವಿಧಿಪ್ರಕಾರವಾಗಿ ಪ್ರಧಾನದೇವತಾಪೂಜೆ, ಗಣಪತಿಪೂಜೆ, ಇವನ್ನೂ ಮಾಡಬೇಕು.[೩]

---

೧ '**ಪೂಜೇತಿ । ಗಣೇಶಪೂಜಾ, ಪ್ರಧಾನದೇವತಾಪೂಜಾ, ಗ್ರಹಪೂಜಾ ಚೇತ್ಯರ್ಥಃ ।**' (ಛಲಾರೀಯ)

ನಾರಾಯಣೀಯ ವ್ಯಾಖ್ಯಾನದ ಪ್ರಕಾರ ಪೂಜೆಯೆಂದರೆ– ಹೋಮದ ಮೊದಲು ಮಾಡತಕ್ಕ ಪೀಠಪೂಜೆ ಮೊದಲಾದವುಗಳು—

'**ಪೂಜಾ ಚ=ಪೀಠಪೂಜಾದಿರೂಪಾ ಪೂಜಾ ಚ ಕಾರ್ಯಾ ।**' (ನಾರಾ.)

೨ ವೈಷ್ಣವದೀಕ್ಷೆಯೆಂದರೆ– ಗುರು ಯೋಗ್ಯಶಿಷ್ಯನಿಗೆ ವಿದ್ಯಾಧಿಕಾರ ಪ್ರಾಪ್ತಿಗಾಗಿ, ವೇದಮಂತ್ರಗಳಿಂದ ಅಭಿಮಂತ್ರಿಸಿದ ಜಲವನ್ನು ಸಿಂಪಡಿಸಿ ಪವಿತ್ರಮಂತ್ರಗಳಿಂದ ಆತನನ್ನು ಪಾವನಗೊಳಿಸಿ ವೈಷ್ಣವಸಿದ್ಧಾಂತದಲ್ಲಿ ಆತನನ್ನು ದೀಕ್ಷಿತನನ್ನಾಗಿ ಮಾಡುವುದು.

'**ಶಿಷ್ಯಂ ಸ್ವಲಂಕೃತಂ ವೇದ್ಯಾಮುಪಾಗ್ನಿ ಮುಪವೇಶಯೇತ್ ।**
**ಮಂತ್ರಿತಂ ಪ್ರೋಕ್ಷಣೀತೋಯೈರಥ ಕುಂಭೋದಕೇನ ಚ ॥**
**ಮೂಲಮಂತ್ರೈಃ ಕಲಾಮಂತ್ರೈರಭಿಷಿಚ್ಯ ನ್ಯಸೇನ್ಮನುಮ್ ।**
**ತತ್ತ್ವಾದೀನ್ನ್ಯಸ್ಯ ಕೇ ಹಸ್ತಂ ಸ್ಥಾಪ್ಯ ಮಂತ್ರಂ ವದೇದಥ ॥**' (ತತ್ವಸಾರ)

ಹೀಗೆ ದೀಕ್ಷಿತನಾದ ಶಿಷ್ಯನಿಗೆ ಉಪದೇಶಿಸಿದ ಮಂತ್ರಗಳು ಮಾತ್ರ ಸಿದ್ಧಿಸಬಲ್ಲವು. ಆತ ಮಾತ್ರ ಭಗವತ್ಪ್ರಸಾದಕ್ಕೆ ಪಾತ್ರನಾಗಬಲ್ಲ.

'**ಮಂತ್ರಸಿದ್ಧಸ್ಯ ತಸ್ಯಾಽಶು ಪರಮಾತ್ಮಾ ಪ್ರಸೀದತಿ ।**' (ಯೋಗದೀಪಿಕಾ)

೩ ಹೋಮದ ವಿಷಯದಲ್ಲಿ ಭವಿಷ್ಯತ್ಪುರಾಣದ ಕೆಲವು ಮಾತುಗಳು ಸಂಗ್ರಾಹ್ಯವಾಗಿವೆ. ಅವನ್ನು ಬೇರೆಬೇರೆ ಕಡೆಗಳಿಂದ ಆಯ್ದು ಹೀಗೆ ಸಂಗ್ರಹಿಸಬಹುದು—

'**ಯೋನಿಸ್ಥಾನಂ ಪ್ರತಿಷ್ಠಾಪ್ಯ ಅಶ್ವತ್ಥಸ್ಯ ದಲಾಕೃತಿ ।**
**ಏಕಾಂಗುಲಂ ತು ಯೋನ್ಯಗ್ರಂ ಕುರ್ಯಾದೀಷದಧೋಮುಖಮ್ ॥**
**ಯಸ್ಯ ಯಸ್ಯ ಚ ಯನ್ಮಾನಂ ತತ್ತು ತೇನೈವ ಯೋಜಯೇತ್ ।**
**ಅಮಾನೇನ ಹತೋ ಯಜ್ಞಸ್ತಸ್ಮಾನ್ಮಾನಂ ನ ಹಾಪಯೇತ್ ॥**
**ಅಸಂಸ್ಕೃತೇ ಚಾರ್ಥಹಾನಿಸ್ತಸ್ಮಾತ್ಸಂಸ್ಕೃತ್ಯ ಹೋಮಯೇತ್ ।**
**ವೀತಿಹೋತ್ರಶ್ಚೋಽವನಯೋ ಸಮಾವರ್ತೇ ಧನಂಜಯಃ ।**

**ಗುರವೇ ದಕ್ಷಿಣಾಂ ದದ್ಯಾಲ್ಲಕ್ಷೇ ಲಕ್ಷೇ ಶತಂ[1] ಸುಧೀಃ ।**
**ಆತ್ಮನೈವ ಕೃತೇ ಹೋಮೇ ಶಕ್ತಿತೋ ಗುರುದಕ್ಷಿಣಾಮ್[2] ॥ ೨೩ ॥**

ಪ್ರತಿ ಲಕ್ಷಹೋಮದಲ್ಲಿಯೂ ಒಂದು ನೂರು ಗೋವುಗಳನ್ನು ಗುರುದಕ್ಷಿಣೆಯಾಗಿ ಕೊಡಬೇಕು. ಹೋಮವನ್ನು ತಾನೇ ಮಾಡುವುದಿದ್ದರೆ ಯಥಾಶಕ್ತಿ ಗುರುದಕ್ಷಿಣೆಯನ್ನಿತ್ತರೆ ಸರಿ[2].

ಇತಿ ದ್ವಿತೀಯೋಽಧ್ಯಾಯಃ

---

ಉದರೇ ಜಠರಾಗ್ನಿಶ್ಚ ಸಮುದ್ರೇ ವಡವಾನಲಃ ॥
ನಚ ಮ್ಲೇಚ್ಛಗೃಹಾದಗ್ನಿಂ ನ ಶೂದ್ರನಿಲಯಾತ್ಕ್ವಚಿತ್ ।
ತಮಗ್ನಿಂ ಪ್ರತಿಗೃಹ್ಣೀಯಾದಾತ್ಮನೋಽಭಿಮುಖಂ ಯಥಾ ॥
ವಾಗೀಶ್ವರೀಮೃತುಸ್ನಾತಾಂ ವಾಗೀಶ್ವರಸಮಾಗತಾಮ್ ।
ಧ್ಯಾತ್ವಾ ಸಮೀರಣಂ ದದ್ಯಾತ್ಕಾಮಮುತ್ಪದ್ಯತೇ ತು ತತ್ ॥
ಇತೋಽನ್ಯಥಾ ನ ಕುರ್ವೀತ ನಾತ್ರ ಯಜ್ಞಫಲಂ ಲಭೇತ್ ।
ವಿಪಾಕಂ ಕರ್ಮಣಾಂ ಸರ್ವಂ ನರಃ ಪ್ರಾಪ್ನೋತಿ ಸರ್ವಥಾ ।
ಶುಭಾಶುಭಂ ತತೋ ನಿತ್ಯಂ ಪ್ರಾಪ್ನೋತಿ ಮನುಜಃ ಕಿಲ ॥
ಚಂದನಾಗರುಕರ್ಪೂರಪಾಟಲಾಯೂಥಿಕಾನಿಭಃ ।
ಪಾವಕಸ್ಯ ಸುತೋ ಗಂಧಃ ಸಮಂತಾತ್ಸಮಹೋದಯಃ ॥
ಶುಭದಾ ಯಜಮಾನಸ್ಯ ಛತ್ರಾಕಾ ಶಿಥಿಲಾ ಶಿಖಾ ।
ನಿರ್ವಾಪ್ಯಂ ಮರಣಂ ವಿದ್ಯಾನ್ಮಹಾಧೂಮಾಕುಲೇಽಪಿ ಚ ॥
ಏವಂ ವಿಧೇಷು ದೋಷೇಷು ಪ್ರಾಯಶ್ಚಿತ್ತಂ ಸಮಾಚರೇತ್ ।
ಮಹಾಸ್ನಾನಂ ಪ್ರಕರ್ತವ್ಯಂ ತ್ರಿಕಾಲಂ ಹರಿಪೂಜನಮ್ ॥'

೧ 'ಶತಂ=ಶತಸಂಖ್ಯಾಕಾ ಗಾಃ ।' (ಭಲಾರೀಯ)

೨ 'ದಕ್ಷಿಣಾಭಿಃ ಪ್ರಯತ್ನೇನ ನಿರ್ವಹೇದಲ್ಪವಿತ್ತವಾನ್ ।
ಲಕ್ಷಹೋಮಸ್ತು ಕರ್ತವ್ಯೋ ಯದಾ ವಿತ್ತಂ ಭವೇತ್ತದಾ ॥' (ಭವಿಷ್ಯತ್ಪುರಾಣ)

# ತೃತೀಯೋಽಧ್ಯಾಯಃ

## ಪ್ರತಿಮಾಲಕ್ಷಣ

**ಪ್ರತಿಷ್ಠಾಂ ಕಾರಯನ್ವಿಷ್ಣೋಃ ಕುರ್ಯಾತ್[1] ಸುಪ್ರತಿಮಾಂ ಬುಧಃ ।**
**ಲೋಹೈ[2]ರ್ವಾ ಶಿಲಯಾ ದಾರ್ವಾ[3] ಮೃದಾ ವಾಽಪಿ ಯಥಾಕ್ರಮಮ್[4] ॥ ೧ ॥**

ವಿಷ್ಣುಪ್ರತಿಷ್ಠೆಯನ್ನು ಮಾಡಿಸುವ ಪ್ರಾಜ್ಞನು ಮೊದಲು ಬಂಗಾರ ಬೆಳ್ಳಿ ತಾಮ್ರಗಳಿಂದಾಗಲಿ, ಕಲ್ಲಿನಿಂದಾಗಲಿ, ಮರದಿಂದಾಗಲಿ, ಮಣ್ಣಿನಿಂದಾಗಲಿ ಲಕ್ಷಣವಾದ ಪ್ರತಿಮೆಯನ್ನು ಮಾಡಿಸಬೇಕು.

**ಷಣ್ಣವತ್ಯಂಗುಲಾಂ ಯೋಗೇ ಆಸೀನಾಮಥವಾ ಸ್ಥಿತಾಮ್ ।**
**ಶಯಾನಾಂ ವಾ ಮುಮುಕ್ಷೂಣಾಂ ವ್ಯಾಚಕ್ಷಾಣಾಂ ನಿಜಾಂ ಸ್ಥಿತಿಂ॥**

---

೧ ಕುರ್ಯಾತ್=ಕಾರಯೇತ್, ಸ್ವಾತಂತ್ರ್ಯಸ್ನೇಹಯೋರಂತರ್ಣೀತಣಿಚ್ ।

೨ 'ಸುವರ್ಣಂ ರಜತಂ ತಾಮ್ರಂ ತ್ರಿವಿಧಂ ಲೋಹಮಿಷ್ಯತೇ' ।

೩ ದಾರುಶಬ್ದ ಕೋಶಗಳಲ್ಲಿ ಹೇಳಿರುವ ಪ್ರಕಾರ ಪುಂಲಿಂಗನಪುಂಸಕಲಿಂಗಗಳಲ್ಲಿ ಮಾತ್ರ ಇದೆ. ಆ ಪಕ್ಷದಲ್ಲಿ ಅದರ ತೃತೀಯಾವಿಭಕ್ತಿ 'ದಾರುಣಾ' ಎಂದಾಗುವುದು. ಇಲ್ಲಿ ಅದನ್ನು ಸ್ತ್ರೀಲಿಂಗವಾಗಿ 'ದಾರ್ವಾ' ಎಂದು ಪ್ರಯೋಗಿಸಿದ್ದಾರೆ. ಎಂತಲೇ ದಾರು ಶಬ್ದ ಮೂರು ಲಿಂಗಗಳಲ್ಲಿಯೂ ಸಾಧುವೆಂದು ಸಿದ್ಧವಾಗುತ್ತದೆ.

'ವಾನಸ್ಪತ್ಯಂ ಮೂಲಫಲಂ ದಾರ್ವಗ್ನ್ಯರ್ಥಂ ತಥೈವ ಚ ।' (ಮನು)
'ಶೈಕ್ಯಂ ಕಮಂಡಲುಂ ಚೈವ ದ್ವಿದಲಂ ದಾರುಮೇವಚ ।' (ಹರಿವಂಶ)
'ಪುಂನಪುಂಸಕಯೋರ್ದಾರುಃ' (ತ್ರಿಕಾಂಡಶೇಷ)
'ದಾರುಶಬ್ದಃ ಸ್ತ್ರೀಲಿಂಗೇಽಪ್ಯಸ್ತಿ ।' (ಛಲಾರೀಯ)

೪ ಇದರಲ್ಲಿ ಮೊದಲು ಹೇಳಿದ್ದು ಅನಂತರದವುಗಳಿಗಿಂತ ಶ್ರೇಷ್ಠ. ಲೋಹದಿಂದ ಮಾಡು ವುದು ಎಲ್ಲಕ್ಕಿಂತ ಶ್ರೇಷ್ಠ. ಅದು ದೊರೆಯದಿದ್ದರೆ ಶಿಲಾಪ್ರತಿಮೆ, ಅದೂ ಅಸಾಧ್ಯ ವಾದರೆ ಕಾಷ್ಠಮಯ ಪ್ರತಿಮೆ, ಅದೂ ದುರ್ಲಭವಾದರೆ ಮಣ್ಣಿನ ಮೂರ್ತಿ. ಹೀಗೆ ಕ್ರಮವಾಗಿ ಈ ಪಕ್ಷಗಳಲ್ಲಿ ಮೇಲುಕೀಳುಗಳನ್ನು ಅರಿತುಕೊಳ್ಳಬಹುದು. ಪ್ರಮಾಣ ವಾಕ್ಯ ಕೂಡ ಇದೇ ತೆರನಾಗಿದೆ—

'ಹಿರಣ್ಮಯೀ ಪ್ರತಿಕೃತಿಃ ಸರ್ವಸಂಪತ್ಕರೀ ಭವೇತ್ ।
ವಿತ್ತಂ ಪಶೂಂಶ್ಚ ವಿಜಯಂ ವಿಜ್ಞಾನಂ ರಾಜತೀ ಫಲಮ್ ॥
ತಾಮ್ರಾ ಧರ್ಮಂ ಚ ವೃದ್ಧಿಂ ಚ ಕರೋತಿ, ಬಹುಸೌಖ್ಯದಾ ।
ಖೇದಪ್ರದಾ ಶಿಲಾಜಾ ಚ, ತೇಜೋದಾ ದಾರುಜಾ ತಥಾ ।
ಶುಭಾ ಪ್ರೋಕ್ತಾ ಮೃಣ್ಮಯೀ ಚ, ಪೈತ್ತಲೀ ಶತ್ರುನಾಶಿನೀ॥' (ಪಾದ್ಮಸಂ.)
(ಖೇದಂ ಪ್ರದ್ಯತೀತಿ ಖೇದಪ್ರದಾ=ಖೇದಹರಾ)

[೧] ಯೋಗಾಸನದಲ್ಲಿ ಕುಳಿತಂತಾಗಲಿ, ನಿಂತಿರುವಂತಾಗಲಿ, ಶೇಷನಲ್ಲಿ ಪವಡಿಸಿರುವಂತಾಗಲಿ, ಮುಮುಕ್ಷುಗಳಿಗೆ ಜ್ಞಾನಮುದ್ರೆಯಿಂದ ತನ್ನ ರೂಪವನ್ನು ಉಪದೇಶಿಸುವಂತಾಗಲಿ ಕಡೆದಿರುವಂಥ[೨] ಪ್ರತಿಮೆಯು ಒಟ್ಟು ೯೬ ಅಂಗುಲ (೪ ಮೊಳ) ಉದ್ದವಿರಬೇಕು.[೩]

---

೧ ಆಸನಗಳ ೮೪ ಲಕ್ಷ ಭೇದಗಳಲ್ಲಿ ಪದ್ಮ ಸ್ವಸ್ತಿಕಾದಿಗಳೇ ಪ್ರಧಾನ ಆಸನಗಳು.

ಆಸನಾನಿ ಕುಲೇಶಾನಿ ಯಾವಂತೋ ಜೀವಜಂತವಃ ।
ಚತುರಶೀತಿಲಕ್ಷಾಣಿ ಚೈಕೈಕಂ ಸಮುದಾಹೃತಮ್ ॥
ಆಸನೇಭ್ಯಃ ಸಮಸ್ತೇಭ್ಯಃ ಸಾಂಪ್ರತಂ ದ್ವಯಮುಚ್ಯತೇ ।
ಏಕಂ ಸಿದ್ಧಾಸನಂ ನಾಮ ದ್ವಿತೀಯಂ ಕಮಲಾಸನಮ್ ॥' (ನಿರ್ವಾಣತಂತ್ರ)

ಯಾವ ಆಸನ ನಮ್ಮ ನಿದಿಧ್ಯಾಸನೆಗೆ ಅನುಕೂಲವೋ ಅಂಥ ಆಸನ ಮಾತ್ರ ಉಪಯೋಗಿ. ಉಳಿದ ಲಕ್ಷಾಂತರ ಆಸನಗಳೆಲ್ಲ ಲೆಕ್ಕ ತುಂಬಲಿರುವಂಥವು ಎಂದು ಪ್ರಾಜ್ಞರ ಮತ—

'ಸುಖೇನೈವ ಭವೇದ್ಯಸ್ಮಿನ್ನಾಸನೇ ಬ್ರಹ್ಮಚಿಂತನಮ್ ।
ಆಸನಂ ತದ್ವಿಜಾನೀಯಾದಿತರತ್ಸುಖನಾಶನಮ್ ॥'

ಅದರಲ್ಲಿ ಪ್ರಧಾನವಾದ ಐದು ಆಸನಗಳನ್ನು ಯೋಗಾಸನವೆಂದು ಪರಿಗಣಿಸಿದ್ದಾರೆ—

'ಪದ್ಮಾಸನಂ ಸ್ವಸ್ತಿಕಾಖ್ಯಂ ಭದ್ರಂ ವಜ್ರಾಸನಂ ತಥಾ ।
ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನಪಂಚಕಮ್ ॥' (ತಂತ್ರಸಾರ)
'ಪದ್ಮಸ್ವಸ್ತಿಕವೀರಾಹ್ವಾ ಆಸನೇಷು ಪ್ರಧಾನಕಾಃ' (ಸಂನ್ಯಾಸಪದ್ಧತಿ)
ಈ ಆಸನಗಳ ಲಕ್ಷಣಗಳನ್ನು ಪರಿಶಿಷ್ಟದಲ್ಲಿ ಕಾಣಬಹುದು

೨ ಕುಳಿತಿರುವ ಮೂರ್ತಿಗಳು ಅಂದರೆ ಲಕ್ಷ್ಮೀನಾರಾಯಣಾದಿ ವಿಗ್ರಹಗಳು. ನಿಂತಿರುವವುಗಳು ರಾಮಕೃಷ್ಣಾದಿ ಮೂರ್ತಿಗಳು. ಅನಂತಶಯನಾದಿಗಳು ಪವಡಿಸಿರುವವುಗಳು. ಜ್ಞಾನಮುದ್ರೆಯನ್ನು ಹಿಡಿದಿರುವವುಗಳು ವೇದವ್ಯಾಸಾದಿ ಮೂರ್ತಿಗಳು. ಇವುಗಳಲ್ಲಿ ಪವಡಿಸಿರುವಂತೆ ಕೆತ್ತಿದ ಪ್ರತಿಮೆಗಳನ್ನೂ, ಮಣ್ಣು ಮರಗಳಿಂದ ಮಾಡಿದ ಪ್ರತಿಮೆಯನ್ನೂ ಮನೆಯಲ್ಲಿ ಪೂಜಿಸಬಾರದು.

'ಶಯಾನಾಂ ನಾರ್ಚಯೇದ್ಗೇಹೇ ನಚ ಮೃದ್ದಾರುಜಾಂ ತಥಾ'

೩ ಮನುಷ್ಯನ ಬೆರಳುಗಳಿಂದ ೯೬ ಅಂಗುಲ ಉದ್ದವಿರಬೇಕೆಂದೇನೂ ಅರ್ಥವಲ್ಲ. ಆಯಾ ಪ್ರತಿಮೆಯ ಬೆರಳಿನಿಂದಲೇ ಅಳೆದಾಗ ಪ್ರತಿಮೆ ೯೬ ಅಂಗುಲ ಇದ್ದರೆ ಸರಿ. ಆದ್ದರಿಂದ ಮನೆಯಲ್ಲಿ ಪೂಜಿಸುವ ಹೆಬ್ಬೆರಳೆತ್ತರದ ಪ್ರತಿಮೆಗಳೂ ೯೬ ಅಂಗುಲದವುಗಳೇ ಆಗುವವು. ಅವುಗಳ ಬೆರಳಿನಿಂದ ೯೬ ಪಟ್ಟು ಅವು ದೊಡ್ಡವಾಗಿರುತ್ತವೆ. ಅವುಗಳ ಮೊಳದಿಂದ ಅವೂ ನಾಲ್ಕು ಪಟ್ಟಿರುತ್ತವೆ. ಎಲ್ಲ ಕಡೆಯಲ್ಲೂ ೯೬ ಅಂಗುಲದ

**ಮುಖಾದೂರ್ಧ್ವಗಂ ದ್ವ್ಯಂಗುಲೋಚ್ಚಾಂ ನವಾಂಗುಲಲಸನ್ಮುಖಾಂ ।**
**ಸುವೃತ್ತತ್ರ್ಯಂಗುಲಗ್ರೀವಾಮಾ ಸ್ತನಾಚ್ಚ ಷಡಂಗುಲಾಮ್ ॥ ೩ ॥**
**ಪಂಚಾದಶಾಂಗುಲಾಂ[1] ನಾಭೇರಾ ಸಾರ್ದ್ಧದಶಕಾಂಗುಲಾಮ್ ।**
**ವೃಷಣಾದಾ ಮೂಲತಶ್ಚ ಸಾರ್ದ್ಧದ್ವ್ಯಂಗುಲಮಾಯತಾಮ್ ॥ ೪ ॥**
**ತಾವದಾ ಗುದತೋ ದೀರ್ಘಾಂ ಚೈತ್ಯಾದಾ[2]ಷ್ಟಾದಶಾಂಗುಲಾಮ್ ।**
**ತಥಾ ದ್ವ್ಯಂಗುಲಚೈತ್ಯಾಂ ಚ ದ್ವಾವಿಂಶಜ್ಜಂಘಯಾ ಯುತಾಮ್ ।**
**ಆರಭ್ಯ ಗುಲ್ಫಮಧ್ಯೈವ[3] ಸಹಾರ್ಧಚತುರಂಗುಲಾಮ್ ॥ ೫ ॥**

ಅವುಗಳಲ್ಲಿ ಪ್ರತಿಯೊಂದು ಅವಯವಗಳ ಅಳತೆ ಈ ತೆರನಾಗಿದೆ—

| | | |
|---|---|---|
| ನೊಸಲಿನ ಮೇಲೆ—ಶೀರ್ಷ | ೨ | ಅಂಗುಲ |
| ಸುಂದರವಾದ ಮುಖ[4] | ೯ | ,, |

---

ಅಳತೆ ಇದೇ ತೆರನಾಗಿ ಮಾಡಬೇಕು. ಯಾವೊಬ್ಬ ಮನುಷ್ಯನನ್ನು ಅಳೆವುದಾದರೂ ಅವನ ಬೆರಳಿನ ಅಳತೆಯೇ ಅಲ್ಲಿ ಒಂದು ಅಂಗುಲವೆನಿಸುತ್ತದೆ—

**'ಶರೀರಂ ಸರ್ವಜಂತೂನಾಮಂಗುಲೀಭಿರನ್ನಾಮಯಮ್ ।**
**ಸ್ವಾಭಿಃ ಸ್ವಾಭಿಃ ಸುರಮುನೇ ಷಣ್ಣವತ್ಯಂಗುಲಾತ್ಮಕಮ್ ॥'**
(ಅಹಿರ್ಬುಧ್ನ್ಯಸಂಹಿತಾ)

**'ಅತ್ರ ಸರ್ವತ್ರ ತತ್ತತ್ಪ್ರತಿಮಾಂಗುಲಮೇವ ಗ್ರಾಹ್ಯಮ್ ॥'** (ನಾರಾ.)

೧ **'ಪಂಚೇತ್ಯತ್ರ ದೀರ್ಘಶ್ಛಾಂದಸಃ'** (ಛಲಾರೀಯ)

ಇಲ್ಲಿ ಕೆಲವು ತುಳು ಪುಸ್ತಕಗಳಲ್ಲಿ 'ಪಂಚಾಶದಂಗುಲಾ' ಎಂದಿದೆ. ಅದೆಲ್ಲೋ ಲೇಖನಪ್ರಮಾದವಾಗಿರಬೇಕು. 'ಪಂಚಾದಶಾಂಗುಲಾ' ಎಂದು ಪ್ರಥಮಾಂತವಾಗಿ ಪ್ರಚಲಿತವಾದ ಪಾಠವೂ ಅನನ್ವಿತವಾದುದರಿಂದ ಅಸ್ವರಸವೇ ಆಗಿದೆ

೨ **'ಚೈತ್ಯಂ=ಜಾನು'** (ಛಲಾರೀಯ)

೩ **'ಗುಲ್ಫಮಧ್ಯಂ ಚ'** ಎಂದು ಪ್ರಚಲಿತ ಪಾಠ.

೪ ಇಲ್ಲಿ ಒಂದು ಪೂರ್ವಪಕ್ಷಕ್ಕೆಡೆಯಿದೆ. ಒಟ್ಟು ದೇಹದ ಪರಿಮಾಣ ಮುಖದ ಪರಿಮಾಣದ ಹತ್ತುಪಟ್ಟು ಎಂದು ಪ್ರಮಾಣವಿದೆ—'ದಶತಾಲೋ ದಶಮುಖಃ'. ಅದರಿಂದ ಮುಖದ ಉದ್ದ ೯ ಅಂಗುಲವೆಂದಾದರೆ ಇಡಿಯ ಶರೀರದ ಉದ್ದ ೯೦ ಅಂಗುಲವೆಂದಹಾಗಾಗುವುದು. ಹೀಗಿದ್ದರೆ ೯೬ ಅಂಗುಲ ಎನ್ನುವುದು ಹೇಗೆ ಕೂಡುವುದು?

ಇದಕ್ಕೆ ಈ ರೀತಿ ಪರಿಹಾರವನ್ನು ಹೇಳಬಹುದು. ಮುಖದ ಉದ್ದ ೯ ಅಂಗುಲವಾದರೂ— ಮೂಗಿನ ಎತ್ತರದ ಪರಿಮಾಣವನ್ನೂ ಸೇರಿಸಿದರೆ ೯॥ ಅಂಗುಲವಾಗುವುದು. ಎಂತಲೇ ಆಚಾರ್ಯರು ಮುಂದೆ ೨೫ನೆಯ ಪದ್ಯದಲ್ಲಿ ಈ ವಿಷಯವನ್ನು ಉಲ್ಲೇಖಿಸಿದಾರೆ— **'ನಾಸಾಯಾ ಉಚ್ಚತ್ವೇನೈವ ಮಾಪನೇ । ಅರ್ಧಾಂಗುಲಾಧಿಕಂ ಸರ್ವಮುಖಸ್ಯ ತು ಭವಿಷ್ಯತಿ ॥'**

| | | |
|---|---|---|
| ಉರುಟಾದ ಕತ್ತು[1] | ೩ | ಅಂಗುಲ |
| ಕತ್ತಿನಿಂದ ಎದೆಯ ತನಕ | ೬ | ,, |
| ಎದೆಯಿಂದ ಹೊಕ್ಕಳಿನ ವರೆಗೆ | ೧೫ | ,, |
| ಹೊಕ್ಕಳಿನಿಂದ ವೃಷಣದ ತನಕ | ೧೦॥ | ,, |
| ವೃಷಣದ ಮೂಲಪ್ರದೇಶದ ಆಯ | ೨॥ | ,, |
| ವೃಷಣಮೂಲದಿಂದ ಗುದಪ್ರದೇಶದ ತನಕ | ,, | ,, |
| ಗುದದಿಂದ ಮೊಣಕಾಲಿನ ವರೆಗೆ | ೧೮ | ,, |
| ಮೊಣಗಂಟಿನ ಉದ್ದ | ೨ | ,, |
| ಕಿರುದೊಡೆ(ಜಂಘೆ)ಯ ಉದ್ದ | ೨೨ | ,, |
| ಕಾಲಿನ ಹರಡಿ(ಗುಲ್ಫ)ನಿಂದ ಪಾದತಲದ ಪರೆಗೆ | ೪॥ | ,,[2] |

---

ಇದರಿಂದ ಮುಖದ ಹತ್ತುಪಟ್ಟು ಶರೀರ ಅಳತೆ ಎಂದರೆ ಸರಿಯಾಗಿ ೯೫ ಅಂಗುಲ ಗಳಾಗುವವು. ಉಳಿದೊಂದಂಗುಲವನ್ನು ಸಣ್ಣ ಸಂಖ್ಯೆಯಾದುದರಿಂದ ನಿರ್ದೇಶಿಸಲಿಲ್ಲ. ಸರಿಯಾಗಿ ಹೇಳುವುದಾದರೆ– ಮುಖದ ಹತ್ತುಪಟ್ಟು ಪರಿಮಾಣ+೧ ಅಂಗುಲ ಇದು ದೇಹದ ಅಳತೆ.

೧ ಇಲ್ಲಿ ಕತ್ತಿನ ಅಳತೆ ಮೂರಂಗುಲ ಎಂದಿದ್ದರೆ ಬೃಹದ್ಭಾಷ್ಯದಲ್ಲಿ ೪ ಅಂಗುಲ ಎಂದು ಉಲ್ಲೇಖಿಸಿದೆ—

'ಗಲಸ್ತು ಚತುರಂಗುಲಃ'

ಕತ್ತಿನ ಎದುರು ಬದಿಯ ಉದ್ದ ೪ ಅಂಗುಲ, ಹಿಂಬದಿಯ ಉದ್ದ ೩ ಅಂಗುಲ ಎಂಬುದಾಗಿ ಈ ಎರಡು ವಾಕ್ಯಗಳನ್ನು ಕೂಡಿಸಿಕೊಳ್ಳಬೇಕು.

ಪುರೋಭಾಗೇ ಚತುರಂಗುಲತ್ವಂ ಪೃಷ್ಠಭಾಗೇ ತ್ರ್ಯಂಗುಲತ್ವಮಿತಿ ವಾಕ್ಯ-ದ್ವಯೋರುಪಪತ್ತೇಃ' (ನಾರಾಯಣೀಯ)

೨ ಇಲ್ಲಿ ಒಂದು ವಿರೋಧ ಕಂಡುಬರುತ್ತದೆ—ಆಚಾರ್ಯರು ಮೊದಲು ಹೇಳಿದ ದೇಹ ಪರಿಮಾಣ ೯೬ ಅಂಗುಲ. ಆದರೆ ಇಲ್ಲಿ ಹೇಳಿರುವ ಅವಯವಗಳ ಪ್ರತ್ಯೇಕ ಅಳತೆಯನ್ನು ಕೂಡಿಸಿದರೆ ೯೭ ಅಂಗುಲವಾಗುವುದು. ಇದನ್ನು ಪರಿಹರಿಸುವ ಬಗೆ ಹೇಗೆ? ಆದರೆ ವಿಚಾರಮಾಡಿದಾಗ ಈ ಪ್ರಶ್ನೆಯೇ ಉಳಿಯುವುದಿಲ್ಲ. ಏಕೆಂದರೆ– ೯೬ ಅಂಗುಲ ಎನ್ನುವುದು ದೇಹದ ಉದ್ದಳತೆ. ಅದರಿಂದ ಇಲ್ಲಿ ಬಂದಿರುವ ವೃಷಣದ ಮೂಲ ಪ್ರದೇಶದ ಆಯವನ್ನೂ, ವೃಷಣಮೂಲದಿಂದ ಗುದಪ್ರದೇಶದ ವರೆಗಿನ ದೂರವನ್ನೂ ಉದ್ದಳತೆಯಲ್ಲಿ ಸೇರಿಸುವುದು ಸರಿಯಾಗಲಾರದು. ಉದ್ದನೆಯ ನೂಲು ಹಿಡಿದು ಅಳೆಯುವಾಗ ನಮಗೆ ಅಂಡ ಮತ್ತು ಗುದ ಪ್ರದೇಶಗಳ ಅಡ್ಡಳತೆ ಸಿಗಲಾರದಷ್ಟೆ! ಅದರಿಂದಲೇ ಮುಖದ ಎತ್ತರದ ಅರ್ಧ ಅಂಗುಲವನ್ನು ಬಿಟ್ಟು ಮೋರೆಯ ಅಳತೆ ೯ ಅಂಗುಲ ಎಂದೇ

ಹೇಳಿದ್ದಾರೆ. ಏಕೆಂದರೆ ಉದ್ದಳತೆಯಲ್ಲಿ ಆ ಏರುಪೇರುಗಳು ಗಣನೆಗೆ ಸಿಗಲಾರವು. ಆದರಿಂದ ವೃಷಣಮೂಲದ ಅಳತೆ ೨॥ ಅಂಗುಲ ಮತ್ತು ಗುದಪ್ರದೇಶದ ವರೆಗಿನ ಅಳತೆ ೨॥ ಅಂಗುಲ ಒಟ್ಟು ೫ ಅಂಗುಲಗಳನ್ನು ಈ ೯೬ ಅಂಗುಲದ ಅಳತೆಯಿಂದ ಬೇರ್ಪಡಿಸ ಬೇಕು. ಈ ೫ ಅಂಗುಲಗಳನ್ನು ಬಿಟ್ಟರೆ ಮತ್ತೆ ಕೇವಲ ೯೨ ಅಂಗುಲಗಳು ಉಳಿಯು ತ್ತವೆ. ಅದಕ್ಕೆ ವೃಷಣದ ದೈರ್ಘ್ಯದ ೪ ಅಂಗುಲವನ್ನು ಸೇರಿಸಿದರೆ ಸರಿಯಾಗಿ ೯೬ ಅಂಗುಲಗಳಾಗುವುವು ವೃಷಣದ ಪರಿಮಾಣವನ್ನು 'ವೃಷಣಂ ಚತುರಂಗುಲಂ' ಎಂದು ಆಚಾರ್ಯರೇ ಮುಂದಕ್ಕೆ ಹೇಳುವರು. ಶೀರ್ಷದಿಂದ ವೃಷಣದ ವರೆಗೆ ೪೫॥ ಅಂಗುಲ+ವೃಷಣದ ಪರಿಮಾಣವಾದ ೪ ಅಂಗುಲ+ವೃಷಣದಿಂದ ಪಾದತಲದ ವರೆಗಿನ ೪೬॥ ಅಂಗುಲ. ಹೀಗೆ ಯಾವ ವಿರೋಧವೂ ಇಲ್ಲದೆ ವಾಕ್ಯಾರ್ಥವೆಲ್ಲ ಸರಿಗೂಡುವುದು. ಹೀಗೆ ಸಂಖ್ಯೆಗಳನ್ನು ಮುಂದುಹಿಂದಾಗಿ ನಿರ್ದೇಶಿಸುವ ಆಚಾರ್ಯರ ಉದ್ದೇಶ ತಂತ್ರ ಶಾಸ್ತ್ರದ ಗೋಪನೆಯೇ ಆಗಿದೆ. ಇಂಥ ಶಾಸ್ತ್ರ ಹೇಗೆಂದರೆ ಹಾಗೆ ಅರ್ಥವಾಗುವಂಥ ದಲ್ಲ. ಗುರೂಪದೇಶದಿಂದಲೇ ಇದನ್ನು ಅರಿತುಕೊಳ್ಳಬೇಕು ಎಂದು ಆಚಾರ್ಯರು ಇಂಥ ಸಂದರ್ಭಗಳಲ್ಲಿ ನಮಗೆ ಸೂಚನೆಯಿತ್ತಿದ್ದಾರೆ ಎನ್ನಬಹುದು

ಇದರ ವ್ಯಾಖ್ಯಾನಗಳಾದ 'ನಾರಾಯಣೀಯ' ಮತ್ತು 'ಛಲಾರೀಯ'ಗಳಲ್ಲಿ ಇದಕ್ಕೆ ಒಟ್ಟು ನಾಲ್ಕು ತೆರನಾಗಿ ಸಮಾಧಾನ ಹೇಳಿದ್ದಾರೆ ಇದ್ದವುಗಳಲ್ಲಿ ಈ ಸಮಾ ಧಾನವೇ ಸೊಗಸಾಗಿದೆ, ಉಚಿತವೂ ಆಗಿದೆ.

'ಅತ್ರ ಸಂಪ್ರದಾಯವಿದೋ ದ್ವೇಧಾ ಸಮಾಧಾನಮಾಹುಃ । ತಥಾಹಿ— ತಾವದಾಗುದತೋ ದೀರ್ಘಾವಿತಿ ವೃಷಣಮೂಲಾಧೋಭಾಗಮಾರಭ್ಯ ಗುದ- ಪರ್ಯಂತಂ ಸಾರ್ಧದ್ವ್ಯಂಗುಲಪರಿಮಾಣಮುಕ್ತಮ್ । ತತ್ರ ಸಾರ್ಧೈಕಾಂಗುಲ- ಮೇವ ಗಣನೀಯಮ್ । ವೃಷಣಮೂಲಾಧೋಭಾಗಾಪೇಕ್ಷಯಾ ತಿರ್ಯಗೇಕಾಂ- ಗುಲವ್ಯವಧಾನೇನಾಧೋಭಾಗೇ ಗುದಸ್ಯ ವಿದ್ಯಮಾನತ್ವಾತ್ । ಅತಸ್ತ್ರ್ಯೈಕಾಂ- ಗುಲಪರಿತ್ಯಾಗೇ ಷಣ್ಣವತ್ಯಂಗುಲತ್ವಂ ಸೇತ್ಸ್ಯತೀತ್ಯೇಕಂ ಸಮಾಧಾನಮ್ ॥

'ಅಪರಂ ತು-'ಮೂಲತಶ್ಚ ಸಾರ್ಧದ್ವ್ಯಂಗುಲಮಾಯತಾವಿ'ತಿ ವೃಷಣ- ಮೂಲಪರಿಮಾಣಕಥನಂ, 'ತಾವದಾ ಗುದತೋ ದೀರ್ಘಾವಿ'ತ್ಯಾ ಗುದತೋ ದೈರ್ಘ್ಯಕಥನಂ ಚ ಪ್ರಾಸಂಗಿಕಮ್ । ಅತೋಽತ್ರ ಪಂಚಾಂಗುಲಾನ್ಯಪಿ ಪರಿತ್ಯಜ್ಯ 'ವೃಷಣಂ ಚತುರಂಗುಲಮಿ'ತಿ ವಕ್ಷ್ಯಮಾಣವೃಷಣಪ್ರಮಾಣದೈರ್ಘ್ಯಪ್ರಮಾಣೇನ ಚತುರಂಗುಲೇನ ಷಣ್ಣವತ್ಯಂಗುಲತ್ವಂ ಸೇತ್ಸ್ಯತೀತಿ । ವ್ಯವಧಾನೇನ ಕಥನಂ ತ್ವತಿರಹಸ್ಯತ್ವಾದಿತಿ ॥' (ನಾರಾಯಣೀಯ)

'ಅನ್ಯೇ ತು ಸಾರ್ಧದ್ವ್ಯಂಗುಲಮಾಯತಾವಿತ್ಯತ್ರಾರ್ಧಶಬ್ದೋ ಭಾವ- ಪ್ರಧಾನಃ । ಅರ್ಧತ್ವಂ ಪುಷ್ಟತ್ವಂ, ತೇನ ಸಹಿತಂ ಸಾರ್ಧಮ್ । ತಚ್ಚ ತದ್ದ್ವ್ಯಂ- ಗುಲಂ ಚೇತಿ ತತ್ತಥೋಕ್ತಮ್ । ಮಧ್ಯೇಽಂಗುಲಿಷು ಪುಷ್ಟತ್ವಕಥನಂ ದೇಹ- ಲೀಪದೀಪನಾಯೇನ ಸರ್ವಾಂಗುಲೀನಾಮಪಿ ಪುಷ್ಟತ್ವಜ್ಞಾಪನಾರ್ಥಮ್ ।

**ಷಡಂಗುಲೋಚ್ಚಪ್ರಪದಾಂ[1] ಸಾರ್ಧತ್ರ್ಯಂಗುಲನೋವ ಚ[2] |**
**ಪ್ರಪದೋಚ್ಚಯುತಾಮಂತೇ ದ್ವ್ಯಂಗುಲಪ್ರಪದೋಚ್ಛ್ರಯಾಮ್ ||**
**ತ್ರ್ಯಂಗುಲದ್ವ್ಯಂಗುಲಾಮರ್ಧಹೀನಮಧ್ಯಾಂಗುಲಾಮಪಿ |**
**ತ್ರಿಪಾದಾಂಗುಲಹೀನಾನ್ಯಾಂ[3] ತತಸ್ತಾದೃಶತತ್ಪರಾಮ್[4] || ೭ ||**

ತಥಾಚ ಮೂಲತಃ ವೃಷಣಮೂಲೇ ಸಾರ್ಧದ್ವ್ಯಂಗುಲಂ ಸಮ್ಯಕ್ಪೃಷ್ಠಾಂಗುಲಿದ್ವಯಪರಿಮಾಣಮಾಯತಾಮ್ | ಮೂಲಾದಾ ಗುದತಸ್ತಾವತ್ ದ್ವ್ಯಂಗುಲದೀರ್ಘಾಮಿತ್ಯರ್ಥಃ | ಗುದವೃಷಣಯೋರ್ದ್ವ್ಯಂಗುಲದೀರ್ಘತ್ವಮುಕ್ತಂ ಶೇಖರೇ-'ಗುದಧ್ವಜಾಂತರೇ ಕಂದಮುತ್ಸೇಧದ್ವ್ಯಂಗುಲಂ ವಿದುಃ' ಇತಿ | ಕಂದಂ=ವೃಷಣಮೂಲಾಧಾರಪ್ರದೇಶಃ | ತಥಾಚ ಷಣ್ಣವತ್ಯಂಗುಲತ್ವಮೇವೇತಿ ||

'ಏಕೇ ತು–ದ್ವ್ಯಂಗುಲೋಚ್ಚಾಮಿತ್ಯಾದೌ ನ್ಯೂನತ್ವೇಽಪಿ ಅಲ್ಪತ್ವಾದವಿವಕ್ಷಯಾ ದ್ವ್ಯಂಗುಲೋಚ್ಚಾಮಿತ್ಯಾದ್ಯುಕ್ತ್ಯಾಽಧಿಕತ್ವೇನ ಪ್ರತೀತಸ್ಯೈಕಾಂಗುಲಸ್ಯ-ತತ್ರ ತತ್ರ ಕಿಂಚಿತ್ಪ್ರವೇಶೇ ಸತಿ ಷಣ್ಣವತ್ಯಂಗುಲತ್ವಮೇವ ಸೇತ್ಸ್ಯತೀತಿ |' (ಛಲಾ)

ಈ ನಾಲ್ಕು ಪಕ್ಷಗಳಲ್ಲಿ ಎರಡನೆಯ ಪಕ್ಷವೇ ಸೊಗಸಾಗಿ ಕಂಡಪ್ಪರಿಂದ ಅದನ್ನೆ ಉಲ್ಲೇಖಿಸಿದ್ದೇನೆ. ಹೆಚ್ಚಿನ ನರಿತಪ್ಪುಗಳ ಕುರಿತು–ತಂತ್ರಶಾಸ್ತ್ರದ ಮರ್ಮವನ್ನರಿತ ವಿದ್ವಾಂಸರ ಅಭಿಪ್ರಾಯವೇ ಶರಣಲ್ಲದೆ ಬೇರೆ ದಾರಿಯಿಲ್ಲ.

೧ 'ಪ್ರಪದ' ಎನ್ನುವ ಶಬ್ದಕ್ಕೆ ಸಂಸ್ಕೃತದಲ್ಲಿ 'ತುದಿಗಾಲು' ಎಂದರ್ಥ. ಇಲ್ಲಿ ಆ ಅರ್ಥ ಸರಿಹೊಂದುವುದಿಲ್ಲ 'ಪ್ರಪದ' ಎಂದರೆ 'ಕಾಲು' ಎಂದಿಷ್ಟೇ ಇಲ್ಲಿ ಇಟ್ಟುಕೊಳ್ಳಬೇಕಾದ ಅರ್ಥ.

೨ 'ಅಂತ ಇತ್ಯುಕ್ತೇರಾದೌ ಮಧ್ಯೇ ಚೇತಿ ಗ್ರಾಹ್ಯಮ್ |' (ಛಲಾರೀಯ)

೩ 'ತ್ರಿಪಾದಾಂಗುಲಹೀನಾನ್ಯಾಂ' ಎನ್ನುವುದಕ್ಕೆ–ಮತ್ತಿನ ಬೆರಳು ಮುಕ್ಕಾಲು ಅಂಗುಲ ಕಮ್ಮಿ ಅಳತೆಯದು ಎಂದಿಷ್ಟೇ ಅರ್ಥ. ಆದರೆ ಯಾವುದರಿಂದ ಮುಕ್ಕಾಲು ಅಳತೆ ಕಮ್ಮಿ? ಇಲ್ಲಿ ಎರಡು ಮತವಿದೆ ಹೆಬ್ಬೆರಳಿನ ಅಳತೆಯಿಂದ ಮುಕ್ಕಾಲಂಗುಲ ಕಮ್ಮಿಯೆಂದು ಒಂದು, ನಡುಬೆರಳಿನ ಅಳತೆಯಿಂದ ಎಂದು ಇನ್ನೊಂದು. ಮೊದಲಿನ ಪಕ್ಷ ಉಭಯ ವ್ಯಾಖ್ಯಾನಗಳಿಗೂ ಸಮ್ಮತವಾದುದರಿಂದ ಅದನ್ನೇ ಉಲ್ಲೇಖಿಸಿದ್ದೇನೆ. ಒಂದನೆಯ ಪಕ್ಷದಲ್ಲಿ ಅನಾಮಿಕೆಯ ಉದ್ದ ೨। ಅಂಗುಲ. ಎರಡನೆಯ ಪಕ್ಷದಲ್ಲಿ ಆದರೆ–೧।।। ಅಂಗುಲ

'ತ್ರಿಪಾದಾಂಗುಲಹೀನಾನ್ಯಾಂ, ಪೂರ್ವಮಂಗುಷ್ಠಪರಿಮಾಣತ್ವೇನೋಕ್ತಾಂಗುಲತ್ರಯಾಪೇಕ್ಷಯಾ ತ್ರಿಪಾದಾಂಗುಲಹೀನಾ ಅನ್ಯಾಂಗುಲಿರ್ಯಸ್ಯಾಃ ಸಾ, ತಾಮ್ |' (ನಾರಾಯಣೀಯ)

'ತ್ರಿಪಾದಾಂಗುಲಹೀನಾನ್ಯಾಂ ಸಾರ್ಧದ್ವ್ಯಂಗುಲಪರಿಮಿತಮಧ್ಯಾಂಗುಲಾಪೇಕ್ಷಯಾ ತ್ರಿಪಾದನ್ಯೂನಾನ್ಯಾಂಗುಲಾಮಿತ್ಯರ್ಥಃ | ಪಾದೋನದ್ವ್ಯಂಗುಲಪರಿಮಿತಚತುರ್ಥಾಂಗುಲೋಪೇತಾಮಿತಿ ಭಾವಃ |' (ಛಲಾರೀಯ)

೪ 'ತಾದೃಶತತ್ಪರಾಮ್' ಎಂಬಲ್ಲಿಯೂ ಇದೇ ರೀತಿ ಬಹುಪಕ್ಷಗಳಿವೆ. ಇದರ

**ಪಾದೋನೋಚ್ಚಾಂಗುಷ್ಠನಖಾಂ ತದರ್ಧತದನಂತರಾಮ್ |**
**ಕ್ರಮಶಃ ಪಾದಹೀನಾನ್ಯಾಂ° ರಕ್ತಪಾದನಖಾಂ ಶುಭಾಮ್ ||೮||**

| | | |
|---|---|---|
| ಹಿಂಬದಿಯಲ್ಲಿ ಕಾಲಬುಡದಿಂದ ಗುಲ್ಫದ ತುದಿಯವರೆಗೆ | ೬ | ಅಂಗುಲ |
| ಕಾಲಿನ ಮಧ್ಯಭಾಗದಲ್ಲಿ | ೩॥ | ,, |
| ,, ತುದಿಯಲ್ಲಿ | ೨ | ,, |
| ಹೆಬ್ಬೆರಳು ಮತ್ತು ಅದರೊತ್ತಿನ ಬೆರಳಿನ ಉದ್ದ | ೩ | ,, |
| ನಡುಬೆರಳಿನ ಉದ್ದ | ೨॥ | ,, |
| ನಾಲ್ಕನೆಯ ಬೆರಳಿನ ಉದ್ದ | ೨। | ,, |
| ಕಿರಿಬೆರಳಿನ ಉದ್ದ | ೧॥ | ,, |

---

ಸ್ವರಸವಾದ ಅರ್ಥ ಅನಾಮಿಕೆಯಂತೆಯೇ ಕಿರಿಬೆರಳೂ ಮುಕ್ಕಾಲಂಗುಲ ಗಿಡ್ಡಾಗಿದೆ ಎಂದು. ಅರ್ಥಾತ್ ಸಮೀಪಸ್ಥವಾದ ಅನಾಮಿಕೆಯ ಅಳತೆಯಿಂದಲೇ ಮುಕ್ಕಾಲಂಗುಲ ಕಮ್ಮಿಯೆಂದು ಸಿದ್ಧವಾಗುತ್ತದೆ. ಆಗ ಅದರ ಅಳತೆ ೧॥ ಅಂಗುಲವಾಗುವುದು. ಇದು 'ನಾರಾಯಣೀಯ' ವ್ಯಾಖ್ಯಾನದ ಮತ.

**'ತ್ರಿಪಾದನ್ಯೂನತಾ ಚತುರ್ಥಾಪೇಕ್ಷಯಾ, ಸಾರ್ಧಾಂಗುಲೇತಿ ಯಾವತ್ ।'**
(ನಾರಾಯಣೀಯ)

ಅನಾಮಿಕೆಯಂತೆಯೇ ಅಂಗುಷ್ಠದ ಪರಿಮಾಣದಿಂದಲೇ ।।। ಅಂಗುಲ ಕಮ್ಮಿಯೆಂದು ಇನ್ನೊಂದು ಪಕ್ಷ. ಈ ಪಕ್ಷದಲ್ಲಿ ಅನಾಮಿಕೆ, ಕನಿಷ್ಠಿಕೆಗಳ ಅಳತೆ ಒಂದೇ ರೀತಿಯದಾಗುತ್ತದೆ (೨। ಅಂಗುಲ).

೨॥ ಅಂಗುಲ ಉದ್ದವಾದ ಮಧ್ಯಮದಿಂದ ಅನಾಮಿಕೆಯು ಹೇಗೆ ಕಾಲಂಗುಲ ಗಿಡ್ಡವಾಗಿದೆಯೋ ಹಾಗೆಯೇ ಕಿರಿಬೆರಳೂ ಅನಾಮಿಕೆಯಿಂದ ಕಾಲಂಗುಲ ಕಮ್ಮಿಯಾಗಿದೆ ಎಂದು ಇನ್ನೊಂದು ಪಕ್ಷ. ಈ ಪಕ್ಷದಲ್ಲಿ ಕಿರಿಬೆರಳಿನ ಉದ್ದ ೨ ಅಂಗುಲ.

ಅನಾಮಿಕೆಯ ಉದ್ದ ೧।।। ಅಂಗುಲ ಎಂದಿಟ್ಟುಕೊಂಡು, ಅದರಿಂದ ।।। ಅಂಗುಲ ಕಮ್ಮಿ ಎಂದರೆ ಕಿರಿಬೆರಳಿನ ಉದ್ದ ಒಂದಂಗುಲ ಎಂದು ಇನ್ನೊಂದು ಪಕ್ಷ.

ಹೀಗೆ ಮೂರು ನಾಲ್ಕು ಅರ್ಥಗಳನ್ನು ಛಲಾರೀವ್ಯಾಖ್ಯಾನದಲ್ಲಿ ಉಲ್ಲೇಖಿಸಿದ್ದಾರೆ. ಇವುಗಳಲ್ಲಿ ಇದ್ದುದರಲ್ಲಿ ಸರಳವೂ, ಸ್ವರಸವೂ, ವಾಕ್ಯಾರ್ಥವಿವೃತಿಕಾರರಾದ ನಾರಾಯಣಾಚಾರ್ಯರಿಂದ ಪರಿಗೃಹೀತವೂ ಆದ ಅರ್ಥವನ್ನೇ ಮುಖ್ಯವಾಗಿ ಬಳಸಿಕೊಂಡಿದ್ದೇನೆ. ಅಂತೂ ಇಂಥ ಜಟಿಲಸಂದರ್ಭದಲ್ಲಿ ವ್ಯಾಖ್ಯಾನಕಾರರೂ ಗಲಿಬಿಲಿಗೊಳಗಾಗಿದ್ದಾರೆ ಎನ್ನುವ ಮಾತು ನಿಜ.

೧ ಮೊದಲಿನ ಉಗುರಿನ ಅಳತೆಗಿಂತ ಮೇಲಿನ ಬೆರಳಿನ ಅಳತೆ ಕಾಲುಪಾಲು ಕಮ್ಮಿಯಾಗಿರುತ್ತದೆ. ಹೀಗೆ ಪ್ರತಿಯೊಂದು ಅಳತೆಯನ್ನೂ ನಾಲ್ಕು ಪಾಲು ಮಾಡಿ—ಅದರ ಮೂರು ಪಾಲುಗಳನ್ನು ಮತ್ತಿನ ಉಗುರಿನ ಅಳತೆ ಎಂದಿಟ್ಟುಕೊಳ್ಳಬೇಕು ಎಂದರ್ಥ.

| | | |
|---|---|---|
| ಹೆಬ್ಬೆರಳಿನ ಉಗುರಿನ ಉದ್ದ | ||| | ಅಂಗುಲ |
| ನಂತರದ ಬೆರಳಿನ ಉಗುರಿನ ಉದ್ದ | [illegible] | ,, |
| ನಡು ಬೆರಳಿನ ಉಗುರಿನ ಉದ್ದ | [illegible] | ,, |
| ಅನಾಮಿಕೆಯ ಉಗುರಿನ ಉದ್ದ | [illegible] | ,, |
| ಕಿರಿಬೆರಳಿನ ಉಗುರಿನ ಉದ್ದ | [illegible] | ,, |

ಕಾಲುಗುರುಗಳು ಸುಂದರವಾಗಿಯೂ ಕೆಂಪಾಗಿಯೂ ಇರಬೇಕು.

**ವಿಸ್ತಾರಃ ಪ್ರಪದಸ್ಯಾಪಿ[1] ಷಡಂಗುಲ ಉದಾಹೃತಃ ।**
**ಅಂಗುಷ್ಠಪರಿಣಾಹಸ್ತು ಚತುರಂಗುಲ ಈರಿತಃ ।**
**ತ್ರ್ಯಂಗುಲಸ್ತು ತದನ್ಯಸ್ಯ ವ್ರೀಹ್ಯರ್ಧೋನಾಃ[2] ಕ್ರಮಾತ್ಪರಾಃ ॥ ೯ ॥**

| | | |
|---|---|---|
| ಮುಂಗಾಲಿನ ವಿಸ್ತಾರ | ೬ | ಅಂಗುಲ |
| ಹೆಬ್ಬೆರಳಿನ ಸುತ್ತಳತೆ | ೪ | ,, |
| ಒತ್ತಿನ ಬೆರಳಿನದು | ೩ | ,, |
| ನಡು ಬೆರಳಿನದು | ೨ [illegible] | ,, |
| ಅನಾಮಿಕೆಯದು | ೨ [illegible] | ,, |
| ಕಿರಿಬೆರಳಿನದು | ೨॥ | ,, |

**ದಶಾಂಗುಲಂ ಜಂಘಮೂಲಂ[3] ಮಧ್ಯಂ ತು ತ್ರ್ಯಂಗುಲಾಧಿಕಮ್ ।**
**ಸಪ್ತದಶಾಂಗುಲಂ[4] ತೂರ್ಧ್ವಂ ಜಾನುರಷ್ಟಾದಶಾಂಗುಲಃ ॥ ೧೦ ॥**
**ಊರ್ವಂತೋಽಪಿ ತಥಾ ಜ್ಞೇಯೋ ಮಧ್ಯಂ ದ್ವಿದ್ವಾದಶಾಂಗುಲಂ ।**
**ಚತುರಂಗುಲಾಧಿಕಂ ಮೂಲಂ ಗುಹ್ಯಂ ಸಾರ್ಧಚತುಷ್ಟಯಮ್ ॥**
**ಸಾರ್ಧತ್ರಯಂ ಪರೀಣಾಹಾದ್ವೃಷಣಂ ಚತುರಂಗುಲಮ್ ।**
**ಸಪ್ತಾಂಗುಲಂ ಪರೀಣಾಹಾದ್ವೃತ್ತಂ ಪ್ರೋಕ್ತಂ ಸಮಸ್ತಶಃ[5] ॥೧೨॥**

---

೧ 'ಪ್ರಪದಸ್ಯ=ಪಾದಾಗ್ರಸ್ಯ' । (ಛಲಾರೀಯ)

೨ ವ್ರೀಹಿ ಅಂದರೆ ಅಂಗುಲದ ೩/೪ ಅಂಶ. ಮುಂದೆ ಇದೇ ಅಧ್ಯಾಯದಲ್ಲಿ ಆಚಾರ್ಯರು ಈ ವಿಷಯವನ್ನು ಸ್ಪಷ್ಟೀಕರಿಸಿದ್ದಾರೆ— 'ದೀರ್ಘಾಸ್ತು ಕಲಮಾಸ್ತಿಸ್ರಃ'
'ಶಾಲಿಭಿರ್ವಾ ಖುಜುನ್ಯಸ್ತೈಸ್ತ್ರಿಭಿರ್ಮಾನಾಂತರಂ ಭವೇತ್ ।' (ಪಂಚರಾತ್ರ)

೩ ಜಂಘಮೂಲಂ=ಜಂಘಾಮೂಲಮ್ ।

೪ ಇಲ್ಲಿ 'ಸಪ್ತಾದಶಾಂಗುಲಂ' ಎಂಬ ಪಾಠ ಪ್ರಚಲಿತವಿದೆ.
'ಸಪ್ತಾದಶೇತಿ ದೀರ್ಘಶ್ಛಾಂದಸಃ ।' (ನಾರಾಯಣೀಯ)

೫ 'ಸಮಸ್ತಶ ಇತಿ, ಜಂಘಾದಿವೃಷಣಾಂತಂ ಸರ್ವಮಿತ್ಯರ್ಥಃ ।' (ನಾರಾ.)

| | | |
|---|---|---|
| ಕಿರುದೊಡೆಯ ತುದಿಯಲ್ಲಿ ಸುತ್ತಳತೆ | ೧೦ | ಅಂಗುಲ |
| ,, ಮಧ್ಯದ ,, | ೧೩ | ,, |
| ಮೇಲೆ– ಮೊಣಗಂಟಿನ ಬಳಿಯ ಸುತ್ತಳತೆ | ೧೭ | ,, |
| ಮೊಣಗಂಟಿನ ಅಳತೆ | ೧೫ | ,, |
| ತೊಡೆಯ ತುದಿಯ ಬದಿ | ,, | ,, |
| ,, ಮಧ್ಯಭಾಗ | ೨೪ | ,, |
| ,, ಮೂಲಭಾಗ | ೨೮ | ,, |
| ಲಿಂಗದ ದೈರ್ಘ್ಯ | ೪॥ | ,, |
| ,, ಸುತ್ತಳತೆ | ೩॥ | ,, |
| ಅಂಡಕೋಶದ ಉದ್ದ | ೪ | ,, |
| ಅದರ ಸುತ್ತಳತೆ | ೭ | ,, |

ತೊಡೆ, ಲಿಂಗ, ಅಂಡ ಇವೆಲ್ಲ ವೃತ್ತಾಕಾರವಾಗಿರಬೇಕು.

**ಅಷ್ಟತ್ರಿಂಶಾಂಗುಲಃ ಕಟ್ಯಾಃ[1] ಪರೀಣಾಹ ಉದಾಹೃತಃ ।**
**ಸುವೃತ್ತತ್ವಂ ತಥಾ ಶ್ರೋಣ್ಯೋಃ ಪೀನತ್ವಂ ಚ ಸಮಸ್ತಶಃ ।**
**ವಿಸ್ತಾರಶ್ಚ ತಥಾ ಕಟ್ಯಾಃ ಸುಪ್ರತಿಷ್ಠಿತತಾ ಪದೋಃ ॥ ೧೩ ॥**

| | | |
|---|---|---|
| ಕಟಿಯ ಸುತ್ತಳತೆ | ೩೮ | ಅಂಗುಲ |

ಸೊಂಟ(ಜಘನ)ವನ್ನು ಉರುಟಾಗಿ ಕಡೆಯಬೇಕು. ಎಲ್ಲ ಅಂಗಗಳೂ ಪುಷ್ಟವಾಗಿ ಸುಂದರವಾಗಿರಬೇಕು. ಕಟಿಯನ್ನು ವಿಸ್ತೃತವನ್ನಾಗಿಯೂ ಮಾಡಬೇಕು. ಪಾದತಲಗಳು ಪೀಠದ ಮೇಲೆ ಎಡೆಬಿಡದೆ ಗಚ್ಚನೆ ಕುಳಿತಿರುವಂತಿರಬೇಕು.

**ಕಟ್ಯಾಶ್ಚೈವಾಂಗುಲಾಧಿಕ್ಯಂ ನಾಭೇರಥ ಉದಾಹೃತಮ್ ।**
**ನಾಭಿಃ ಸಾರ್ಧಾಂಗುಲಶ್ಚೈವ ಗಂಭೀರೋಽರ್ಧಾಂಗುಲೋನ್ನತಃ ॥**
**ವೃತ್ತಃ ಪ್ರದಕ್ಷಿಣಶ್ಚೈವ**

| | | |
|---|---|---|
| ನಾಭಿಯ ಕೆಳಬದಿಯಲ್ಲಿ ಹೊಟ್ಟೆಯ ಸುತ್ತಳತೆ | ೩೯ | ಅಂಗುಲ |
| ಹೊಕ್ಕುಳಿನ ದೈರ್ಘ್ಯ | ॥ | ,, |
| ಅದರ ಕುಳಿ | ೧॥ | ,, |

---

೧ 'ಕಾಂಚೀಪದಂ ಕಲತ್ರಂ ಜಘನಂ ಶ್ರೋಣೀ ಕಕುದ್ಮತೀ ಜ್ಞೇಯಾ ।
ಆರೋಹಶ್ಚ ನಿತಂಬಃ ಕಟೀ, ಕಟೀರಂ ತ್ರಿಕಸ್ಥಾನಮ್ ॥' (ಹಲಾಯುಧ)

ಹೊಕ್ಕುಳು ಉರುಟಾಗಿಯೂ, ಕುಳಿಯುಳ್ಳದ್ದೂ, ಬಲಬದಿಯಲ್ಲಿ ಸುಳಿಯುಳ್ಳದ್ದೂ ಆಗಿರಬೇಕು.

**ದ್ವಿಚತ್ವಾರಿಂಶದಂಗುಲಮ್ ।**
**ಮಧ್ಯಂ ಸ್ತನೇ ಪರೀಣಾಹಃ ಷಡಂಗುಲಮತೋಽಧಿಕಃ ॥ ೧೫ ॥**

| | |
|---|---|
| ನಡುವಿನ ಸುತ್ತಳತೆ | ೪೮ ಅಂಗುಲ |
| ಎದೆಯ ಸುತ್ತಳತೆ | ೪೨ ,, |

**ಏಕೋನವಿಂಶಾಂಗುಲಂ ತದುರೋವಿಸ್ತಾರಲಕ್ಷಣಮ್[1] ।**
**ಪಾದೋನಮಂಗುಲಂ ಚೈವ ಭುಜಾಭ್ಯಾಂ ಸಹ ಸಾರ್ಧಕಮ್[2] ॥**

| | |
|---|---|
| ಎದೆಯ ಅಗಲ | ೧೯ ಅಂಗುಲ |
| ತೋಳುಗಳೊಡನೆ ಎದೆಯಗಲ | ೨೯। ,, |

**ಅಂಸಯೋರ್ವಿಸೃತಿಶ್ಚೈವ ಪೃಥಗಷ್ಟಾಂಗುಲಾ ಮತಾ ।**
**ಸಪ್ತಾಂಗುಲೋಚ್ಛ್ರಯಃ ಕಕ್ಷಾದುಪರಿ ಸ್ಕಂಧಯೋರ್ಮತಃ ॥೧೬॥**

---

೧ 'ಉರೋವಿಸ್ತಾರಸ್ಯ ಲಕ್ಷಣಂ=ಪರಿಮಾಣಮ್ ।' (ಛಲಾರೀಯ)

೨ 'ಸಾರ್ಧಕಂ' ಎಂಬುದು ಹಿಂದಿನ ಪಾದದ 'ಏಕೋನವಿಂಶಾಂಗುಲಂ' ಎಂಬ ಪದದಿಂದ ಅನ್ವಿತವಾಗುತ್ತದೆ ೧೯ ಅಂಗುಲ+ಅದರ ಅರ್ಧಾಂಶವಾದ ೯॥ ಅಂಗುಲ+ ಮುಕ್ಕಾಲು ಅಂಗುಲ ('ಪಾದೋನಮಂಗುಲಂ') ಒಟ್ಟು ೨೯। ಅಂಗುಲ

ಇಲ್ಲಿ ಛಲಾರೀಯದ ರೀತ್ಯಾ ಅರ್ಥ ಬೇರೆ ತೆರನಾಗಿದೆ. ಆ ಪಕ್ಷದಲ್ಲಿ 'ಪಾದೋನ-ಮಂಗುಲಂ' ಎನ್ನುವುದು ಎದೆಯ ಅಳತೆಯಲ್ಲೇ ಅನ್ವಿತವಾಗುತ್ತದೆ ಅದರಿಂದ ಅದರ ರೀತ್ಯಾ ಎದೆಯ ಅಳತೆ ೧೮।।। ಅಂಗುಲ ತೋಳುಗಳೊಡನೆ ಅದರ ಅರ್ಧಾಂಶದಿಂದ ಕೂಡಿದಷ್ಟು ಅಂದರೆ ೨೮⅛ ಅಂಗುಲ.

ಆದರೆ ಈ ಪಕ್ಷದಲ್ಲಿ ಒಂದು ಅನುಪಪತ್ತಿಯಿದೆ. ಆಚಾರ್ಯರು ಬೃಹದ್ಭಾಷ್ಯದಲ್ಲಿ 'ಪಂಚೋರಾಃ' ಎಂದು, ದೇಹದ ಉದ್ದ ಎದೆಯಿಂದ ಐದು ಪಟ್ಟು ಎಂದಿದ್ದಾರೆ. ಅದರಿಂದ ಎದೆಯ ಅಗಲ ೧೮।।। ಅಂಗುಲವಾದರೆ ಒಟ್ಟು ದೇಹದ ಉದ್ದ ೯೩।।। ಅಂಗುಲವಾಗುವುದು. ಇದು ಆಚಾರ್ಯರ ಪೂರ್ವವಚನಕ್ಕೆ ವಿರುದ್ಧವಾಗಿದೆ. ಎದೆಯ ಅಗಲ ೧೯ ಅಂಗುಲವೆಂದು ಇಟ್ಟುಕೊಂಡರೂ ಒಟ್ಟು ದೇಹದ ಪರಿಮಾಣ ೯೬ ಅಂಗುಲವಾಗುವುದಿಲ್ಲ. ೯೫ ಅಂಗುಲವೇ ಆಗುವುದು, ಆದರೆ ಸಾಮಾನ್ಯವಾಗಿ ಒಂದು ಅಂಗುಲದ ವ್ಯತ್ಯಾಸವನ್ನು ಬಿಟ್ಟುಕೊಟ್ಟು 'ದಶತಾಲೋ ದಶಮುಖಃ' ಎಂಬಂತೆಯೇ 'ಪಂಚೋರಾಃ' ಎಂದೂ ಆಚಾರ್ಯರು ನುಡಿದಿದ್ದಾರೆ ಎಂದರೆ ಏನೂ ಅನುಪಪತ್ತಿಯಿಲ್ಲ ಎಂತಲೇ ಛಲಾರೀಯ ವ್ಯಾಖ್ಯಾನವು ಈ ಸಂದರ್ಭದಲ್ಲಿ ಸ್ವಲ್ಪ ವಿಚಾರಣೀಯವಾಗಿದೆ.

ಪ್ರತಿಯೊಂದು ಹೆಗಲಿನ ವಿಸ್ತಾರ ೮ ಅಂಗುಲ
ಕಂಕುಳಿನಿಂದ ಹೆಗಲ ವರೆಗಿನ ಎತ್ತರ ೭ ,,

**ಅಷ್ಟತ್ರಿಂಶಾಂಗುಲಂ ಚೈವ ಹಸ್ತಯೋರ್ಮಾನಮುಚ್ಯತೇ ।**
**ಅಷ್ಟಾದಶಾಂಗುಲೋ ಬಾಹ್ವೋಃ[1] ಪರಿಣಾಹ ಉದಾಹೃತಃ ।**
**ಕ್ರಮಾದೂನಂ ತದಂತೇ ತು ಸಾರ್ಧಾಷ್ಟಾಂಗುಲಮೀರಿತಮ್ ॥೧೮॥**

ತೋಳುಗಳ ಉದ್ದಳತೆ ೩೮ ಅಂಗುಲ
ತೋಳಿನ ಬುಡದಲ್ಲಿ ಸುತ್ತಳತೆ ೧೮ ,,
ಕ್ರಮವಾಗಿ ಕಮ್ಮಿಯಾಗುತ್ತಾ ತುದಿಯಲ್ಲಿ ೮॥ ,,

**ಸಾಂಗುಲಸ್ತು ತಲಃ ಸಾರ್ಧನವಾಂಗುಲ ಉದಾಹೃತಃ ।**
**ಸಮಂ ತದುಭಯಂ ಜ್ಞೇಯಂ ತಥೈವ ತಲವಿಸ್ತೃತಿಃ ॥ ೧೯ ॥**
**ಅರ್ಧಾಂಗುಲೋನ್ನತಾ ಮಧ್ಯಾ ದ್ವಯೋಃ ಸಾರ್ಧಾಂಗುಲೋನತಾ[2] ।**
**ಕನಿಷ್ಠಿಕಾಯಾಸ್ತಸ್ಯಾಸ್ತು ವ್ರೀಹಿಮಾನಾಧಿಕಃ ಪರಃ[3] ॥ ೨೦ ॥**

ಮಣಿಗಂಟಿನಿಂದ ನಡುಬೆರಳು ತುದಿಯವರೆಗೆ ಕೈಯ ಉದ್ದ ೯॥ ಅಂಗುಲ.[4] ಅದರಲ್ಲಿ ಅಂಗೈಯ ಉದ್ದವೂ, ನಡುಬೆರಳಿನ ಉದ್ದವೂ ಸಮನಾಗಿದ್ದು ಎರಡೂ ೪॥। ಅಂಗುಲ ಉದ್ದವಾಗಿರಬೇಕು. ಅಂಗೈಯ ಅಗಲವೂ ಉದ್ದದಂತೆಯೆ ೪॥। ಅಂಗುಲವೆ ಆಗಿದೆ. ತರ್ಜನಿ, ಅನಾಮಿಕೆಗಳಿಂದ ನಡುಬೆರಳು ಅರ್ಧ ಅಂಗುಲ ಹೆಚ್ಚು ಉದ್ದವಾಗಿದೆ. ಆದರಿಂದ ತರ್ಜನಿಯು ಮತ್ತು ಅನಾಮಿಕೆಯ ಉದ್ದ ೪। ಅಂಗುಲ. ನಡುಬೆರಳಿನಿಂದ ಕಿರಿಬೆರಳು ೧॥ ಅಂಗುಲ

---

೧ 'ಬಾಹ್ವೋಃ ಭುಜಯೋರೂರ್ಧ್ವಭಾಗೇ ।' (ಛಲಾರೀಯ)

೨ 'ಕನಿಷ್ಠಿಕಾಯಾ ಮಧ್ಯಮಾಪೇಕ್ಷಯಾ ಸಾರ್ಧಾಂಗುಲೋನತಾ ।' 'ತಸ್ಯಾಃ=ಮಧ್ಯಮಾಯಾಃ ಸಕಾಶಾತ್ ।'

೩ 'ಪರಃ=ಅವಶಿಷ್ಟೋಽಂಗುಷ್ಠಃ ।'

೪ ಶರೀರವು 'ದಶತಾಲ' ಎಂದಿದ್ದಾರೆ ಆಚಾರ್ಯರು. ಒಂದು ತಾಲ(ತಲ) ವೆಂದರೆ ೯॥ ಅಂಗುಲವೆಂದ ಮೇಲೆ 'ದಶತಾಲ'ವೆಂದರೆ ೯೫ ಅಂಗುಲವಷ್ಟೇ ಆಗುವುದು. ಇಲ್ಲೂ ಒಂದು ಅಂಗುಲದ ವ್ಯತ್ಯಾಸವನ್ನು ಹಿಂದಿನಂತೆಯೇ ಪರಿಗಣಿಸದೆ ಬಿಟ್ಟಿದ್ದಾರೆ ಎಂದಿಟ್ಟು ಕೊಳ್ಳಬೇಕು. 'ತಾಲ' ಎಂದರೆ 'ತಲ'ದಿಂದ ಬೇರೆಯಾದ ಪರಿಮಾಣ ಎನ್ನುವವರೂ ಉಂಟು.

ಕಿರಿದಾಗಿದೆ. ಅದರಿಂದ ಅದರ ಉಪ್ಪ ೩। ಅಂಗುಲ. ಆದರಿಂದ ವ್ರೀಹಿಯಷ್ಟು ಅಂಗುಷ್ಠ ದೊಡ್ಡದಾಗಿದೆ, ಅರ್ಥಾತ್ ೩ ೭/೧೨ ಅಂಗುಲ ಉಪ್ಪವಾಗಿದೆ.

**ಸಾರ್ಧತ್ರಯಪರೀಣಾಹೌ ಮಧ್ಯಜ್ಯೇಷ್ಠಾವುದಾಹೃತೌ[೧] ।**
**ಅನ್ಯೌ ವ್ರೀಹಿತದರ್ಧೋನಾವನ್ಯಾ ಸಾರ್ಧದ್ವಯಾಂಗುಲಾ ।**
**ಪಾದೋನಾಂತಪರೀಣಾಹಾಃ ಸರ್ವೇ ಜ್ಯೇಷ್ಠಾಂ ವಿನಾ ಸ್ಮೃತಾಃ ॥**

| | |
|---|---|
| ನಡುಬೆರಳು ಮತ್ತು ಹೆಬ್ಬೆಟ್ಟಿನ ಸುತ್ತಳತೆ | ೩॥ ಅಂಗುಲ |
| ತರ್ಜನಿ ಮತ್ತು ಅನಾಮಿಕೆಯ ,, | ೩ ,, |
| ಕಿರಿಬೆರಳಿನ ಸುತ್ತಳತೆ | ೨॥ ,, |

ಹೆಬ್ಬೆಟ್ಟನ್ನುಳಿದು ಬೇರೆಲ್ಲಾ ಬೆರಳುಗಳೂ ತುದಿಯಲ್ಲಿ ಬುಡದಿಂದ ಕಾಲಂಗುಲ ಕಮ್ಮಿ ಅಳತೆವುಳ್ಳವುಗಳಾಗಿವೆ. ಹೆಬ್ಬೆಟ್ಟಿನ ಅಳತೆ ತುದಿಮೊದಲಲ್ಲಿ ಒಂದೇ ತೆರನಾಗಿರಬೇಕು.[೨]

---

೧ ಇಲ್ಲಿ ಸ್ತ್ರೀಲಿಂಗದ ಅರ್ಥದಲ್ಲಿ ಪುಂಲಿಂಗವನ್ನು ಬಳಸಲಾಗಿದೆ. ಛಾಂದಸಪ್ರಯೋಗಗಳಲ್ಲಿ ಇಂಥ ವ್ಯತ್ಯಾಸಗಳು ಹೇರಳವಾಗಿವೆ. ಆಗಮ ಗ್ರಂಥ ಎಂದ ಮೇಲೆ ಕೇಳುವುದೇ ಬೇಡ. ಆಚಾರ್ಯರಿಗೂ ಛಾಂದಸ ಪ್ರಯೋಗಗಳಲ್ಲಿ ಒಲವು ಹೆಚ್ಚು ಎನ್ನುವುದಕ್ಕೆ ಅವರ ಎಲ್ಲ ಗ್ರಂಥಗಳೇ ಸಾಕ್ಷಿ. 'ಸರ್ವೇ ಜ್ಯೇಷ್ಠಾಂ ವಿನಾ' ಎಂಬಲ್ಲಿಯೂ ಪುಂಲಿಂಗ ಪ್ರಯೋಗಕ್ಕೆ ಇದೇ ಸಮಾಧಾನವನ್ನಿಟ್ಟುಕೊಳ್ಳಬೇಕು.

೨ ಮೂರು ವ್ರೀಹಿಗಳಿಗೆ ಒಂದಂಗುಲವಾದುದರಿಂದ ೧॥ ವ್ರೀಹಿ ಕಮ್ಮಿಯೆಂದರೆ ॥ ಅಂಗುಲ ಕಮ್ಮಿ ಎಂದ ಹಾಗೆಯೇ ಆಗುವುದು. ಆದರೆ ಫಲಾರೀಯ ವ್ಯಾಖ್ಯಾನದಲ್ಲಿ ಇನ್ನೊಂದು ಅರ್ಥವನ್ನು ಬರೆದಿದ್ದಾರೆ. ತರ್ಜನೀ ಅರ್ಧ ವ್ರೀಹಿಯಷ್ಟು (೧/೬ ಅಂಗುಲ) ಕಮ್ಮಿ, ಅನಾಮಿಕೆ ಒಂದು ವ್ರೀಹಿಯಷ್ಟು (೧/೩ ಅಂಗುಲ) ಕಮ್ಮಿ ಎಂದು ಪ್ರತ್ಯೇಕವಾಗಿ ಅನ್ವಯ ಎಂದು ಆ ವ್ಯಾಖ್ಯಾನಕಾರರು ಬರೆದಿದ್ದಾರೆ. ಅವರ ಪಕ್ಷದಲ್ಲಿ ತರ್ಜನಿಯ ಅಳತೆ ೨ ೫/೬ ಅಂಗುಲ, ಅನಾಮಿಕೆಯದು ೨ ೨/೩ ಅಂಗುಲ.

೩ ಮೇಲಿನ ಪ್ರಕಾರ ಅವುಗಳ ಅಳತೆ ಈ ತೆರನಾಗಿದೆ—

| | | | | |
|---|---|---|---|---|
| ನಡುಬೆರಳಿನ | ತುದಿಯ | ಸುತ್ತಳತೆ | ೩। | ಅಂಗುಲ |
| ತರ್ಜನಿಯ | ,, | ,, | ೨।।। | ,, |
| ಅನಾಮಿಕೆಯ | ,, | ,, | ,, | ,, |

ಫಲಾರೀಯದ ರೀತ್ಯಾ ತರ್ಜನಿಯ ತುದಿಯ ಸುತ್ತಳತೆ ೩ ೧/೧೨ ಅಂಗುಲ ಮತ್ತು ಅನಾಮಿಕೆಯದು ೨ ೧೧/೧೨ ಅಂಗುಲ. (ಈ ಅಳತೆ ಸ್ವಲ್ಪ ತೊಡಕಾಗಿದೆ. ಮೇಲಿನ ಅಳತೆಯಷ್ಟು ಸರಳವಾಗಿಲ್ಲ ಎಂದನ್ನಿಸುತ್ತದೆ.)

| | | | | |
|---|---|---|---|---|
| ಕನಿಷ್ಠಿಕೆಯ | ತುದಿಯ | ಸುತ್ತಳತೆ | ೨। | ಅಂಗುಲ |

**ವಕ್ಷೋವಿಸ್ತಾರಸದೃಶಃ ಪರಿಣಾಹೋ ಗಲಸ್ಯ ಚ ।**
**ಲಲಾಟಕುಕ್ಷಿಕಂಠಾಸ್ತು ದೀರ್ಘರೇಖಾತ್ರಯಾನ್ವಿತಾಃ ॥ ೨೨ ॥**
**ವೃತ್ತೋ ಗಲೋ ಬಾಹವಶ್ಚ ಸ್ತನಾವಂಗುಲಯಸ್ತಥಾ ।**
**ರಕ್ತಾಸ್ತಲ[1]ನಖಾಶ್ಚೈವ ನೇತ್ರಾಂತೋಽಧರ ಏವ ಚ ॥ ೨೩ ॥**
**ಉತ್ತರೋಷ್ಠಶ್ಚ ಜಿಹ್ವಾ ಚ**

ಎದೆಯ ವಿಸ್ತಾರದಷ್ಟೆ ಕತ್ತಿನ ಸುತ್ತಳತೆಯೂ ಇರಬೇಕು.[2] ಹಣೆ, ಕತ್ತು, ಹೊಟ್ಟೆಗಳಲ್ಲಿ ದೀರ್ಘವಾದ ಮೂರು ಗೆರೆ (ತ್ರಿವಲಿ)ಗಳಿರಬೇಕು. ಕತ್ತು, ತೋಳುಗಳು, ಮೊಲೆಯಪ್ರದೇಶ, ಬೆರಳುಗಳು ಉರುಟಾಗಿರಬೇಕು. ಅಂಗೈ, ಅಂಗಾಲು, ಉಗುರುಗಳು ಕೆಂಪಾಗಿರಬೇಕು. ಕಣ್ಣಕುಡಿ, ಕೆಳದುಟಿ, ಮೇಲ್ದುಟಿ, ನಾಲಿಗೆ ಇವು ಕೂಡ ಕೆಂಪಿರಬೇಕು.[3]

**ನಖೌ[4] ಪಾದೋನಕಾಂಗುಲೌ ।**
**ಅರ್ಧಾಂಗುಲೌ ತಥಾ ಮಧ್ಯಾವನ್ಯೇಽಷ್ಟಾಂಶಕ್ರಮೋನಕಾಃ[5] ॥ ೨೪ ॥**

---

೧ ಕೆಲವು ತುಳುಪುಸ್ತಕಗಳಲ್ಲಿ 'ರಕ್ತಾಸ್ತಲಾ ನಖಾಶ್ಚೈವ' ಎಂದು ಪಾಠವಿದೆ. ಆ ಪಕ್ಷದಲ್ಲೂ ಅರ್ಥ ಮೇಲಿನಂತೆಯೇ. ತಲಶಬ್ದ ಮಾತ್ರ ಪುಂಲಿಂಗದಲ್ಲಿ ಪ್ರಯುಕ್ತವಾಗಿದೆ ಎಂದಿಟ್ಟುಕೊಳ್ಳಬೇಕು.

'ಭೂತಲಂ', 'ರಸಾತಲಂ' ಮೊದಲಾದ ಕಡೆಯಲ್ಲಿ ತಲಶಬ್ದ ನಪುಂಸಕವಾದರೂ 'ಕರತಲ', 'ಪಾದತಲ' ಇತ್ಯಾದಿ ಕಡೆಗಳಲ್ಲಿ ಪುಂಲಿಂಗದಲ್ಲಿಯೂ ಪ್ರಯೋಗವಿದೆ.

'ತಲಂ ಸ್ವರೂಪಾಧರಯೋಃ ಖಡ್ಗಮುಷ್ಟಿಚಪೇಟಯೋಃ ।' (ವಿಶ್ವ)
'ತಲಶ್ಚಪೇಟೇ ತಾಲದ್ರೌ' (ಹೈಮ)
'ಪುಂಸಿ ತಾಲಮಹೀರುಹೇ । ಚಪೇಟೇ ಚ' (ಮೇದಿನೀ)

೨ ಎದೆಯ ಅಳತೆಯಲ್ಲಿ ಹಿಂದೆ ಎರಡು ಪಕ್ಷವನ್ನು ಸೂಚಿಸಿದೆ. ಅದರಿಂದ ಇಲ್ಲಿಯೂ ಎರಡು ಪಕ್ಷವುಂಟಾಗುವುದು. ಮೊದಲನೆಯ ಪಕ್ಷದಲ್ಲಿ ಕಂಠದ ಸುತ್ತಳತೆ ೧೯ ಅಂಗುಲ. ಎರಡನೆಯ ಪಕ್ಷದಲ್ಲಿ ೧೯।।। ಅಂಗುಲ. ಇಬ್ಬರು ವ್ಯಾಖ್ಯಾನಕಾರರೂ ಇಲ್ಲಿ ೧೯।।। ಅಂಗುಲ ಎಂಬ ಪಕ್ಷವನ್ನೇ ಉಲ್ಲೇಖಿಸಿದ್ದಾರೆ.

೩ ಕಲ್ಲಿನ ಪ್ರತಿಮೆಯನ್ನು ಕೆತ್ತಿಸುವಾಗ ಬಣ್ಣಗಳ ಉಪಯೋಗವಿಲ್ಲದಿದ್ದರೂ ಮೂರ್ತಿಯ ಲಕ್ಷಣವನ್ನು ಸಮಗ್ರವಾಗಿ ತಿಳಿಸುವ ದೃಷ್ಟಿಯಿಂದ ಆಚಾರ್ಯರು ಅವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ವರ್ಣಚಿತ್ರಾದಿಗಳಲ್ಲಿ ಅಂತೂ ಇದರ ಉಪಯೋಗ ಇದ್ದೇ ಇದೆ.

೪ 'ನಖೌ=ಹಸ್ತದ್ವಯಗತಾಂಗುಷ್ಠನಖೌ ।' (ನಾರಾಯಣೀಯ)

೫ ಇಲ್ಲಿ ಎರಡು ತೆರನಾಗಿ ಅರ್ಥಮಾಡುತ್ತಾರೆ. ನಡುಬೆರಳಿನಿಂದ ತರ್ಜನಿ ಅನಾಮಿಕೆಗಳು ಅಷ್ಟಾಂಶ ಹೀನಗಳು, ಅವುಗಳಿಂದ ಕನಿಷ್ಠಿಕೆ ಅಷ್ಟಾಂಶ ಹೀನವೆಂದು ಒಂದು;

| | |
|---|---|
| ಹೆಬ್ಬೆರಳಿನ ಉಗುರಿನ ಉದ್ದ | ।।। ಅಂಗುಲ |
| ನಡುಬೆರಳಿನ ,, ,, | ।। ,, |
| ತರ್ಜನಿಯ ಮತ್ತು ಅನಾಮಿಕೆಯ ಉಗುರಿನ ಉದ್ದ | ೩/೮ ,, |
| ಕಿರಿಬೆರಳಿನ ಉಗುರಿನ ಉದ್ದ | ೩/೧೬ ,, |

**ನಾಸಿಕಾಯಾ ಅಧಸ್ತಾಚ್ಚ ನಾಸಿಕಾ ಚ ರರಾಟಿಕಾ[೧] ।**
**ಸಮಾ ಮಾನೇನ**

ಮೂಗಿನ ತುದಿಯಿಂದ ಗಲ್ಲದ ವರೆಗಿನ ಪ್ರದೇಶ, ಮೂಗು ಮತ್ತು ಹಣೆ ಇವು ಮೂರೂ ಸಮಪ್ರಮಾಣಗಳಾಗಿದ್ದು ಪ್ರತಿಯೊಂದರ ಉದ್ದ ೪ ಅಂಗುಲ ವಾಗಿದೆ.

---

ನಡುಬೆರಳಿಂದ ತರ್ಜನಿಯೂ, ತರ್ಜನಿಯಿಂದ ಅನಾಮಿಕೆಯೂ, ಅನಾಮಿಕೆಯಿಂದ ಕಿರಿ ಬೆರಳೂ, ಕ್ರಮವಾಗಿ ಅಷ್ಟಾಂಶೋನವೆಂದು ಇನ್ನೊಂದು. ಇವೆರಡರಲ್ಲಿ ಮೊದಲನೆ ಯದು ಉಭಯ ವ್ಯಾಖ್ಯಾನಕಾರರೂ ಉಲ್ಲೇಖಿಸಿದ ಅರ್ಥ. ಅಲ್ಲದೆ ಈ ಅರ್ಥವೇ ಆಚಾರ್ಯರ ತಮ್ಮಂದಿರಾದ ವಿಷ್ಣುತೀರ್ಥಾಚಾರ್ಯರಿಗೂ ಸಮ್ಮತವೆಂದು ಛಲಾರೀಯ ದಲ್ಲಿ ಬರೆದಿದ್ದಾರೆ. ಎಂತಲೇ ಈ ಅರ್ಥವನ್ನೇ ಮೇಲಿನ ಅನುವಾದದಲ್ಲಿ ಬಳಸಿದ್ದೇನೆ. ಎರಡನೆಯ ಪಕ್ಷವೂ ಪ್ರಾಮಾಣಿಕವೇ ಆಗಿದೆ. ಆದರಿಂದ ಇಲ್ಲಿ ಈ ಎರಡು ಅಳತೆಗಳೂ ವೈಕಲ್ಪಿಕವಾಗಿವೆ ಎನ್ನಬಹುದು.

'ಪಾದೋನಮಂಗುಲಂ ಕಾರ್ಯಮಂಗುಷ್ಠಸ್ಯ ನಖಂ ತಥಾ ।
ಅರ್ಧಾಂಗುಲಂ ತಥಾ ಕಾರ್ಯಂ ಮಧ್ಯಮಾಯಾ ನಖಂ ತಥಾ ।
ಅಷ್ಟಮಾಂಶಾಷ್ಟಮಾಂಶೋನಾ ಶೇಷಾಂಗುಲ್ಯಃ ಕ್ರಮೇಣ ತು ॥'
(ಹಯಶೀರ್ಷ)

೧ ರರಾಟಿಕಾ=ರರಾಟಂ, ಲಲಾಟಮಿತ್ಯರ್ಥಃ ।

ವೈದಿಕಪ್ರಯೋಗಗಳಲ್ಲಿ–ಲಲಾಟದ ಬದಲು ರರಾಟವೆಂದೇ ಬಳಸುವುದುಂಟು—

'ವಿಷ್ಣೋಃ ರರಾಟಮಸಿ' (ಯಜುರ್ವೇದ)

ಆದರೆ ಇಲ್ಲಿ ಒಂದು ಅಂಶವನ್ನು ತಿಳಿದಿರಬೇಕು. 'ರರಾಟಿಕಾ' ಶಬ್ದದ ನಿಷ್ಪತ್ತಿ ಯನ್ನು ಲಲಾಟ ಶಬ್ದದಿಂದಲೇ ತೋರಿಸಬೇಕು. 'ಲಲಾಟಿಕಾ' ಶಬ್ದದಿಂದಲ್ಲ. ಏಕೆಂದರೆ 'ಲಲಾಟಿಕಾ' ಎಂಬ ಪದಕ್ಕೆ ಸಂಸ್ಕೃತದಲ್ಲಿ ಬೇರೆ ಅರ್ಥವನ್ನು ಪಾಣಿನಿ ಬರೆದಿದ್ದಾನೆ—

'ಕರ್ಣಲಲಾಟಾತ್ಕನಲಂಕಾರೇ' (ಪಾಣಿನೀಯಸೂತ್ರ)

ಕಿವಿಯ ಅಲಂಕಾರ ಎಂಬರ್ಥದಲ್ಲಿ 'ಕರ್ಣಿಕಾ' ಎಂಬ ಪದವೂ, ಲಲಾಟದ ಅಲಂಕಾರ ಎಂಬರ್ಥದಲ್ಲಿ 'ಲಲಾಟಿಕಾ' ಎಂಬ ಪದವೂ ವ್ಯುತ್ಪನ್ನವಾಗಿದೆ. ಅದೂ ಅಲಂಕಾರಸಾಮಾನ್ಯವಲ್ಲ. ಮದುವೆಯಾಗುವವರೆಗೆ ಕನ್ನೆಯರು ಅಂದಕ್ಕಾಗಿ ಇಟ್ಟು ಕೊಳ್ಳುವ ಬಣ್ಣದ ಹಣೆಬೊಟ್ಟು 'ಲಲಾಟಿಕಾ'. ಮದುವೆಯಾದ ಮೇಲೆ–ಐದೆತನವನ್ನು

**ನಾಸಾಯಾ ಉಚ್ಛ್ರಿತ್ಯೇನೈವ ಮಾಪನೇ ।**
**ಅರ್ಧಾಂಗುಲಾಧಿಕಂ ಸರ್ವಮುಖಸ್ಯ ತು ಭವಿಷ್ಯತಿ ॥ ೨೫ ॥**

ಮೂಗಿನ ಎತ್ತರವನ್ನೂ ಅಳತೆಯಲ್ಲಿ ಸೇರಿಸಿಕೊಂಡಾಗ ಎತ್ತರದ ಅರ್ಧ ಅಂಗುಲವೂ ಸೇರಿ ಒಟ್ಟು ಮುಖದ ಉದ್ದ ೯॥ ಅಂಗುಲವಾಗುವುದು.

**ಚತುರಂಗುಲಂ ತಥೈವಾಸ್ಯಂ ಸಾರ್ಧವ್ರೀಹ್ಯಧರಂ ಸ್ಮೃತಮ್ ।**
**ಉತ್ತರಂ ವ್ರೀಹಿಮಾತ್ರಂ ತು ತದೂರ್ಧ್ವಂ ಚಾಧರೋಪಮಮ್ ।**
**ಸಾರ್ಧಾಂಗುಲಮಧಃ[1] ಪ್ರೋಕ್ತಮಧರಾದಧ ಏವ ಚ ॥ ೨೬ ॥**

| | | |
|---|---|---|
| ಬಾಯಿಯ ಅಗಲ | ೪ ಅಂಗುಲ | |
| ಕೆಳತುಟಿಯ ಎತ್ತರ | ॥ ,, | (೧॥ ವ್ರೀಹಿ) |
| ಮೇಲ್ತುಟಿಯ ,, | ೩/೪ ,, | (೧ ,, ) |

---

ಸೂಚಿಸುವ ಮಂಗಲ ಚಿಹ್ನೆಯಾಗಿ, ವಿಧಿನಿಯಮದಿಂದ ಧರಿಸುವ ಬೊಟ್ಟು ತಿಲಕ. ಒಂದು ಮಾಂಗಲ್ಯಲಕ್ಷಣವಾದರೆ ಇನ್ನೊಂದು ಹರೆಯದ ಸೊಗಸಿಗೆ ಸಿಂಗಾರವೆನಿಸುತ್ತದೆ. ಈ ಅರ್ಥಭೇದವನ್ನು ಕಾಲಿದಾಸನ ಕುಮಾರಸಂಭವದಲ್ಲಿ ಆತನು ಸ್ಪಷ್ಟವಾಗಿ ಒಡ ಮೂಡಿಸಿದ್ದಾನೆ—

'ತದಾ ಪ್ರಭೃತ್ಯುನ್ಮದನಾ ಪಿತುರ್ಗೃಹೇ ಲಲಾಟಿಕಾಚಂದನಧೂಸರಾಲಕಾ'

'ತಮೇವ ಮೇನಾ ದುಹಿತುಃ ಕಥಂಚಿದ್ವಿವಾಹದೀಕ್ಷಾತಿಲಕಂ ಚಕಾರ'

ಮೊದಲು ಪಾರ್ವತಿ ಲಲಾಟಿಕೆಯನ್ನು ಧರಿಸುತ್ತಿದ್ದಳಂತೆ ಕೊನೆಯಲ್ಲಿ ಶಿವನ ಕೈಹಿಡಿಯುವುದು ನಿಶ್ಚಯವಾದಾಗ-ಮಗಳಿಗೆ ವಿವಾಹದೀಕ್ಷೆಯ ತಿಲಕವನ್ನು ಮೇನೆಯೇ ಹಚ್ಚಿದಳು ಎಂದು ಬರೆದಿದ್ದಾನೆ. ಇದರಿಂದ ಲಲಾಟಿಕೆ ಬೇರೆ ರರಾಟಿಕೆ ಬೇರೆ ಎಂದು ಸಿದ್ಧವಾಗುವುದು. ಅಲ್ಲದೆ 'ರರಾಟ' ಶಬ್ದದ ಮೇಲೆ ಅಲಂಕಾರ ಎಂಬ ಅರ್ಥದಲ್ಲಿ ಕನ್‌ಪ್ರತ್ಯಯವನ್ನು ಪಾಣಿನಿ ವಿಧಿಸಿಯೂ ಇಲ್ಲವಲ್ಲ. ಕುಮಾರಸಂಭವದ ದಕ್ಷಿಣಾವರ್ತ ವ್ಯಾಖ್ಯಾನದಲ್ಲಿ ಈ ಅರ್ಥಭೇದವನ್ನು ವಿವರಿಸಿದ್ದಾನೆ. 'ಲಲಾಟಿಕಾ' ಎಂಬ ಪದದಿಂದ 'ಅನೂಢಾತ್ವಂ ವ್ಯಜ್ಯತೇ' ಎಂದು ಬರೆದಿದೆ ಅದರಲ್ಲಿ.

[1] 'ಅಧಃ' ಎಂಬುವುದನ್ನೆ 'ಅಧರಾದಧಃ' ಎಂಬುದು ಸ್ಪಷ್ಟೀಕರಿಸುತ್ತದೆ

'ಅಧ ಇತ್ಯೇತತ್ ಉತ್ತರೋಷ್ಠಾದಧ ಇತಿ ಪ್ರತೀತಿಂ ವಾರಯಿತುಂ ಸ್ವಯ-ಮೇವ ವಿವೃಣೋತಿ— 'ಅಧರಾದಧ' ಇತಿ ।' (ಭಲಾರೀಯ)

ನಾರಾಯಣೀಯದಲ್ಲಿ ಇನ್ನೊಂದು ತೆರನಾದ ಅರ್ಥವನ್ನೂ ಬರೆದಿದ್ದಾರೆ—

'ಅಧರಾದಧ ಆರಭ್ಯ ಆಕರ್ಣಾಂತಾತ್ ಕರ್ಣಪರ್ಯಂತಂ ಆಸ್ಯಪಾರ್ಶ್ವದ್ವಯಂ ಪ್ರತ್ಯೇಕಂ ಷಡಂಗುಲಮ್ ।' (ನಾರಾಯಣೀಯ)

ಇದು ಮೂಲ ಪುಸ್ತಕದಲ್ಲಿರುವ ಪಾಠ. ಅನುವಾದಕರು ಸೌಕರ್ಯಕ್ಕಾಗಿ ಈ ಪಾಠ ವನ್ನು 'ಸಾರ್ಧಾಂಗುಲಮಧ ಪ್ರೋಕ್ತಂ' ಎಂದು ಬದಲಾಯಿಸಿಕೊಂಡಿದ್ದಾರೆ.

ಮೇಲ್ತುಟಿಯಿಂದ ಮೂಗಿನ ವರೆಗೆ ॥ ಅಂಗುಲ
ಕೆಳತುಟಿಯಿಂದ ಗಲ್ಲದ ವರೆಗೆ ೧॥ ,,[೧]

**ಆಸ್ಯಪಾರ್ಶ್ವದ್ವಯಂ ಪ್ರೋಕ್ತಮಾಕರ್ಣಾತ್ತು ಷಡಂಗುಲಮ್ ।**
**ಸಪ್ತಾಂಗುಲಂ ನಾಸಿಕಾಯಾಃ ಪಾರ್ಶ್ವಮಾ ಕರ್ಣತಃ ಸ್ಮೃತಮ್ ॥**

ಬಾಯಿಯಿಂದ ಕಿವಿಯ ವರೆಗಿನ ಬದಿಗಳ ಉದ್ದ ೬ ಅಂಗುಲ
ಮೂಗಿನಿಂದ ,, ,, ೭ ,,

**ಸಪಾದಾಂಗುಲಮುಚ್ಚಾ ಚ ನಾಸಿಕಾ ಪರಿಕೀರ್ತಿತಾ ।**
**ಅರ್ಧಾಂಗುಲೇ ಪುಟೇ ತಸ್ಯಾ ಮಧ್ಯಂ ಚ ಸಮುದಾಹೃತಮ್॥೨೮॥**

ಮೂಗಿನ ಬದಿಯಿಂದ ತುದಿಯ ವರೆಗಿನ ಎತ್ತರ ೧। ಅಂಗುಲ
ಅದರ ಸೊಳ್ಳೆಗಳ ಎತ್ತರ ॥ ,,
ಸೊಳ್ಳೆಗಳ ನಡುಗಂಬದ ಎತ್ತರ ,, ,,

**ನಾಸಿಕಾ ವ್ರೀಹಿವಿಸ್ತಾರಾ ಚಕ್ಷುಷೀ ಚಾಂಗುಲತ್ರಯೇ ।**
**ಅಂಗುಲಂ ಚೈವ ವಿಸ್ತೀರ್ಣೇ ಪುಲ್ಲೇಽರ್ಧಂ ಚ ತದನ್ಯಥಾ ॥ ೨೯ ॥**

ಮೂಗಿನ ತುದಿಯಲ್ಲಿ ವಿಸ್ತಾರ ೩/೪ ಅಂಗುಲ (೧ ವ್ರೀಹಿ)

---

೧ ಮೇಲಿನ ಎಲ್ಲ ಅಳತೆಗಳನ್ನು ಒಟ್ಟುಗೂಡಿಸಿದರೆ– ಮೂಗಿನಿಂದ ಗಲ್ಲದವರೆಗಿನ ಒಟ್ಟು ಅಳತೆ ೨ ೩/೮ ಅಂಗುಲವಾಗುವುದು. ಆದರೆ ಆಚಾರ್ಯರು ಹಿಂದೆ '**ನಾಸಿಕಾಯಾ ಅಧಸ್ತಾಚ್ಚ ನಾಸಿಕಾ ಚ ಕರಾಟಿಕಾ । ಸಮಾ ಮಾನೇನ**' ಎಂದು ಮೂಗಿನಿಂದ ಕೆಳ ಭಾಗದ ಒಟ್ಟು ಅಳತೆ ೩ ಅಂಗುಲ ಎಂದಿರುವರು ಉಳಿದ ೫/೮ ಅಂಗುಲ ಎಲ್ಲಿ ತಪ್ಪಿಸಿ ಕೊಂಡಿತು? ಇದಕ್ಕೆ ಪ್ರಾಚೀನ ವ್ಯಾಖ್ಯಾನಕಾರರ ಉತ್ತರ ಈ ತೆರನಾಗಿದೆ—

೫/೮ ಅಂಗುಲವಷ್ಟು ಅಥವಾ ಅರ್ಧ ವ್ರೀಹಿಯಷ್ಟು ಭಾಗವನ್ನು ಎರಡು ತುಟಿಗಳ ನಡುವೆ ಅರೆತೆರೆದು ಮುಗುಳ್ನಗುವಂತೆ ಕೆತ್ತಬೇಕು. ಆದರಿಂದಲೇ ಆಚಾರ್ಯರು ಮುಂದೆ— '**ಅನುನ್ನತ್ಯೈರವಿರಲೈರ್ದಂತೈರ್ಯುಕ್ತಂ ಚ ಸುಸ್ಮಿತಮ್ ।**' ಎಂದಂದಿದ್ದಾರೆ. ಬಾಯಿ ಮುಚ್ಚಿಕೊಂಡಿದ್ದಂತೆಯೇ ಪ್ರತಿಮೆಯನ್ನು ಕಡೆಯುವುದಿದ್ದರೆ– '**ದಂತೈ-ರ್ಯುಕ್ತಂ**' ಎನ್ನುವುದು ಹೇಗೆ ಕೂಡುತ್ತದೆ? ಸರ್ವಲಕ್ಷಣೋಪೇತನಾದ ಭಗವಂತನ ದಂತಗಳು ತುಟಿಮುಚ್ಚಿದ್ದಾಗಲೂ ಕಾಣುವ ಬಗೆ ಹೇಗೆ? ಅದರಿಂದ ಮುಗುಳುನಗೆ ಬೀರುವ ಅರೆಬಿರಿದ ಬಾಯಿಯ ೫/೮ ಅಂಗುಲವನ್ನು ಸೇರಿಸಿಕೊಂಡಾಗ ಹಿಂದೆ ಹೇಳಿದ ೩ ಅಂಗುಲದ ಅಳತೆಯು ಸರಿಕೂಡುವುದು! ಈ ಅರ್ಥವನ್ನು ಆಚಾರ್ಯರು ವ್ಯಕ್ತವಾಗಿ ಹೇಳಿರದಿದ್ದರೂ ಇದು ಅವರಿಗೆ ಸಮ್ಮತವೆಂಬುದು ಪೂರ್ವೋತ್ತರ ವಿಮರ್ಶನದಿಂದ ತಿಳಿದು ಬರುವುದು.

| | | |
|---|---|---|
| ಕಣ್ಣುಗಳ ಉದ್ದ | ೩ | ಅಂಗುಲ |
| ಅರಳಿಸಿದ ಕಣ್ಣಿನ ಅಗಲ | ೧ | ,, |
| ಸಾಮಾನ್ಯವಾಗಿ ಕಣ್ಣಿನ ಅಗಲ | ॥ | ,, |

**ಚತುರಂಗುಲೌ ಭ್ರುವೌ ಚೈವ ತಥಾಽರ್ಧಾಂಗುಲವಿಸ್ತೃತೌ ।**
**ಅಸಂಹತೌ ಚ ನಿಬಿಡೌ ತಥಾ ಪಕ್ಷ್ಮ ಸುನೀಲಕಮ್ ॥ ೩೦ ॥**

| | | |
|---|---|---|
| ಹುಬ್ಬುಗಳ ಉದ್ದ | ೪ | ಅಂಗುಲ |
| ,, ಅಗಲ | ॥ | ,, |

ಹುಬ್ಬಿನ ರೋಮಗಳು ಒಂದಕ್ಕೊಂದು ತಾಕದಂತಿದ್ದರೂ ನಿಬಿಡವಾಗಿರಬೇಕು. ಕಣ್ಣವೆ ಕಪ್ಪಾಗಿರಬೇಕು.

**ಕರ್ಣೌ ಚ ತ್ರ್ಯಂಗುಲೌ ಸಾರ್ಧದ್ವಯವಿಸ್ತಾರಸಂಯುತೌ ।**
**ಸಕುಂಡಲೌ**[1]

| | | |
|---|---|---|
| ಕಿವಿಗಳ ಉದ್ದ | ೩ | ಅಂಗುಲ |
| ,, ವಿಸ್ತಾರ | ೨॥ | ,, |

ಕಿವಿಗಳಲ್ಲಿ ಕುಂಡಲವನ್ನೂ ಕೆತ್ತಬೇಕು.

**ತಾವದೇವ ವಿವರಂ ಸಂಪ್ರಕೀರ್ತಿತಮ್ ॥ ೩೧ ॥**
**ತಥಾ ದ್ವ್ಯಂಗುಲವಿಸ್ತಾರಂ ಲತಾಭ್ಯಾಂ**[2] **ಸಹ ಕಥ್ಯತೇ ।**

---

೧ ಈಗ ಪ್ರಚಲಿತವಾದ ಪಾಠ 'ಸಕುಂಡಲಂ' ಎಂದು ಆ ಪಕ್ಷದಲ್ಲಿ 'ಕುಂಡಲ' ಪದಕ್ಕೆ ಕರ್ಣಾಲಂಕಾರವೆಂದರ್ಥವಲ್ಲ. ಕಿವಿಯ ತುದಿಯಲ್ಲಿನ ಕುಂಡಲಾಕಾರವಾದ ಭಾಗವೆಂದರ್ಥ.

**'ಕುಂಡಲಾಕಾರಃ ಕರ್ಣಾಂತವಿವರೋರ್ಧ್ವಭಾಗಸ್ಥಿತಃ ಪ್ರದೇಶವಿಶೇಷಃ ಕುಂಡಲಮಿತ್ಯುಚ್ಯತೇ ।'** (ನಾರಾಯಣೀಯ)

ಆದರೆ ಮೂಲ ಪುಸ್ತಕದಲ್ಲಿ 'ಸಕುಂಡಲೌ' ಎಂದೇ ಇದೆ ಈ ಪಕ್ಷದಲ್ಲಿ 'ಕುಂಡಲ' ಶಬ್ದಕ್ಕೆ ಹೀಗೆ ಗೌಣಾರ್ಥ ಮಾಡಬೇಕಾಗಿಲ್ಲ. 'ಕುಂಡಲ' ಅಂದರೆ ಕಿವಿಯ ಒಡವೆ ಎಂದಿಷ್ಟೇ ವಿವಕ್ಷಿತ. ಈ ಒಡವೆಯ ಆಕಾರದ ವಿವರವನ್ನು ಮುಂದೆ ಆಚಾರ್ಯರೆ ಹೇಳುವರು

೨ 'ಕರ್ಣಲತಾ' ಎಂದರೆ–ಕಿವಿಯ ಹೊರಮೈಯ ಮೆತ್ತನೆಯ ಭಾಗ ಇದನ್ನೆ ಕರ್ಣಪಾಲಿಯೆನ್ನುವರು. 'ಕರ್ಣಲತಾ=The lobe of the ear' (V S. Apte) ಆದರೆ ಇಲ್ಲಿ ಅದು ಬೇರೊಂದು ಅರ್ಥದಲ್ಲಿ ಪ್ರಯುಕ್ತವಾಗಿದೆ. ಕಿವಿಯ ರಂಧ್ರದ ಬದಿಯಲ್ಲಿರುವ ನೀಳಾದ ಎತ್ತರಪ್ರದೇಶವನ್ನು ಇಲ್ಲಿ 'ಕರ್ಣಲತಾ' ಎಂದು ವ್ಯವ

**ಕರ್ಣಪೂರಯುತೌ[೧] ಕರ್ಣಾವುತ್ಪಲಾಭ್ಯಾಂ[೨] ಚ ಸಂಯುತೌ ||೩೨||**

ಕರ್ಣರಂಧ್ರದ ಉದ್ದ ೨॥ ಅಂಗುಲ

ಕಿವಿಬಳ್ಳಿ(ಕರ್ಣಪಾಲಿ)ಯಿಂದ ಕೂಡಿ ಒಳಭಾಗದ ಅಗಲ ೨ ,,

ಕಿವಿಯಲ್ಲಿ ಕರ್ಣಪೂರವೆಂಬ ಆಭರಣವನ್ನೂ ನೀಲ ಕಮಲಗಳನ್ನೂ ಕಡೆಯಬೇಕು.

**ನೀಲಾಲಕ[೩]ಸಹಸ್ರೇಣ ಯುಕ್ತಂ ತನ್ಮುಖಪಂಕಜಮ್ ।**
**ಲಲಾಟಂ[೪] ಸುವಿಶಾಲಂ ಚ ತಥಾ ಸಾರ್ಧನವಾಂಗುಲಮ್[೫] ।**
**ವಿಸ್ತಾರೋ ಮೂರ್ಧ್ನಿ ವೃತ್ತಂ ಚ ಶಿರಶ್ಛತ್ರಾಕೃತಿ ಸ್ಮೃತಮ್ ॥**

---

ಹರಿಸಿದ್ದಾರೆ. ಅಲ್ಲಿಂದ ಒಳಗಿನ ಭಾಗ ೨ ಅಂಗುಲ. ಹೊರವೈ ಅರ್ಧ ಅಂಗುಲ. ಒಟ್ಟು ೨॥ ಅಂಗುಲ.

೧ 'ಕರ್ಣಪೂರಃ=An ornament worn round the ear, an ear-ring' (V. S. Apte)

೨ 'ಉತ್ಪಲಂ=A blue lotus, any lotus or water-lily' (V. S. Apte)
'ಉತ್ಪಲಾಭ್ಯಾಂ=ನೀಲಾಂಬುಜಾಭ್ಯಾಮ್' (ಛಲಾರೀಯ)

೩ 'ಅಲಕ=Curls on the fore-head' (V. S. Apte)

೪ ಇಲ್ಲಿ ನಾರಾಯಣೀಯವಾಕ್ಯಾರ್ಥವಿವೃತಿಯಲ್ಲಿ ಒಂದು ಮಾತು ಬರುತ್ತದೆ. ಅದು ಕೆಳಗಿನಂತಿದೆ—

'ಲಲಾಟಂ ಸುವಿಶಾಲಂ ಚೇತ್ಯಾದಿದ್ವಿತೀಯಾಂತಾನಾಂ ಕಾರಯೇದಿತಿ ವಕ್ಷ್ಯಮಾಣೇನಾನ್ವಯಃ ।' (ನಾರಾಯಣೀಯ)

ಅವರ ವ್ಯಾಖ್ಯಾನದ ರೀತ್ಯಾ— 'ಲಲಾಟಂ' ಎಂಬ ಪದ ದ್ವಿತೀಯಾಂತ. ಅಲ್ಲದೆ-'ಕೃತಿಭಿಃ ಸಾಧು ಕಾರಯೇತ್' ಎಂದು ಬಹುದೂರದಲ್ಲಿರುವ ಕ್ರಿಯಾಪದ ದಿಂದ ಅದಕ್ಕೆ ಅನ್ವಯ. ಅದರ ನಂತರದ ಎಲ್ಲ ಪದಗಳೂ ಪ್ರಥಮಾಂತಗಳೇ. ಆದರೆ ಈ ಅರ್ಥ ಸರಿಯಾಗಿಲ್ಲ ಎಂದು ತೋರುತ್ತದೆ. 'ಲಲಾಟಂ' ಎಂಬುದನ್ನು ದ್ವಿತೀ ಯಾಂತ ಎಂದಿಟ್ಟುಕೊಂಡು ಅನ್ವಯಕ್ಕಾಗಿ ಏಕೆ ಇಷ್ಟು ಪೇಚಾಟಪಡಬೇಕು? ಅದು ಪ್ರಥಮಾಂತವೇ ಆಗಿದ್ದರೆ ಏನು ತೊಂದರೆ? 'ಲಲಾಟಮಲಿಕಂ ಗೋಧಿಃ' ಎಂದು ಅಮರಕೋಶದಲ್ಲಿ ಲಲಾಟಪದವನ್ನು ನಪುಂಸಕಲಿಂಗವೆಂದು ನಿರ್ದೇಶಿಸಿದ್ದಾರೆ. ಅಂದ ಮೇಲೆ–ದೂರಾನ್ವಯದ ಗೋಜಿಗೆ ಹೋಗದೆ–'ಲಲಾಟವು ವಿಶಾಲವಾಗಿರಬೇಕು' ಎಂದು ಪ್ರಥಮಾಂತವಾಗಿಯೇ ಅರ್ಥವನ್ನು ವಿವರಿಸಿದರೆ ಒಳಿತಲ್ಲವೆ? ಲಲಾಟಶಬ್ದ ಪುಂಲಿಂಗ ವೆಂದು ವ್ಯಾಖ್ಯಾನಕಾರರು ಭ್ರಮಿಸಿಕೊಂಡು ಬರೆದಂತಿದೆ ಎಂತಲೇ ಆ ಅರ್ಥ ಅಷ್ಟೊಂದು ಗ್ರಾಹ್ಯವಲ್ಲ ಎನ್ನಬೇಕಾಗಿದೆ.

೫ 'ನವಾಂಗುಲಮಿತಿ ಕ್ರಿಯಾವಿಶೇಷಣಮ್ ।' (ಛಲಾರೀಯ)
'ನವಾಂಗುಲಂ ಯಥಾ ತಥಾ ವಿಸ್ತಾರಃ ಕಾರ್ಯಃ ।' (ನಾರಾಯಣೀಯ)

ಆ ಮುಖಕಮಲದಲ್ಲಿ ಗುಂಗುರಾದ ಮುಂಗುರುಳಿನ ರಾಶಿಯೇ ನಲಿಯುತ್ತಿರಬೇಕು. ಹಣೆಯು ವಿಶಾಲವಾಗಿರಬೇಕು. ತಲೆಯ ಉದ್ದ ಮತ್ತು ಅಗಲ ೯॥ ಅಂಗುಲ. ಶಿರಸ್ಸು ಉರುಟಾಗಿ ಮಧ್ಯದಲ್ಲಿ ಕೊಡೆಯಂತೆ ಉನ್ನತವಾಗಿರಬೇಕು.

**ದೀರ್ಘಾಶ್ಚ ಕುಂಚಿತಾಗ್ರಾಶ್ಚ ನೀಲಾಃ ಕೇಶಾ ಹರೇರ್ಮತಾಃ[೧] ।**
**ಮುಖಮಾನೇನ ಚೈವೋರ್ಧ್ವಂ[೨] ಕಿರೀಟಂ ಕೇಶವಸ್ಯ ಹಿ ॥ ೩೪ ॥**

ಶ್ರೀಹರಿಯ ಕಪ್ಪಾದ ನೀಳ್ಗೂದಲುಗಳು ತುದಿಯಲ್ಲಿ ಗುಂಗುರಾಗಿವೆ. ಆತನ ಕಿರೀಟವೂ ಮುಖದಂತೆಯೇ ೯ ಅಂಗುಲ ಪರಿಮಾಣದ್ದಿರಬೇಕು.

**ಕುಂಡಲೇ ಮಕರಾಕಾರೇ ವಕ್ಷಶ್ಚೈವ ಸಕೌಸ್ತುಭಮ್[೩] ।**
**ಸಶ್ರೀವತ್ಸಂ[೪] ದಕ್ಷಿಣತಃ ಪೀನಂ ತುಂಗಮುದಾಹೃತಮ್ ॥ ೩೫ ॥**
**ಹಾರಗ್ರೈವೇಯ[೫]ಸಹಿತಮುಪವೀತೆಯುತಂ ತಥಾ ।**

ಕರ್ಣಕುಂಡಲವು ಮೊಸಳೆಯಾಕಾರದಂತಿರಬೇಕು. ಎದೆಯಲ್ಲಿ ಕೌಸ್ತುಭ

---

೧ 'ಹರೇಃ ಕೇಶಾ ನೀಲಾ ಇತಿ ಮತಾಃ, ನೀಲತ್ವೇನ ಸ್ಮರ್ತವ್ಯಾ ಇತಿ ಭಾವಃ ।' (ನಾರಾಯಣೀಯ)

೨ 'ಕಿರೀಟಂ ನವಾಂಗುಲೋಚ್ಛ್ರಿತಮಿತಿ ಭಾವಃ ।' (ಧಲಾರೀಯ)

೩ 'ಧನ್ವಂತರಿಸ್ತಥಾ ಮದ್ಯಂ ಶ್ರೀರ್ದೇವೀ ಕೌಸ್ತುಭೋ ಮಣಿಃ ।
ಶಶಾಂಕೋ ವಿಮಲಶ್ಚಾಪಿ ಸಮುತ್ತಸ್ಥುಃ ಸಮಂತತಃ ॥' (ಹರಿವಂಶ)
ಭಾಗವತರಾಮಾಯಣಾದಿಗಳಲ್ಲೂ ಇದರ ಉಲ್ಲೇಖ ಬಂದಿದೆ—
'ಕೌಸ್ತುಭಸ್ತು ಮಣಿರ್ದಿವ್ಯ ಉತ್ಪನ್ನೋ ಘೃತಸಂಭವಃ ।
ಮರೀಚಿವಿಕಚಃ ಶ್ರೀಮಾನ್ ನಾರಾಯಣಉರೋಗತಃ ॥'
'ಉಚ್ಚೈಃಶ್ರವಾ ಹಯಶ್ರೇಷ್ಠೋ ಮಣಿರತ್ನಂ ಚ ಕೌಸ್ತುಭಮ್ ।'
'ಕೌಸ್ತುಭಸ್ತು ಮಹಾತೇಜಾಃ ಕೋಟಿಸೂರ್ಯಸಮಪ್ರಭಃ ।'

೪ 'ಶ್ರೀವತ್ಸಃ=A mark or curl of hair on the breast of Vishnu.' (V. S Apte)
'ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಮ್' (ಭಾಗವತ)

೫ ಸಂಸ್ಕೃತದಲ್ಲಿ 'ಹಾರ'ವೆಂದು ಸಾಮಾನ್ಯವಾಗಿ ಹೂಮಾಲೆ ಮೊದಲಾದವುಗಳಿಗೂ ಉಜ್ಜ್ವಲವಾದ ಆಭರಣಗಳಿಗೆ 'ಗ್ರೈವ', 'ಗ್ರೈವೇಯ' ಅಥವಾ 'ಗ್ರೈವೇಯಕ'ವೆಂದೂ ಹೇಳುವರು.

'ಗ್ರೈವೇಯಮ್=A collar or necklace.' (V. S. Apte)

ಮಣಿ, ಬಲಬದಿಯಲ್ಲಿ ಶ್ರೀವತ್ಸಚಿಹ್ನೆಗಳಿದ್ದು ಅದು ಪುಷ್ಟವಾಗಿಯೂ, ಉನ್ನತವಾಗಿಯೂ ಇರಬೇಕು; ಮುತ್ತಿನ ಸರ, ಬಂಗಾರದ ಆಭರಣಗಳಿಂದಲೂ, ಯಜ್ಞೋಪವೀತದಿಂದಲೂ ಕೂಡಿರಬೇಕು.

**ಬಾಹವಶ್ಚ ಸಕೇಯೂರಕಂಕಣಾಂಗದಮುದ್ರಿತಾಃ[1] || ೩೬ ||**
**ಸಮಧ್ಯಬಂಧಂ ಮಧ್ಯಂ ಚ ನಿತಂಬೇ ಪೀತಮಂಬರಮ್ ।**
**ಕಾಂಚೀಗುಣಶ್ಚ ಪದಯೋರ್ನೂಪುರೇ ಚಾತಿಸುಸ್ವರೇ ।**
**ಅಂಗುಲೀಯಾನಿ ಚ ಪದೋಃ ಕೃತಿಭಿಃ ಸಾಧು ಕಾರಯೇತ್ ||೩೭||**

ತೋಳುಗಳಲ್ಲಿ ವಂಕಿ, ಬಳೆ, ತೋಳುಬಂದಿಗಳು, ನಡುವಿನಲ್ಲಿ ನಡುಗಟ್ಟು, ಸೊಂಟದಲ್ಲಿ ಪೀತಾಂಬರ, ಅದರ ಮೇಲೆ ಡಾಬು, ಕಾಲಲ್ಲಿ ಇಂಚರ ಗೈವ ಗೆಜ್ಜೆಗಳು, ಕಾಲ್ಬೆರಳಲ್ಲಿ ಉಂಗುರಗಳು, ಇನಸ್ನೆಲ್ಲ ಶಾಸ್ತ್ರವನ್ನರಿತ ಶಿಲ್ಪಿಗಳಿಂದ ಲಕ್ಷಣವತ್ತಾಗಿ ಮಾಡಿಸಬೇಕು.

**ಸೋತ್ತರೀಯಂ ಚ ಚಕ್ರಾದ್ಯೈರಾಯುಧೈಶ್ಚ ಸಮನ್ವಿತಮ್ ।**
**ಅನುನ್ನತೈರವಿರಲೈರ್ದಂತೈರ್ಯುಕ್ತಂ ಚ ಸುಸ್ಮಿತಮ್ ।**
**ಸಮದೃಷ್ಟಿಯುತಂ[2] ಕಾರ್ಯಂ[3] ಸ್ನಿಗ್ಧಂ ಚೈವ ಮನೋಹರಮ್[4] ||**

---

೧ ಈಗ ಸಾಮಾನ್ಯವಾಗಿ ಕೇಯೂರ ಮತ್ತು ಅಂಗದ–ಇವೆರಡು ಶಬ್ದಗಳೂ ಒಂದೇ ಅರ್ಥದಲ್ಲಿ ಬಳಕೆಯಿದೆ

'ಅಂಗದಂ=An armlet' 'ಕೇಯೂರಃ,-ರಂ=A bracelet worn on the upper arm; an armlet' (V. S. Apte)

ಇಲ್ಲಿ 'ಕಂಕಣಾಂಗದಮುದ್ರಿಕಾಃ' ಎಂದು ಛಲಾರೀಯದ ಪಾಠ. ಆ ವಕ್ಷದಲ್ಲಿ ಮುದ್ರಿಕೆಗಳು ಎಂದರೆ ಉಂಗುರಗಳು ಬಾಹುವಿನಲ್ಲಿ ಉಂಗುರ ಇಡುವುದು ಅಸಂಭವ ಎಂತಲೇ ಆ ಪಾಠ ಅಷ್ಟೊಂದು ಚೆನ್ನಲ್ಲ.

೨ ದೃಷ್ಟಿ ನೆಟ್ಟಗಿರದೆ–ಮೇಲೋ ಕೆಳಗೋ ನೋಡುವಂತಿದ್ದರೆ ಅಥವಾ ವಕ್ಕಕ್ಕೆ ವಕ್ರವಾಗಿ ನೋಡುವಂತಿದ್ದರೆ ಅದರಿಂದ ಕೆಡುಕು ಸಂಭವಿಸುವುದು ಎನ್ನುತ್ತಾರೆ ತಂತ್ರಶಾಸ್ತ್ರಜ್ಞರು—

'ಊರ್ಧ್ವದೃಷ್ಟಿಮಧೋದೃಷ್ಟಿಂ ತಿರ್ಯಗ್ದೃಷ್ಟಿಂ ಚ ವರ್ಜಯೇತ್ ।
ಊರ್ಧ್ವದೃಷ್ಟ್ಯಾ ವಿತ್ತನಾಶೋ ಹ್ಯಧೋದೃಷ್ಟ್ಯಾ ಕುಲಕ್ಷಯಃ ।
ತಿರ್ಯಗ್ದೃಷ್ಟ್ಯಾ ದ್ವಯೋರ್ನಾಶಸ್ತಸ್ಮಾದ್ಗ್ರಾಹ್ಯಾ ಸಮೇಕ್ಷಣಾ॥' (ಪಂಚ.)

೩ ಕಾರ್ಯಂ ಪ್ರತಿಮಾಖ್ಯಂ ವಸ್ತ್ವಿತ್ಯಧ್ಯಾಹಾರಾನ್ನಪುಂಸಕತ್ವೋಪಪತ್ತಿಃ ।

೪ ಆಚಾರ್ಯರು ಬೃಹದ್ಭಾಷ್ಯದ ೫ನೆಯ ಅಧ್ಯಾಯದಲ್ಲಿಯೂ ಪ್ರತಿಮಾಲಕ್ಷಣವನ್ನು ಸಂಕ್ಷೇಪವಾಗಿ ಬರೆದಿದ್ದಾರೆ—

ಹೆಗಲಲ್ಲಿ ಉತ್ತರೀಯವನ್ನೂ, ಕೈಗಳಲ್ಲಿ ಚಕ್ರಾದ್ಯಾಯುಧಗಳನ್ನೂ ಚಿತ್ರಿಸಬೇಕು. ಪ್ರತಿಮೆ ಹೆಚ್ಚು ದೀರ್ಘವಲ್ಲದ ನಿಬಿಡವಾದ ಹಲ್ಲುಗಳಿಂದ ಕೂಡಿದ್ದು ಮಂದಹಾಸವನ್ನು ಸೂಸುವಂತಿರಬೇಕು. ಕಣ್ಣು ದೃಷ್ಟಿ ನೆಟ್ಟಗಿರಬೇಕು. ಒಟ್ಟಿನಲ್ಲಿ ಪ್ರತಿಮೆ ನಯವೂ ಸುಂದರವೂ ಆಗಿರಬೇಕು.

---

‘ದಶತಾಲೋ ದಶಮುಖೋ ಲಲಾಟತ್ರಿಂಶಕಸ್ತಥಾ ।
ಸಾರ್ಧೋರ್ನ್ನತಶ್ಚೈವ ಪುನಃ ಪರ್ಯಗ್ದಶಶಿರಾಸ್ತಥಾ ॥
ಪಂಚೋರಾ. ಸಪ್ತ ಪಾದೋ ಯೋ ನಾಽಶಂಕ್ಯಂ ತದ್ವಚಃ ಕ್ವಚಿತ್ ।
ನವಾಂಗುಲಮುಖೋ ಯಸ್ತು ಗಲೇ ಚ ಚತುರಂಗುಲಃ ।
ಚತುರ್ವಿಂಶಾಂಗುಲತನುಸ್ತದ್ವಾಕ್ಯಂ ದೇವಪೂಜಿತಮ್ ॥’
‘ಪಾತ್ರಿಯೋ ದೇವಾಶ್ಚ ಋಷಯೋ ಸ ಸರ್ವಶುಭಲಕ್ಷಣಾಃ ।
ಮತೇ ವಿಷ್ಣುಂ ಸುರಶ್ರೇಷ್ಠಂ ಬ್ರಹ್ಮಾಣಂ ವಾಽಪ್ಯನಂತರಮ್ ॥’
ತಾತ್ಪರ್ಯನಿರ್ಣಯದ ಪ್ರಥಮಾಧ್ಯಾಯದಲ್ಲೂ ಈ ವಿಷಯದ ಉಲ್ಲೇಖವಿದೆ—
‘ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧಪರಿಮಂಡಲಃ ।
ಸಪ್ತ ಪಾದಶ್ಚತುರ್ಹಸ್ತೋ ದ್ವಾತ್ರಿಂಶಲ್ಲಕ್ಷಣೈರ್ಯುತಃ ॥’
ದ್ವಾತ್ರಿಂಶಲ್ಲಕ್ಷಣಗಳನ್ನು ಸ್ಕಾಂದಪುರಾಣದಿಂದ ತಿಳಿದುಕೊಳ್ಳಬಹುದು—
‘ಪಂಚದೀರ್ಘಃ ಪಂಚಸೂಕ್ಷ್ಮಃ ಸಪ್ತರಕ್ತಃ ಷಡುನ್ನತಃ ।
ತ್ರಿವೃಥುಹ್ರಸ್ವಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವತಿ ॥’ (ಕಾಶೀಖಂಡ)
ಅದೇ ಗ್ರಂಥದಲ್ಲಿ ಅದರ ವಿವರವನ್ನೂ ಬರೆದಿದ್ದಾರೆ—
‘ಪಂಚ ದೀರ್ಘಾಣಿ ಶಸ್ತಾನಿ ಯಥಾ ದೀರ್ಘಾಣ್ಯಥಾಸ್ಯ ವೈ ।
ಭುಜೌ ನೇತ್ರೇ ಹನೂ ನಾಸಾವಕ್ಷಸೀ ತನಯಸ್ಯ ತೇ ॥
ತ್ವಕ್ಕೇಶಾಂಗುಲಿದಶನಾಃ ಪರ್ವಾಣ್ಯಂಗುಲಿಜಾನ್ಯಪಿ ।
ತಥಾಸ್ಯ ಪಂಚ ಸೂಕ್ಷ್ಮಾಣಿ ದಿಕ್ಪಾಲಪದಭಾಗ್ಯಥಾ ॥
ಪಾಣ್ಯೋಸ್ತಲೇ ಚ ನೇತ್ರಾಂತೇ ತಾಲುಜಿಹ್ವಾಧರೋಷ್ಠಕಮ್ ।
ಸಪ್ತಾರುಣಂ ಚ ಸನಖಮಸ್ಮಿನ್ ರಾಜ್ಯಸುಖಪ್ರದಮ್ ॥
ವಕ್ಷಃಕುಕ್ಷ್ಯಲಿಕಸ್ಕಂಧಕರವಕ್ತ್ರಂ ಷಡುನ್ನತಮ್ ।
ಲಲಾಟಕಟಿವಕ್ಷೋಭಿಸ್ತ್ರಿವಿಸ್ತೀರ್ಣೋ ಯಥಾ ಹ್ಯಸೌ ॥
ಗ್ರೀವಾಜಂಘಾಮೇಹನೈಶ್ಚ ತ್ರಿಭಿರ್ಹ್ರಸ್ವೋಽಯಮೀಡಿತಃ ।
ಸ್ವರೇಣ ಸತ್ವನಾಭಿಭ್ಯಾಂ ತ್ರಿಗಂಭೀರ ಶಿಶುಃ ಶುಭಃ ॥’
ವಾದಿರಾಜಯತಿಗಳು—ತಾತ್ಪರ್ಯನಿರ್ಣಯದ ವ್ಯಾಖ್ಯಾನದಲ್ಲಿ ದ್ವಾತ್ರಿಂಶಲ್ಲಕ್ಷಣಗಳನ್ನು ವಿವರಿಸಿದ್ದಾರೆ. ಆದರೆ ಅವರಲ್ಲಿ ಕೆಲವು ಮೇಲಿನ ಪ್ರಮಾಣಕ್ಕೆ ವ್ಯತ್ಯಾಸವಾಗಿವೆ. ಲಕ್ಷಣಶ್ಲೋಕವೂ ‘ತ್ರಿಪೃಥುಸ್ತ್ರಿಷು ಗಂಭೀರಃ’ ಎಂದು ತಪ್ಪಾಗಿ ಬಿದ್ದಿದೆ. ಇದು ಮುದ್ರಣದೋಷವಿರಬೇಕು ಎಂದು ಊಹಿಸಬಹುದು.

## ಪ್ರತಿಮಾನಿರ್ಮಾಣ

**ಪ್ರತಿಮಾರ್ಥಂ ವ್ರಜನ್ಪಂಚಧ್ವನಿಭಿರ್ಮಂಗಲೈರ್ಯುತಃ ।**
**ಗತ್ವಾ ಶುಚಿಸ್ಥಲಂ ತತ್ರ ಶಿಲಾಂ ಚೈವ ಪರೀಕ್ಷಯೇತ್ ॥ ೩೯ ॥**

ಪ್ರತಿಮೆಗಾಗಿ ಶಿಲೆಯನ್ನು ತರಹೊರಟವನು ಪಂಚಧ್ವನಿ[1]ಗಳಿಂದ ಕೂಡಿಕೊಂಡು, ಮಂಗಲದ್ರವ್ಯ[2]ಗಳನ್ನು ಹಿಡಿದುಕೊಂಡು ಪವಿತ್ರವಾದ ಸ್ಥಳಕ್ಕೆ ನಡೆದು ಬಂದು ಅಲ್ಲಿ ಶಿಲೆಯನ್ನು ಶಿಲ್ಪಿಗಳಿಂದ ಪರೀಕ್ಷಿಸಬೇಕು.

**ಧ್ವನಿಭೇದೇನ[3] ವಿಜ್ಞಾಯ ಶಿಲಾಂ ಗರ್ಭವತೀಂ ತ್ಯಜೇತ್ ।**
**ಮೂಲಮಂತ್ರಂ ಜಪನ್ ವಿಷ್ಣುಂ ಧ್ಯಾಯಂಸ್ತಿಷ್ಠೇದುಪೋಷಿತಃ ।**
**ವಾರ್ಕ್ಷೀ ಚೇದ್ಯಜ್ಞವೃಕ್ಷಸ್ಯ[4] ಸಾರೇಣೈವ ತು ಕಾರಯೇತ್ ॥ ೪೦ ॥**

---

೧ ಪಂಚಧ್ವನಿಗಳೆಂದರೆ— (೧) ಕೋಲಿನಿಂದ ಹೊಡೆವಂಥ ನಗಾರಿ ಮೊದಲಾದುವು, (೨) ಕೈಯಿಂದ ಬಾರಿಸುವಂಥ ಮೃದಂಗ ಇತ್ಯಾದಿಗಳು, (೩) ಬೆರಳು ತುದಿಯಿಂದ ಬಾರಿಸುವಂಥ ವೀಣೆ ಮೊದಲಾದುವು, (೪) ಅನ್ಯೋನ್ಯವಾಗಿ ಬಾರಿಸುವಂಥ ತಾಳ ಮೊದಲಾದುವು ಮತ್ತು (೫) ಬಾಯಿಯಿಂದ ಬಾರಿಸುವಂಥ ಕೊಳಲು ಇತ್ಯಾದಿಗಳು.

'ದಂಡಾಹತಕರಾಹತನಖಾಹತಪರಸ್ಪರಾಹತಮುಖಜಭೇದೇನ ಪಂಚವಿಧೈರ್ಧ್ವನಿಭಿರಿತ್ಯರ್ಥಃ ।' (ನಾರಾಯಣೀಯ)

೨ 'ಸುವರ್ಣಂ ರಜತಂ ದೂರ್ವಾ ಹರಿದ್ರಾ ಮಧುಸರ್ಪಿಷೀ ।
ಅಕ್ಷತಾಃ ಸರ್ಷಪಾಶ್ಚೈವ ಮಂಗಲಾಃ ಪರಿಕೀರ್ತಿತಾಃ ॥'

೩ 'ಧ್ವನಿಶ್ಚ ಶಿಥಿಲೋ ಯಾಸು ಸ್ಪರ್ಶ ಉಷ್ಣಸ್ತಥಾಽಪಿ ವಾ ।
ತಾಸು ಗರ್ಭಾಃ ಸ್ಫುಟಂ ಸಂತಿ' (ಪಾದ್ಮ)
'ಗರ್ಭವತ್ಯಃ ಶಿಲಾ ವರ್ಜ್ಯಾ ಗರ್ಭಾಶ್ಚಾಂತರವಸ್ಥಿತಾಃ ।
ಯಥೋಲ್ಬಂ ವರ್ತತೇ ಗರ್ಭೇ'
'ಶಿಲಾಂತರ್ಮಂಡೂಕಾವಸ್ಥಾನಂ ಚ ಗರ್ಭ ಇತ್ಯಾಹುಃ' (ನಾರಾಯಣೀಯ)

೪ 'ದೇವದಾರುಃ ಶಮೀ ಬಿಲ್ವೋ ಮಧುಃ ಖದಿರಕಸ್ತಥಾ ।
ಅರಿಷ್ಟೋ ರಾಜವೃಕ್ಷಶ್ಚ ಚಂದನೋಽಶ್ವತ್ಥ ಇತ್ಯಮೀ ।
ಶಸ್ತವೃಕ್ಷಾಃ' (ಶೇಖರ)
'ಅಶ್ವತ್ಥನಿರ್ಮಿತಾ ಪೂಜ್ಯಾ ರಾಜ್ಯಕಾಮೇನ ಧಾಮನಿ ।
ನ್ಯಗ್ರೋಧನಿರ್ಮಿತಂ ಬಿಂಬಂ ವಂಶವಿಸ್ತಾರಕಾರಣಮ್ ॥'
['ಮಧುಃ=The *Asoka* tree' (V. S. Apte).
'ಅರಿಷ್ಟಃ ಸರ್ವತೋಭದ್ರಃ' (ಅಭಿಧಾನರತ್ನಮಾಲೆ).
'ಸರ್ವತೋಭದ್ರಃ=The *Nimba* tree' (V. S. Apte).]

ಧ್ವನಿಯು ವ್ಯತ್ಯಾಸದಿಂದ ಟೊಳ್ಳಾದ ಶಿಲೆ ಮೊದಲಾದುವನ್ನರಿತುಕೊಂಡು ಅವನ್ನು ಬಿಟ್ಟುಬಿಡಬೇಕು. ಪರೀಕ್ಷಿಸಿದ ನಂತರ ಮೂಲಮಂತ್ರವನ್ನು ಜಪಿಸುತ್ತಾ ಉಪವಾಸವಿದ್ದು ವಿಷ್ಣುವನ್ನು ಧ್ಯಾನಿಸುತ್ತಾ ಆ ರಾತ್ರಿ ಅಲ್ಲೆ ತಂಗಬೇಕು. ಮರದ ಪ್ರತಿಮೆಯನ್ನು ಮಾಡುವುದಿದ್ದರೆ ಯಜ್ಞಯೋಗ್ಯವಾದ ವೃಕ್ಷಗಳ ಸಾರಭಾಗದಿಂದಲೇ ಮಾಡಬೇಕು.

**ಬಲಿದಾನಂ ಚ ಸಂಕ್ಷೇಪವಿಧಾನೇನೈವ ಕಥ್ಯತೇ ।**
**ಅಸ್ಯ ಸಂಕ್ಷೇಪಶಾಸ್ತ್ರತ್ವಾನ್ನ ವಿಸ್ತರವಿರೋಧಿತಾ ॥ ೪೧ ॥**

ಶಿಲೆಯನ್ನು ಉದ್ಧರಿಸುವ ಮೊದಲು ಬಲಿಹರಣವನ್ನು ಮಾಡಬೇಕಾಗಿ ಅದರ ವಿಧಿಯು ಸಂಕ್ಷೇಪವಾಗಿ ಮುಂದೆ ನಿರೂಪಿತವಾಗಿದೆ. ಬೇರೆ ಗ್ರಂಥಗಳಲ್ಲಿ ಬಲಿಹರಣವಿಧಿಯು ವಿಸ್ತಾರವಾಗಿದ್ದರೂ ಇದು ಮಾಡಿಯೇ ತೀರಬೇಕಾದ ಅವಶ್ಯ ಕರ್ತವ್ಯಗಳನ್ನು ಮಾತ್ರ ಪ್ರತಿಪಾದಿಸುವ ಶಾಸ್ತ್ರವಾದುದರಿಂದ ಅವುಗಳಿಗೆ ಪರಸ್ಪರ ವಿರೋಧವೇನೂ ಇಲ್ಲ.

**ದತ್ತ್ವೋಪಹಾರಂ[1] ಹರಯೇ ತದ್ಭೂತೇಭ್ಯೋ[2] ಬಲಿಂ ಹರೇತ್ ।**
**ಪ್ರಾಚ್ಯೇಭ್ಯೋ ವಿಷ್ಣುಭೂತೇಭ್ಯ ಇತ್ಯಾದ್ಯಖಿಲದಿಕ್ಷು ಚ[3] ॥ ೪೨ ॥**

ಶ್ರೀಹರಿಗೆ ಮೂಲಮಂತ್ರದಿಂದ ನೈವೇದ್ಯವನ್ನರ್ಪಿಸಿ, ಕುಮುದಾದಿ ವಿಷ್ಣುಪಾರ್ಷದರಿಗೂ 'ಪ್ರಾಚ್ಯೇಭ್ಯೋ ವಿಷ್ಣುಭೂತೇಭ್ಯೋ ನಮಃ', 'ದಾಕ್ಷಿಣೇಭ್ಯೋ ವಿಷ್ಣುಭೂತೇಭ್ಯೋ ನಮಃ' ಇತ್ಯಾದಿ ಮಂತ್ರಗಳಿಂದ ಎಂಟು ದಿಕ್ಕುಗಳಲ್ಲಿಯೂ ಬಲಿಯನ್ನರ್ಪಿಸಬೇಕು. ಹಾಗೆಯೇ ದಿಕ್ಪಾಲರನ್ನೂ ಪೂಜಿಸಬೇಕು.

**ಆದಾಯ ವಿಷ್ಣುಭೂತೇಭ್ಯೋ ಲೋಕಪೇಭ್ಯಸ್ತಥಾ ಹರೇಃ ।**
**ಅನುಜ್ಞಾಮುದ್ಧರೇದ್ವೃಕ್ಷಂ ಶಿಲಾಂ ವಾ ಪ್ರತಿಮಾಕೃತೇ ॥ ೪೩ ॥**

ದಿಕ್ಪತಿಗಳಿಂದಲೂ, ಹರಿಪಾರ್ಷದರಿಂದಲೂ, ಶ್ರೀಹರಿಯಿಂದಲೂ ಅನುಜ್ಞೆಯನ್ನು ಪಡೆದು, ಪ್ರತಿಮೆ ಕಡೆಯುವುದಕ್ಕಾಗಿ ವೃಕ್ಷವನ್ನಾಗಲಿ ಶಿಲೆಯನ್ನಾಗಲಿ ಕಂಡರಿಸಬೇಕು.

---

೧ 'ಉಪಹಾರಂ=ನೈವೇದ್ಯಂ, ಮೂಲಮಂತ್ರೇಣೇತಿ ಶೇಷಃ।' (ನಾರಾಯಣೀಯ)

೨ ಎಂಟು ವಿಷ್ಣುಭೂತಗಳ ಹೆಸರು ಈ ತೆರನಾಗಿದೆ—
'ಕುಮುದಃ ಕುಮುದಾಕ್ಷಶ್ಚ ಪುಂಡರೀಕಶ್ಚ ವಾಮನಃ ।
ಶಂಕುಕರ್ಣಃ ಸ್ವರ್ಣನೇತ್ರಃ ಸುಮುಖಃ ಸುಪ್ರತಿಷ್ಠಿತಃ ॥'

೩ 'ಚಶಬ್ದಾತ್ ಇಂದ್ರಾದಿಲೋಕಪಾಲೇಭ್ಯಶ್ಚ ಬಲಿಂ ಹರೇತ್ ।' (ಭಲಾ.)

**ಪ್ರತಿಮಾಂ ಪಿಂಡಿಕಾಂ[1] ಪೀಠಂ ಶಿಲಾಭಿಸ್ತು ತ್ರಿಜಾತಿಭಿಃ ।**
**ಸ್ವರಸ್ಥೂಲತ್ವಭೇದೇನ ಪುಂಸ್ತ್ರ್ಯಾದ್ಯಾ ಜಾತಿಜಾಃ ಶಿಲಾಃ ।**
**ಪುಂಶಿಲಾ ಪ್ರತಿಮಾರ್ಥಂ ತು ಸ್ತ್ರೀಶಿಲಾ ಪೀಠಸ್ತ್ವಯೋಃ ॥ ೪೪ ॥**

ಕಲ್ಲಿನಲ್ಲಿ ಸ್ತ್ರೀ-ಪುರುಷ-ನಪುಂಸಕ ಎಂದು ಮೂರು ಜಾತಿಗಳುಂಟು. ಸ್ವರಗಳ ಏರಿಕೆಯ ವ್ಯತ್ಯಾಸದಿಂದ ಈ ಜಾತಿಗಳನ್ನು ಗುರುತಿಸಬಹುದು.[2] ಅದರಲ್ಲಿ ಪುರುಷಶಿಲೆಯನ್ನು ಪ್ರತಿಮೆಗಾಗಿಯೂ ಸ್ತ್ರೀಶಿಲೆಯನ್ನು ಪೀಠಕ್ಕಾಗಿಯೂ ನಪುಂಸಕಶಿಲೆಯನ್ನು ಪೀಠದ ಅಡಿಗಲ್ಲಿಗಾಗಿಯೂ ಉಪಯೋಗಿಸಬೇಕು.

---

೧ 'ಪಿಂಡಿಕಾ' ಶಬ್ದಕ್ಕೆ ಇಬ್ಬರು ವ್ಯಾಖ್ಯಾನಕಾರರೂ ಎರಡು ತೆರನಾಗಿ ಅರ್ಥ ಬರೆದಿದ್ದಾರೆ. ಒಂದು ಪಕ್ಷದಲ್ಲಿ 'ಪಿಂಡಿಕಾ' ಎಂದರೆ ಪೀಠದ ಅಡಿಗಲ್ಲು, ಇನ್ನೊಂದು ಪಕ್ಷದಲ್ಲಿ ಪ್ರತಿಮೆಗೆ ಆಧಾರವಾದ ಒರಳಿನಂತಿರುವ ಒಂದು ತೆರನಾದ ಕಲ್ಲು.

'ಪೀಠಾಧೋಭಾಗೇ ಯಾ ಶಿಲಾ ಸಾ ಪಿಂಡಿಕೇತ್ಯುಚ್ಯತೇ । ಪ್ರತಿಮಾಯಾ ಆಧಾರಭೂತ ಉಲೂಖಲಾಕಾರಶಿಲಾವಿಶೇಷಃ ಪಿಂಡಿಕೇತ್ಯುಚ್ಯತ ಇತ್ಯಪ್ಯಾಹುಃ ।' (ಭಟ್ಟಾರೀಯ)

'ಪೀಠಾಧೋಭಾಗೇ ಯಾ ಶಿಲಾ ಸ್ಥಾಪ್ಯತೇ ಸಾ ಪಿಂಡಿಕೇತ್ಯಾಹುಃ । ಪ್ರತಿಮಾಯಾ ಆಧಾರಭೂತ ಉಲೂಖಲಾಕಾರಃ ಶಿಲಾವಿಶೇಷಃ ಪಿಂಡಿಕೇತಿ ಕೇಚಿದಾಹುಃ ।' (ನಾರಾಯಣೀಯ)

ಮತ್ಸ್ಯಪುರಾಣದಲ್ಲಿ 'ಪಿಂಡಿಕಾ' ಶಬ್ದವನ್ನು ಸಾಮಾನ್ಯತಃ ಪೀಠ ಎಂಬ ಅರ್ಥದಲ್ಲಿಯೂ ಬಳಸಿದ್ದಾರೆ—

'ಪಿಂಡಿಕಾಲಕ್ಷಣಂ ವಕ್ಷ್ಯೇ ಯಥಾವದನುಪೂರ್ವಶಃ ।
ಪೀಠೋಚ್ಛ್ರಾಯಂ ಯಥಾವಚ್ಚ ಭಾಗಾನ್ ಷೋಡಶ ಕಾರಯೇತ್ ॥
ವಾರಿನಿರ್ಗಮನಾರ್ಥಂ ತು ತತ್ರ ಕಾರ್ಯಾ ಪ್ರಣಾಲಿಕಾ ।
ಪೀಠಿಕಾನಾಂ ತು ಸರ್ವಾಸಾಮೇತತ್ಸಾಮಾನ್ಯಲಕ್ಷಣಮ್ ॥' (ಮತ್ಸ್ಯಪುರಾಣ)

೨ 'ಯಾ ಶಿಲಾ ಬ್ರುವತೇ ನಾದಂ ಕಾಂಸ್ಯಘಂಟಾನಿನಾದವತ್ ।
ಮೂಲೇ ಮಧ್ಯೇ ತಥಾಚಾಗ್ರೇ ಪುಂಲಿಂಗೇತಿ ಚ ಸಾ ಸ್ಮೃತಾ ॥
ತದೇತಲ್ಲಕ್ಷಣಂ ಯತ್ರ ಮಂದಂ ಮಂದಂ ಪ್ರದೃಶ್ಯತೇ ।
ಸ್ತ್ರೀಲಿಂಗೇತಿ ಸ್ಮೃತಾ ಸಾ ಚ ಭಿನ್ನಕಾಂಸ್ಯಧ್ವನಿಸ್ತು ಯಾ ।
ನಪುಂಸಕೇತಿ ಸಾ ಜ್ಞೇಯಾ ನ ಯತ್ರೈತದ್ದ್ವಯಂ ಭವೇತ್ ॥
ಪುಂಲಿಂಗಾತ್ಪ್ರತಿಮಾ ಕಾರ್ಯಾ ಸ್ತ್ರೀಲಿಂಗಾತ್ಪಾದಪೀಠಕಮ್ ।
ಪಿಂಡಿಕಾರ್ಥಂ ತು ಸಾ ಗ್ರಾಹ್ಯಾ ದೃಷ್ಟಾ ಯಾ ವರ್ಣಲಕ್ಷಣಾ ॥' (ಹಯಶೀರ್ಷ)

**ವೇದಮಂಗಲಘೋಷೇಣ ವಾದ್ಯೈಸ್ತತ್ಪ್ರತಿಮಾಂ ಹರೇತ್ ।**

ಶಿಲ್ಪಿಗಳು ವಿಧಿವತ್ತಾಗಿ ಕಡೆದ ಪ್ರತಿಮೆಯನ್ನು—ವೇದಘೋಷ, ವಾದ್ಯ ನಿನದ ಮೊಳಗುತ್ತಿರುವಂತೆ ಮನೆಗೆ ತರಬೇಕು.[1]

---

'ಘಂಟಾನಾದಾ ತು ಪುಂಲಿಂಗಾ ಧ್ವನಿಹೀನಾ ನಪುಂಸಕಾ ।
ಸ್ತ್ರೀಶಿಲಾ ತಾರನಾದಾ ಸ್ಯಾತ್ ಬಾಲಾ ಹ್ರಸ್ವಧ್ವನಿಃ ಶಿಲಾ ।
ತಾರಶಬ್ದಾ ತು ತರುಣೀ ವೃದ್ಧಾ ದೀರ್ಘಸ್ವರಾ ಮತಾ ॥' (ಸಿದ್ಧಾಂತಶೇಖರ)

ಪ್ರತಿಮಾನಿರ್ಮಾಣದ ವಿಧಾನವನ್ನು ಕೆಳಗಿನ ಪುರಾಣವಾಕ್ಯ ಸ್ಫುಟವಾಗಿ ವಿವರಿಸುತ್ತದೆ—

'ವೃಕ್ಷಸ್ಯ ಚ ಶಿಲಾಯಾಶ್ಚ ಗ್ರಹಣೇ ವಿಧಿರುಚ್ಯತೇ ।
ಸುವಾರೇ ಸುತಿಥೌ ಯೋಗೇ ಸ್ವರ್ಕ್ಷೇ ಸುಕರಣಾನ್ವಿತೇ ॥
ಆಪೂರ್ಯಮಾಣಪಕ್ಷೇ ತು ಸುಗ್ರಹೇ ಚೋತ್ತರಾಯಣೇ ।
ಯಜಮಾನಾನುಕೂಲ್ಯೇನ ಪ್ರತಿಮಾರ್ಥಂ ವ್ರಜೇದ್ಗುರುಃ ॥
ನಿಪುಣೈಃ ಶಿಲ್ಪಿಭಿಃ ಸಾರ್ಧಂ ಸಹಾಯೈರ್ಬಲವತ್ತರೈಃ ।
ಬ್ರಾಹ್ಮಣಾನ್ ವಾಚಯಿತ್ವಾ ತು ಕುರ್ಯಾನ್ಮಂಗಲದರ್ಶನಮ್ ॥
ಗೀತವಾದ್ಯರವೈರ್ಘುಷ್ಟಾ ಯಾತ್ರಾ ಸ್ಯಾದ್ವೃದ್ಧಿದಾ ನೃಣಾಮ್ ।
ಪ್ರಾಚೀದಿಶಮಥೋದೀಚೀಮೈಶಾನೀಂ ವಾ ವ್ರಜೇದ್ಗುರುಃ ॥
ಏಕವರ್ಣಾಂ ಶಿಲಾಂ ದೃಷ್ಟ್ವಾ ಬಾಹ್ಯದೋಷವಿವರ್ಜಿತಾಮ್ ।
ಪ್ಲಾವ್ಯ ತೋಯೇನ ಪೂತೇನ ಶುಭ್ರವಸ್ತ್ರೇಣ ವೇಷ್ಟಯೇತ್ ॥
ಗಂಧೈಃ ಪುಷ್ಪೈಶ್ಚ ಧೂಪೈಶ್ಚ ನೈವೇದ್ಯೈಃ ಪೂಜಯೇಚ್ಛಿಲಾಮ್ ।
ಶತಸ್ತು ಮೂಲಮಂತ್ರೇಣ ಆಜ್ಯೇನಾಷ್ಟಾಹುತಿಂ ಹುನೇತ್ ॥
ಏವಂ ಸಂತರ್ಪ್ಯ ಸಂಜಪ್ಯ ದದ್ಯಾದ್ಭೂತಬಲಿಂ ಬುಧಃ ।
ಪಶ್ಚಿಮೇ ದರ್ಭಶಯ್ಯಾಯಾಂ ವಿಶೇತ್ತಾಂ ರಜನೀಂ ಗುರುಃ ॥
ನಿರಾಹಾರಸ್ಥಿತೋ ಭೂತ್ವಾ ಶಿಲ್ಪಿಭಿಃ ಸಹ ದೇಶಿಕಃ ।
ಅಪರೇಽಹನಿ ಸಂಪ್ರಾಪ್ತೇ ಶಿಲಾಂ ಶಾಸ್ತ್ರಂ ಚ ಪೂಜ್ಯ ಚ ।
ಹರಿಂ ಧ್ಯಾತ್ವಾ ಚ ತಚ್ಛಸ್ತ್ರಂ ಪ್ರದದ್ಯಾಚ್ಛಿಲ್ಪಿನೇ ಗುರುಃ ॥
ಮುಖಂ ಪೃಷ್ಠಂ ಶಿರೋಮೂಲಂ ಶಿಲ್ಪಿನೇ ದರ್ಶಯೇದ್ಗುರುಃ ।
ತತಃ ಶಿಲ್ಪೀ ಟಂಕಹಸ್ತಶ್ಛೇದಯೇಚ್ಚ ಶಿಲಾಂ ತರುಮ್ ॥' (ಹಯಶೀರ್ಷ)

೧ 'ಆನಯೇಚ್ಛಂಖನಿರ್ಘೋಷೈರ್ಗೀತಮಂಗಲನಿಸ್ವನೈಃ ।
ಋಗ್ಯಜುಃಸಾಮಶಬ್ದೈಶ್ಚ ಪ್ರತಿಮಾಂ ಕಾರಿತಾಂ ಗೃಹಮ್ ॥'

## ದೇವಾಲಯಯೋಗ್ಯಸ್ಥಲ

**ಪ್ರಾಗುದಕ್ಪ್ರವಣೇ[೧] ದೇಶೇ ಕುರ್ಯಾದ್ದೇವಾಲಯಂ ಸುಧೀಃ ॥ ೪೫ ॥**

ಯಾವೆಡೆಗೆ ಬಿದ್ದ ನೀರು ಪೂರ್ವ, ಉತ್ತರ, ಅಥವಾ ಈಶಾನ್ಯಾಭಿಮುಖವಾಗಿ ಹರಿದುಹೋಗುವುದೋ ಅಂಥ ಜಾಗದಲ್ಲಿ ದೇವಾಲಯವನ್ನು ಕಟ್ಟಿಸಬೇಕು.[೨]

**ರಾಮಾವೃತೇ[೩] ದಕ್ಷಿಣತಃ ಪಶ್ಚಾದ್ದ್ವಯೋರಗ್ರ ಏವ ವಾ ।**
**ಮಧ್ಯೇ ವಾ ಗ್ರಾಮಪುರಯೋ[೪]ರ್ವಿಶಾಲೇ ಸುಶುಚೌ ತಥಾ ॥ ೪೬ ॥**

---

೧ 'ಪ್ರಾಗುದಕ್ಪ್ರವಣ ಇತಿ ಪದಂ ಪ್ರಾಕ್ಪ್ರವಣೇ, ಉದಕ್ಪ್ರವಣೇ, ಪ್ರಾಗುದಗೈಶಾನೀ, ತತ್ಪ್ರವಣೇ ವೇತಿ ವ್ಯಾಖ್ಯೇಯಮ್ । ತದುಕ್ತಂ ನಾರದೇನ—

'ಅತ್ಯಂತವೃದ್ಧಿದಂ ನೄಣಾಮೀಶಾನಪ್ರಾಗುದಕ್ಪ್ಲವಮ್ ।
ಅನ್ಯದಿಕ್ಷು ಪ್ಲವಂ ತೇಷಾಂ ಶಶ್ವದತ್ಯಂತದುಃಖದಮ್ ।' ಇತಿ ।' (ಫಲಾ.)

೨ ಯಾವ ಕಡೆಗೆ ಬಿದ್ದ ನೀರು ಮೂಡುಬದಿಗೆ ಹರಿವುದೋ ಅದು ಪ್ರಾಚೀಪ್ರವಣ. ಬಡಗುಬದಿಗೆ ಹರಿದರೆ ಅದು ಉದೀಚೀಪ್ರವಣ ಈಶಾನ್ಯಕ್ಕೆ ಹರಿದರೆ ಪ್ರಾಗುದಕ್ಪ್ರವಣ ಅಥವಾ ಈಶಾನ್ಯಪ್ರವಣ.

ಇಲ್ಲಿ ನಾರಾಯಣೀಯದ ಅರ್ಥ ಬೇರೆ ತೆರನಾಗಿದೆ—'ಪ್ರಾಗುದಕ್ಪ್ರವಣ' ಸ್ಥಲ ಎಂದರೆ– ಅವರ ಪಕ್ಷದಲ್ಲಿ ಸ್ವಲ್ಪ ಉತ್ತರಕ್ಕೆ ತಾಗಿಕೊಂಡಿರುವ ಪೂರ್ವದಿಕ್ಕಿನ ಪ್ರದೇಶ.

'ಈಷದುತ್ತರಸಂಬದ್ಧೇ ಪ್ರಾಗ್ದೇಶ ಇತ್ಯರ್ಥಃ' (ನಾರಾಯಣೀಯ)

ಉತ್ತರಕ್ಕೆ ತಾಗಿಕೊಂಡು ಪೂರ್ವದಲ್ಲಿ ಎಂದರೆ ಈಶಾನ್ಯದಲ್ಲಿ ಎಂದ ಹಾಗೆಯೇ ಆಯಿತು. 'ಐಶಾನೀಂ ದಿಶಮೇಕಾಂ ತು ವಿನಾ' ಎಂದು ಆಚಾರ್ಯರು ಈಶಾನ್ಯದಲ್ಲಿ ದೇವಾಲಯ ಕಟ್ಟಬಾರದು ಎಂದಿದ್ದಾರೆ ಎಂದ ಮೇಲೆ ಈ ಅರ್ಥ ಹೇಗೆ ಸ್ವರಸವಾಗಬಹುದು ಎನ್ನುವುದು ಸ್ವಲ್ಪಮಟ್ಟಿಗೆ ಸಮಸ್ಯೆಯೇ ಆಗಿದೆ. ಹದಿನಾರು ದಿಗ್ವಿಭಾಗಗಳನ್ನಿಟ್ಟುಕೊಂಡು ಕೂಡಿಸಬೇಕು ಎನ್ನುವ ಅವರ ಸಮಾಧಾನವೂ ಹೃದಯಗ್ರಾಹಿಯಾಗಿದ್ದಂತಿಲ್ಲ.

೩ 'ಸಲಿಲೋದ್ಯಾನಯುಕ್ತೇಷು ಕೃತೇಷ್ವಕೃತಕೇಷು ಚ ।
ಸ್ಥಾನೇಷ್ವೇತೇಷು ಸಾನ್ನಿಧ್ಯಮುಪಗಚ್ಛಂತಿ ದೇವತಾಃ ॥
ಸರಸ್ಸು ನಲಿನಾಚ್ಛನ್ನನಿರಸ್ತರವಿರಶ್ಮಿಷು ।
ವನೋಪಾಂತನದೀಶೈಲನಿರ್ಝರೋಪಾಂತಭೂಮಿಷು ।
ರಮಂತೇ ದೇವತಾ ನಿತ್ಯಂ ಪುರುಷೋದ್ಯಾನವತ್ಸು ಚ ॥' (ವರಾಹಸಂಹಿತಾ)

೪ 'ಗ್ರಾಮೋ ಬಹುಜನಾಕೀರ್ಣೋ ರಾಜರಾಜಾಶ್ರಯಂ ಪುರಮ್ ।'
ಇಲ್ಲಿ ಗ್ರಾಮ ಪುರಗಳ ಸಂಧಿಸ್ಥಲದಲ್ಲಿ ಎಂದು ಫಲಾರೀಯದ ಅರ್ಥವಾದರೆ–

**ಐಶಾನೀಂ ದಿಶಮೇಕಾಂ ತು ವಿನೋದಕವಿವರ್ಜಿತೇ[1] ।**
**ಜಲಾಶಯಸ್ಯ ಮಧ್ಯೇ ವಾ ಶಿಲಾವೃಕ್ಷಾದಿವರ್ಜಿತೇ ॥ ೪೭ ॥**
**ಶ್ಮಶಾನಾದಿಕದೇಶಾನಾಂ ವಿದೂರೇ ಸುಮನೋಹರೇ ।**
**[2]ಕಿಷ್ಕುದ್ವಾದಶತೋಽನೂನಂ ಕುರ್ಯಾದ್ದೇವಾಲಯಸ್ಥಲಮ್ ॥**

---

ನಾರಾಯಣೀಯದಲ್ಲಿ— ಗ್ರಾಮದ ನಡುವೆ ಅಥವಾ ಪುರದ ನಡುವೆ ಎಂದು ಅರ್ಥ ಬರೆದಿದ್ದಾರೆ—

'ಗ್ರಾಮಮಧ್ಯೇ ಪುರಮಧ್ಯೇ ವೇತ್ಯರ್ಥಃ.' (ನಾರಾಯಣೀಯ)

ಈ ಶ್ಲೋಕಗಳಿಗೆಲ್ಲ— ವಿವಿಧ ಅರ್ಥಗಳನ್ನು ವ್ಯಾಖ್ಯಾನದಲ್ಲಿ ಬರೆದಿದ್ದಾರೆ. ಅದರಲ್ಲಿ ಸ್ವರಸವಾದ ಅರ್ಥವನ್ನು ಆಯ್ದು ಅದನ್ನು ಮಾತ್ರ ಹೇಳಿ ಕೊಟ್ಟಿದ್ದೇನೆ.

೧ ಈ ವಾಕ್ಯಕ್ಕೆ ಛಲಾರೀಯದಲ್ಲಿ ಇನ್ನೊಂದು ಅರ್ಥವನ್ನು ಬರೆದಿದ್ದಾರೆ. ಈಶಾನ್ಯ ಒಂದು ಬಿಟ್ಟು ಉಳಿದ ಎಲ್ಲ ಕಡೆಗಳಲ್ಲೂ ದೇವಾಲಯ ಕಟ್ಟುವ ಸ್ಥಲ ಉದಕ ರಹಿತವಾಗಿರಬೇಕು. ಈಶಾನ್ಯದಲ್ಲಿಯಾದರೆ ಸೋದಕವಾದರೂ ಚಿಂತಿಲ್ಲ ಎಂದೂ ಈ ವಾಕ್ಯಕ್ಕೆ ಅರ್ಥವಿರಬಹುದು ಎಂದು ಅವರು ಬರೆದಿದ್ದಾರೆ—

'ಐಶಾನ್ಯಾಂ ಯದ್ಯುದಕಂ ತರ್ಹಿ ತತ್ರ ನ ದೋಷಃ । ಅನ್ಯಾಸು ಸಪ್ತಸು ದಿಕ್ಷೂದಕರಹಿತೇಷು ಕಾರ್ಯಮಿತಿ ಭಾವಃ ।' (ಛಲಾರೀಯ)

ಆದರೆ ಈ ಅರ್ಥದ ಔಚಿತ್ಯದ ಕುರಿತು ಸ್ವಲ್ಪ ಚಿಂತಿಸಬೇಕಾಗಿದೆ. 'ಉದಕವಿವರ್ಜಿತೇ' ಎನ್ನುವ ಪದಕ್ಕೆ ನೀರಿನ ಪಸೆಯಿಲ್ಲದ ಬಂಜರು ಭೂಮಿ ಎಂದೇನೂ ಅರ್ಥವಲ್ಲ. ಅಲ್ಲದೆ ಆಚಾರ್ಯರೇ 'ಜಲಾಶಯಸ್ಯ ಮಧ್ಯೇ ವಾ' ಎಂದು ನೀರಿನ ನಡುವೆ ದೇಗುಲ ಕಟ್ಟುವುದನ್ನು ಒಪ್ಪಿಕೊಂಡಿದ್ದಾರೆ. ಆದರಿಂದ 'ಉದಕವರ್ಜಿತೇ' ಎನ್ನುವ ಪದಕ್ಕೆ ಮಳೆಗಾಲದಲ್ಲಿ ನೀರುನಿಂತು ಕೊಳಚೆಯಾಗುವುದು ಮುಂತಾದ ನೀರಿನ ತೊಂದರೆಯಿಲ್ಲದ ಜಾಗದಲ್ಲಿ ಎಂಬ ಅರ್ಥವೇ ಸಾಧುವಾಗಿದೆ. ನಾರಾಯಣೀಯದಲ್ಲೂ ಇದೇ ಅರ್ಥವನ್ನು ಬರೆದಿದ್ದಾರೆ—

'ಉದಕವಿವರ್ಜಿತೇ=ಉದಕಬಾಧಾರಹಿತೇ' (ನಾರಾಯಣೀಯ)

ಎಂದ ಮೇಲೆ ಈಶಾನ್ಯದಲ್ಲಿಯಮಟ್ಟಿಗೆ ನೀರಿನ ಪೀಡೆ ಇರಬಹುದು ಎಂದರ್ಥವೆ? ಒಟ್ಟಿನಲ್ಲಿ ಈ ಅರ್ಥ ಏಕೋ ಸ್ವಲ್ಪ ತೊಡಕಾಗಿದೆ. ಅದು ತನ್ನ ದೃಢತೆಗಾಗಿ ವಿದ್ವಾಂಸರ ಮುಖವನ್ನು ನಿರೀಕ್ಷಿಸುತ್ತಿದೆ.

'ಉದಕವಿವರ್ಜಿತೇ' ಎಂಬಲ್ಲಿಯಂತೆಯೇ 'ಶಿಲಾವೃಕ್ಷಾದಿವಿವರ್ಜಿತೇ' ಎಂಬಲ್ಲಿಯೂ ಕಲ್ಲು-ಮರಗಳ ಪೀಡೆಯಿಲ್ಲದ ಜಾಗದಲ್ಲಿ ಎಂದೇ ಅರ್ಥ ಹೊರತು—ಆಸುಪಾಸಿನಲ್ಲಿ ಮರಗಳೇ-ಕಲ್ಲುಗಳೇ ಇರಬಾರದೆಂದೇನೂ ಅಲ್ಲ ಸುತ್ತಲ್ಲಿ ವಾತಾವರಣ ಸುಖಕರವಾಗಿರಬೇಕು, ಸುಂದರವಾಗಿರಬೇಕು ಎಂದು ತಾತ್ಪರ್ಯ.

'ಶಿಲಾವೃಕ್ಷಾದಿವರ್ಜಿತ ಇತ್ಯಸ್ಯಾಪ್ಯಯಮೇವಾರ್ಥಃ ।' (ನಾರಾಯಣೀಯ)

೨ 'ಕಿಷ್ಕು' ಎಂಬ ಪದಕ್ಕೆ ಸಂಸ್ಕೃತದಲ್ಲಿ ೧೨ ಅಂಗುಲ, ೨೪ ಅಂಗುಲ, ಇತ್ಯಾದಿ

ಗ್ರಾಮದಿಂದ ದಕ್ಷಿಣದಲ್ಲಿ ಅಥವಾ ಪಶ್ಚಿಮದಲ್ಲಿ ಹೂದೋಟಗಳಿಂದ ತುಂಬಿದ ಪರಿಸರದಲ್ಲಿ, ಬೆಟ್ಟದ ತುದಿಯಲ್ಲಿ, ಪತ್ತನ-ರಾಜಧಾನಿಗಳ ನಡುವಿನಲ್ಲಿ ಅಥವಾ ಸರೋವರದ ನಡುವಿನಲ್ಲಿ, ಮಳೆಗಾಲದಲ್ಲಿ ನೀರು ನಿಂತು ಕೊಳಚೆಯಾಗದೆ ನಿರ್ಮಲವೂ ವಿಶಾಲವೂ ಆಗಿದ್ದು ಕಲ್ಲು-ಮರಗಳ ಪೀಡೆಯಿಲ್ಲದೆಡೆಯಲ್ಲಿ, ಶ್ಮಶಾನಕೇರಿಗಳಿಂದ ದೂರವಾಗಿದ್ದು ಮನಸ್ಸಿಗೆ ನೆಮ್ಮದಿಯನ್ನೀವ ಸುಂದರ ತಾಣದಲ್ಲಿ ಹನ್ನೆರಡು ಕಿಷ್ಕು (೫೦೪ ಅಂಗುಲಗಳು)ಗಳಿಗೆ ಕಮ್ಮಿಯಿರದಷ್ಟು ವಿಶಾಲವಾದ ದೇವಾಲಯ ಸ್ಥಲವನ್ನು ಆರಿಸಬೇಕು.

**ದ್ವಿಗುಣಂ ಚತುರ್ಗುಣಂ ವಾಽಪಿ ಶತಕಿಷ್ಕುಪ್ರಮಾಣಕಮ್ ।**

೨೪ ಕಿಷ್ಕು(೧೦೦೮ ಅಂಗುಲ)ಗಳು, ೪೮ ಕಿಷ್ಕು(೨೦೧೬ ಅಂಗುಲ)ಗಳು ಅಥವಾ ೧೦೦ ಕಿಷ್ಕು(೪೨೦೦ ಅಂಗುಲ)ಗಳಷ್ಟು ವಿಶಾಲವಾಗಿಯಾದರೂ ಕಟ್ಟಬಹುದು.

**ಕೃತ್ವಾ ಭೂಶೋಧನಂ ಸಮ್ಯಕ್ ಸಾರ್ಧಪುಂಮಾನತಸ್ತ್ವಧಃ ।[೧]**
**ಕೇಶಾಂಗಾರಾಸ್ಥಿವಲ್ಮೀಕಲೋಷ್ಟಾ[೨]ಶ್ಮಾದಿವಿವರ್ಜಿತೇ ॥ ೪೯ ॥**

---

ಅರ್ಥಗಳಿದ್ದರೂ ಇಲ್ಲಿ ವಿವಕ್ಷಿತವಾದ ಅರ್ಥ ೪೨ ಅಂಗುಲವೆಂದು. ಅದೇ ಅದರ ಪ್ರಸಿದ್ಧವೂ ನಿರ್ದಿಷ್ಟವೂ ಆದ ಅರ್ಥ—

'ಪ್ರಕೋಷ್ಠೇ ವಿಸ್ತೃತೇ ಕಿಷ್ಕುರ್ದ್ವಿಚತ್ವಾರಿಂಶದಂಗುಲೇ ।' (ಅಮರಶೇಷ)

ಛಲಾರೀಯದಲ್ಲಿ ಉದಾಹೃತವಾದ ಆದಿತ್ಯಪುರಾಣದ ವಚನದಲ್ಲೂ ಇದೇ ರೀತಿಯಾಗಿದೆ—

'ಕಿಷ್ಕುಃ ಸ್ಮೃತೋ ದ್ವಿರತ್ನಿಸ್ತು ದ್ವಿಚತ್ವಾರಿಂಶದಂಗುಲಃ ।'

೧ ಒಂದೂವರೆ ಪುರುಷಪ್ರಮಾಣ ಎಂದರೆ ಶಾಸ್ತ್ರದಲ್ಲಿ ನಿರ್ದಿಷ್ಟವಾದ ಅರ್ಥ ೭½ ರತ್ನಿಗಳು. ಅದರಿಂದಲೇ ಛಲಾರೀಯದಲ್ಲಿ 'ಪಂಚರತ್ನಿಃ ಪುರುಷಃ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ರತ್ನಿಯ ನಿಜವಾದ ಅಳತೆ ೨೧ ಅಂಗುಲಗಳು.

'ರತ್ನಿಸ್ತ್ವಂಗುಲಿಪರ್ವಾಣಿ ವಿಜ್ಞೇಯಸ್ತ್ವೇಕವಿಂಶತಿಃ ।' (ಆದಿತ್ಯಪುರಾಣ)

ಆದರೆ ಈ ಶ್ರುತಿಯಲ್ಲಿ ಹೇಳಿರುವ ರತ್ನಿ ಅಂದರೆ ೨೪ ಅಂಗುಲ ಅಥವಾ ೧ ಹಸ್ತ. ಶ್ರುತಿಯಲ್ಲೆ 'ಚತುರ್ವಿಂಶತ್ಯಂಗುಲೋ ರತ್ನಿಃ' ಎಂದು ಮುಂದೆ ವಿವರಣೆಯಿರುವುದರಿಂದ ಇಲ್ಲಿ ಈ ಅರ್ಥವನ್ನೆ ಇಟ್ಟುಕೊಳ್ಳಬೇಕು. 'ಪುರುಷಪ್ರಮಾಣಂ ತು ಪಂಚಹಸ್ತಂ' ಎಂದು ಛಲಾರೀಯದಲ್ಲೂ ಇದೇ ತೆರನಾಗಿ ವಿವರಣೆಯಿದೆ. ಅದರಿಂದ 'ಸಾರ್ಧಪುಂಮಾನ' ಎಂದರೆ ೧೮೦ ಅಂಗುಲಗಳು.

೨ ಸಂಸ್ಕೃತದಲ್ಲಿ 'ಲೋಷ್ಟ' ಎಂದರೆ ಮಣ್ಣಿನ ಗಟ್ಟಿ ಎಂತಲೂ, 'ಅಶ್ಮ' ಎಂದರೆ ಕಲ್ಲು-ಅರೆ ಎಂತಲೂ ಅರ್ಥ. ಪ್ರದೇಶದ ಸ್ವಚ್ಛತೆಯನ್ನು ಹದಗೆಡಿಸುವ-ಮಣ್ಣು ಕಲ್ಲುಗಳು ಇರಬಾರದು ಎಂದು ತಾತ್ಪರ್ಯ.

**ಹರಿಂ ತತ್ರಾಪಿ ಸಂಪೂಜ್ಯ ಬಲಿಂ ದತ್ವಾ ಚ ಪೂರ್ವವತ್ ।**
**ಮೃದ್ದಾರುಶೈಲೈರ್ಲೋಹೈರ್ವಾ ಕುರ್ಯಾದ್ದೇವಾಲಯಂ ದೃಢಮ್ ॥**

ಒಂದೂವರೆ ಆಳಿನ ವರೆಗೆ ನೆಲದಡಿಯನ್ನು ಶೋಧಿಸಿ–ಕೂದಲು, ಮಸಿ, ಎಲುವು, ಹುತ್ತ, ಕಲ್ಲು ಮೊದಲಾದ ಕಶ್ಮಲವಿಲ್ಲದ ನೆಲದಲ್ಲಿ–ಅಲ್ಲಿಯೂ ಹರಿಯನ್ನು ಮತ್ತೊಮ್ಮೆ ಪೂಜಿಸಿ ಹಿಂದೆ ಹೇಳಿದ ರೀತಿಯಲ್ಲಿ ಬಲಿಹರಣವನ್ನು ಆಚರಿಸಬೇಕು; ಆ ಮೇಲೆ ಮಣ್ಣು, ಮರ, ಕಲ್ಲು, ಲೋಹ ಇವುಗಳಿಂದ ಯಥಾನುಕೂಲ ದೃಢವಾದ ದೇವಾಲಯವನ್ನು ಕಟ್ಟಿಸಬೇಕು.

**ದೀರ್ಘಾಸ್ತು ಕಲಮಾ[1]ಸ್ತಿಸ್ರಸ್ತಿರ್ಯಗಷ್ಟಯವೋದರಾಃ[2] ।**

---

'ಅಶ್ಮನ್=A stone, A hard stone, rock.' 'ಲೋಷ್ಟಃ=A clod, a lump of earth' (V. S. Apte)

ಈ ಅರ್ಥವನ್ನು ಬಳಸಿಕೊಂಡೇ ಗೀತೆಯ ೬ನೆಯ ಅಧ್ಯಾಯದ ೮ನೇ ಶ್ಲೋಕದಲ್ಲಿ ಮತ್ತು ೧೪ನೇ ಅಧ್ಯಾಯದ ೨೪ನೇ ಶ್ಲೋಕದಲ್ಲಿ 'ಸಮಲೋಷ್ಟಾಶ್ಮಕಾಂಚನಃ' ಎಂಬ ಪದವನ್ನು ಬಳಸಿದ್ದಾರೆ.

ಆದರೆ—ಫಲಾರೀಯದಲ್ಲೂ, ನಾರಾಯಣೀಯದಲ್ಲೂ ಇದಕ್ಕೆ ಸ್ವಲ್ಪ ವಿಚಿತ್ರವೆನಿಸುವ ಅರ್ಥವನ್ನು ಬರೆದಿದ್ದಾರೆ. 'ಲೋಷ್ಟಾಶ್ಮ' ಎಂಬ ಎರಡು ಪದಗಳು ಒಟ್ಟಿಗೆ–ಒಂದು ಜಾತಿಯ ಉರುಟಾದ ಕಲ್ಲನ್ನು ಬೋಧಿಸುತ್ತವೆ ಎಂಬುದು ಫಲಾರೀಯದ ಅರ್ಥ.

'ಲೋಷ್ಟಾಶ್ಮಾ=ವರ್ತುಲಪಾಷಾಣಃ ।' (ಫಲಾರೀಯ)

ಈ ಶಬ್ದಕ್ಕೆ ಈ ಅರ್ಥ ಹೇಗೆ ಮತ್ತು ಏಕೆ ಎನ್ನುವುದು ಚರ್ಚಾಸ್ಪದವಾದ ವಿಚಾರವಾಗಿದೆ. ಮಣ್ಣಿನ ಗಟ್ಟಿಯಂತಿರುವ ಕಲ್ಲು (ಲೋಷ್ಟಸದೃಶಃ ಅಶ್ಮಾ) ಎಂದು ಅವರ ಅರ್ಥವಿರಬಹುದು.

ನಾರಾಯಣೀಯದ ಪ್ರಕಾರ 'ವಲ್ಮೀಕಲೋಷ್ಟ' ಎಂಬುದು ಸಮಸ್ತಪದ. 'ಹುತ್ತಬೆಳೆದ ಮಣ್ಣಿನ ಗಟ್ಟಿ' ಎಂದರ್ಥ.

'ವಲ್ಮೀಕಲೋಷ್ಟಶಬ್ದೇನ ವಲ್ಮೀಕಜನಕೋ ವಲ್ಮೀಕಾಶ್ರಯೋ ಲೋಷ್ಟವಿಶೇಷ ಉಚ್ಯತೇ ।' (ನಾರಾಯಣೀಯ)

ಇದ್ದುದರಲ್ಲಿ ಈ ಅರ್ಥ ಚೆನ್ನು ಎನ್ನಿಸುತ್ತದೆ.

೧ 'ಕಲಮಃ=Rice which is sown in May-June and ripens in December-January.' (V. S. Apte)

'ವಿನ್ಯಸ್ತೈಸ್ತಿರ್ಯಗಷ್ಟಾಭಿರ್ಯವೈರ್ಮಾನಾಂತರಾಂಗುಲಮ್ ।
ಶಾಲಿಭಿರ್ವಾ ಋಜುನ್ಯಸ್ತೈಸ್ತ್ರಿಭಿರ್ಮಾನಾಂತರಂ ಭವೇತ್ ॥' (ಪಂಚರಾತ್ರ)

ಕಲಮ–ಶಾಲಿಪದಗಳು ಇಲ್ಲಿ ಸಮಾನಾರ್ಥದಲ್ಲಿ ಪ್ರಯುಕ್ತಗಳಾಗಿವೆ.

೨ ಯವಃ=A measure of length equal to $\frac{1}{6}$ or $\frac{1}{8}$ of an *angula*' (V. S Apte)

'ಯವೋದರೈರಂಗುಲಮಷ್ಟಸಂಖ್ಯೈಃ ।' (ಭಾಸ್ಕರಾಚಾರ್ಯ)

**ಅಂಗುಲ್ಯಾ ಮಧ್ಯರೇಖಾಯಾಃ ಸಮಾ ಲಕ್ಷಣತಃ ಸ್ಮೃತಾಃ ॥ ೫೦ ॥**

ಒಂದರ ತುದಿಗೊಂದರಂತೆ ಉದ್ದವಾಗಿಟ್ಟ ಮೂರು ಶಾಲಿ ಅಕ್ಕಿಯೂ, ಒಂದರ ನಡುವಿಗೊಂದನ್ನು ತಾಗಿಸಿ ಅಡ್ಡವಾಗಿ ಇಟ್ಟ ಎಂಟು ಜವೆಗೋಧಿ[೧]ಗಳ ಮಧ್ಯಭಾಗದ ಉದ್ದವೂ ಹೆಬ್ಬೆರಳಿನ ನಡುವಿನ ರೇಖೆಯೂ ಇವು ಮೂರೂ ಅಳತೆಯಲ್ಲಿ ಸಮನಾಗಿವೆ.

**ಸ್ವಾಂಗುಲ್ಯಾ ಮಧ್ಯರೇಖಾ ತು ಪ್ರತಿಮಾದಿಷು ಲಕ್ಷಣಮ್[೨] ।**
**ಹ್ರಸ್ವಮಧ್ಯೋಚ್ಚಭೇದೇನ ತತ್ತನ್ಮಾನಂ ಸಮಸ್ತಶಃ[೩] ।**

---

೧ 'ಯವಃ=Barley' (V. S Apte)

'ವಸಂತೇ ಸರ್ವಸಸ್ಯಾನಾಂ ಜಾಯತೇ ಪತ್ರಶಾತನಮ್ ।
ಮೋದಮಾನಾಶ್ಚ ತಿಷ್ಠಂತಿ ಯವಾಃ ಕಣಿಶಶಾಲಿನಃ ॥'
'ಯವಾಃ ಪ್ರಕೀರ್ಣಾ ನ ಭವಂತಿ ಶಾಲಯಃ' (ಮೃಚ್ಛಕಟಿಕ)
'ಯವಾಃ ವ್ರೀಹಿಪ್ರತಿನಿಧಯೋ ಯಜ್ಞಾರ್ಹಾಃ' (ನಾರಾಯಣೀಯ)
ಈ ಧಾನ್ಯವನ್ನೇ ಕನ್ನಡದಲ್ಲಿ ಜವೆ ಅಥವಾ ಜವೆಗೋದಿಯೆನ್ನುವರು

೨ ಈ ಪಂಕ್ತಿಗೆ ಪ್ರತಿಮೆಯನ್ನು ಮಾಡಿಸುವ ಯಜಮಾನನ ಬೆರಳಿನ ಅಳತೆಯೇ ಪ್ರತಿಮೆಯ ಅಳತೆಯ ಅಂಗುಲ ಎಂದರ್ಥ ಎಂದು ಭಲಾರೀಯದಲ್ಲಿ ಅರ್ಥಾಂತರವನ್ನು ಬರೆದಿದ್ದಾರೆ ದೇವಸ್ಥಾನಾದಿಗಳ ಪ್ರತಿಮೆಯ ವಿಷಯದಲ್ಲಿ ಈ ಅರ್ಥ ಸರಿಗೂಡಬಹುದಾದರೂ ಹ್ರಸ್ವಪ್ರತಿಮೆ ಮಧ್ಯಪ್ರತಿಮೆಗಳಲ್ಲಿ ಈ ರೀತಿಯ ಅರ್ಥ ಸರಿಗೂಡುವಂತಿಲ್ಲ. ಮೇಲೆ ಬರೆದಿರುವ ಅರ್ಥವನ್ನೂ ಅವರು ಉಲ್ಲೇಖಿಸಿದ್ದಾರೆ ಈ ಅರ್ಥವಾದರೆ ವ್ಯಾಪಕವಾಗಿದೆ ಹಿಂದೆ ಉಲ್ಲೇಖಿಸಿದ್ದ 'ಅಹಿರ್ಬುಧ್ನ್ಯಸಂಹಿತೆ'ಯ ವಚನಕ್ಕೂ ಅನುಗುಣವಾಗಿದೆ

೩ ಈ ಪಂಕ್ತಿಗೂ ಭಲಾರೀಯದಲ್ಲಿ ಇನ್ನೊಂದು ತೆರನಾದ ಅರ್ಥವನ್ನು ಬರೆದಿದ್ದಾರೆ. ಅಂಗುಲ ಮೂರು ತೆರನಾಗಿದೆ. ೮ ಯವಗಳ ಅಗಲಕ್ಕೆ ಸಮನಾದ ಅಂಗುಲ ಒಂದು, ಇದು ಉತ್ತಮ; ೭ ಯವಗಳಿಗೆ ಸಮನಾದುದು ಇನ್ನೊಂದು, ಇದು ಮಧ್ಯಮ; ೬ ಯವಗಳಿಗೆ ಸಮನಾದ ಅಂಗುಲವೂ ಒಂದುಂಟು, ಅದು ಅಧಮ ಹೀಗೆ ಮೂರು ತೆರನಾಗಿ ಅಂಗುಲದ ಅರ್ಥವನ್ನು ಶಾಸ್ತ್ರಕಾರರು ವಿವರಿಸಿದ್ದಾರೆ—ಇದು ಅವರು ಬರೆದ ಅರ್ಥ. ಈ ಅರ್ಥ ಸುಂದರವೂ ಪ್ರಸಂಗೋಚಿತವೂ ಆಗಿದ್ದು ಗ್ರಾಹ್ಯವಾಗಿದೆ ಇವಕ್ಕೆ ಸಂವಾದಿಯಾಗಿ ಅವರು ಪಂಚರಾತ್ರವಚನವನ್ನು ಉದಾಹರಿಸಿದ್ದಾರೆ—

'ತದಷ್ಟಕಂ ಯವಸ್ತೇಽಷ್ಟಾವಂಗುಲಂ ಸಮುದಾಹೃತಮ್ ।
ಸಾ ತೂತ್ತಮಾಂಗುಲಿಃ ಸಪ್ತಯವಾ ಸ್ವೈವ ತು ಮಧ್ಯಮಾ ।
ಷಡ್ಯವಾ ಸಾಽಧಮಾ ಪ್ರೋಕ್ತಾ ಮಾನಾಂಗುಲಮಿತೀರಿತಮ್ ॥'

**ಪ್ರಾದೇಶಹಸ್ತಪುರುಷಮಾನಂ[1] ಸಾಮಾನ್ಯಲಕ್ಷಣಮ್ ॥ ೫೨ ॥**

ಆದರೆ ಪ್ರತಿಮೆಯನ್ನು ಕೆತ್ತುವಾಗ ಪ್ರತಿಮೆಯ ಹೆಬ್ಬೆರಳಿನ ನಡುವಿನ ರೇಖೆಯನ್ನೇ ಅಂಗುಲವೆಂದಿಟ್ಟುಕೊಂಡು ಆ ಅಂಗುಲದಿಂದ ೯೬ ಪಟ್ಟು ದೊಡ್ಡದಾದ ಪ್ರತಿಮೆಯನ್ನು ಕಡೆಯಬೇಕು. ಅಂಗುಲ ಸಣ್ಣದಾಗಿದ್ದರೆ ಪ್ರತಿಮೆಯೂ ಕಿರಿದಾಗುವುದು; ಮಧ್ಯಮವಾಗಿದ್ದರೆ ಮಧ್ಯಮವಾಗುವುದು; ಹಿರಿದಾಗಿದ್ದರೆ ಅದಕ್ಕೆ ತಕ್ಕಂತೆ ಪ್ರತಿಮೆಯೂ ಹಿರಿದಾಗುವುದು. ಅದರಲ್ಲಿ ೧೨ ಅಂಗುಲದ ವರೆಗಿನ ಪ್ರತಿಮೆಯನ್ನು ಹ್ರಸ್ವಪ್ರತಿಮೆಯೆಂದೂ, ೨೪ ಅಂಗುಲದ ವರೆಗಿನ ಪ್ರತಿಮೆಯನ್ನು ಮಧ್ಯಮವೆಂದೂ, ಪುರುಷಪರಿಮಾಣದ ಪ್ರತಿಮೆಯನ್ನು ಉತ್ಕೃಷ್ಟವೆಂದೂ ಪರಿಗಣಿಸಬಹುದು. ಇದು ಪ್ರತಿಮೆಗಳನ್ನು ೩ ತೆರನಾಗಿ ಅಳೆಯಬಹುದಾದ ಸಾಮಾನ್ಯ ಪರಿಮಾಣ.[2]

## ವಾಸ್ತುಶಿಲ್ಪ

**ಪ್ರತಿಮಾಽಧ್ಯರ್ಧಕಂ ದ್ವಾರಮೂರ್ಧ್ವಮರ್ಧಂ[4] ಚ ವಿಸ್ತೃತಿಃ ।**
**ಪ್ರತಿಮಾರ್ಧಪ್ರಮಾಣೇನ ಪೀಠಸ್ಯೋಚ್ಚತ್ವಮಿಷ್ಯತೇ ॥ ೫೩ ॥**

ಗರ್ಭಗೃಹದ ಬಾಗಿಲು ಪ್ರತಿಮೆಯಿಂದ ಒಂದೂವರೆ ಪಾಲು ದೊಡ್ಡದಿರ

---

೧ ಪ್ರಾದೇಶ = ೧೨ ಅಂಗುಲ. ಹಸ್ತ = ೨೪ ಅಂಗುಲ. ಪುರುಷಪ್ರಮಾಣ = ೧೨೦ ಅಂಗುಲ.

'ಪಂಚರತ್ನಿಃ ಪುರುಷಃ. ಚತೂರತ್ನಿರ್ವ್ಯಾಮಃ. ಚತುರ್ವಿಂಶತ್ಯಂಗುಲೋ ರತ್ನಿಸ್ತದರ್ಧಂ ಪ್ರಾದೇಶಃ ।'

'ಚತುರ್ವಿಂಶಾಂಗುಲಃ ಕರಃ' (ಹಯಶೀರ್ಷ)

೨ ಮನೆಯಲ್ಲಿ ೧೨ ಅಂಗುಲದೊಳಗಿನ–ಹಸ್ತಪರಿಮಾಣದ ಪ್ರತಿಮೆಗಳನ್ನು ಮಾತ್ರ ಪೂಜಿಸಬೇಕು.

'ಅಂಗುಷ್ಠಪರ್ವಮಾರಭ್ಯ ವಿತಸ್ತಿರ್ಯಾವದೇವ ತು ।
ಗೃಹೇಷು ಪ್ರತಿಮಾ ಕಾರ್ಯಾ ಸಾಧಿಕೋನಾ ಪ್ರಶಸ್ಯತೇ ।' (ಮಾತ್ಸ್ಯ)

೩ ಇಲ್ಲಿ ಉಚ್ಚ ಪ್ರತಿಮೆಗಳನ್ನಿಟ್ಟುಕೊಂಡು ಈ ಅಳತೆಯನ್ನು ಬರೆದಿದ್ದಾರೆ. ಅಂಗುಷ್ಠಪರಿಮಾಣದ ಪ್ರತಿಮೆಯಾದರೂ ಗುಡಿಯ ಬಾಗಿಲು ಅದರ ಒಂದೂವರೆ ಪಟ್ಟು ಮಾತ್ರ ಇರಬೇಕೆಂದೇನೂ ಅರ್ಥವಲ್ಲ

೪ 'ಅರ್ಧಂ' ಎನ್ನುವುದಕ್ಕೆ ಪ್ರತಿಮೆಯ ಅರ್ಧದಷ್ಟು ಎನ್ನುವುದಕ್ಕಿಂತಲೂ ಬಾಗಿಲಿನ ಎತ್ತರದ ಅರ್ಧದಷ್ಟು ಎಂಬ ಅರ್ಥವೇ ಚೆನ್ನು.

'ಗರ್ಭಗೇಹಂ ತ್ರಿಭಾಗೈಕದ್ವಾರವಿಸ್ತಾರಮಾಚರೇತ್ ।
ವಿಸ್ತಾರದ್ವಿಗುಣೋತ್ಸೇಧಂ ದ್ವಾರಂ ಸರ್ವತ್ರ ಕಾರಯೇತ್ ॥' (ಶೇಖರ)

ಬೇಕು. ಬಾಗಿಲಿನ ಅಗಲ ಅದರ ಎತ್ತರದ ಅರ್ಧದಷ್ಟಿರಬೇಕು. ಪೀಠದ ಎತ್ತರ ಪ್ರತಿಮೆಯ ಅರ್ಧದಷ್ಟು.

**ಉನ್ನತಿಃ ಪಿಂಡಿಕಾಯಾಸ್ತುಚ್ಚತುರಂಗುಲಮಾನತಃ[1] ।**
**ತ್ರ್ಯಂಗುಲಂ ದ್ವ್ಯಂಗುಲಂ ವಾಽಪಿ ಗೃಹಾಂತಃ ಪ್ರತಿಮಾಸಮಮ್[2] ।**
**ಊರ್ಧ್ವಂ ಪರ್ಯಕ್ಚ ಕ್ರಮಶ ಉಚ್ಚತ್ವಂ ಮಧ್ಯತಃ ಸ್ಮೃತಮ್ ॥೫೪॥**

ಪೀಠದ ಅಡಿಗಲ್ಲಿನ ಎತ್ತರ ಪ್ರತಿಮೆಯ ಅಂಗುಲದ ಅಳತೆಯಿಂದ ೪ ಅಂಗುಲದಷ್ಟು. ೩ ಅಂಗುಲ ಅಥವಾ ೨ ಅಂಗುಲದ ಅಡಿಗಲ್ಲಾದರೂ ಚಿಂತಿಲ್ಲ. ಗರ್ಭಗುಡಿಯ ನಡುವಿನಲ್ಲಿ ಪ್ರತಿಮೆಯ ಮೇಲುಗಡೆ ಪ್ರತಿಮೆಯಷ್ಟೆ ಅವಕಾಶವಿರಬೇಕು. ಕ್ರಮೇಣ ಕುಗ್ಗುತ್ತಾ ಮಾಳಿಗೆಯ ಒಳಭಾಗ ಪ್ರತಿಮೆಯ ನೆತ್ತಿಗೆ ಸಮಪ್ರಮಾಣದಲ್ಲಿ ನಿಲ್ಲಬೇಕು.

**ತಾವದುಚ್ಚಂ ಬಹಿಶ್ಚೈವ ಯದ್ಯೇಕಶಿಖರಂ ಭವೇತ್ ।**
**ಅರ್ಧೋಚ್ಚಮಥವಾಽಪಿ ಸ್ಯಾದಧಸ್ತಾತ್ಪ್ರತಿಮೋನ್ನತಮ್[3] ।**
**ತತೋ ದ್ವಿಗುಣಮಾನಂ ವಾ ಸಾರ್ಧಪ್ರತಿಮಮೇವ ವಾ ॥ ೫೫ ॥**

---

೧ ತಸ್ಯಾಃ=ಪ್ರತಿಮಾಯಾ ಅಂಗುಲಮಾನತಶ್ಚತುರಂಗುಲಮ್ ।
'ಪಿಂಡಿಕಾಯಾಸ್ತು ಚತುರಂಗುಲಮಾನತಃ ।' ಎಂದು ಪ್ರಚಲಿತಪಾಠ.

೨ ಗೃಹಾಂತಃ, ತತ್ರಾಪಿ ಮಧ್ಯತಃ=ಪ್ರತಿಮಾಯಾ ಉಪರಿತನಭಾಗೇ, ಊರ್ಧ್ವದೇಶಃ ಪ್ರತಿಮಾಸಮಃ । ಪರ್ಯಕ್ ವಿಮಾನಭಿತ್ತಯಶ್ಚ ಪ್ರತಿಮಾಸಮಪರಿಮಾಣಾಃ ।

೩ ಇನ್ನು ಮುಂದಿನ ನಾಲ್ಕೈದು ಶ್ಲೋಕಗಳಿಗೆ ವ್ಯಾಖ್ಯಾನಕಾರರು ಯಾವಚ್ಛಕ್ತಿ ಅರ್ಥಾಂತರಗಳನ್ನು ತುಂಬಿದ್ದಾರೆ. ಯಾವುದನ್ನೂ ನಿರ್ದಿಷ್ಟವಾಗಿ ಹೇಳಲಾರದಷ್ಟು ತೊಡಕಾಗಿದೆ ಅವರ ನಿರೂಪಣೆ. ಅವರಲ್ಲಿ– ಇದ್ದುದರಲ್ಲಿ ಚೆನ್ನು ಎನ್ನಿಸಿದ ಒಂದರ್ಥವನ್ನು ಆರಿಸಿಕೊಂಡು ಮೇಲೆ ಪದ್ಯಾರ್ಥವನ್ನು ಬರೆದಿದ್ದೇನೆ. ಏಕೆಂದರೆ– ಆ ವ್ಯಾಖ್ಯಾಕಾರರು ಬರೆದ ಅರ್ಥಗಳಲ್ಲಿ ಇಂಥವೇ ಸರಿ ಇಂಥವೇ ತಪ್ಪು ಎಂದು ನಿರ್ಧರಿಸುವುದೂ ಒಂದು ಸಮಸ್ಯೆಯೇ. ಅವರು ಯಾವ ಪ್ರಮಾಣಗ್ರಂಥದ ಆಧಾರದಿಂದ ಹಾಗೆ ಬರೆದಿರಬಹುದು ಎಂಬುದನ್ನು ನಿರ್ಧರಿಸುವುದೂ ಸ್ವಲ್ಪ ದುಸ್ತರವೇ ಆಗಿದೆ. ಈಗ ದೊರೆಯುವ ಅಗ್ನಿಪುರಾಣ ಮೊದಲಾದೆಡೆಗಳಲ್ಲಿರುವ ವಾಸ್ತುಶಿಲ್ಪ ಬಹು ಸಂಕ್ಷಿಪ್ತವಾಗಿದೆ; ಮತ್ತು ಸಂಪೂರ್ಣ ಈ ಪದ್ಧತಿಗೆ ಹೊಂದಿಕೊಂಡಿಲ್ಲ. ಅದರಿಂದ ಈ ಅರ್ಥಗಳಲ್ಲಿ ಯಾವುದು ರಚನೆಗೆ ಹೆಚ್ಚು ಅನುಕೂಲವೊ ಅದನ್ನು ಆಯ್ದುಕೊಳ್ಳುವುದೊಂದೇ ಉಳಿದಿರುವ ಮಾರ್ಗ. ಅದೂ ಅಲ್ಲದೆ ಪಕ್ಷಾಂತರಗಳು ಶಿಲ್ಪಶಾಸ್ತ್ರದಲ್ಲೇ ಇವೆ. ಆಚಾರ್ಯರೇ ಮೂಲದಲ್ಲಿ ಅಲ್ಲಲ್ಲಿ ಪಕ್ಷಾಂತರಗಳನ್ನು ಬರೆದಿದ್ದಾರಲ್ಲ! ಪ್ರಾಸಾದರಚನೆ

ಒಂದೇ ಅಂತಸ್ತಿನ ಗರ್ಭಗುಡಿಯಾಗಿದ್ದರೆ ಶಿಖರವೂ ಪ್ರತಿಮೆಯ ಸಮ ಪರಿಮಾಣವಾಗಿರಬೇಕು; ಪ್ರತಿಮೆಯ ಅರ್ಧದಷ್ಟು ಎನ್ನುವ ಪಕ್ಷವೂ ಉಂಟು. ಗುಡಿಯ ಗೋಡೆಯ ಪರಿಗಿನ ಪ್ರದೇಶ ಪ್ರತಿಮೆಯಷ್ಟೇ ಎತ್ತರ ದ್ದಾಗಲಿ, ಪ್ರತಿಮೆಯ ಎರಡರಷ್ಟಾಗಲಿ, ಒಂದೂವರೆ ಪಾಲಿನಷ್ಟಾಗಲಿ ಇರಬೇಕು.

**ಶಿಖರಾಂತರೇ[1] ತು ಪ್ರತಿಮಾಮಾನಂ ತದ್ಗಲಮುಚ್ಯತೇ ।**
**ತತ್ತ್ರಿಪಾದಂ ತದರ್ಧಂ ವಾ ತದಧ್ಯರ್ಧಮಥಾಪಿ ವಾ ॥ ೫೬ ॥**

ಎರಡಂತಸ್ತಿನ ಗರ್ಭಗುಡಿಯಾಗಿದ್ದರೆ ಎರಡನೆಯ ಅಂತಸ್ತಿ(ಗಲ)ನ ಗೋಡೆಯೂ ಪ್ರತಿಮೆಯ ಪರಿಮಾಣದ್ದೇ ಇರಬೇಕು. ತಮ್ಮ ಅನುಕೂಲ್ಯ ಕ್ಕನುಸರಿಸಿ ಮುಕ್ಕಾಲುಪಾಲು, ಅರ್ಧಪಾಲು, ಕಾಲುಪಾಲೆತ್ತರದ ಗೋಡೆ ಯನ್ನೂ ಕಟ್ಟುವುದುಂಟು.

**ವರ್ತುಲಂ ಪದ್ಮಸದೃಶಂ ಹಸ್ತಿಪೃಷ್ಠಸಮಂ[2] ತಥಾ ।**
**ಚತುರಸ್ರಂ ಚಾಷ್ಟಕೋಣಂ ವಿಮಾನಂ[3] ಪರಿಕೀರ್ತಿತಮ್ ॥ ೫೭ ॥**

ಗರ್ಭಗುಡಿ ವೃತ್ತಾಕಾರವಾಗಲಿ, ಪದ್ಮದಂತಾಗಲಿ, ಆನೆಯ ಬೆನ್ನಿ ನಂತಾಗಲಿ, ಚೌಕವಾಗಿಯಾಗಲಿ, ಎಂಟು ಮೂಲೆಯುಳ್ಳದ್ದಾಗಿಯಾಗಲಿ ಆಗಿರಬೇಕು.

**ಪ್ರತಿಮಾಯಾ ದಶಗುಣಂ ವಿಂಶದ್ಗುಣಮಥಾಪಿ ವಾ ।**
**ವರ್ತುಲಂ ಶಿಖರಂ ತ್ವೇಕಂ ಕಿರೀಟಾಕೃತಿಮುದ್ಭವೇತ್ ॥ ೫೮ ॥**

ಹೆಚ್ಚು ಶಿಖರಗಳುಳ್ಳ ಗುಡಿಯ ಒಟ್ಟು ಎತ್ತರ ಪ್ರತಿಮೆಯಿಂದ ಹತ್ತು ಮಡಿ ಅಥವಾ ಇಪ್ಪತ್ತು ಮಡಿ ಹೆಚ್ಚಿರಬಹುದು. ಅವುಗಳಲ್ಲಿ ಕೊನೆಯ ಶಿಖರವೊಂದು ಉರುಟಾಗಿ ಕಿರೀಟದಂತಿರಬೇಕು.

---

ಉತ್ತಮ, ಮಧ್ಯಮ, ಅಧಮ ಎಂದು ಮೂರು ತೆರನಾಗಿದೆ ಎಂದು ಛಲಾರೀಯ ದಲ್ಲಿಯೂ ಬರೆದಿದ್ದಾರೆ. ಅಗ್ನಿಪುರಾಣದಲ್ಲಿಯೂ ಇದರ ಉಲ್ಲೇಖವಿದೆ—

'ಕನಿಷ್ಠಂ ಮಧ್ಯಮಂ ಶ್ರೇಷ್ಠಂ ಕಾರಯಿತ್ವಾ ಹರೇರ್ಗೃಹಮ್ ।
ಸ್ವರ್ಗಂ ಚ ವೈಷ್ಣವಂ ಲೋಕಂ ಮೋಕ್ಷಮಾಪ್ನೋತಿ ಚ ಕ್ರಮಾತ್ ॥'

೧ 'ಶಿಖರಸ್ಯಾಂತರೇ=ವ್ಯವಧಾನೇ ಗಲೇನ ಕ್ರಿಯಮಾಣೇ ತು ।' (ಛಲಾ.)

೨ ಈ ಆಕಾರವು ಸಾಮಾನ್ಯವಾಗಿ ತಲೆಕೆಳಗಾಗಿರಿಸಿದ '∪' ಅಕ್ಷರದಂತಿದೆ. ಉಡು ಪಿಯ ಅನಂತೇಶ್ವರದ ಗುಡಿಯ ಆಕೃತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

೩ 'ವಿಮಾನಂ=ಗರ್ಭಗೃಹಮ್ ।' (ನಾರಾ.)

**ಸಭಯಾಽಪಿ ಸಮೇತಂ[1] ವಾ ಪೃಥಕ್[2]ಸಭಮಥಾಪಿ ವಾ[3] |**
**ದ್ವಿಸಭಂ ತ್ರಿಸಭಂ ವಾಽಪಿ ಸಗೋಪುರಮಥಾಪಿ ವಾ || ೪೯ ||**

ಗರ್ಭಗುಡಿಗೆ ತಾಗಿಕೊಂಡೆ ಮಂಟಪವನ್ನು ಕಟ್ಟಿಸಬಹುದು, ಪ್ರತ್ಯೇಕವಾಗಿ ಕಟ್ಟಿಸಿದರೂ ಸರಿಯೆ. ಮಂಟಪವನ್ನು ಶಕ್ತ್ಯನುಸಾರವಾಗಿ ಎರಡೋ ಮೂರೋ ಕಟ್ಟಿಸಲೂ ಬಹುದು. ಗರ್ಭಗುಡಿಗೆ ತಾಗಿಕೊಂಡೇ ಹೊರಬಾಗಿಲ(ಗೋಪುರ)ನ್ನೂ ಕಟ್ಟುವುದುಂಟು.

**ಪ್ರಾಕಾರವೃತ್ತಯುಕ್ತಂ ವಾ[4] ಸಪ್ತಪ್ರಾಕಾರಮೇವ[5] ವಾ[6] |**

ಗುಡಿಗೆ ಉರುಟಾದ ಒಂದು ಪ್ರಾಕಾರವಾಗಲಿ ಏಳು ಸುತ್ತಿನ ಗೋಡೆಯಾಗಲಿ ಇರಬೇಕು.

**ಸದ್ಮ[7] ವೃತ್ತಂ ಕಿಷ್ಕುಮಾತ್ರಂ[8] ಬಹಿರ್ವಾ[9] ಚತುರಸ್ರಕಮ್[10] ||೫೦||**

---

೧ 'ಗರ್ಭಗೃಹಪುರೋಭಾಗೇ ಕ್ರಿಯಾಮಾಣೋ ಮಂಡಪವಿಶೇಷಃ ಸಭೇತ್ಯುಚ್ಯತೇ |' (ನಾರಾ.)

೨ ಗರ್ಭಗುಡಿಗೆ ತಾಗಿಕೊಂಡೇ ಸಭೆಯಿರುವುದನ್ನೂ ಅನಂತೇಶ್ವರ ದೇವಾಲಯದಲ್ಲಿ ಕಾಣಬಹುದು. ಸಭೆಯನ್ನು ಪ್ರತ್ಯೇಕವಾಗಿ ಬಳಸುವುದೇ ಹೆಚ್ಚು ಬಳಕೆ. ಜಕಣಾಚಾರಿಯ ಪ್ರಖ್ಯಾತ ಶಿಲ್ಪಗಳಾದ ಬೇಲೂರು ಹಳೇಬೀಡಿನ ದೇವಾಲಯಗಳಲ್ಲಿಯೂ ಇದೇ ಪದ್ಧತಿಯನ್ನು ನಾವು ಕಾಣಬಹುದು.

೩ 'ಅಥಾಪಿವೇತಿ ನಿಪಾತಸಮುದಾಯೋಽನುಕ್ತಪಕ್ಷಾಂತರಸಮುಚ್ಚಯಾರ್ಥಃ | ಪರಂಪರಯಾ ಗೋಪುರಸಂಬದ್ಧಂ ವಿಮಾನಂ ವಾ ಕಾರ್ಯಮಿತ್ಯರ್ಥಃ ||' (ನಾರಾ.)

೪ 'ಪ್ರಾಕಾರವೃತ್ತಯುಕ್ತಂ ವೇತಿ, ವೃತ್ತಪ್ರಾಕಾರಯುಕ್ತಂ ವೇತ್ಯರ್ಥಃ | ವೇತ್ಯನೇನ ಚತುರಸ್ರಪ್ರಾಕಾರಯುಕ್ತಂ ವಾ ||' (ನಾರಾ.)

೫ 'ಏವಕಾರಃ ಅನೇಕಶಿಖರವಿಮಾನಪಕ್ಷೇ ಸಪ್ತಪ್ರಾಕಾರತ್ವಸ್ಯ ನಿಯಮಮಾಹ |' (ಭಲಾ.)

೬ 'ವಾಶಬ್ದೇನ ಪ್ರಾಕಾರತ್ರಯಪಕ್ಷಾದೇಃ ಸಂಗ್ರಹಃ |' (ನಾರಾ.)

೭ 'ಸಮವೃತ್ತಂ' ಎಂದು ಪ್ರಚಲಿತ ಪಾಠ.

೮ 'ಕಿಷ್ಕು' ಎನ್ನುವುದು ೪೨ ಅಂಗುಲದ ಒಂದು ಅಳತೆಯಾದರೂ, ಸಾಮಾನ್ಯವಾಗಿ ೨ ಮೊಳ ಎಂಬ ಅರ್ಥದಲ್ಲಿಯೂ ಅದನ್ನು ಬಳಸುತ್ತಾರೆ.

'ಹಸ್ತದ್ವಯಂ ಕಿಷ್ಕುರಿತಿ ಚ ಸಂಪ್ರದಾಯವಿದಃ |' (ನಾರಾ.)

೯ ಈ ವಾಕ್ಯ ಮುಖಮಂಟಪದ ಅಳತೆಯನ್ನೂ ಆಕಾರವನ್ನೂ ತಿಳಿಸುತ್ತದೆ ಎಂದು ನಾರಾಯಣೀಯದ ಪಕ್ಷ—

'ಕಿಷ್ಕುಮಾತ್ರಂ ವಿಸ್ತೃತಂ ಮಂಡಪಂ ಕುರ್ಯಾದಿತ್ಯರ್ಥಃ |' (ನಾರಾ.)

ಗುಡಿಯು ಹೊರಸುತ್ತಿನಲ್ಲಿ ೬ ಮೊಳದಷ್ಟು ಜಾಗಕ್ಕೆ ಉರುಟಾದ ಗೋಡೆ ಇರಬೇಕು. ಚಚ್ಚೌಕವಾಗಿದ್ದರೂ ತಪ್ಪಿಲ್ಲ.

**ತತಃ ಪರಂ ಕಿಷ್ಕುಮಾತ್ರಂ ಸಭಾಯಾ ಅಂತರಂ ಯದಿ ।**
**ತತಸ್ತಾವತ್ತ್ಯತೀಃ ಮಾಯಾಃ ಸಾರ್ಧಮೇವ ಹ್ಯುದಾಹೃತಮ್ ॥೬೧॥**

ಮುಖಮಂಟಪವನ್ನು ಗರ್ಭಗುಡಿಯಿಂದ ಬೇರೆಯಾಗಿ ರಚಿಸುವುದಿದ್ದರೆ— ಮೊದಲನೆಯ ಮಂಟಪ ಗುಡಿಯಿಂದ ೬ ಮೊಳ ದೂರವಾಗಿಯೂ, ಅದರಿಂದ ತನೆಯ ಮಂಟಪ ಇನ್ನೆರಡು ಮೊಳ ದೂರವಾಗಿಯೂ, ಅದರಿಂದ ೩ನೆಯ ಮಂಟಪ ೧॥ ಮೊಳ ದೂರವಾಗಿಯೂ ಇರಬೇಕು.

**ಕಿಷ್ಕುತ್ರಯಂ ಚ ಶಕ್ರಾದೇಃ ಸ್ಥಾನಂ ತದ್ವೃತ್ತಿತಃ ಸ್ಮೃತಮ್ ।**
**ತತಸ್ತು ಮಂಟಪಂ ಕುರ್ಯಾತ್ಪ್ರತಿಷ್ಠಾಯಾಃ[1] ಸುಲಕ್ಷಣಮ್ ॥೬೨॥**

ಗುಡಿಯ ಸುತ್ತಲೂ ೬ ಹಸ್ತ ಪರಿಮಾಣವುಳ್ಳ ಇಂದ್ರಾದಿಗಳ ಮಂಟಪ ವನ್ನು ರಚಿಸಬೇಕು. ಅನಂತರ ಮೂಲ ಪ್ರತಿಮೆಯನ್ನು ಪ್ರತಿಷ್ಠಿಸುವು ದಕ್ಕಾಗಿ ಲಕ್ಷಣವಾದ ಮಂಟಪವನ್ನು ರಚಿಸಬೇಕು.

## ವಾಸ್ತುಪುರುಷಪೂಜೆ

**ಪೂಜಯೇದ್ವಾಸ್ತುಪುರುಷನ್ಯೋಪರಿಸ್ಥಾಂಸ್ತು ಸರ್ವದಾ[2] ।**

---

ಈ ಪಕ್ಷವನ್ನು ಛಲಾರೀಯದಲ್ಲಿ ಅಸ್ವರಸವೆಂಬಂತೆ ಉಲ್ಲೇಖಿಸಿದ್ದಾರೆ—

'ಕಿಷ್ಕುಮಾತ್ರಂವಿಸ್ತೃತಂ ಮಂಡಪಂ ಕುರ್ಯಾದಿತ್ಯರ್ಥ ಇತ್ಯಾಹುಃ ।' (ಛಲಾ.)

೧ 'ಪ್ರತಿಷ್ಠಾಯಾಃ=ಪ್ರತಿಷ್ಠಾರ್ಥಮ್ ।' (ಸಾರಾ)

೨ ಗೃಹಪ್ರವೇಶ ಕೂಪತಟಾಕನಿರ್ಮಾಣ ಮುಂತಾದ ಯಾವ ಕಾರ್ಯದಲ್ಲೂ ಆದಿಯಲ್ಲಿ ವಾಸ್ತುಪೂಜೆ ವಿಹಿತವಾಗಿದೆ. ಇಲ್ಲದಿದ್ದರೆ ಕುಪಿತನಾದ ವಾಸ್ತು ನಮಗೆ ಕೇಡನ್ನು ತಂದಾನು ಎಂದು ಪ್ರಾಚೀನರ ಅಂಬೋಣವಿದೆ—

'ಸರ್ವಾನ್ ದೇವಾಂಸ್ತು ಕಾರ್ಯೇಷು ಪೂಜಯೇದ್ವಾಸ್ತುಸಂಸ್ಥಿತಾನ್ ।
ತೇನಾಸೌ ವರ್ತತೇ ನೋ ಚೇದುತ್ತಿಷ್ಠೇನ್ಮಾಧವಾಜ್ಞಯಾ ॥
ತತಶ್ಚ ತೇಷಾಂ ಯೇ ಪೂಜಾವಿಮುಖಾಸ್ತೈಃ ಕೃತಾನಿ ತು ।
ಸುಕೃತಾನಿ ಸಮಾದದ್ಯುರ್ದುಷ್ಕೃತಾನಿ ಚ ಕುರ್ವತೇ ॥
ತತಸ್ತೇಷಾಮರ್ಚನಂ ತು ಪ್ರತ್ಯಬ್ದಂ ಕುರ್ವತಾಂ ಸತಾಮ್ ।
ಶುಭಾನ್ಯೇವಾಶು ಜಾಯಂತೇ ನೈವಾಶುಭಕಥಾಪಿ ವಾ ॥' (ಕಾಪಿಲೇಯ)

**ದೇವಾನ್ ಬ್ರಹ್ಮಾದಿಕಾನ್ವಾಸ್ತುರ್ವರಾಹಸ್ಯ ಹರೇಃ ಸುತಃ[1]**
**ಪತಿತೋ ದೈವತೈರ್ಭೂಮೌ ಚತುರಸ್ರಾಕೃತಿಃ ಸ್ಥಿತಃ[2] ॥ ೬೩ ॥**

ಆ ಮೇಲೆ ವಾಸ್ತುಪುರುಷನ ಮೇಲಿರುವ ಬ್ರಹ್ಮಾದಿ ದೇವತೆಗಳನ್ನು ಪೂಜಿಸಬೇಕು. ವಾಸ್ತು ಎಂಬವನು ವರಾಹರೂಪಿಯಾದ ಶ್ರೀಹರಿಯ ಮಗನು. ದೇವತೆಗಳಿಂದ ಭೂಮಿಗೆ ತಳ್ಳಲ್ಪಟ್ಟವನಾಗಿ ಚತುಷ್ಕೋಣಾಕಾರನಾಗಿರುವನು.

---

೧ ವಾಸ್ತುಪುರುಷನ ಕಥೆ ಮತ್ತು ಪೂಜಾ ದೇವತೆಗಳು ಶೈವತಂತ್ರ ವೈಷ್ಣವತಂತ್ರಗಳಲ್ಲಿ ಭಿನ್ನಭಿನ್ನವಾಗಿವೆ. ವೈಷ್ಣವತಂತ್ರದ ರೀತ್ಯಾ ಆತ ವರಾಹರೂಪಿಯಾದ ಭಗವಂತನ ಪುತ್ರನಾದರೆ ಶೈವತಂತ್ರದ ಪದ್ಧತಿಯಂತೆ ಆತ ರುದ್ರನ ಮಗ. ರುದ್ರ ಅಂಧಕಾಸುರನೊಡನೆ ಕಾದುತ್ತಿದ್ದಾಗ ಅವನ ಮೈಯಿಂದ ಒಂದು ಹನಿ ಬೆವರು ತೊಟ್ಟಿಕ್ಕಿತಂತೆ. ಅದು ಭೂಮಿಯಲ್ಲಿ ಬಿದ್ದುದೇ ತಡ ಭೂತಾಕಾರವಾಗಿ ಜಗತ್ತನ್ನೆ ಕಬಳಿಸುವ ವಾಸ್ತುಪುರುಷನ ರೂಪು ತಾಳಿ ಪೀಡಿಸತೊಡಗಿತಂತೆ. ಆಗ ಅದನ್ನು ಬಲಾತ್ಕಾರದಿಂದ ಭೂಮಿಯಲ್ಲಿ ಒತ್ತಿಟ್ಟರು. ಆಗ ಅದು ಶಾಂತವಾಗಿ ಬಿದ್ದುಕೊಂಡಿತು. ಆದರೆ—ಎಲ್ಲರೂ ಪ್ರಾಸಾದಾದಿ ನಿರ್ಮಾಣಕಾಲದಲ್ಲಿ ಅದನ್ನು ಪೂಜಿಸುವಂತಾಗಲೆಂದು ದೇವತೆಗಳು ಅದಕ್ಕೆ ವರವಿತ್ತರು. ಇದು ಶೈವತಂತ್ರಗಳು ಹೇಳುವ ಕಥೆ—

'ಸಂಗ್ರಾಮೇಽಂಧಕರುದ್ರಯೋಶ್ಚ ಪತಿತಃ ಸ್ವೇದೋ ಮಹೇಶಾತ್ ಕ್ಷಿತೌ
ತಸ್ಮಾದ್ಭೂತಮಭೂಚ್ಚ ಭೀತಿಜನನಂ ದ್ಯಾವಾಪೃಥಿವ್ಯೋರ್ಮಹತ್ ।
ತದ್ದೇವೈಃ ಸಹಸಾ ನಿಗೃಹ್ಯ ನಿಹಿತಂ ಭೂಮಾವಧೋವಕ್ತ್ರಕಂ
ದೇವಾನಾಂ ವಚನಾಚ್ಚ ವಾಸ್ತುಪುರುಷಸ್ತೇನೈವ ಪೂಜ್ಯೋ ಬುಧೈಃ ॥'
(ವಾಸ್ತುರತ್ನಾವಲೀ)

'ಅಂಧಕಾಸುರಸಂಗ್ರಾಮೇ ಪುರಾ ಕ್ರುದ್ಧಸ್ಯ ಶೂಲಿನಃ ।
ಅಪತತ್ ಸ್ವೇದಪಾನೀಯಂ ಲಲಾಟಾತ್ ಭುವಿ ಭೀಷಣಮ್ ॥'

ಇನ್ನು ಕೆಲವೆಡೆ ಈತ ಕಶ್ಯಪನ ಮಗ ರಾಹುವಿನ ಸೋದರ ಎಂದೂ ಕಥೆಯಿದೆ—
'ಕಶ್ಯಪಸ್ಯ ಗೃಹಿಣೀ ತು ಸಂಹಿಕಾ ರಾಹುವಾಸ್ತುತನಯಾವಜೀಜನತ್ ।
ಪೂರ್ವಜೋ ಹರಿನಿಕೃತ್ತಕಂಧರೋ ದೈವತೈರವರಜೋ ನಿಪಾತಿತಃ ॥'

ಸಾತ್ತ್ವಿಕ ರಾಜಸಾದಿ ವಿಭಾಗಗಳಿಂದ ಪುರಾಣಗಳೂ ತಂತ್ರಗಳೂ ಒಂದೊಂದೆಡೆ ಒಂದೊಂದು ತೆರನಾಗಿ ಹೇಳುತ್ತಿರುವುದು ಸ್ಫುಟವಿದ್ದುದರಿಂದ ಸಾತ್ತ್ವಿಕರು ಇದರಿಂದ ಗಲಿಬಿಲಿಗೊಳ್ಳಲಾರರು. ಸಾತ್ತ್ವಿಕ ತಂತ್ರಗಳ ಪಂಥವನ್ನೆ ಅನುಸರಿಸಿ ಅವರು ಸಾಗುವರು.

೨ 'ದೇವೈಃ ಸ ವಾಸ್ತುಪುರುಷಃ ಸ್ಥಾಪಿತಶ್ಚತುರಸ್ರಕಃ ।' (ಕಾಪಿಲೇಯತಂತ್ರ)
'ಚತುರಸ್ರಾಕೃತಿಃ ಕಶ್ಚಿದಸುರಃ ಸರ್ವನಾಶಕಃ ।'
'ಜ್ಞೇಯಃ ಸ ವಾಸ್ತುಪುರುಷಶ್ಚತುರಸ್ರಸಂಸ್ಥಃ' (ಪ್ರಯೋಗಸಾರ)

**ಕೃತ್ವಾಽಷ್ಟಕಾಷ್ಟಕೋಷ್ಠಾನಿ¹ ಮಧ್ಯೇ ಬ್ರಹ್ಮಾ ಚತುಷ್ಟಯೇ ।**
**ಪೂಜ್ಯೋ ದ್ವಯೋ ದ್ವಯೋಃ ಶಕ್ರೋ ಯಮೋ ವರುಣ ಏವ ಚ ।**
**ಸೋಮಶ್ಚ ಪೂಜ್ಯಾಃ ಕೋಣೇಷು ವಹ್ನ್ಯಾದ್ಯಾಃ ಕೋಣದೇವತಾಃ ॥**

ಆ ಚತುರಸ್ರಾಕಾರವಾದ ವಾಸ್ತುಪೀಠದಲ್ಲಿ ಗೋಪೀಚಂದನಾದಿಗಳಿಂದ ಅಡ್ಡನೀಟವಾಗಿ ಗೀಟುಗಳನ್ನೆಳೆದು ೬೪ ಕೋಣೆಗಳನ್ನು ನಿರ್ಮಿಸಬೇಕು. ಅದರ ನಡುವಿನ ೪ ಕೋಣೆಗಳಲ್ಲಿ ಬ್ರಹ್ಮನನ್ನು ಪೂಜಿಸಬೇಕು. ಅದರ ಹೊರಮೈಯಲ್ಲಿ ಪೂರ್ವಾದಿ ದಿಕ್ಕಿನ ಎರಡೆರಡು ಕೋಣೆಗಳಲ್ಲಿ ಇಂದ್ರ, ಯಮ, ವರುಣ, ಸೋಮರನ್ನೂ, ಮೂಲೆಯ ಕೋಣೆಗಳಲ್ಲಿ ಅಗ್ನಿ, ನಿರ್ಋತಿ, ವಾಯು, ಈಶಾನರನ್ನೂ ಪೂಜಿಸಬೇಕು.

---

೧ ಎಂಟು ಕೋಣೆಗಳ ಒಂದು ಪಂಕ್ತಿಯನ್ನು 'ಅಷ್ಟಕ'ವೆಂದು ನಿರ್ದೇಶಿಸಿದ್ದಾರೆ. ಅಂಥ ೮ ಪಂಕ್ತಿಗಳು ಅಂದರೆ ೬೪ ಕೋಣೆಗಳುಳ್ಳ ಒಂದು ಚತುರಸ್ರವಾಗುವುದು.

'ತದುಕ್ತಂ ಹಯಶೀರ್ಷೇ—'ಚತುಃಷಷ್ಟಿಪದಂ ವಾಸ್ತು ಪ್ರಾಸಾದೇಷು ಪ್ರಶಸ್ಯತ' ಇತಿ । ಪ್ರಾಸಾದೇಷು ನೂತನವಿಮಾನಾದಿಕಾರ್ಯೇಷ್ವಿತ್ಯರ್ಥಃ ।' (ಛಲಾ.)

ವಾಸ್ತುಮಂಡಲವು ಬಹುವಿಧವಾಗಿದೆ ಗ್ರಾಮ, ರಾಜಮಂದಿರ ಮೊದಲಾದವುಗಳ ನಿರ್ಮಾಣದಲ್ಲಿ ೬೪ ಕೋಣೆಗಳ ವಾಸ್ತು. ಸಾಧಾರಣ ಮನೆಗಳಿಗೆಲ್ಲ ೮೧ ಕೋಣೆಗಳ ವಾಸ್ತು. ಜೀರ್ಣೋದ್ಧಾರಾದಿಗಳಿಗೆಲ್ಲ ೪೯ ಕೋಣೆಗಳ ವಾಸ್ತು. ಪ್ರಾಸಾದಾದಿಗಳಲ್ಲಿ ೧೦೦ ಕೋಣೆಗಳ ವಾಸ್ತು. ಕೂಪತಟಾಕಾದಿಗಳ ನಿರ್ಮಾಣದಲ್ಲಿ ೧೯೬ ಕೋಣೆಗಳ ವಾಸ್ತು.

'ಗ್ರಾಮೇ ಭೂಪತಿಮಂದಿರೇ ಚ ನಗರೇ ಪೂಜ್ಯಶ್ಚತುಷ್ಷಷ್ಟಿಕೈ-
ರೇಕಾಶೀತಿಪದ್ಯೈಃ ಸಮಸ್ತಭವನೇ, ಜೀರ್ಣೇ ನವಾಬ್ಧ್ಯಂಶಕೈಃ ।
ಪ್ರಾಸಾದೇ ತು ಶತಾಂಶಕೈಸ್ತು ಸಕಲೇ ಪೂಜ್ಯಸ್ತಥಾ ಮಂಡಪೇ,
ಕೂಪೇ ಷಣ್ಣವಚಂದ್ರಭಾಗಸಹಿತೇ ವಾಪ್ಯಾಂ ತಡಾಗೇ ವನೇ ॥'
(ವಾಸ್ತುರತ್ನಾವಲೀ)

ಇವುಗಳಲ್ಲಿ ೬೪ ಕೋಣೆಯ ವಾಸ್ತುವೇ ಪ್ರಶಸ್ತವಾಗಿದೆ. ಈ ವಾಸ್ತುಕೋಷ್ಠಗಳಲ್ಲಿ ಪೂಜಿಸುವ ದೇವತೆಗಳು— ಬೇರೆ ಬೇರೆ ತಂತ್ರಗಳಲ್ಲಿ ಬೇರೆ ಬೇರೆಯಾಗಿದ್ದಾರೆ. ಎಂತಲೇ ಗ್ರಂಥಾಂತರದಲ್ಲಿ ವಾಸ್ತುದೇವತೆಗಳ ಹೆಸರು ಅನ್ಯರೀತಿಯಾಗಿದೆ—

'ಬ್ರಹ್ಮಾ ವೇದಪದಸ್ತ್ತೇನ ನಮುಕಾ ದೇವಾರ್ಯಮಾದ್ಯಾ ಅಮೀ
ಕೋಣೇಷ್ವಷ್ಟೌ ದ್ವಿಪದಾಸ್ತಥಾಷ್ಟಮರುತಃ ಕೋಣಾರ್ಧಭಾಗಾದ್ಬಹಿಃ ।
ಶೇಷಾ ಏಕಪದಾಃ ಸುರಾಶ್ಚ ಕಥಿತಾ ವೇದರ್ತುಕೋಷ್ಠೇ ನವ
ಬ್ರಹ್ಮಾ ಷಟ್ಪದತೋಽರ್ಯಮಾದಿವಿಬುಧಾ ಈಶಾದಯಶ್ಚೈಕಶಃ ॥'
(ವಾಸ್ತುರಾಜವಲ್ಲಭ)

**ಪುನಸ್ತ್ರಯೋ ತ್ರಯೋ ಕಾಮಂ ಧಾತಾರಂ ಸವಿಧಾತೃಕಮ್ ।**
**ಸ್ಕಂದಂ ಚ ಪೂಜಯೇತ್ಕೋಣೇ ಸೂರ್ಯಂ ಚೈವ ವಿನಾಯಕಮ್ ।**
**ಕಾಲಂ ಕುಬೇರಂ ಚ ಬಹಿಃ ಪ್ರತ್ಯೇಕಂ ದಿಕ್ಷು ಪೂಜಯೇತ್[1] ॥೬೫॥**

ಅದರ ಹೊರವೃಯ ಕೋಣೆಗಳಲ್ಲಿ—ಈಶಾನ್ಯದ ಕೋಣೆ ಮತ್ತು ಅದರ ಒತ್ತಿನಲ್ಲಿರುವ ಇನ್ನೊಂದು ಕೋಣೆಯನ್ನು ಬಿಟ್ಟು ಉಳಿದ ಪೂರ್ವದ ಮೂರು ಕೋಣೆಗಳು, ಆಗ್ನೇಯದ ಮತ್ತು ಅದರ ಬಲದ ಕೋಣೆಗಳನ್ನು ಬಿಟ್ಟು ಉಳಿದ ದಕ್ಷಿಣದ ಮೂರು ಕೋಣೆಗಳು, ಹೀಗೆಯೇ ನೈಋತ್ಯ ವಾಯವ್ಯದ ಕೋಣೆಗಳನ್ನೂ ಅವುಗಳ ಬಲಭಾಗದ ಕೋಣೆಗಳನ್ನೂ ಬಿಟ್ಟು ಉಳಿದ ಪಶ್ಚಿಮದ ಮತ್ತು ಉತ್ತರದ ಮೂರು ಕೋಣೆಗಳು—ಹೀಗೆ ಪ್ರತಿ ದಿಕ್ಕಿನ ಮೂರು ಮೂರು ಕೋಣೆಗಳಲ್ಲಿ ಕಾಮ, ಧಾತೃ, ವಿಧಾತೃ ಈ ಮೂರು ದೇವತೆಗಳನ್ನು ಪೂಜಿಸಬೇಕು. ಈಶಾನ್ಯ, ಆಗ್ನೇಯ, ನೈಋತ್ಯ, ವಾಯವ್ಯದ ಕೋಣೆಗಳಲ್ಲಿ ಸ್ಕಂದನನ್ನೂ, ಅದರ ಒತ್ತಿನಲ್ಲಿ ತೆರವಾಗಿರುವ ನಾಲ್ಕು ಕೋಣೆಗಳಲ್ಲಿ ಕ್ರಮವಾಗಿ ಸೂರ್ಯ, ವಿನಾಯಕ, ಕಾಲ, ಕುಬೇರ—ಈ ದೇವತೆಗಳನ್ನೂ ಪೂಜಿಸಬೇಕು.

**ಹಾರಿಂ ಹರಿಂ ಗಭೀರಂ ಚ ಗಾಹನಂ ಗಹನಂ ಶುಭಮ್ ।**
**ತ್ರಾತಮಂಗಾರಕಂ ಚೈವ ಪೂರ್ವಸ್ಯಾಂ ದಿಶಿ ಪೂಜಯೇತ್ ॥ ೬೬ ॥**

ಅದರ ಹೊರವೃಯ ಕೊನೆಯ ಎಂಟು ಕೋಣೆಗಳಲ್ಲಿ— ಪೂರ್ವದಲ್ಲಿ ಕ್ರಮವಾಗಿ ಹಾರಿ, ಹರಿ, ಗಭೀರ, ಗಾಹನ, ಗಹನ, ಶುಭ, ತ್ರಾತ, ಅಂಗಾರಕ— ಈ ೮ ದೇವತೆಗಳನ್ನು ಪೂಜಿಸಬೇಕು.

**ದಾರಣಂ ವಿದರಿಂ ದೂತಂ ಪ್ರದ್ಯೋತಂ ದ್ಯೋತನಂ ಪರಿಮ್ ।**
**ಮೃತ್ಯುಂ ಶನೈಶ್ಚರಂ ಚೈವ ದಕ್ಷಿಣಸ್ಯಾಂ ಪ್ರಪೂಜಯೇತ್ ॥ ೬೭ ॥**

---

ಇವುಗಳಲ್ಲಿ ವೈಷ್ಣವ ಪದ್ಧತಿಯ ಶುದ್ಧರೂಪವನ್ನು ಮಾತ್ರ ಆಚಾರ್ಯರು ಉಲ್ಲೇಖಿಸಿದ್ದಾರೆ. ವಾಸ್ತುಪ್ರದೀಪ ಮೊದಲಾದ ಗ್ರಂಥಗಳಲ್ಲಿಯೂ ಬೇರೆ ತೆರನಾಗಿ ಪೂಜಾ ವಿಧಾನಗಳನ್ನು ಹೇಳಿದ್ದಾರೆ— ಮಾತ್ರವಲ್ಲದೆ ವಾಸ್ತುವಿನ ಆಕಾರದಲ್ಲಿಯೂ ಅವರು ಪಕ್ಷಾಂತರವನ್ನು ಸೂಚಿಸಿದ್ದಾರೆ ಚತುರಸ್ರಾಕಾರದ ವಾಸ್ತುಪುರುಷನಂತೆ—ತ್ರಿಕೋಣಾಕಾರದ—ವೃತ್ತಾಕಾರದ ವಾಸ್ತುಪುರುಷನನ್ನೂ ಪೂಜಿಸುವುದುಂಟೆಂದು ಆ ಗ್ರಂಥಗಳಲ್ಲಿ ಉಲ್ಲೇಖವಿದೆ.

೧ ಇಲ್ಲಿ ಪಕ್ಷಾಂತರಗಳಿದ್ದು— ಎಲ್ಲ ವ್ಯಾಖ್ಯಾತೃಗಳಿಗೂ ಸಮ್ಮತವಾದ ಅರ್ಥವನ್ನು ಮಾತ್ರ ಬಳಸಿಕೊಂಡಿದ್ದೇನೆ.

ತೆಂಕುಬದಿಯಲ್ಲಿ ವಾರಣ, ವಿಪರಿ, ದೂತ, ಪ್ರದ್ಯೋತ, ದ್ಯೋತನ, ದರಿ, ನೃತ್ಯು ಮತ್ತು ಕಸ್ತೃಕ್ಷರ— ಈ ೮ ದೇವತೆಗಳನ್ನು ಪೂಜಿಸಬೇಕು.

**ಪುಷ್ಕರಂ ಕ್ಷರಣಂ ಕ್ಷ್ಮಾರಿಂ ವಿಕ್ಷಣಂ ಕ್ಷ್ಮೋಭಣಂ ಕ್ಷಣಮ್ ।**
**ಚಾರ್ವಂಗಂ ಭಾರ್ಗವಂ ಚೈವ ಪಶ್ಚಿಮಸ್ಯಾಂ ಪ್ರಪೂಜಯೇತ್ ॥೩೮॥**

ಪಡುಬದಿಯಲ್ಲಿ ಪುಷ್ಕರ, ಕ್ಷರಣ, ಕ್ಷ್ಮಾರಿ, ವಿಕ್ಷಣ, ಕ್ಷ್ಮೋಭಣ, ಕ್ಷಣ, ಚಾರ್ವಂಗ, ಭಾರ್ಗವ— ಎಂಬ ೮ ದೇವತೆಗಳನ್ನು ಪೂಜಿಸಬೇಕು.

**ಚಾರಂ ವಿಚಾರಂ ಪ್ರಚರಂ ಸಂಚರಂ ಚಾರಣಂ ಚರಮ್ ।**
**ಬೃಹಸ್ಪತಿಂ ಬುಧಂ ಚೈವಾಪ್ಯುತ್ತರಸ್ಯಾಂ ಪ್ರಪೂಜಯೇತ್ ।**
**ಏವಮೇವ ವಿಮಾನಸ್ಯ ಕೃತೇಃ ಪ್ರಾಗಪಿ ಪೂಜಯೇತ್ ॥ ೩೯ ॥**

ಕೊನೆಯದಾಗಿ ಉತ್ತರಭಾಗದಲ್ಲಿ ಚಾರ, ವಿಚಾರ, ಪ್ರಚರ, ಸಂಚರ, ಚಾರಣ, ಚರ, ಬೃಹಸ್ಪತಿ, ಬುಧ ಈ ೮ ದೇವತೆಗಳನ್ನು ಆರಾಧಿಸಬೇಕು. ಇದೇ ರೀತಿಯಲ್ಲಿ ಗರ್ಭಗುಡಿಯನ್ನು ನಿರ್ಮಿಸುವ ಮೊದಲೂ ವಾಸ್ತುಪೂಜೆಯನ್ನು ಮಾಡಬೇಕು.[೧]

**ಸಪ್ತಪರ್ಣಮಯಂ[೨] ಸಾಧು ಕಾರಯೇನ್ಮಂಟಪಂ ತತಃ ।**

---

೧ ವಾಸ್ತುಪೂಜಾದೇವತೆಗಳ ಹೆಸರೂ ಈಗ ಮುದ್ರಿತವಾದ ಪುಸ್ತಕಗಳಲ್ಲಿ ಒಂದೊಂದರಲ್ಲಿ ಒಂದೊಂದು ತೆರನಾಗಿದೆ. ಅದಕ್ಕಾಗಿ ಶೋಧಿತವಾದ, ತಾಳೆಪುಸ್ತಕಗಳಲ್ಲಿ ಬರೆದಿಟ್ಟ ಪಾಠವನ್ನೇ ಇಲ್ಲಿ ಬಳಸಿಕೊಂಡಿದ್ದೇನೆ.

ಆಚಾರ್ಯರು ನಿರ್ದೇಶಿಸಿದಂತೆ ವಾಸ್ತುಮಂಡಲವನ್ನು ಎದುರು ಪುಟದಲ್ಲಿ ಕೊಡಲಾಗಿದೆ.

'ತತಃ ಪ್ರಾಸಾದಮಾಮಂತ್ರ್ಯ ವರ್ತಯೇದ್ವಾಸ್ತುಮಂಡಲಮ್ ।
ಕುರ್ಯಾತ್ಕೋಷ್ಠಚತುಃಷಷ್ಟಿಂ ಕ್ಷೇತ್ರೇ ವೇದಾಸ್ರಕೇ ಸಮೇ ॥'(ಅಗ್ನಿಪುರಾಣ)

೨ 'ಸಪ್ತಪರ್ಣ' ಎಂಬ ಪದವು ಯಾವ ಮರವನ್ನು ನಿರ್ದೇಶಿಸುತ್ತದೆ ಎಂಬ ವಿಷಯದಲ್ಲಿ ವ್ಯಾಖ್ಯಾಕಾರರು ಸಂದೇಹಗ್ರಸ್ತರಾಗಿದ್ದಾರೆ. ಛಲಾರಿಯದಲ್ಲಂತೂ 'ಸಪ್ತಪರ್ಣಃ=ತನ್ನಾಮಕೋ ವೃಕ್ಷವಿಶೇಷಃ' ಎಂದು ಬಹು ಸುಲಭವಾಗಿ ಉತ್ತರಿಸಿಬಿಟ್ಟಿದ್ದಾರೆ. ಆದರೆ ವೃಕ್ಷವಿಶೇಷದಿಂದ ಮಂಟಪ ಕಟ್ಟಬೇಕು ಎಂದರೆ ನಮಗೆ ಕಟ್ಟಬರುವಂತಿಲ್ಲ. ಯಾವುದು ಆ ವೃಕ್ಷವಿಶೇಷ? ಭೂರ್ಜವೃಕ್ಷವಿರಬೇಕು ಎಂದು ಕೆಲವರು. ಆದರೆ ಭೂರ್ಜವೃಕ್ಷಕ್ಕೆ 'ಸಪ್ತಪರ್ಣ' ಎಂದು ವ್ಯವಹಾರವಿದ್ದಂತಿಲ್ಲ. ಅಮರಕೋಶದಲ್ಲಿ ಇದರ ಕುರಿತು ಹೀಗೆ ಉಲ್ಲೇಖವಿದೆ—

'ಸಪ್ತಪರ್ಣೋ ವಿಶಾಲತ್ವಕ್ ಶಾರದೋ ವಿಷಮಚ್ಛದಃ ।'

**ಸಪ್ತಹಸ್ತಂ ದ್ವಿಷಡ್ಢಸ್ತಮಥವಾ ದ್ವಿಗುಣಂ ತತಃ ।**
**ಚತುರ್ಗುಣಂ ವಾ[1] ಸಮ್ಯಕ್ತು ಚತುರಸ್ರಂ ಸಹಾಜಿರಮ್[2] ॥ ೭೦ ॥**

ವಾಸ್ತುಪೂಜೆ ಮುಗಿದ ಬಳಿಕ ಸಪ್ತಪರ್ಣವೃಕ್ಷದಿಂದ ಸುಂದರವಾದ ಮಂಟಪವನ್ನು ಕಟ್ಟಿಸಬೇಕು. ಮಂಟಪದ ಪರಿಮಾಣ ೭ ಹಸ್ತ, ೧೨ ಹಸ್ತ, ೨೪ ಹಸ್ತ ಅಥವಾ ೪೮ ಹಸ್ತಗಳಷ್ಟಿರಬೇಕು. ಮಂಟಪವು ಸಮಚತುಷ್ಕೋಣವಾಗಿ ಹೊರಬದಿಯಲ್ಲಿ ಅಂಗಣದಿಂದ ಕೂಡಿರಬೇಕು.

---

ಈ ಕೋಶದ ಪ್ರಕಾರ 'ಸಪ್ತಪರ್ಣ'ವನ್ನೇ ಕನ್ನಡದಲ್ಲಿ 'ಏಳೆಲೆ ಬಾಳೆ' (ಪಾಲೆ) ಎಂದು ಕರೆಯುತ್ತಾರೆ. ಇದೇ ಇಲ್ಲಿ ವಿವಕ್ಷಿತವಾದ ಅರ್ಥವಿರಬೇಕೆಂದು ಊಹಿಸುವುದು ಪ್ರಾಮಾಣಿಕವಾಗಿದೆ. ಈ ಅರ್ಥಕ್ಕೆ ಸಂವಾದಿಯಾಗಿ ನಾರಾಯಣೀಯದಲ್ಲೂ ಒಂದು ಮಾತು ಬರುತ್ತದೆ—

'ಸಪ್ತಪರ್ಣಶಬ್ದೇನ ರಂಭಾವಿಶೇಷ ಉಚ್ಯತ ಇತ್ಯಾಹುಃ ।'

ಭೂರ್ಜವೃಕ್ಷ ಎಂಬ ವೃಕ್ಷವನ್ನು ಇಬ್ಬರು ವ್ಯಾಖ್ಯಾಕಾರರೂ ಅಸ್ಪರನ ವೃಕ್ಷವೆಂದೇ ಪರಿಗಣಿಸಿದಂತಿದೆ.

೧ ಉತ್ತಮ–ಮಧ್ಯಮ–ಅಧಮ ಎಂಬ ವಿಭಾಗವನ್ನಿಟ್ಟುಕೊಂಡು ಈ ಅಳತೆಯ ವ್ಯತ್ಯಾಸಗಳನ್ನು ಆಚಾರ್ಯರು ಉಲ್ಲೇಖಿಸಿದ್ದಾರೆ.

'ಅಲ್ಪೇಷು ಚಾಲ್ಪಾಸ್ತೇ ಯೋಜ್ಯಾ ಮಧ್ಯಮೇಷು ಚ ಮಧ್ಯಮಾಃ ।
ಉತ್ತಮೇಷೂತ್ತಮಾಃ ಕಾರ್ಯಾ ಮಂಟಪಾಃ ಸರ್ವಕರ್ಮಸು ॥' (ಪಂಚರಾತ್ರ)

೨ ಇಲ್ಲಿ **'ಸಭಾಜಿರಂ'** ಎಂದು ಪಾಠಾಂತರವೂ ಉಂಟು, ಈ ಪಕ್ಷದಲ್ಲಿ 'ಭಾಜಿರ' ಎಂಬ ಶಬ್ದಕ್ಕೆ ಇಬ್ಬರು ವ್ಯಾಖ್ಯಾಕಾರರು ಎರಡು ಅರ್ಥವನ್ನು ಬರೆದಿದ್ದಾರೆ ಮಂಟಪದ ಮಧ್ಯಭಾಗದಲ್ಲಿರತಕ್ಕ ಎತ್ತರವಾದ ವೇದಿಕೆಯೇ 'ಭಾಜಿರ' ಶಬ್ದದ ಅರ್ಥವೆಂದು ಛಲಾರೀಯದಲ್ಲಿದೆ—

'ಸಭಾಜಿರಮಿತಿ ಕ್ವಚಿತ್ಪಾಠಃ । ತತ್ರ ಮಂಡಪಾಂತಃ ಕಿಷ್ಕುಪರಿಮಿತ ಉನ್ನತಪ್ರದೇಶೋ ವೇದಿಕಾವಿಶೇಷೋ ಭಾಜಿರಶಬ್ದೇನೋಚ್ಯತ ಇತ್ಯಾಹುಃ ।' (ಛಲಾ.)

'ಭಾಜಿರ'ವೆಂದರೆ ವಿವರವೆಂದರ್ಥ ಮಂಟಪವು ಭಾಜಿರಗಳಿಂದ ಕೂಡಿರಬೇಕು. ಅರ್ಥಾತ್ ಜಾಲರಂಧ್ರಗಳಿಂದ ಕೂಡಿರಬೇಕು. ಇದು 'ನಾರಾಯಣೀಯ'ದ ಅರ್ಥ—

'ಸಭಾಜಿರಂ, ಭಾಜಿರಂ=ವಿವರಂ, ತೇನ ಸಹಿತಮ್ । ಜಾಲರಂಧ್ರಸಹಿತಮಿತ್ಯಾಹುಃ ।'

ಭಾಜಿರ ಶಬ್ದಕ್ಕೆ ವೇದಿಕೆಯೆಂದಾಗಲೀ ಜಾಲರಂಧ್ರವೆಂದಾಗಲೀ ಅರ್ಥ ಎನ್ನುವುದಕ್ಕೆ ಕೋಶಪ್ರಮಾಣವನ್ನು ಇಬ್ಬರೂ ಬರೆದಂತಿಲ್ಲ. ಈ ಕಾರಣದಿಂದಲೇ 'ಆಹುಃ' ಎಂದು ಅಸ್ವಾರಸ್ಯವನ್ನು ಅವರು ಸೂಚಿಸಿರಬಹುದೇನೋ! ಏನಿದ್ದರೂ– ಮೂಲಪುಸ್ತಕಗಳಲ್ಲಿ ದೊರೆವ ಪಾಠ **'ಸಹಾಜಿರಂ'** ಎಂದು. ಅದೇ ಸ್ವರಸವೂ ಸುಂದರವೂ ಆಗಿದೆ

**ಅನ್ಯಚ್ಚ ಮಂಟಪಂ ದೀರ್ಘಂ ಪಂಚಹಸ್ತಂ ತು ಕಾರಯೇತ್ ।**

ಎಂತಲೇ ಅವನ್ನೇ ಬಳಸಿಕೊಂಡಿದ್ದೇನೆ. ಪರಂಪರೆಯಿಂದ ನಡೆದುಬಂದ ಅರ್ಥ ಪದ್ಧತಿಯನ್ನು ಬಲ್ಲವರಿಗೂ, ತಂತ್ರಶಾಸ್ತ್ರದ ಕೂಲಂಕಷವಾದ ಅಧ್ಯಯನದಿಂದ ಪಕ್ವಮತಿಗಳಾದ ಸಂಪ್ರದಾಯಜ್ಞರಿಗೂ ಕೂಡ ಗಲಿಬಿಲಿಯನ್ನುಂಟುಮಾಡುವಷ್ಟು ಗಂಭೀರ ಗಹನಗಳಾದ ಆಚಾರ್ಯವಚನಗಳಿಗೆ ನಾವು ನಿಷ್ಪಷ್ಟ ಸ್ಫುಟವೂ ಪ್ರಸಿದ್ಧವೂ ಆದ ಅರ್ಥವನ್ನೇ ಬಳಸಿಕೊಳ್ಳುವುದು ಯುಕ್ತವಾಗಿದೆ.

೧ ಅಂಕುರಾರ್ಪಣೆಯ ಮಂಟಪದ ವಿಧಿಯನ್ನು ಈ ಪದ್ಯದಲ್ಲಿ ಹೇಳಿದ್ದಾರೆ. ಈ ಅಂಕುರಾರ್ಪಣೆಯನ್ನು ಮಧ್ಯಾಹ್ನದಲ್ಲಿ ಮಾಡಬೇಕು ಎಂದು ಒಂದು ಪಕ್ಷ—

**'ತತೋ ಮಧ್ಯಾಹ್ನವೇಲಾಯಾಮಾಚಾರ್ಯೋ ಋತ್ವಿಜೈಃ ಸಹ ।**

**ಶ್ನಾನಾದಿಕಂ ತತಃ ಕೃತ್ವಾ ಸ್ನಾನಂ ಕೃತ್ವಾ ತತಃ ಪರಮ್ ॥'**

ರಾತ್ರಿಯಲ್ಲಿ ಆಚರಿಸುವುದು ಎಂದು ಇನ್ನೊಂದು ಪಕ್ಷ—

**'ರಾತ್ರಾವಂಕುರಾರೋಪಣಂ ಕುರ್ಯಾದಿತಿ ಕೇಚಿತ್ ।'**

ಮೇಲಿನ ಎರಡು ವಾಕ್ಯಗಳನ್ನು ನೋಡಿಯಲ್ಲಿ ತಂತ್ರಸಾರಸಂಗ್ರಹದಂತೆ ನಡೆಸುವ ಅಂಕುರಾರ್ಪಣೆಯ ವಿಧಾನವನ್ನು ಬರೆದಿಟ್ಟ ಒಂದು ಪ್ರಾಚೀನ ಲಿಖಿತ ಪುಸ್ತಕದಿಂದ ಉದ್ಧರಿಸಿದ್ದೇನೆ ಮಂಡಲವನ್ನು ಬಿಡಿಸುವ ವಿಧಾನವನ್ನು ಆ ಪುಸ್ತಕದಲ್ಲಿ ಈ ರೀತಿ ಬರೆದಿದ್ದಾರೆ—

**'ಶಕ್ರಾದಿದಿಶಿ ಅಥವಾ ಉತ್ತರೇ ಕೃತದೀರ್ಘಚತುರಸ್ರಮಂಟಪೇ ದೀರ್ಘ-ಚತುರಸ್ರವೇದಿಕಾಯಾಂ ಪ್ರಾಗಾಯತಾನಿ ಪಂಚಸೂತ್ರಾಣಿ ದಕ್ಷಿಣೋತ್ತರಾಯತಾನಿ ಏಕಾದಶಸೂತ್ರಾಣಿ ಯಥಾ ಹಸ್ತಮಾತ್ರಾಣಿ ಸ್ಯುಸ್ತಥಾ ದದ್ಯಾತ್ । ಬಾಹ್ಯೇ ಸರ್ವತ್ರ ವೀಥೀಂ ಕೃತ್ವಾ ಪದಚತುಷ್ಟಯಂ ಮುಕ್ತ್ವಾ ಮಧ್ಯೇ ವೀಥೀಂ ಕುರ್ಯಾತ್ । ಏವಂ ಕೃತೇ ಹಸ್ತವಿಸ್ತೃತದ್ವಾದಶಕೋಷ್ಠಕಂ ಮಂಡಲಂ ಭವತಿ । ತತ್ರ ಪ್ರತಿಕೋಷ್ಠಂ ಸ್ವಸ್ತಿಕಾನಿ ಕೃತ್ವಾ 'ಅಗ್ನಿಕೋಣಾದಿಕಾನ್ ಗೃಹಾನ್...... ಪೀತರಕ್ತಸಿತಾಸಿತೈಃ ।'**

ಮಧ್ಯದಲ್ಲಿ ದಪ್ಪಗೆರೆಯಲ್ಲಿ ಸೂಚಿಸಿದ ಪ್ರತಿ ನಾಲ್ಕು ಮಂಡಲಗಳ ಸುತ್ತಲೂ ವೀಥಿಯನ್ನು ರಚಿಸಿದ್ದು ಕಾಣಬಹುದು. ಈ ೪೦ ಕೋಣೆಗಳು—ಸಮ ಚತುರಸ್ರವಾಗಿ ೧೨ ಅಂಗುಲ ವಿಸ್ತಾರವುಳ್ಳವುಗಳಾಗಿರಬೇಕು. ಈ ನಾಲ್ಕು ಕೋಣೆಗಳ ಗುಂಪನ್ನು ಕ್ರಮವಾಗಿ ನಾಲ್ಕು ಬಣ್ಣಗಳಿಂದ ಅಲಂಕರಿಸಬೇಕು. (ಪ್ರತಿಯೊಂದು ಕೋಣೆಗಳಲ್ಲಿ ಸ್ವಸ್ತಿಕೆಯನ್ನೂ ಬಿಡಿಸಬೇಕು.) ಬಣ್ಣಗಳಲ್ಲಿ ಆಗ್ನೇಯದ ಕೋಣೆಗೆ ಹಳದಿಯನ್ನೂ, ನೈಋತ್ಯದ ಕೋಣೆಗೆ ಕೆಂಪನ್ನೂ, ವಾಯುವ್ಯದ ಕೋಣೆಗೆ ಬಿಳಿಯನ್ನೂ, ಈಶಾನ್ಯದ ಕೋಣೆಗೆ ಕಪ್ಪನ್ನೂ ಬಳಿಯಬೇಕು. ವೀಥಿಗೆ ಹಸುರನ್ನು ಬಳಿಯಬೇಕು.

**'ಪದಾನಿ ರಂಜಯೇತ್ತಾನಿ ಶ್ವೇತಪೀತಾರುಣಾಸಿತೈಃ ।**

**ರಜೋಭಿಃ ಶ್ಯಾಮಲೇನಾಥ ವೀಥೀರಾಪೂರಯೇತ್ಸುಧೀಃ ॥'** (ಶಾರದಾತಿಲಕ)

**'ಶ್ಯಾಮಲೇನ=ಹರಿತೇನ'** (ಪದಾರ್ಥಾದರ್ಶ)

**'ಪೀತಾರಕ್ತಸಿತಾಸಿತಂ ಪ್ರತಿಪದಂ ವಹ್ನ್ಯಾದಿಶವಾಂತಕಮ್ ।'**

ಈ ವಾಕ್ಯದ ಪ್ರಕಾರ ಮಂಡಲದ ಆಕಾರ ಈ ತೆರನಾಗುವುದು—



‘ಪಂಚಹಸ್ತಂ’ ಎಂಬ ಮೂಲದ ಪದಕ್ಕೆ ೧೨೦ ಅಂಗುಲ ದೀರ್ಘವಾದ ಗೆರೆಯನ್ನು ಎಳೆಯಬೇಕು ಎಂದೂ ಅರ್ಥಮಾಡಬಹುದು. ೧೨ ಅಂಗುಲ ವಿಸ್ತಾರವುಳ್ಳ ೧೦ ಕೋಣೆಗಳನ್ನು ದಕ್ಷಿಣೋತ್ತರವಾಗಿ ರಚಿಸಬೇಕು ಎಂದಿರುವುದರಿಂದ ಈ ಆಕೃತಿಯೇ (೨೪×೧೦) ಇಲ್ಲಿ ವಿವಕ್ಷಿತವೆಂದು ತಿಳಿಯಬಹುದು.

ಆದರೆ ಮುಂದೆ ಆಚಾರ್ಯರು ‘ಹಸ್ತಮಾತ್ರಸುವಿಸ್ತೃತಂ’ ಎಂದು ಪ್ರತಿಯೊಂದು ಕೋಣೆಯ ವಿಸ್ತಾರವೂ ಹಸ್ತಪರಿಮಿತವಾಗಿರಬೇಕು ಎಂದು ಬರೆದಿದ್ದಾರೆ. ಇಲ್ಲಿ ಮಾತ್ರ ಹಸ್ತಶಬ್ದದಿಂದ ೨೪ ಅಂಗುಲದ ಆಕೃತಿಯನ್ನೇ ಇಟ್ಟುಕೊಳ್ಳಬೇಕೆಂದು ಕಾಣುತ್ತದೆ. ಇಲ್ಲದಿದ್ದರೆ ಅಡ್ಡವಾಗಿ ೧೦ ಕೋಣೆಗಳನ್ನು ಮಾಡುವ ಬಗೆಯೆಂತು? ಅಥವಾ ಉದ್ದನೆಯ ಗೆರೆಗಳನ್ನು ೨೪೦ ಅಂಗುಲ (೧೦ ಹಸ್ತ) ದೀರ್ಘವಾಗಿಯೇ ಬರೆಯಬೇಕು. ಛಲಾರೀಯದಲ್ಲಿ ಉದಾಹರಿಸಿದ ಶಾರದಾತಿಲಕದ ವಾಕ್ಯ ಮಾತ್ರ ೧೨ ಅಂಗುಲದ ಪಕ್ಷವನ್ನು ಸಮರ್ಥಿಸುತ್ತದೆ—

‘ಪಂಚಹಸ್ತಪ್ರಮಾಣಾನಿ ಪಂಚಸೂತ್ರಾಣಿ ಪಾತಯೇತ್ |
ಪ್ರಾಗಪರಾಯತಾನ್ಯೇಷಾಮಂತರಂ ದ್ವಾದಶಾಂಗುಲಮ್ ||’

ಇಲ್ಲಿ ಛಲಾರಿಯವರ ವ್ಯಾಖ್ಯಾನ ಸ್ವಲ್ಪ ತೊಡಕಾಗಿದೆ. ಅವರು ‘ದಕ್ಷಿಣೋತ್ತರದೀರ್ಘಾಣಿ ತದ್ವದೇವ ದಶಾರ್ಪಯೇತ್’ ಎಂಬ ಪ್ರಮಾಣವನ್ನುಲ್ಲೇಖಿಸಿ ೧೨೦ ಅಂಗುಲ ಉದ್ದವಾದ ನೀಟಾಗಿ ಎಳೆದ ಐದು ಗೆರೆಗಳಿಗೆ ಅಡ್ಡವಾಗಿ ೧೨ ಅಂಗುಲ ಅಂತರದಲ್ಲಿ ೧೦ ಗೀಟುಗಳನ್ನು ಎಳೆಯಬೇಕು ಎಂದು ಬರೆದಿದ್ದಾರೆ. ಅವರ ವಿವರಣೆಯೂ ಇದೇ ಮಾತನ್ನು ಪುಷ್ಟೀಕರಿಸುತ್ತದೆ—

‘ತದ್ವದೇವ ತೇಷು ಪಂಚಸೂತ್ರೇಷು ದಕ್ಷಿಣೋತ್ತರಸೂತ್ರಾಣಿ ದಕ್ಷಿಣೋತ್ತರದೀರ್ಘಾಣಿ ದಶಸೂತ್ರಾಣಿ ಸ್ಥಾಪಯೇತ್ |’

೧೨೦ ಅಂಗುಲದ ನೀಟಾದ ಗೆರೆಗಳಲ್ಲಿ ೧೨ ಅಂಗುಲ ಅಂತರಕ್ಕೆ ಒಂದರಂತೆ ಕೋಣೆಗಳನ್ನು ರಚಿಸುವುದಾದರೆ ೧೦ ಕೋಣೆಗಳನ್ನು ರಚಿಸಬಹುದು, ಅರ್ಥಾತ್ ೧೧ ಗೆರೆಗಳನ್ನೆಳೆಯಬೇಕಾಗುವುದು ಹೊರತು ೧೦ ಗೆರೆಗಳನ್ನಲ್ಲ—ಎಂದ ಮೇಲೆ ಗಣಿತದ ರೀತಿಯಿಂದ ಛಲಾರೀಯ ವ್ಯಾಖ್ಯಾನ ತಪ್ಪಿನ ಕೊಂಪೆಯಾಗಿದೆ.

ವೀಥೀನಿರ್ಮಾಣದ ವಿಷಯದಲ್ಲೂ ಅವರು ಇದೇ ರೀತಿಯ ತೊಡಕನ್ನು ತಂದಿತ್ತಿದ್ದಾರೆ. ‘ಪಂಕ್ತ್ಯೋರ್ವೀಥ್ಯಶ್ಚತಸ್ರೋಽಂತಶ್ಚತುಷ್ಕೋಭಯಪಾರ್ಶ್ವಯೋಃ | ವೀಥ್ಯೌ ದ್ವೇ ಚ’ ಎಂಬ ಆನುಪೂರ್ವಿಯ ಪ್ರಮಾಣವನ್ನುದಾಹರಿಸಿ ಅದಕ್ಕೆ ಕೆಳಗಿನಂತೆ ಅರ್ಥ ಬರೆದಿದ್ದಾರೆ—

ಏವಂ ಕೃತೇ ಸತಿ, ಅಂತಃ=ಮಧ್ಯೇ ಚತಸ್ರೋ ವೀಥ್ಯೋ ಭವಂತಿ | ಕೋಷ್ಠಚತುಷ್ಕೋಭಯಪಾರ್ಶ್ವಯೋರ್ದ್ವೇ ವೀಥ್ಯೌ ಭವತಃ |’

ನಡುವಿನ ನಾಲ್ಕು ಕೋಣೆಗಳು ಎಂಬ ಅರ್ಥದಲ್ಲಿ ಉಪಯೋಗಿಸಿದ ‘ಅಂತಶ್ಚತುಷ್ಕ’ ಎಂಬ ಶಬ್ದವನ್ನು ತಪ್ಪಾಗಿ ಛೇದಮಾಡಿ ‘ಅಂತಶ್ಚತಸ್ರೋ ವೀಥ್ಯಃ’ ಎಂದು

ಅನ್ವಯಿಸಿದ್ದಾರೆ! ಹೀಗೆ ಮಾಡಿಯಾದರೂ ಮೊತ್ತದಲ್ಲಿ ಅರ್ಥವೇನು? ಅವರ ಪಕ್ಷದಲ್ಲಿ ಅರ್ಥ ದುರ್ನಿರೂಪವಾಗಿಯೇ ಉಳಿಯುತ್ತದೆ. ಆ ಪ್ರಮಾಣವಾಕ್ಯದ ನಿಜವಾದ ಸಾರ ಈ ತೆರನಾಗಿದೆ—

'ಪಂಕ್ತ್ಯಾಂ ವೀಥೀಶ್ಚತಸ್ರೋಽಂತಶ್ಚತುಷ್ಕೋಽಭಯಪಾರ್ಶ್ವಯೋಃ |'
(ಶಾರದಾತಿಲಕ)

ಮಂಡಲದ ಹೊರವಲ್ಯದ ನಾಲ್ಕು ವೀಥಿಗಳನ್ನೂ—ಮಧ್ಯದ ಚತುಷ್ಕದ ಪಾರ್ಶ್ವದ ಎರಡು ವೀಥಿಗಳನ್ನೂ—ನಡುವಿನ ರೇಖೆಗಳನ್ನಳಿಸಿ ('ಪ್ರಮಾರ್ಜಯೇತ್') ಬಣ್ಣದಿಂದ ತುಂಬಬೇಕು ಎಂದು ಇದರ ತಾತ್ಪರ್ಯ. ಈ ತೆರನಾಗಿ ಬಿಡಿಸಿದರೆ ೮೩ನೇ ಪುಟದಲ್ಲಿ ಕೊಟ್ಟಿರುವಂಥ ಆಕಾರದ ಮಂಡಲವೇ ಆಗುವುದು 'ಶಾರದಾತಿಲಕ'ದ ವ್ಯಾಖ್ಯಾನದಲ್ಲಿ ರಾಘವ ಭಟ್ಟನೂ ಇದೇ ಅರ್ಥವನ್ನು ಬರೆದಿದ್ದಾನೆ—

'ಪಂಕ್ತ್ಯಾಂ ಚತಸ್ರೋ ವೀಥೀರ್ಮಾರ್ಜಯೇತ್ | ಬಾಹ್ಯ ಇತ್ಯರ್ಥಃ | ಅಂತರಿತಿ ವಕ್ಷ್ಯಮಾಣತ್ವಾತ್ | ಪೂರ್ವತಶ್ಚತುಷ್ಕೋಷ್ಠಾನೇಕಾಂ ವೀಥೀಂ, ಅಷ್ಟಕೋಷ್ಠಾಂ ದಕ್ಷಿಣವೀಥೀಂ, ಪುನಶ್ಚತುಷ್ಕೋಷ್ಠಾಂ ಪಶ್ಚಿಮವೀಥೀಂ, ಅಷ್ಟಕೋಷ್ಠಾಮುತ್ತರವೀಥೀಂ ಮಾರ್ಜಯೇತ್ | ತತೋಽಂತಶ್ಚತುಷ್ಕಸ್ಯ ಮಧ್ಯ-ಚತುಷ್ಕಸ್ಯೋಭಯೋಃ ಪಾರ್ಶ್ವಯೋಃ=ಪಾರ್ಶ್ವದ್ವಯೇ ದ್ವೇ ವೀಥ್ಯೌ ದ್ವಿದ್ವಿ-ಕೋಷ್ಠರೂಪೇ ಚ | ಅತ್ರ ಮಾರ್ಜಯೇದಿತ್ಯಸ್ಯಾನುಷಂಗಃ |' (ಪದಾರ್ಥಾದರ್ಶ)

ಇದನ್ನೆಲ್ಲ ಪರಾಮರ್ಶಿಸುವಾಗ ಇಲ್ಲಿ ವ್ಯಾಖ್ಯಾನಕಾರರು ತಮ್ಮ ಅಕೌಶಲವನ್ನು ಹೊರಗೆಡಹಿದ್ದಾರೆ ಎಂದೆನ್ನಬೇಕಾಗುವುದು. ಇಲ್ಲಿ ನಾರಾಯಣೀಯ ವ್ಯಾಖ್ಯಾನಕಾರರು ಬುದ್ಧಿವಂತಿಕೆಯ ಮೌನವನ್ನು ಬಳಸಿಕೊಂಡಿದ್ದಾರೆ.

ಅಂಕುರಾರ್ಪಣೆಯ ಕುರಿತು ಶಾರದಾತಿಲಕದ ಮೂರನೆಯ ಪಟಲದಲ್ಲಿರುವ ಶ್ಲೋಕಗಳ ಸರಿಯಾದ ಅನುಪೂರ್ವಿ ಕೆಳಗಿನಂತಿದೆ—

'ಮಂಡಪಸ್ಯೋತ್ತರೇ ಭಾಗೇ ಶಾಲಾಂ ಪೂರ್ವಾಪರಾಯತಾಮ್ |
ಗೂಢಾಂ ಕುರ್ಯಾತ್ತತಸ್ತಸ್ಯಾಂ ಮಂಡಲಂ ರಚಯೇತ್ಸುಧೀಃ ||
ಪಂಚಹಸ್ತಪ್ರಮಾಣಾನಿ ಪಂಚಸೂತ್ರಾಣಿ ಪಾತಯೇತ್ |
ಪೂರ್ವಾಪರಾಯತಾನ್ಯೇಷಾಮಂತರಂ ದ್ವಾದಶಾಂಗುಲಮ್ ||
ದಕ್ಷಿಣೋತ್ತರಸೂತ್ರಾಣಿ ತದ್ವದೇಕಾದಶಾರ್ಪಯೇತ್ |
ಪದಾನಿ ತತ್ರ ಜಾಯಂತೇ ಚತ್ವಾರಿಂಶತ್ಪ್ರಮಾರ್ಜಯೇತ್ ||
ಪಂಕ್ತ್ಯಾಂ ವೀಥೀಶ್ಚತಸ್ರೋಽಂತಶ್ಚತುಷ್ಕೋಽಭಯಪಾರ್ಶ್ವಯೋಃ |
ವೀಥ್ಯೌ ದ್ವೇ ಚ ಚತುಷ್ಕೋಷ್ಠತ್ರಯಮತ್ರಾವಶಿಷ್ಯತೇ ||'

'ಪ್ರಯೋಗಸಾರ'ದಲ್ಲಿಯೂ ಇದರ ಕುರಿತು ಉಲ್ಲೇಖವಿದೆ—

'ಪ್ರಸಾರ್ಯ ಸ್ಫೋಟಯೇತ್ಸೂತ್ರಂ ಯಥಾ ಯಾಮ್ಯೋತ್ತರಾಯತಮ್ |
ಪಂಚಹಸ್ತಪ್ರಮಾಣೇನ ದ್ವೇ ದ್ವೇ ಪಾರ್ಶ್ವೇ ಚ ಪಾತಯೇತ್ ||

**ತ್ರಿಚತುಷ್ಕೋಣಕಂ ತತ್ರ ಮಧ್ಯೇ ಪ್ರಾಗಾಯತಂ ಶುಭಮ್ ।**
**ಕಾರಯೇನ್ಮಂಡಲಂ ಸಾಧು ಹಸ್ತಮಾತ್ರಸುವಿಸ್ತೃತಮ್ ॥ ೭೧ ॥**

ಈ ಪ್ರಧಾನ ಮಂಟಪದ ಬಳಿಯಲ್ಲಿ ಅಂಕುರಾರ್ಪಣೆಗಾಗಿ ಇನ್ನೊಂದು ಮಂಟಪವನ್ನು ನಿರ್ಮಿಸಬೇಕು. ಅದು ೫ ಹಸ್ತ ದೀರ್ಘವಾಗಿರಬೇಕು. ಅದರ ಒಳಗಡೆ ಪೂರ್ವದಿಂದ ಪಶ್ಚಿಮಕ್ಕೆ (೧೨ ಅಂಗುಲ ವಿಸ್ತಾರವುಳ್ಳ) ಚತುರಸ್ರವಾದ ಬಣ್ಣಗಳಿಂದ ಅಲಂಕೃತವಾದ ೧೨ ಕೋಣೆಗಳುಳ್ಳ ಮಂಡಲವನ್ನು ರಚಿಸಬೇಕು.[1]

**ತತ್ರ ದ್ವಾದಶಪಾತ್ರಾಣಿ ಸ್ಥಾಪಯೇತ್ಪಾಲಿಕಾದಿಕಮ್[2] ।**
**ಪಾಲಿಕಾಸ್ತು ಚತುರ್ವಿಂಶತ್ಯಂಗುಲೋಚ್ಛ್ರಯಸಂಯುತಾಃ ॥ ೭೨ ॥**
**ಅಷ್ಟಾದಶಾಂಗುಲಶ್ಚೈವ ತಥಾ ಪಂಚಮುಖಾ ಇತಿ[3] ।**
**ದ್ವಾದಶಾಂಗುಲಕಾಶ್ಚೈವ ಶರಾವಾಃ ಪಶ್ಚಿಮಾನುಗಾಃ[4] ॥ ೭೩ ॥**

---

ತದ್ವತ್ಪೂರ್ವೋಕ್ತಮಾನೇನ ದ್ವಾದಶದ್ವಾದಶಾಂಗುಲೇ ।
ಪ್ರಾಕ್ಪ್ರತ್ಯಕ್ಚ ಸಮಂ ಪಶ್ಚಾತ್ ಸೂತ್ರಾಣ್ಯೇಕಾದಶ ಕ್ರಮಾತ್ ।
ಪಾತಯೇತ್ತಾಸು ರೇಖಾಸು ಪೂರ್ವಸೂತ್ರಾಂತರಾಂತರಮ್ ॥'

೧ ಅಂಕುರಾರ್ಪಣೆಯ ಕುರಿತು ವಿಶೇಷ ಟಿಪ್ಪಣಿಯನ್ನು ಪರಿಶಿಷ್ಟದಲ್ಲಿ ಕಾಣಬಹುದು.

೨ 'ಪಾಲಿಕಾದಿಕಂ=ಪಾಲಿಕಾದಿಕಾನಿ ದ್ವಾದಶಪಾತ್ರಾಣಿ ।' (ನಾರಾ.)

೩ 'ಪಂಚಮುಖಾ ಇತಿ ಖ್ಯಾತಾನಾಂ ಪಾತ್ರಾಣಾಮುಚ್ಛ್ರಯಸ್ತ್ವಷ್ಟಾದಶಾಂಗುಲಃ । ಅಷ್ಟಾದಶಾಂಗುಲಾಶ್ಚೈವೇತ್ಯಪಿ ಪಾಠಃ ।

೪ ದ್ವಾದಶಾಂಗುಲೋಚ್ಛ್ರಯಸಂಯುತಾಃ ಶರಾವಾಸ್ತು ಪಶ್ಚಿಮಮನುಗಚ್ಛಂತಿ । ಪೂರ್ವಮಧ್ಯಾಪರಾಸು ದಿಕ್ಷು ಕ್ರಮೇಣ ಪಾಲಿಕಾದೀನಾಂ ನಿಧಾನಮಿತ್ಯರ್ಥಃ ।

'ಸರ್ವಕರ್ಮಣಾಂ ಪ್ರಾಗುತ್ತರಸಂಸ್ಥತ್ವಾತ್ಪಾಲಿಕಾದಿಪಾತ್ರಸ್ಥಾಪನಸ್ಯಾಪಿ ಪ್ರಾಗುತ್ತರಸಂಸ್ಥತ್ವಭ್ರಾಂತಿಂ ವಾರಯಿತುಂ 'ಪಶ್ಚಿಮಾನುಗಾ' ಇತ್ಯುಕ್ತಮ್ ।'
(ಛಲಾ.)

'ಪಾಲಿಕಾಃ ಪೂರ್ವತೋ ಮಧ್ಯೇ ಘಟಿಕಾಃ ಪಶ್ಚಿಮೇ ತಥಾ ।
ಶರಾವಾಃ' (ಯೋಗದೀಪಿಕಾ)

ಆದರೆ ಶಾರದಾತಿಲಕದಲ್ಲಿ ವ್ಯತ್ಯಾಸವಾಗಿ ಹೇಳಲ್ಪಟ್ಟಿದೆ—

'ಪಾಲಿಕಾಃ ಪಂಚಮುಖ್ಯಶ್ಚ ಶರಾವಾಶ್ಚ ಚತುಃಕ್ರಮಾತ್ ।
ಸಗಂಧದರ್ಭಕೂರ್ಚೇಷು ಪಶ್ಚಿಮಾದಿ ನಿವೇಶಯೇತ್ ॥'

ಅವುಗಳಲ್ಲಿ ಪೂರ್ವದ ನಾಲ್ಕು ಕೋಣೆಗಳಲ್ಲಿ ಪಾಲಿಕೆಗಳು[೧], ಮಧ್ಯದ ಕೋಣೆಗಳಲ್ಲಿ ಪಂಚಮುಖಗಳು[೨], ಪಶ್ಚಿಮದ ಕೋಣೆಗಳಲ್ಲಿ ಶರಾವಗಳು[೩], ಹೀಗೆ ೧೨ ಕೋಣೆಗಳಲ್ಲಿ ೧೨ ಪಾತ್ರೆಗಳನ್ನು ಸ್ಥಾಪಿಸಬೇಕು. ಈ ಪಾತ್ರೆಗಳಲ್ಲಿ 'ಪಾಲಿಕೆ'ಗಳು ೨೪ ಅಂಗುಲ ಉನ್ನತಗಳಾಗಿಯೂ, 'ಪಂಚಮುಖ'ಗಳು ೧೮ ಅಂಗುಲ ಉನ್ನತಗಳಾಗಿಯೂ, 'ಶರಾವ'ಗಳು ೧೨ ಅಂಗುಲ ಉನ್ನತಗಳಾಗಿಯೂ ಇರಬೇಕು.[೪]

---

**'ಪಶ್ಚಿಮಚತುಷ್ಕೇ ಪಾಲಿಕಾಚತುಷ್ಟಯಮ್ | ಮಧ್ಯಮಚತುಷ್ಕೇ ಪಂಚಮುಖೀಚತುಷ್ಟಯಮ್ | ಪೂರ್ವಚತುಷ್ಕೇ ಶರಾವಚತುಷ್ಟಯಂ ನಿವೇಶಯೇತ್ |'** (ಪದಾರ್ಥಾದರ್ಶ)

ಈ ಪಕ್ಷದಲ್ಲಿ ಅಸಮ್ಮತಿಯನ್ನು ತೋರುವುದಕ್ಕಾಗಿಯೇ ಆಚಾರ್ಯರು **'ಪಶ್ಚಿಮಾನುಗಾಃ'** ಎಂದಿರಬಹುದೇನೋ.

೧ ತಪ್ಪಲೆಯಂಥ ಪಾತ್ರೆಯೇ ಸ್ವಲ್ಪ ಎತ್ತರವಾಗಿ ಪರಿಮಾಣದಲ್ಲಿ ದೊಡ್ಡದಾಗಿದ್ದರೆ ಅದನ್ನು 'ಪಾಲಿಕಾ' ಅಥವಾ 'ಪಾಲೀ' ಎಂದು ಕರೆಯುತ್ತಾರೆ.

**'ಸ್ಥೂಲಾನ್ಯುಚ್ಚಾನಿ ಶರಾವಾಣ್ಯೇವ ಪಾಲಿಕಾಶಬ್ದೇನೋಚ್ಯಂತೇ |'** (ಪದಾರ್ಥಾದರ್ಶ)

**'ಪಾಲೀ**=A pot, boiler.' (V. S. Apte)

೨ ಪಾಲಿಕೆಯಿಂದ ಸ್ವಲ್ಪ ಸಣ್ಣದಾಗಿದ್ದು—ನಾಲ್ಕು ಬದಿಯಲ್ಲಿ ಗಿಂಡಿಯ ಜೂಲಿಯಂಥ ಮುಖಗಳು, ಮಧ್ಯದಲ್ಲಿ ಒಂದು ಮುಖ—ಹೀಗೆ ಐದು ಮುಖಗಳುಳ್ಳ ಪಾತ್ರೆಯೇ ಪಂಚಮುಖ.

**'ಪಾಲಿಕಾ ಏವ ಕಿಂಚಿನ್ನೀಚಾಃ ಪಂಚಮುಖಯುಕ್ತಾಃ ಪಂಚಮುಖ್ಯ ಉಚ್ಯಂತೇ |'** (ಪದಾರ್ಥಾದರ್ಶ)

**'ಪರಿತೋ ಜೂಲಿಕಾರೂಪೇಣ ಚತ್ವಾರಿ ಮುಖಾನಿ ಮಧ್ಯೇ ಚೈಕಂ ಪ್ರಧಾನಮುಖಮಿತಿ ದ್ರಷ್ಟವ್ಯಮ್ |'** (ನಾರಾ.)

೩ **'ಶರಾವಃ–ವಂ = [ ಶರಂ = ದಧ್ಯಾದಿಸಾರಮವತಿ, ಅವ್–ಅಣ್** Tv. ] A Shallow dish, platter, an earthenware vessel, tray; **'ಮೋದಕಶರಾವಂ ಗೃಹೀತ್ವಾ'.** (V. S. Apte)

೪ ಈ ಪಾತ್ರೆಗಳ ಅಳತೆಗಳ ಕುರಿತು ಅನೇಕ ಪಕ್ಷಗಳಿವೆ ಅದರಲ್ಲಿ ಪ್ರಶಸ್ತ ಪಕ್ಷವನ್ನು ಮಾತ್ರ ಆಚಾರ್ಯರು ಉದಾಹರಿಸಿದ್ದಾರೆ. ಈ ಮೂರು ಪಾತ್ರೆಗಳು ಕ್ರಮವಾಗಿ ೧೬, ೧೨, ೮ ಅಂಗುಲ ಪರಿಮಾಣದವುಗಳಿರಬೇಕು ಎಂದೂ ಪ್ರಮಾಣವಿದೆ—

**'ಪಾತ್ರಾಣಿ ವಿವಿಧಾನ್ಯಾಹುರಂಕುರಾರ್ಪಣಕರ್ಮಸು |**
**ಪಾಲಿಕಾಃ ಪಂಚಮುಖ್ಯಶ್ಚ ಶರಾವಾಶ್ಚ ಚತುಃಕ್ರಮಾತ್ ||**

**ತತ್ರ ವಿಷ್ಣುಂ ಚತುರ್ಮೂರ್ತಿಂ ಪೂಜಯೇದ್ಭಕ್ತಿತಸ್ತ್ರಿಶಃ ।**
**ಸಪ್ತಧಾನ್ಯಾನಿ ತೇಷ್ವೇವ ಪೂರಯೇದಂಕುರಾರ್ಥತಃ ॥ ೭೪ ॥**

ಈ ಮೂರು ಚತುಷ್ಕಗಳಲ್ಲಿ– ಒಂದೊಂದರಲ್ಲಿ ಒಂದೊಂದರಂತೆ ಕ್ರಮವಾಗಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ– ಈ ೪ ಮೂರ್ತಿಗಳನ್ನು ಮೂರು ಬಾರಿ ಪೂಜಿಸಬೇಕು.[1] ಅನಂ

---

ಪ್ರೋಕ್ತಾಃ ಸ್ಯುಃ ಸರ್ವತಂತ್ರಜ್ಞೈರ್ಹರಿಬ್ರಹ್ಮಶಿವಾತ್ಮಕಾಃ ।
ವಿಸ್ತಾರಮುಚ್ಛ್ರಯಂ ಉನ್ನೇಯಃ ಷೋಡಶದ್ವಾದಶಾಷ್ಟಭಿಃ ॥
ಅಂಗುಲ್ಯೈಃ ಕ್ರಮಶಸ್ತಾನಿ' (ಶಾರದಾತಿಲಕ)

ಪಂಚಮುಖದ ಆಳತೆಯ ವಿವರಗಳನ್ನು 'ಮಹಾಕಪಿಲ ಪಂಚರಾತ್ರ'ದಲ್ಲಿ ಕಾಣಬಹುದು—

'ಭವೇತ್ಪಂಚಮುಖೀ ಚೈವಂ ಘಟಿಕಾ ಸರ್ವಕಾಮದಾ ।
ಚತುರಂಗುಲವಿಸ್ತಾರಾಣ್ಯಾಹುರ್ವಕ್ತ್ರಾಣಿ ಪಂಚ ವೈ ।
ಚತ್ವಾರಿ ಚ ಚತುರ್ದಿಕ್ಷು ಊರ್ಧ್ವಮೇಕಂ ಯಥಾವಿಧಿ ॥
ಘಟಿಕಾಯಾಮವಿಸ್ತಾರೋ ದ್ವಾದಶಾಂಗುಲ ಉಚ್ಯತೇ ।
ಆಚಾರ್ಯಾಃ ಕಥಯಂತ್ಯೇಕೇ ಷೋಡಶಾಂಗುಲಮೇವ ವಾ ॥'

ಶರಾವದ ತುದಿಬುಡಗಳ ವಿವರವೂ ಅದರಲ್ಲಿದೆ—

'ದ್ವಾದಶಾಂಗುಲವಿಸ್ತಾರಂ ಶರಾವಸ್ಯ ಮುಖಂ ಸ್ಮೃತಮ್ ।
ಚತುರಂಗುಲವಿಸ್ತಾರಮಧಸ್ತಾನ್ಮೂಲಮುಚ್ಯತೇ ॥'

ಈ ಪಾತ್ರೆಗಳನ್ನು ಲೋಹಗಳಿಂದಾಗಲಿ, ಮಣ್ಣಿನಿಂದಾಗಲಿ ಮಾಡಬಹುದು ಎಂದೂ ಉಲ್ಲೇಖವಿದೆ—

'ಘಟಾ ಹೈಮಾದಯೋ ಗ್ರಾಹ್ಯಾ ಮಾರ್ತ್ತಿಕಾ ವಾ ನವಾಃ ಶುಭಾಃ ।'
(ವಿಷ್ಣುಸಂ.)

'ಸಂಭವೇ ಕನಕರೂಪ್ಯತಾಮ್ರತೋ ಮಾರ್ತ್ತಿಕಾನ್ಯಭಿನವಾನ್ಯಥವಾ ಸ್ಯುಃ ।'

ಮಣ್ಣಿನವಾದರೆ ಹೊಸತಾಗಿ ಮಾಡಿಸಿದ್ದಿರಬೇಕು ಎನ್ನುವುದೊಂದು ವಿಶೇಷ. ಇವುಗಳ ಆಳತೆಯ ಕುರಿತು– ನಮ್ಮ ಅನುಕೂಲತೆ ನೋಡಿಕೊಂಡು ಚಿಕ್ಕದು ದೊಡ್ಡದು ಮಾಡಿಕೊಳ್ಳಬಹುದು ಎನ್ನುವಷ್ಟು ಔದಾರ್ಯವನ್ನು ತೋರಿದ್ದಾರೆ ತಂತ್ರಶಾಸ್ತ್ರಕಾರರು—

'ಯಥಾಸಂಭವಮಾನಂ ವಾ ಪಾಲಿಕಾದಿ ಸಮಾಚರೇತ್ ।'(ಸಿದ್ಧಾಂತಶೇಖರ)

೧ ಚತುರ್ಮೂರ್ತಿಗಳು ಎಂಬಲ್ಲಿ ಎರಡು ಪಕ್ಷವಿದೆ. ಕ್ರಮವಾಗಿ ವಾಸುದೇವಾದಿಗಳನ್ನು ಪೂಜಿಸುವುದು ಎಂದು ಒಂದು. ಈ ಪಕ್ಷ ಇಲ್ಲಿಯ ಪ್ರಾಚೀನ ಪೌರೋಹಿತ್ಯ

ತರ ಅಂಕುರೋತ್ಪಾದನೆಗಾಗಿ ಅವುಗಳಲ್ಲಿ ಸಪ್ತಧಾನ್ಯಗಳನ್ನು ತುಂಬ ಬೇಕು.[೧]

---

ಗ್ರಂಥಗಳಲ್ಲಿ ಕಂಡುಬರುತ್ತದೆ. ಪ್ರತ್ಯೇಕವಾಗಿ ಅನಿರುದ್ಧಾದಿಗಳನ್ನು ಪೂಜಿಸುವ ಪಕ್ಷ ನಾರಾಯಣೀಯ ಮತ್ತು ಫಲಾದೀಯಗಳಿಗೆ ಸಮ್ಮತವಾದುದು

'ಚತುರ್ಮೂರ್ತಿಂ=ಅನಿರುದ್ಧಾದಿಚತುರ್ಮೂರ್ತಿಮ್ |' (ನಾರಾ.)

'ಚತುರ್ಮೂರ್ತಿಂ=ಅನಿರುದ್ಧಪ್ರದ್ಯುಮ್ನಸಂಕರ್ಷಣವಾಸುದೇವಾಖ್ಯಚತೂ-ರೂಪಿಣಂ ಹರಿಮ್ |' (ಫಲಾ )

೧ ಆ ಪಾತ್ರೆಯಲ್ಲಿ ಮೊದಲಾಗಿ ಮಣ್ಣು, ಮಳಲು, ಬೆರಣಿಗಳನ್ನು ತುಂಬಿಸಿದ ನಂತರ ಧಾನ್ಯಗಳನ್ನು ತುಂಬಬೇಕು ಎಂದು ಪೌರೋಹಿತ್ಯ ಗ್ರಂಥಗಳ ಉಲ್ಲೇಖವಿದೆ—

'ಮೃದ್ವಾಲುಕಾಕರೀಷಾಣಿ "ಸ್ಯೋನಾ ಪೃಥಿವೀ"ತಿ ಮಂತ್ರೇಣೋತ್ತರತ್ತರ-ಮಾಪೂರ್ಯ. . .. |'

'ಕರೀಷವಾಲುಕಾಮೃದ್ಭಿಸ್ತಾನಿ ಪಾತ್ರಾಣಿ ಪೂರಯೇತ್ |' (ಶಾರದಾ.)

'ಮೃದ್ವಾಲುಕಾಕರೀಷೈಶ್ಚೋರ್ಧ್ವತಃ ಪಾತ್ರಾಣಿ ಪೂರಯೇತ್ |' (ಪ್ರಯೋಗಸಾರ)

ಸಪ್ತಧಾನ್ಯಗಳು ಈ ತೆರನಾಗಿವೆ—

'ಯವವ್ರೀಹಿಮುದ್ಗಶ್ಯಾಮಾಕಮಾಷತಿಲಸರ್ಷಪಾಃ ಸಪ್ತ ಧಾನ್ಯಾನಿ |'

ಜವೆಗೋಧಿ, ಭತ್ತ, ಹೆಸರು, ಸಾಮೆಯಕ್ಕಿ, ಉದ್ದು, ಎಳ್ಳು, ಸಾಸಿವೆ—ಇವು ಸಪ್ತಧಾನ್ಯಗಳು

ಸಪ್ತಧಾನ್ಯಗಳೇ ಆಗಬೇಕೆಂದಿಲ್ಲ. ಅನುಕೂಲತೆಗನುಗುಣವಾಗಿ ಹತ್ತೋ ಹನ್ನೆರಡೋ ಧಾನ್ಯಗಳನ್ನು ತುಂಬಹುದು ಅದರಿಂದಲೇ ಶಾರದಾತಿಲಕದಲ್ಲಿ ೧೦ ಧಾನ್ಯಗಳನ್ನೂ ಸಿದ್ಧಾಂತಶೇಖರದಲ್ಲಿ ೧೨ ಧಾನ್ಯಗಳನ್ನೂ ನಿರ್ದೇಶಿಸಿದ್ದಾರೆ ಅವುಗಳಲ್ಲಿ ಈ ಸಪ್ತಧಾನ್ಯಗಳು ಪ್ರಧಾನವಾಗಿವೆ

'ಶಾಲಿಶ್ಯಾಮಾಢಕೀಮುದ್ಗತಿಲನಿಷ್ಪಾವಸರ್ಷಪಾಃ |
ಕುಲತ್ಥಕಂಗುಮಾಷಾಶ್ಚ ಬೀಜಾನ್ಯಂಕುರಕರ್ಮಣಿ ||' (ಶಾರದಾ.)

ಭತ್ತ, ಸಾಮೆಯಕ್ಕಿ, ತೊಗರಿ, ಹೆಸರು, ಎಳ್ಳು, ಅವರೆ, ಸಾಸುವೆ, ಹುರುಳಿ, ನವಣೆ, ಉದ್ದು— ಇವು ದಶಧಾನ್ಯಗಳು.

'ಮುದ್ಗಾಢಕೀಯವನಿಷ್ಪಾವಸರ್ಷಪಾನ್ ಮಾಷಕಂಗುಕಾನ್ |
ತಿಲಶಾಲಿಶ್ಯಾಮರಾಜಮಾಷಾನ್ ಖಲ್ವಾಂಶ್ಚ ಸಾಧಯೇತ್ ||' (ಸಿದ್ಧಾಂತ.)

ಹೆಸರು, ತೊಗರಿ, ಜವೆ, ಅವರೆ, ಸಾಸುವೆ, ಉದ್ದು, ನವಣೆ, ಎಳ್ಳು, ಭತ್ತ, ಸಾಮೆಯಕ್ಕಿ, ಅಳಸಂಡೆ, ಕಡಲೆ— ಇವು ದ್ವಾದಶ ಧಾನ್ಯಗಳು.

['ಖಲ್ವಃ=ಚಣಕೇ' (ವಾಚಸ್ಪತ್ಯ)]

**ತತ್ರ ನಿತ್ಯಂ ಬಲಿಂ ದದ್ಯಾದ್ವಿಷ್ಣವೇ ದಶರಾತ್ರಕಮ್[೧] ।**
**ಬ್ರಹ್ಮಶಂಕರಗೀರ್ವಾಣಪಿತೃಗಂಧರ್ವಯಕ್ಷಕೈಃ ॥ ೭೫ ॥**

---

ಶಾರದಾತಿಲಕದಲ್ಲಿರುವ 'ನಿಷ್ಪಾವ' ಎಂಬ ಶಬ್ದಕ್ಕೆ ಅದರ ವ್ಯಾಖ್ಯಾನಕಾರನಾದ ರಾಘವಭಟ್ಟನು 'ರಾಜಮಾಷ' (ಅಳಸಂಡೆ) ಎಂಬ ಅರ್ಥವನ್ನು ಬರೆದಿದ್ದಾನೆ—

'ನಿಷ್ಪಾವಾಃ=ರಾಜಮಾಷಾಃ । ವಿಷ್ಣುಪುರಾಣಟೀಕಾಯಾಂ ಶ್ರೀಧರ್ಯಾಂ ತಥಾ ವ್ಯಾಖ್ಯಾತತ್ವಾತ್ ।'

ಆದರೆ ಸಿದ್ಧಾಂತಶೇಖರದ ಪದ್ಯದಲ್ಲಿ 'ನಿಷ್ಪಾವ'ವನ್ನೂ 'ರಾಜಮಾಷ'ವನ್ನೂ ಪ್ರತ್ಯೇಕವಾಗಿ ನಿರ್ದೇಶಿಸಿರುವುದರಿಂದ 'ನಿಷ್ಪಾವ' ಎಂದರೆ ಅವರೆ ಎಂಬ ಅರ್ಥವನ್ನು ಬರೆದಿದ್ದೇನೆ. 'ನಿಷ್ಪಾವ' ಎಂಬುದಕ್ಕೆ ಈ ಅರ್ಥವೇ ಕೋಶಗಳಲ್ಲಿ ಪ್ರಸಿದ್ಧವಾಗಿದೆ ಹೊರತು 'ರಾಜಮಾಷ' (ಅಳಸಂಡೆ)ವೆಂದಲ್ಲ.

'ಯವಮುದ್ಗತಿಲವ್ರೀಹಿಮಾಷಶಿಂಬಕುಲುತ್ಥಕಾನ್ ।
ಪ್ರಿಯಂಗುಸರ್ಷಪಶ್ಯಾಮರಾಜಮಾಷಾಢಕೀಯುತಾನ್ ।' (ವಿಷ್ಣುಸಂ)

ಶಿಂಬ=ಹುರುಳಿಯ ಒಂದು ಜಾತಿ. 'A kind of kidney been' (V. S. Apte)

೧ ಹತ್ತು ರಾತ್ರಿಗಳಷ್ಟು ಕಾಲ ಎನ್ನುವುದು ಉತ್ತಮಪಕ್ಷ. ೭, ೫, ೩ ದಿನಗಳ ಪಕ್ಷವೂ ಇದೆ. ಒಂದು ರಾತ್ರಿ ಪೂಜಿಸಿದರೂ ಸಾಕೆನ್ನುವ ಅನುಕೂಲಪಕ್ಷವೂ ಇದೆ—

'ಸಪ್ತಮಾನ್ನವಮಾದ್ವಾಪಿ ಪ್ರಾಗೇವ ಸ್ಯಾಚ್ಛುಭೇಽಹನಿ ।
ಪಂಚಮಾದ್ವಾಂಕುರಾರೋಪಃ' (ವಿಷ್ಣುಸಂ.)

'ಪ್ರಾಗೇವ ದೀಕ್ಷಾದಿವಸಾತ್ ಸಪ್ತಭಿರ್ವಿಧಿವದ್ದಿನೈಃ ।
ಸರ್ವಮಂಗಲಸಂಪತ್ತ್ಯೈ ವಿದಧ್ಯಾದಂಕುರಾರ್ಪಣಮ್ ॥' (ಶಾರದಾ.)

'ಪ್ರತಿಷ್ಠಾದಿವಸಾತ್ಪೂರ್ವಂ ನವಮೇ ಸಪ್ತಮೇ ದಿನೇ ।
ಪಂಚಮೇ ವಾ ತೃತೀಯೇ ವಾ ಸದ್ಯೋ ವಾ ಚಾಂಕುರಾರ್ಪಣಮ್ ॥'
(ಸಿದ್ಧಾಂತಶೇಖರ)

ಪ್ರತಿಷ್ಠಾದಿವಸವನ್ನು ಬಿಟ್ಟು ೯ ದಿನಗಳ ತನಕ ಅಂದರೆ– ಪ್ರತಿಷ್ಠಾದಿನವನ್ನು ಸೇರಿಸಿ ಹತ್ತುರಾತ್ರಿಯ ಪೂಜೆಯನ್ನು ಮಾಡಬೇಕು ಎಂದು ತಾತ್ಪರ್ಯವಾದರೆ ೯ ದಿನ ಎನ್ನುವ ಪ್ರಮಾಣವಾಕ್ಯಗಳಿಗೂ ೧೦ ದಿನ ಎನ್ನುವ ಆಚಾರ್ಯವಚನಕ್ಕೂ ವಿರೋಧ ವಿಲ್ಲವಾಗುವುದು. ಆದರಿಂದಲೇ ೭ ದಿನಗಳು ಎನ್ನುವ ಪಕ್ಷಕ್ಕೂ ರಾಘವಭಟ್ಟನು ತನ್ನ ಪದಾರ್ಥಾದರ್ಶದಲ್ಲಿ– ದೀಕ್ಷೆಯ ದಿನವೂ ಸೇರಿಸಿ ೮ ದಿನಗಳು ಎಂಬ ಅರ್ಥವನ್ನೇ ಬರೆದಿದ್ದಾನೆ—

'ದೀಕ್ಷಾದಿವಸಾತ್ಪ್ರಾಕ್ ಸಪ್ತಭಿರ್ದಿನೈಃ, ಏತೇನ ದೀಕ್ಷಾದಿನಮಷ್ಟಮಂ ಯಥಾ ಭವತಿ ತಥಾ ಕರ್ತವ್ಯಮಿತ್ಯುಕ್ತಮ್ ।'

**ಭೂತೈಶ್ಚ ಪಾಯಸೇನೈವ ತಥಾ ಪದ್ಮಾಕ್ಷತೈಸ್ತು ಚ ।**
**ಅನ್ನಾಪೂಪೇನ ಪುಷ್ಪಾನ್ನೈರನ್ನಲಾಜಾಕ್ಷತೈರಪಿ ।**
**ಸಕ್ತುಭಿಶ್ಚ ಕ್ರಮೇಣೈವ ದೇವಾಂತಂ ಪಾಯಸೇನ ವಾ ॥ ೭೬ ॥**

---

೧ ‘ಬ್ರಹ್ಮಣೇ ಪಂಕಜಾಕ್ಷತಮ್ ।
ಸಾಪೂಪಮನ್ನಂ ಶರ್ವಾಯ ವಿಷ್ಣವೇ ತು ಗುಡೌದನಮ್ ॥’ (ಶಾರದಾ.)

೨ ಇಲ್ಲಿ ಪಿತೃಗಳ ನೈವೇದ್ಯ ಅನ್ನವೆಂದಿದೆ. ಆದರೆ ಶಾರದಾತಿಲಕದಲ್ಲಿ ‘ಪಿತೃಭ್ಯಃ ಸತಿಲಾಸ್ತಂಡುಲಾಃ ಪರಿಕೀರ್ತಿತಾಃ ।’ ಎಂದಿದೆ. ವಿಷ್ಣುಸಂಹಿತೆಯಲ್ಲಿ ಕೂಡ ಇದೇ ರೀತಿಯಾಗಿ ಉಲ್ಲೇಖಿಸಿದೆ—

‘ದ್ವಿತೀಯಂ ಪೈತೃಕಂ ಚೈವ ದದ್ಯಾತ್ಸತಿಲತಂಡುಲಮ್ ।’

ಆದರಿಂದ ಇಲ್ಲಿ ‘ಅನ್ನಂ ಪಚತಿ’ ಇತ್ಯಾದಿ ಪ್ರಯೋಗಗಳಂತೆ ‘ಅನ್ನ’ಶಬ್ದದಿಂದ ‘ತಂಡುಲ’ವನ್ನೇ ಇಟ್ಟುಕೊಳ್ಳಬಹುದೇನೋ! ಉಪಲಕ್ಷಣವಾಗಿ ತಿಲವನ್ನೂ ಇಟ್ಟುಕೊಂಡರೆ– ಪಿತೃಗಳ ನೈವೇದ್ಯ= ಎಳ್ಳು ಮತ್ತು ಅಕ್ಕಿಕಾಳು.

ಯಕ್ಷರಿಗೆ ‘ಅಕ್ಷತೆ’ಯನ್ನು ನಿವೇದಿಸಬೇಕು ಎಂದಿಷ್ಟೇ ಆಚಾರ್ಯರು ಬರೆದಿದ್ದಾರೆ. ಶಾರದಾತಿಲಕದ ಪ್ರಕಾರ ‘ಕರಂಭ’ (ಮೊಸರು ಬೆರಸಿದ ಹುರಿಹಿಟ್ಟು) ಮತ್ತು ತೆಂಗಿನ ನೀರು– ಇವೂ ಯಕ್ಷರಿಗೆ ಆಹಾರ—

‘ಕರಂಭಲಾಜಾ ಯಕ್ಷೇಭ್ಯೋ ನಾರಿಕೇಲೋದಕಾನ್ವಿತಾಃ ।’ (ಶಾರದಾ.)

ಈ ವ್ಯತ್ಯಾಸಕ್ಕೆ ಕಾರಣ ಸ್ಪಷ್ಟವಾಗಿದೆ ವಿಷ್ಣುಸಂಹಿತೆಯಲ್ಲಾಗಲಿ ಶಾರದಾತಿಲಕದಲ್ಲಾಗಲಿ ಗಂಧರ್ವರಿಗೆ ಪ್ರತ್ಯೇಕ ಪೂಜೆಯನ್ನು ನಿರ್ದೇಶಿಸದೆ, ಯಕ್ಷರಿಗೂ–ಗಂಧರ್ವರಿಗೂ ಜತೆಯಾಗಿಯೇ ಪೂಜೆಯನ್ನು ವಿಧಿಸಿದ್ದಾರೆ. ಆಗ ಲಾಜವೂ ಯಕ್ಷರ ನೈವೇದ್ಯವಾಯಿತು. ಆದರೆ ಆಚಾರ್ಯರು ಗಂಧರ್ವರಿಗೆ ಪ್ರತ್ಯೇಕ ಪೂಜೆಯನ್ನು ವಿಧಿಸಿದ್ದಾರೆ. ಆಗ ಲಾಜ (ಅರಳು) ಗಂಧರ್ವರ ನೈವೇದ್ಯವಾಯಿತು. ಎಂತಲೇ ‘ಅಕ್ಷತ’ಗಳನ್ನು ಮಾತ್ರ ಯಕ್ಷನಿವೇದ್ಯವಾಗಿ ಆಚಾರ್ಯರು ಉಲ್ಲೇಖಿಸಿದ್ದಾರೆ. ಇಲ್ಲಿ ಕರಂಭಾದಿಗಳನ್ನು ಉಪಲಕ್ಷಣವಾಗಿಟ್ಟುಕೊಳ್ಳಬಹುದು.

೩ ಭೂತಗಳಿಗೆ ‘ಸಕ್ತು’ (ಹುರಿ ಹಿಟ್ಟು)ವನ್ನು ಸಮರ್ಪಿಸಬೇಕು ಎಂದು ಆಚಾರ್ಯರ ನಿರ್ದೇಶ. ಇಲ್ಲಿ ‘ಭೂತ’ ಪದದಿಂದ ಭೂತಬಲಿಯನ್ನೂ ನಾಗಬಲಿಯನ್ನೂ ಜತೆಯಾಗಿಯೇ ನಿರ್ದೇಶಿಸಿದ್ದಾರೆ. ಅವೆರಡರ ಆಹಾರವೂ ಒಂದೇ, ಎಂದ ಮೇಲೆ ಅವುಗಳ ಸಹ ಪೂಜೆ ಸುಕರವಾಗಿದೆ.

‘ಭೂತೇಭ್ಯಃ ಸ್ಯುರ್ಲಾಜತಿಲಹರಿದ್ರಾದಧಿಸಕ್ತವಃ ।
ಸಾನ್ನಾಃ’ (ಶಾರದಾ.)

‘ಸಲಾಜಂ ದಧಿಸಕ್ತುಕಮ್ ।
ಭೂತಕ್ರೂರಬಲಿಂ ದದ್ಯಾತ್ಪೂರ್ವಂ ಭೂತಪ್ರಹರ್ಷಣಮ್ ।’ (ವಿಷ್ಣುಸಂ.)

‘ಸಕ್ತುಪಿಷ್ಟಂ ಚ ನಾಗೇಭ್ಯಃ’ (ಶಾರದಾ.)

ಬಿತ್ತಿದ ಬೀಜ ಮೊಳೆಯೊಡೆವ ತನಕ ಹತ್ತು ದಿನಗಳಲ್ಲಿ ಪ್ರತಿದಿನವೂ ಅಲ್ಲಿ ಶ್ರೀಹರಿಗೆ ನೈವೇದ್ಯವನ್ನರ್ಪಿಸುತ್ತಿರಬೇಕು. ಜತೆಗೆ ಬ್ರಹ್ಮ, ರುದ್ರ, ಇತರ ದೇವತೆಗಳು, ಪಿತೃಗಳು, ಗಂಧರ್ವರು, ಯಕ್ಷರು, ಭೂತಗಳು– ಇವುಗಳಿಗೂ ಬಲಿಯನ್ನೀಯಬೇಕು. ಅದರಲ್ಲಿ ವಿಷ್ಣುವಿಗೆ ಪಾಯಸವನ್ನು ನೈವೇದ್ಯವಾಗಿ ಅರ್ಪಿಸಬೇಕು; ಬ್ರಹ್ಮನಿಗೆ ಅರ್ಪಿಸುವ ನೈವೇದ್ಯ ತಾವರೆ ಮತ್ತು ಅಕ್ಕಿಕಾಳು; ರುದ್ರನಿಗೆ ಅನ್ನ ಮತ್ತು ಅಪೂಪ; ದೇವತೆಗಳಿಗೆ ಅನ್ನ ಮತ್ತು ಪುಷ್ಪಗಳು; ಪಿತೃಗಳಿಗೆ ಅನ್ನ; ಗಂಧರ್ವರಿಗೆ ಅರಳು; ಯಕ್ಷರಿಗೆ ಅಕ್ಕಿಕಾಳು; ಭೂತಗಳಿಗೆ ಹುರಿದ ಹಿಟ್ಟು– ಇವೇ ನೈವೇದ್ಯಗಳು. ಅಥವಾ ವಿಷ್ಣು ಬ್ರಹ್ಮರುದ್ರಸಹಿತರಾದ ಎಲ್ಲ ದೇವತೆಗಳಿಗೂ ಪಾಯಸವನ್ನೇ ನಿವೇದಿಸಬಹುದು.[1]

---

ಇಲ್ಲಿ ಅನ್ನಲಾಜಾದಿಗಳನ್ನು ಪೂರ್ವದಿಂದ ಅನುವೃತ್ತಿ ಮಾಡಿಕೊಂಡು **‘ಅನ್ನ-ಲಾಜಾಕ್ಷತೈಃ ಸಕ್ತುಭಿಶ್ಚ’** ಎಂದು ಅರ್ಥ ವಿವರಿಸಿದರೆ ಎಲ್ಲ ನೈವೇದ್ಯಗಳನ್ನು ಆಚಾರ್ಯರು ಮೂಲದಲ್ಲಿಯೇ ಸೂಚಿಸಿದಂತಾಗುವುದು ಭೂತದ ನೈವೇದ್ಯಗಳಲ್ಲಿ ‘ಸಕ್ತು’ ಪ್ರಧಾನವಿದೆ ಎಂದೇ ಅದನ್ನು ಮಾತ್ರ ಪ್ರತ್ಯೇಕಿಸಿ ಆಚಾರ್ಯರು ನಿರ್ದೇಶಿಸಿದ್ದಾರೆ. ಉಳಿದವುಗಳನ್ನು ಯಥಾನುಕೂಲವಾಗಿ ನಿವೇದಿಸುವುದು ಬಿಡುವುದು ಸಂಭವಿಸಬಹುದು. ಆದರೆ ನಕ್ತುವಿನ ಮಟ್ಟಿಗೆ ಈ ಐಚ್ಛಿಕತೆಗೆ ಅವಕಾಶವಿಲ್ಲ ಅದರಿಂದ ಅದು ಭೂತಬಲಿಗಳಲ್ಲಿ ಪ್ರಧಾನವಾಗಿದೆ.

೧ **‘ದೇವಾಂತಂ ಪಾಯಸೇನ ವಾ’** ಎಂಬ ವಾಕ್ಯಕ್ಕೆ ಎರಡು ತೆರವಾಗಿ ವ್ಯಾಖ್ಯಾನ ಮಾಡಿದ್ದಾರೆ.

ದೇವತೆಗಳ ವರೆಗೆ– ಎಂದಾಗ ದೇವತೆಗಳನ್ನು ಬಿಟ್ಟು– ಬ್ರಹ್ಮ, ವಿಷ್ಣು, ರುದ್ರ ಈ ಮೂವರನ್ನೆ ಗ್ರಹಿಸಬೇಕು ಎಂದು ಛಲಾರೀಯಪಕ್ಷ ದೇವತೆಗಳೂ ಸೇರಿ ತ್ರಿಮೂರ್ತಿಗಳಿಗೂ ಎಲ್ಲ ದೇವತೆಗಳಿಗೂ ಪಾಯಸವೇ ನೈವೇದ್ಯವೆಂಬುದೇ ಮೂಲದ ಅರ್ಥ ಎಂದು ನಾರಾಯಣೀಯದ ಅರ್ಥ. ಈ ಅರ್ಥವನ್ನೇ ಮೂಲಾರ್ಥದಲ್ಲಿ ಬಳಸಿಕೊಂಡಿದ್ದೇನೆ

ಈ ಪಕ್ಷಾಂತರದಲ್ಲಿ ಛಲಾರೀಯದ ರೀತ್ಯಾ ಗಣಬಲಿಯಲ್ಲೂ ವ್ಯತ್ಯಾಸವಿದೆ. ದೇವತೆಗಳ ತನಕ ಪಾಯಸ, ದೇವತೆಗಳಿಗೆ ಪದ್ಮಾಕ್ಷತ, ಪಿತೃಗಳಿಗೆ ಅನ್ನಾಪೂಪ, ಗಂಧರ್ವರಿಗೆ ಪುಷ್ಪಾನ್ನ, ಯಕ್ಷರಿಗೆ ಅನ್ನಲಾಜಾಕ್ಷತ, ಭೂತಗಳಿಗೆ ಸಕ್ತು– ಇದು ಛಲಾರೀಯದ ಅರ್ಥಾಂತರ. ನಾರಾಯಣೀಯದ ರೀತ್ಯಾ ವಿಷ್ಣುವಿಗೆ ಪಾಯಸದ ನೈವೇದ್ಯ ಎನ್ನುವ ಪಕ್ಷದಲ್ಲೂ– ದೇವತೆಗಳ ವರೆಗೂ ಪಾಯಸ ನೈವೇದ್ಯ ಎನ್ನುವ ಪಕ್ಷದಲ್ಲೂ ಗಣಬಲಿಯಲ್ಲಿ ವ್ಯತ್ಯಾಸವಿಲ್ಲ.

## ಅಧಿವಾಸನವಿಧಿ

**ತದೈವ ಪ್ರತಿಮಾಯಾಶ್ಚ ಕಾರ್ಯೋಽಧಿವಾಸನಮ್[1] ।**
**ಪಂಚಗವ್ಯೇ ಸಪ್ತರಾತ್ರಂ ಕ್ಷಿಪ್ತ್ವಾ ಪುರುಷಸೂಕ್ತತಃ ॥ ೭೭ ॥**

ಅಂಕುರಾರ್ಪಣ ಕಾಲದಲ್ಲಿಯೇ— ಭಗವತ್ಪ್ರತಿಮೆಯನ್ನು ಪುರುಷಸೂಕ್ತದಿಂದ ಏಳು ದಿನಗಳ ವರೆಗೆ ಪಂಚಗವ್ಯದಲ್ಲಿ ಇಟ್ಟು ಅಧಿವಾಸನವನ್ನು ಮಾಡಿನಬೇಕು.

**ವೇದಾಂಶ್ಚ ಚತುರಃ ಸಮ್ಯಕ್ಪಾರಯೇಯುರ್ದ್ವಿಜೋತ್ತಮಾಃ[2] ।**
**ಪ್ರಾಚ್ಯಾದಿದ್ವಾರಗೌ ದ್ವೌ ದ್ವಾವೇಕೈಕಂ ತು ದಶಾವರಾಃ ।**
**ಯಥಾಲಬ್ಧಂ ಯಥಾವಿತ್ತಮಥವಾ ವಿಷ್ಣುತತ್ಪರಾಃ ॥ ೭೮ ॥**

---

೧ 'ಅಥ ವಕ್ಷ್ಯಾಮಿ ಸಂಕ್ಷೇಪಾದಧಿವಾಸನಮುತ್ತಮಮ್ ।
ಯದ್ಯೋಗಾಜ್ಜಾಯತೇಽರ್ಚಾಯಾಂ ಸದಾ ಸನ್ನಿಹಿತೋ ಹರಿಃ ॥' (ವಿಷ್ಣುಸಂ.)
'ಹರೇಃ ಸಾನ್ನಿಧ್ಯಕರಣಮಧಿವಾಸನಮುಚ್ಯತೇ ।' (ಅಗ್ನಿಪು)
ಅಧಿವಾಸ ಶಬ್ದಾರ್ಥವನ್ನು 'ಮಹಾಕಪಿಲಪಂಚರಾತ್ರ'ದಲ್ಲಿ ಕಾಣಬಹುದು—
'ವಸತೇರಧಿಪೂರ್ವಸ್ಯ ಭಾವೇ ಘಞ್ಪ್ರತ್ಯಯೇ ಕೃತೇ ।
ಅಧಿವಾಸ ಇತಿ ಹ್ಯೇಷ ಪ್ರಯೋಗಃ ಸಿದ್ಧಿಮೇತಿ ಚ ॥
ಗುರ್ವಾದಿಸಹಿತೋ ವಾಸೋ ರಾತ್ರೌ ನಿಯಮಪೂರ್ವಕಃ ।
ಸೋಽಸ್ಯಾರ್ಥೋ ಹಿ ನಿಪಾತಾನಾಮನೇಕಾರ್ಥತಯಾ ಮತಃ ॥'

ಘಞ್‌ಪ್ರತ್ಯಯದಿಂದ ನಿಷ್ಪನ್ನವಾದ ಅಧಿವಾಸಶಬ್ದದಿಂದ ಸಮಾನಾರ್ಥಕವಾದ, ಲ್ಯುಟ್‌ಪ್ರತ್ಯಯಾಂತವಾದ ಅಧಿವಾಸನ ಶಬ್ದವನ್ನು ಇಲ್ಲಿ ಬಳಸಿದ್ದಾರೆ. ಪಂಚರಾತ್ರದ ಮಾತು ಶಿಷ್ಯಾದಿಗಳ ಅಧಿವಾಸನವನ್ನು ವಿವರಿಸುತ್ತದೆ. ಇದೇ ತೆರನಾಗಿ ಪಂಚಗವ್ಯಾದಿಗಳಲ್ಲಿ ಭಗವತ್ಪ್ರತಿಮೆಯನ್ನು ನಿಕ್ಷೇಪಿಸಿ ಆಚರಿಸುವ ಸಂಸ್ಕಾರ ವಿಶೇಷವನ್ನೆ **'ಅಧಿವಾಸನ'** ವೆಂಬ ಪದದಿಂದ ಇಲ್ಲಿ ಬಳಸಿಕೊಂಡಿದ್ದಾರೆ

೨ 'ಜಪೇಯುಶ್ಚತುರೋ ವೇದಾನ್ ಚತುರ್ದ್ವಾರೇಷು ವೈಷ್ಣವಾಃ ।'

ಪೂರ್ವದ್ವಾರದಲ್ಲಿ ಋಗ್ವೇದವನ್ನೂ ದಕ್ಷಿಣದ್ವಾರದಲ್ಲಿ ಯಜುರ್ವೇದವನ್ನೂ ಪಶ್ಚಿಮದ್ವಾರದಲ್ಲಿ ಸಾಮವೇದವನ್ನೂ, ಉತ್ತರದ್ವಾರದಲ್ಲಿ ಅಥರ್ವವೇದವನ್ನೂ ಪಠಿಸಬೇಕೆಂದು ತಜ್ಞರ ಅಭಿಮತವಿದೆ ವೇದಘೋಷವನ್ನು ಮಾಡುವ ವಿಪ್ರರು ಶಾಸ್ತ್ರಪಂಡಿತರಿರಬೇಕು ಎಂದೂ ವಿಧಿಯಿದೆ—

'ಬಹ್ವೃಚೋಽಧ್ವರ್ಯವಶ್ಚೈವ ಛಂದೋಗಾಥರ್ವಣಾ ದ್ವಿಜಾಃ ।
ಧರ್ಮಶಾಸ್ತ್ರಾರ್ಥತತ್ತ್ವಜ್ಞಾ ದಿಕ್ಷು ಪಾರಾಯಣೇ ಸ್ಮೃತಾಃ ।
ಐತಿಹಾಸಿಕವಾಕ್ಯಾರ್ಥತತ್ತ್ವಜ್ಞಾ ಬ್ರಹ್ಮವಿತ್ತಮಾಃ ॥' (ವಿಷ್ಣುಸಂ.)

ನಾಲ್ಕು ದಿಕ್ಕುಗಳ ೪ ಬಾಗಿಲುಗಳಲ್ಲಿ ಒಂದೊಂದು ವೇದಕ್ಕೆ ಎರಡು ಮಂದಿಯಂತೆ ಎಂಟು ಬ್ರಾಹ್ಮಣರು, ಮಂತ್ರಗಳ ಪಠನೆಗಾಗಿ ದಕ್ಷಿಣದಲ್ಲಿ ಒಬ್ಬರು, ಪುರುಷಸೂಕ್ತ ಪಠನೆಗಾಗಿ ಮಂಟಪದಲ್ಲಿ ಒಬ್ಬರು– ಹೀಗೆ ಹತ್ತಕ್ಕೆ ಕಮ್ಮಿಯಿರದಷ್ಟು ವಿಪ್ರರಿಂದ ವೇದಮಂತ್ರಗಳನ್ನು ಹೇಳಿಸಬೇಕು. ಇವರೆಲ್ಲರೂ ವೈಷ್ಣವರೇ ಆಗಿರಬೇಕು. ಹತ್ತು ಮಂದಿ ವಿಪ್ರರೂ ದೊರೆಯದಂಥ ಸಂದರ್ಭವಲ್ಲಿ ದೊರೆತಷ್ಟು ವಿಪ್ರರಿಂದ, ಎಷ್ಟು ಜನ ಸುವಿಪ್ರರಿಂದ ಪಾರಾಯಣ ಮಾಡಿಸಲು ನಮ್ಮ ಆರ್ಥಿಕ ಬಲಕ್ಕೆ ಸಾಧ್ಯವೋ ಅಷ್ಟೇ ವಿಪ್ರರಿಂದ ಪಾರಾಯಣ ಮಾಡಿಸಿದರೂ ತಪ್ಪಿಲ್ಲ.

## ಪ್ರತಿಷ್ಠಾಂಗ ಕುಂಡನಿರ್ಮಾಣ–ಹೋಮವಿಧಿ

**ತ್ರಯೋದಶಾತ್ರ ಕುಂಡಾನಿ ಪರಿತಃ ಕಾರಯೇದ್ಬುಧಃ ।**
**ಉಕ್ತಲಕ್ಷಣಯುಕ್ತಾನಿ ಪ್ರಧಾನಂ ತ್ವಗ್ನಿಕೋಣಕೇ[೧] ।**
**ಸಾಕ್ಷಾತ್ತು ಕೋಣಕಾದ್ಧಸ್ತಮಾತ್ರಮಂತರತಃ ಸುಧೀಃ ॥ ೭೯ ॥**

ಮಂಟಪದ ಸುತ್ತಲೂ, ದಿಕ್ಕುಗಳಲ್ಲಿ ಎರಡು ವಿದಿಕ್ಕುಗಳಲ್ಲಿ ಒಂದರಂತೆ ೧೨ ಕುಂಡಗಳು ಮತ್ತು ಪ್ರಧಾನಕುಂಡ, ಸೇರಿ ೧೩ ಕುಂಡಗಳನ್ನು ಮಾಡಿಸಬೇಕು. ಕುಂಡಗಳ ಆಕೃತಿ ರೀತಿಗಳೆಲ್ಲ ೨ನೇ ಅಧ್ಯಾಯದಲ್ಲಿ ನಿರೂಪಿಸಿದಂತೆಯೆ ಇರಬೇಕು. ಪ್ರಧಾನ ಕುಂಡವನ್ನು ಆಗ್ನೇಯ ಕೋಣದಲ್ಲಿ– ಅಲ್ಲಿರುವ ಕುಂಡದಿಂದ ೨೪ ಅಂಗುಲ ದೂರದಲ್ಲಿ ರಚಿಸಬೇಕು.

**ಆಜ್ಯಾಹುತೀಸ್ತೇಷು ಕುರ್ಯಾತ್ಪ್ರತ್ಯೇಕಂ ಲಕ್ಷಸಂಖ್ಯಕಮ್ ।**
**ಪ್ರತ್ಯೇಕಮಯುತಂ ವಾಽಪಿ[೨] ಪ್ರಧಾನೇ ಲಕ್ಷಸಂಖ್ಯಕಮ್ ।**
**ಅರ್ಧಂ ತದರ್ಧಮಥವಾ ಮೂಲಮಂತ್ರೇಣ ಮಂತ್ರವಿತ್ ॥ ೮೦ ॥**

---

೧ ಒಳಬದಿಯಲ್ಲಿ ನಾಲ್ಕು ದಿಕ್ಕುಗಳಲ್ಲಿ ೪ ಕುಂಡ, ಒಂದು ಪ್ರಧಾನ ಕುಂಡ ಮತ್ತು ಹೊರಮೈಯಲ್ಲಿ ೮ ದಿಕ್ಕುಗಳಲ್ಲಿ ೮ ಕುಂಡಗಳು– ಹೀಗೆ ೧೩ ಕುಂಡಗಳು ಎಂದು ಒಂದು ಪಕ್ಷವನ್ನು ಛಲಾರೀಯದಲ್ಲಿ ಬರೆದಿದ್ದಾರೆ.

೨ ಸಹಸ್ರಹೋಮದ ಪಕ್ಷವೂ ಕೂಡ ಶಾಸ್ತ್ರದಲ್ಲಿ ವಿಹಿತವಾಗಿದೆ—

'ಲೌಕಿಕಂ ಚಾಗ್ನಿಮಾನೀಯ ಶರಾವೇಽಭಿನವೇ ತತಃ ।
ವೈಷ್ಣವೀಕರಣಂ ಕುರ್ಯಾತ್ ಸಂಸ್ಕೃತಂ ವಹ್ನಿಮಾನಯೇತ್ ।
ಅಷ್ಟಾಕ್ಷರೇಣ ಜುಹುಯಾದಾಜ್ಯಾಹುತಿಸಹಸ್ರಕಮ್ ॥' (ವಿಷ್ಣುಸಂ.)

ಹಯಶೀರ್ಷ ಪಂಚರಾತ್ರದಲ್ಲೂ ಇದರ ಸಂವಾದವನ್ನು ಕಾಣಬಹುದು—

ಆ ೧೩ ಕುಂಡಗಳಲ್ಲಿಯೂ ಪ್ರತ್ಯೇಕವಾಗಿ ಒಂದೊಂದು ಲಕ್ಷ ತಪ್ಪದ ಆಹುತಿಯನ್ನೀಯಬೇಕು. ಪ್ರಧಾನ ಕುಂಡದಲ್ಲಿ ಮಾತ್ರ ಲಕ್ಷ ಹೋಮವನ್ನು ಮಾಡಿ ಉಳಿದ ೧೨ ಕುಂಡಗಳಲ್ಲಿ ೧೦ ಸಹಸ್ರ ಆಹುತಿಯನ್ನಷ್ಟೆ ಕೊಡುವ ಪಕ್ಷವೂ ಉಂಟು. ಪ್ರಧಾನ ಕುಂಡದಲ್ಲಿ ಲಕ್ಷಹೋಮದ ಅನುಕೂಲ್ಯವಿಲ್ಲದಿದ್ದರೆ, ೫೦ ಸಹಸ್ರ ಆಹುತಿಗಳನ್ನೋ ೨೫ ಸಹಸ್ರ ಆಹುತಿಗಳನ್ನೋ ಈಯಬಹುದು. ಎಲ್ಲ ಹೋಮದಲ್ಲಿಯೂ ನಾರಾಯಣಾಷ್ಟಾಕ್ಷರಮಂತ್ರದಿಂದಲೇ ಆಹುತಿಯನ್ನೀಯಬೇಕು.

**ಪಂಚವಿಂಶತಿತತ್ತ್ವಾರ್ಥೇ ಪ್ರಧಾನೇ ಜುಹುಯಾತ್ಪರಃ ।**
**ಪ್ರತ್ಯೇಕಂ ತು ಸಹಸ್ರಂ ವಾ ಪ್ರತ್ಯೇಕಂ ಶತಮೇವ ವಾ ।**
**ಶತಂ ಪುರುಷಸೂಕ್ತೇನ ಗಾಯತ್ರ್ಯಾ ಚ ಸಹಸ್ರಕಮ್ ॥ ೮೧ ॥**

ಆ ಮೊದಲು ಪಂಚವಿಂಶತಿ ತತ್ತ್ವ[1]ಗಳ ದೇವತಾಪ್ರೀತಿಗಾಗಿ ಪ್ರಧಾನ ಕುಂಡದಲ್ಲಿ ಪ್ರತ್ಯೇಕವಾಗಿ ಒಬ್ಬೊಬ್ಬರಿಗೆ ಸಹಸ್ರ ಆಹುತಿಗಳನ್ನಾಗಲಿ, ನೂರು ಆಹುತಿಗಳನ್ನಾಗಲಿ ಈಯಬೇಕು. ಅದೂ ಅಲ್ಲದೆ ಪ್ರಧಾನ ಕುಂಡದಲ್ಲಿಯೆ ಪುರುಷಸೂಕ್ತದಿಂದ ನೂರು ಹೋಮಗಳನ್ನೂ ಗಾಯತ್ರಿಯಿಂದ ಸಹಸ್ರ ಹೋಮಗಳನ್ನೂ ಆಚರಿಸಬೇಕು.

---

'ಮೂಲಮಂತ್ರೇಣ ಜುಹುಯುಃ ಸ್ವಾಹಾಂತೇನ ಸುರೇಶ್ವರ ।
ಅಷ್ಟೋತ್ತರಸಹಸ್ರಂ ತು ಕುಂಡೇ ಕುಂಡೇ ಯಥಾವಿಧಿ ।
ಘೃತಹೋಮಮಿದಂ ಪ್ರೋಕ್ತಮ್'

೧ ಪಂಚವಿಂಶತಿ ತತ್ತ್ವಗಳನ್ನು ಆಚಾರ್ಯರೇ ಈ ಅಧ್ಯಾಯದ ಕೊನೆಯಲ್ಲಿ ಉಲ್ಲೇಖಿಸಿದ್ದಾರೆ—

'ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ ।
ದಶೇಂದ್ರಿಯಾಣಿ ಶಬ್ದಾದ್ಯಾ ಭೂತೇತಾಃ ಪಂಚವಿಂಶತಿಃ ॥'
'ದಶೇಂದ್ರಿಯಾಣಿ ಭೂತಾನಿ ಮನಸಾ ಸಹ ಷೋಡಶ ।
ವಿಕಾರಾಃ ಸ್ಯುಃ ಪ್ರಕೃತಯಃ ಪಂಚಭೂತಾನ್ಯಹಂಕೃತಿಃ ॥
ಅವ್ಯಕ್ತಂ ಮಹದಿತ್ಯಷ್ಟೌ ತನ್ಮಾತ್ರಾಶ್ಚ ಮಹಾನಪಿ ।
ಸಾಹಂಕಾರಾ ವಿಕೃತಯಃ ಸಪ್ತ ತತ್ತ್ವವಿದೋ ವಿದುಃ ॥' (ಶಾರದಾ.)
'ಚತುರ್ವಿಂಶತಿತತ್ತ್ವಾನಿ ಪ್ರಕೃತ್ಯಂತಾನಿ ಸಂಜಗುಃ ।'
'ತ್ರಯೋವಿಂಶತಿತತ್ತ್ವೇಭ್ಯಃ ಪರಾ ಪ್ರಕೃತಿರುಚ್ಯತೇ ।
ಪ್ರಕೃತೇಸ್ತು ಪರಂ ಪ್ರಾಹುಃ ಪುರುಷಂ ಪಂಚವಿಂಶಕಮ್ ॥' (ವಾಯವೀಯ.)

**ಕೃತ್ವಾ ಜಲಾಧಿವಾಸಂ ಚ ಪೂರ್ವಂ ವಾ ಪಂಚಗವ್ಯತಃ ।**
**ಚಕ್ರಾಬ್ಜಂ ಭದ್ರಕಂ ವಾಽಪಿ ಮಂಟಪೇ[1] ಮಂಡಲಂ ಶುಭಮ್[2] ॥**

ಪಂಚಗವ್ಯಾಧಿವಾಸನವ ಮೊದಲಾಗಲಿ ಅನಂತರವಾಗಲಿ ಜಲಾಧಿವಾಸನವನ್ನು ಮಾಡಿಸಿದ ನಂತರ ಪ್ರತಿಷ್ಠಾಮಂಟಪದಲ್ಲಿ ಸುಂದರವಾದ ಚಕ್ರಾಬ್ಜ ಮಂಡಲವನ್ನಾಗಲಿ ಭದ್ರಕಮಂಡಲವನ್ನಾಗಲಿ ರಚಿಸಬೇಕು.

## ಚಕ್ರಾಬ್ಜಮಂಡಲ–ಭದ್ರಕಮಂಡಲ

**ಪದ್ಮಂ ವೃತ್ತತ್ರಯಂ ಚಕ್ರಂ ರಾಶಯೋ ವೀಥಿಕಾಸ್ತಥಾ ।**
**ಶೋಭೋಪಶೋಭಿಕಾಶ್ಚೈವ ಚಕ್ರಾಬ್ಜಸ್ಯ ತು ಲಕ್ಷಣಮ್ ।**
**ಚತುರಸ್ರಂ ವಿನಾ ಚಕ್ರಂ ವಿಶೇಷೋ ಭದ್ರಕೇ ಸ್ಮೃತಃ ॥ ೮೩ ॥**

ಮೊದಲು ಪದ್ಮ, ಆ ಮೇಲೆ ಮೂರು ವೃತ್ತರೇಖೆಗಳುಳ್ಳ ಚಕ್ರ, ರಾಶಿಗಳು, ವೀಥಿಗಳು, ಶೋಭೆ ಮತ್ತು ಉಪಶೋಭೆಗಳು ಇವನ್ನು ಬಿಡಿಸಿದರೆ ಚಕ್ರಾಬ್ಜವಾಗುವುದು. ಚಕ್ರವನ್ನುಳಿದು, ವೃತ್ತದ ಬದಲು ಚತುರಸ್ರವನ್ನು ಬಿಡಿಸಿದರೆ ಅದು ಭದ್ರಕಮಂಡಲವಾಗುವುದು.[3]

**ಸಹಸ್ರಮರ್ಧಂ ಪಾದಂ ವಾ ಕಲಶಾಂಸ್ತತ್ರ ಪೂರಯೇತ್ ।**
**ಶತಂ ತದರ್ಧಂ ಪಾದಂ ವಾ ವಿತ್ತಾಭಾವೇ ನಿಗದ್ಯತೇ[4] ॥ ೮೪ ॥**

ಆ ಮಂಡಲದಲ್ಲಿ ಸಹಸ್ರ, ಐನೂರು ಅಥವಾ ೨೫೦ ಕಲಶಗಳನ್ನು ತುಂಬಬೇಕು. ಅಷ್ಟು ಕಲಶಗಳನ್ನು ಕೊಳ್ಳುವಷ್ಟು ಸಂಪತ್ತಿಯಿಲ್ಲವಾದರೆ ನೂರೋ, ಐವತ್ತೋ ಕಲಶಗಳನ್ನು ಕೊನೆಗೆ ೨೫ ಕಲಶಗಳನ್ನಾದರೂ ತುಂಬಬೇಕು.

---

೧ 'ಮಂಟಪೇ=ಪ್ರತಿಮಾಮಂಟಪೇ' (ನಾರಾ.)
'ಮಂಟಪೇ=ಪ್ರತಿಷ್ಠಾಮಂಟಪೇ' (ಛಲಾ)

೨ 'ಚಕ್ರಾಬ್ಜಂ ಭದ್ರಕಂ ವಾಽಪಿ ಮಂಡಲಂ ಕುರ್ಯಾದಿತಿ ಶೇಷಃ' (ನಾರಾ.)
'ಶುಭಂ=ದೃಷ್ಟಿಪ್ರಿಯಂ ಮಂಡಲಂ ಕುರ್ಯಾದಿತಿ ಶೇಷಃ' (ಛಲಾ.)

೩ ಈ ಮಂಡಲಗಳ ಎಲ್ಲ ವಿವರಗಳನ್ನೂ, ಮಂಡಲವನ್ನು ಬಿಡಿಸುವ ವಿಧಾನವನ್ನೂ ಪರಿಶಿಷ್ಟದಲ್ಲಿ ಕಾಣಬಹುದು.

೪ 'ಕಲಶಾನಾಂ ಸಹಸ್ರೇಣ ತದರ್ಧೇನ ತದರ್ಧತಃ ।
ಶತೇನ ವಾ ತದರ್ಧೇನ ದೇವಂ ಸಂಸ್ನಾಪಯೇದ್ಗುರುಃ ।
ಚತುರ್ಭಿರಥವಾ ಕುರ್ಯಾದ್ಘಟಾನಾಮಲ್ಪವಿತ್ತವಾನ್ ।' (ಸಿದ್ಧಾಂತಶೇ.)
ಇಲ್ಲಿ ಹೇಳಿರತಕ್ಕ ಎಲ್ಲಾ ಪಕ್ಷಗಳಲ್ಲೂ ಒಂದು ಕಲಶವನ್ನು ಸೇರಿಸಿಕೊಂಡು

ರಹಿತವಾಗಿ ಬಿಡಿಸುವ ಪದ್ಧತಿಯನ್ನು ಕಾಣಬಹುದು. ರಾಶಿಗಳ ಮಾತೂ ಹಾಗೆ. ಆಚಾರ್ಯರು "ರಾಶಯಃ" ಎಂದಿಷ್ಟೇ ಬರೆದಿದ್ದಾರೆ. ಪುರೋಹಿತರು ರಾಶಿಗಳಿಗೆ ಪ್ರತಿನಿಧಿಗಳಾಗಿ ಬಣ್ಣಗಳನ್ನು ತುಂಬುತ್ತಾರೆ. ವ್ಯಾಖ್ಯಾನಕಾರರು ರಾಶಿದೇವತೆಗಳ ಚಿತ್ರವನ್ನು ಬಿಡಿಸಬೇಕು ಎಂದು ಬರೆದಿದ್ದಾರೆ. ಅದರಿಂದಲೇ ನಾವು ಮಂಡಲದಲ್ಲಿ ರಾಶಿಚಿತ್ರಗಳನ್ನೆ ಬಳಸಿಕೊಂಡಿದ್ದೇವೆ. ಅರ್ಥಾತ್ ಶಾಸ್ತ್ರೀಯವಾಗಿ ಪುರೋಹಿತನೆಂದರೆ ಬರಿಯ ಮಂತ್ರಗಳ ಗಿಳಿಪಾಠ ಮಾಡುವವನಲ್ಲ– ಆತ ಉತ್ತಮ ಕಲಾವಿದನೂ ಆಗಿರಬೇಕು. ಕಲೆಗೆ ನಮ್ಮ ಶಾಸ್ತ್ರಕಾರರು ಕೊಟ್ಟ ಪ್ರಾಧಾನ್ಯವನ್ನು ಇದರಿಂದ ಅರಿತುಕೊಳ್ಳಬಹುದು. ಇಲ್ಲಿನ ರಾಶಿಸ್ವರೂಪಗಳನ್ನು ಬೃಹಜ್ಜಾತಕದ ಆಧಾರದ ಮೇಲೆ ಚಿತ್ರಿಸಲಾಗಿದೆ. ಇದರ ರೂಪಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು.

ಉದಾ: ಮಕರರಾಶಿಯ ಸ್ವರೂಪ–ಇದನ್ನು ಎಲ್ಲರೂ ಮೊಸಳೆಯಂತೆ ಬಿಡಿಸುತ್ತಾರೆ. ಆದರೆ ಅದರ ಲಕ್ಷಣ "ಮೃಗಾಸ್ಯಃ ಮಕರಃ" ಎಂದಿದೆ. ಕತ್ತಿನವರೆಗೆ ಮೊಸಳೆ- ಅದರ ಮೇಲೆ ಮುಖದ ಭಾಗ ಜಿಂಕೆಯಂತೆ! ಈ ತೆರನಾದ ಸೂಕ್ಷ್ಮ ವಿಭೇದಗಳನ್ನು ಚಿತ್ರದಲ್ಲಿ ಗಮನಿಸಿ ಮಂಡಲವನ್ನು ಬಿಡಿಸಬೇಕು. ವಿಷ್ಣುಧರ್ಮೋತ್ತರದಲ್ಲಿ ಈ ರಾಶಿಸ್ವರೂಪ ಬೇರೆ ತೆರನಾಗಿ ನಿರೂಪಿತವಾಗಿದೆ:

ಮೇಷ. "ಮೇಷವಕ್ತ್ರೋ ನರೋ ರಕ್ತೋ ದ್ವಿಭುಜಃ ಪಂಕಜಾಸನಃ |
ಜ್ಞಾನಮುದ್ರಾಕರಃ ಪೀತವಸನಃ ಕನಕಾಂಗದೀ ||
ವೃಷಭ: ವೃಷಾನನೋ ನರಃ ಶುಭ್ರೋ ರಕ್ತವಸ್ತ್ರಾಕ್ಷಕುಂಡಿಕಃ |
ಮಿಥುನ: ಪುಮಾನ್ ಗದೀ ಸವೀಣಾ ಚ ಯೋಷಿಚ್ಚ ಮಿಥುನಂ ಸಿತಮ್ ||
ಕರ್ಕಟ· ಕರ್ಕಟಃ ಕಪಿಲಃ ಶ್ಯಾಸ್ಯಃ ಕೂರ್ಮಮುದ್ರಾಧರೋ ನರಃ |
ಸಿಂಹ ಸಿಂಹವಕ್ತ್ರೋಽರುಣೋಽಬ್ಜಸ್ಥೋ ದ್ವಿಭುಜೋಽಭಯಪಾತ್ರಯುಕ್ ||
ಕನ್ಯಾ ಶುಕ್ಲಾಸಿಭೃತ್ ಸಿತಾ ಕನ್ಯಾ ದ್ವಿಭುಜಾ ಪಂಕಜಾಸನಾ |
ತುಲಾ: ತುಲಾಧಾರೋ ನರೋ ಗೌರಃ ಪಿಂಗನೇತ್ರಃ ಕಜಾಸನಃ ||
ವೃಶ್ಚಿಕ ವೃಶ್ಚಿಕಸ್ಥೋ ನರಃ ಪಿಂಗೋ ದ್ವಿಭುಜೋ ಮರ್ಕಟಾಸನಃ |
ದಕ್ಷೇ ವೃಶ್ಚಿಕಮಾಲಾಧೃಕ್ ವಾಮೇ ಪಾತ್ರಂ ಸುರಾಯುತಮ್ ||
ಧನು ಅಶ್ವವಕ್ತ್ರೋ ನರಶ್ಚಾಪೀ ಜ್ಯಾಕೃಷ್ಟಕರದಕ್ಷಿಣಃ |
ಮಕರ: ಅಕ್ಷಕುಂಡೀಧರೋ ನೀಲೋ ಮೃಗವಕ್ತ್ರೋ ನರೋ ಹಿ ಸಃ ||
ಕುಂಭ ಮಕರಾಸ್ಯೋಽಸಿತೋಽಬ್ಜಸ್ಥೋ ರಿಕ್ತಕುಂಭೋ ನರೋ ಘಟಃ |
ಮೀನ: ಮತ್ಸ್ಯಯುಗ್ಮಸ್ಥಿತಃ ಶ್ಯಾಮೋ ಮತ್ಸ್ಯಹಸ್ತೋ ಮಹೋದರಃ |
ಮತ್ಸ್ಯವಕ್ತ್ರೋ ನರೋ ಮೀನೋ ಹರಿನ್ಮಣಿವಿಭೂಷಣಃ ||"

ಈ ಲಕ್ಷಣದಂತೆ ಎಲ್ಲ ರಾಶಿಗಳೂ ಅರ್ಧಪುರುಷಾಕೃತಿಗಳು. ಮೋರೆ ಮಾತ್ರ ಬೇರೆ ಬೇರೆ ಪ್ರಾಣಿಗಳಂತೆ. ಈ Therianthropic ಪದ್ಧತಿ ಮಂಡಲದ ಚಿತ್ರಣದ ದೃಷ್ಟಿಯಲ್ಲಿ ಹೆಚ್ಚು ಸೊಗಸಾಗಿ ಕಾಣಬಹುದು. ಯಾವುದನ್ನು ಅರಿಸಿಕೊಳ್ಳಬೇಕು ಎಂದು ನಿರ್ಧರಿಸುವವರು ತತ್ತ್ವದರ್ಶಿಗಳು. ಅನುಸಂಧಾನ ಮುಖ್ಯ; ರೇಖೆ ಎಂತಾದರೇನು? ಅಲ್ಲವೆ?




ಚಕ್ರಾಬ್ಜ ಮಂಡಲ

ತಂತ್ರಸಾರಸಂಗ್ರಹಃ ಅಧ್ಯಾಯ ೩: ಶ್ಲೋಕ ೮೩

ಆಚಾರ್ಯರು 3:83 ಪದ್ಯದಲ್ಲಿ ಹೇಳಿದ ಮಂಡಲಗಳು ರೇಖಾವಿನ್ಯಾಸದಲ್ಲಿ ಈ ತೆರ ಸಾಗುವವು. ಪುರೋಹಿತರು ಈ ಮಂಡಲಗಳಿಗೆ ಬಣ್ಣಗಳನ್ನು ತುಂಬುತ್ತಾರೆ. ಪರಿಶಿಷ್ಟದಲ್ಲಿ ಅದರ ವಿವರಗಳನ್ನು ಕಾಣಬಹುದು. ಆದರೆ ಆಚಾರ್ಯರು ಬಣ್ಣಗಳನ್ನು ಉಲ್ಲೇಖಿಸಿಲ್ಲ– ಎಂತಲೇ ಮಂಡಲದ ಪೂರ್ಣತೆಗೆ ಬಣ್ಣಗಳು ಅಗತ್ಯವೇ ಎಂದು ವಿಚಾರಿನಬೇಕಾಗಿದೆ. ಮಂಡಲ

ಪೂರ್ವ



ಭದ್ರಕಮಂಡಲ

ತಂತ್ರಸಾರಸಂಗ್ರಹಃ ಅಧ್ಯಾಯ ೪: ಶ್ಲೋಕ ೮೪

ರೇಖಾಂಕನದಿಂದಲೇ ಸ್ವಯಂಪೂರ್ಣವಾಯಿತು. ಬಣ್ಣ ಹಾಕಿದರೆ ಪ್ರಶಸ್ತ ಎಂದಿರಬಹುದು. ಹಾಕದಿದ್ದರೆ ನ್ಯೂನತೆ ಬರಲಾರದು. "ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ। ತಾವತ್ಸಮಸ್ತಂ ಕಥಿತಂ" ಎಂದು ಆಚಾರ್ಯರು ಕ್ರಿಯಾಪೂರ್ತಿಗೆ ಬೇಕಾದುದೆಲ್ಲವನ್ನೂ ಇಲ್ಲಿ ಬರೆದಿರುವಂತೆ ಹೇಳಿದ್ದಾರೆ. ಆದರಿಂದಲೇ ಕೆಲವು ಪುರೋಹಿತರು ಈ ಮಂಡಲಗಳನ್ನು ವರ್ಣ

**ಕ್ವಾಥೇನ[1] ಕ್ಷೀರಿವೃಕ್ಷಾಣಾಂ[2] ತಥಾ ಪಂಚಾಮೃತೈರಪಿ[3] ।**
**ಪಂಚಗವ್ಯೇನ[4] ಶುದ್ಧೇನ ಜಲೇನ ಚ ಪೃಥಕ್[5] ಪೃಥಕ್ ।**
**ಪೂರಯೇತ್ಕಲಶಾನ್ಮಧ್ಯಂ ಶುದ್ಧೋದೇನೈವ ಪೂರಯೇತ್ ॥ ೮೫ ॥**

---

೧೦೦೧, ೫೦೧, ೧೦೧–ಹೀಗೆ ಕಲಶಗಣನೆ ಮಾಡುವುದು ಎಂದೊಂದು ಪಕ್ಷವಿದೆ. ಅದರ ಕುರಿತು ವಿವರವನ್ನು ಮುಂದಿನ ಪದ್ಯಗಳಲ್ಲಿ ಕಾಣಬಹುದು

ಸಹಸ್ರಕಲಶದ ಜತೆಗೆ ಒಂದು ವಿಶೇಷ ಕಲಶ ಬೇಕು ಎಂದು ಪಂಚರಾತ್ರದಲ್ಲೂ ಹೇಳಿದೆ—

'ಏಕೋತ್ತರೇಣ ಕಲಶೈಃ ಸಹಸ್ರೇಣಾಭಿಷೇಚನಮ್ ।
ಪವಿತ್ರವಸ್ತ್ರಸಹಿತೈಃ ಪವಿತ್ರಜಲಪೂರಿತೈಃ ॥' (ಪಾದ್ಮಸಂಹಿತಾ)

೧ 'ನ್ಯಗ್ರೋಧೋದುಂಬರಾಶ್ವತ್ಥಪ್ಲಕ್ಷಾಃ ಕ್ಷೀರಮಹೀರುಹಾಃ ।'

ಆಲ, ಅತ್ತಿ, ಅಶ್ವತ್ಥ, ಮತ್ತು ಹಿಪ್ಪಲ ಮರಗಳಿಗೆ ಕ್ಷೀರದ್ರುಮಗಳೆಂದು ಶಾಸ್ತ್ರಪರಿಭಾಷೆಯಿದೆ. ಆದರೆ ಫಲಾರೀಯದಲ್ಲಿ ಉದುಂಬರ(ಅತ್ತಿ)ದ ಬದಲು ಜಂಬೂವೃಕ್ಷ (ನೇರಳೆ)ವನ್ನು ಸೇರಿಸಿದ್ದಾರೆ—

'ಕ್ಷೀರಿವೃಕ್ಷಾಣಾಂ=ವಟಜಂಬೂಪ್ಲಕ್ಷಾಶ್ವತ್ಥಾದೀನಾಮ್'

ನಾರಾಯಣೀಯದಲ್ಲಿ ಮೇಲಿನ ಪರಿಭಾಷೆಯಲ್ಲಿ ಹೇಳಿದ ನಾಲ್ಕು ವೃಕ್ಷಗಳ ಜತೆಗೆ ಮಾವಿನಮರವನ್ನೂ ಸೇರಿಸಿ ೫ ಕ್ಷೀರಿವೃಕ್ಷಗಳನ್ನು ಬರೆದಿದ್ದಾರೆ—

'ಕ್ಷೀರವೃಕ್ಷಾಣಾಂ=ಅಶ್ವತ್ಥಚೂತವಟಪ್ಲಕ್ಷೋದುಂಬರವೃಕ್ಷಾಣಾಂ ಕ್ವಾಥೇನ=ತ್ವಚಾ' (ನಾರಾ.)

ಇಲ್ಲಿ ಮೂಲದಲ್ಲಿರುವ 'ಕ್ವಾಥ'ಶಬ್ದಕ್ಕೆ ಕಷಾಯದಂಥ ಕಲಬೆರಕೆ ಎಂದರ್ಥ ಮಾಡಬಹುದು ಹೊರತು ತೊಗಟೆ (ತ್ವಕ್) ಎಂದು ಮಾಡಬರುವಂತಿಲ್ಲ. 'ಕ್ವಾಥ' ಎನ್ನುವುದಕ್ಕೆ ಸಂಸ್ಕೃತದಲ್ಲಿ ತೊಗಟೆ ಎಂಬ ಅರ್ಥ ಇದ್ದಂತಿಲ್ಲ. ಅದರಿಂದ ನಾರಾಯಣೀಯದ 'ಕ್ವಾಥೇನ=ತ್ವಚಾ' ಎಂಬ ವಿವರಣೆ ವಿಚಾರಣೀಯವಿದೆ.

'ಕ್ವಾಥಃ=The mixture of the materials for decoction'
(V. S. Apte)

'ಕ್ವಾಥಃ=ಕ್ಷೀರವೃಕ್ಷತ್ವಕ್ಚೂರ್ಣಮಿಶ್ರೋದಕಮ್' (ಫಲಾ.)

೨ 'ಪಂಚಾಮೃತೈಃ=ಪಯೋದಧಿಘೃತಮಧುಶರ್ಕರಾಭಿರ್ನಿರ್ಮಲಿತಾಭಿಃ' (ಫಲಾ)

'ದುಗ್ಧಂ ಚ ಶರ್ಕರಾ ಚೈವ ಘೃತಂ ದಧಿ ತಥಾ ಮಧು ।
ಪಂಚಾಮೃತಮಿದಂ ಪ್ರೋಕ್ತಮ್'

೩ 'ಪಯೋದಧಿಘೃತಗೋಮೂತ್ರಗೋಮಯೈರ್ಮಿಲಿತೈಃ ಪಂಚಗವ್ಯಮ್ ।'
(ಫಲಾ.)

'ಕ್ಷೀರಂ ದಧಿ ತಥಾ ಚಾಽಜ್ಯಂ ಮೂತ್ರಂ ಗೋಮಯಮೇವ ಚ ।
ಪಂಚಗವ್ಯಮಿತಿ ಪ್ರೋಕ್ತಮ್'

ಕ್ಷೀರಿವೃಕ್ಷಗಳಾದ ಅಶ್ವತ್ಥಾದಿಗಳ ತೊಗಟೆಯ ರಸದಿಂದ ಮಿಶ್ರಿತವಾದ ಜಲವನ್ನು ಒಂದು ಕಲಶದಲ್ಲಿ, ಪಂಚಾಮೃತವನ್ನು ಒಂದರಲ್ಲಿ, ಪಂಚಗವ್ಯವನ್ನು ಇನ್ನೊಂದರಲ್ಲಿ, ಮತ್ತೊಂದರಲ್ಲಿ ಶುದ್ಧಜಲ ಹೀಗೆ ಬದಿಯ ನಾಲ್ಕು ಕಲಶಗಳಲ್ಲಿ ಕ್ರಮವಾಗಿ ತುಂಬಬೇಕು. ಮಧ್ಯದ ಕಲಶದಲ್ಲೂ ಶುದ್ಧೋದಕವನ್ನೇ ತುಂಬಬೇಕು.

**ಬ್ರಾಹ್ಮಸ್ಯೈವ[1] ಚತುರ್ದಿಕ್ಷು ಗಂಧೋದಾನಾಂ ಚತುಷ್ಟಯಮ್ ।**
**ಚತುರ್ದಲಶ್ವೇತಪದ್ಮಚತುಷ್ಕೇ ಮಂಡಲಸ್ಥಿತೇ ॥ ೮೬ ॥**
**ಪೂರ್ವಾದಿಕ್ರಮಯೋಗೇನ ರಸ[2]ಕ್ವಾಥಶುಭೋದಕಾನ್ ।**
**ಗಂಧಾಂಶ್ಚ[3] ಸ್ಥಾಪಯೇತ್ಪಂಚಗವ್ಯಂ ಶುದ್ಧಾಂತರೇ ನ್ಯಸೇತ್ ।**
**ಪೃಥಕ್ ಚತುರ್ದಲಂ ಪದ್ಮಂ ರಕ್ತಂ ಕೃತ್ವಾಽಲ್ಪಕಂ ಸುಧೀಃ ॥ ೮೭ ॥**

೨೫ ಕಲಶಗಳನ್ನಿಡುವುದಾಗಿದ್ದರೆ ಬ್ರಹ್ಮಾಭಿಮಾನಿಕವಾದ ಮಧ್ಯಕಲಶದ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ೪ ಗಂಧೋದಕದ ಕಲಶಗಳನ್ನಿಡಬೇಕು. ಚಕ್ರಾಬ್ಜಾದಿಮಂಡಲಗಳ ವೀಥಿಯಲ್ಲಿ ಶುಭ್ರರಂಗವಲ್ಲಿಯಿಂದ ನಾಲ್ಕು ದಿಕ್ಕುಗಳಲ್ಲಿ ಬಿಡಿಸಿದ ಚತುರ್ದಲ ಪದ್ಮಗಳಲ್ಲಿ, ಮಧ್ಯದಲ್ಲಿ ಒಂದು, ದಲಗಳಲ್ಲಿ ನಾಲ್ಕು— ಹೀಗೆ ಐದೈದು ಕಲಶಗಳನ್ನು ತುಂಬಬೇಕು. ಪೂರ್ವದಿಕ್ಕಿನ ೫ ಕಲಶಗಳಲ್ಲಿ ಪಂಚಾಮೃತವನ್ನೂ, ದಕ್ಷಿಣದ ೫ ಕಲಶಗಳಲ್ಲಿ ಅಶ್ವತ್ಥಾದಿಗಳ ತೊಗಟೆಯ ರಸವನ್ನು ಬೆರಸಿದ ಜಲವನ್ನೂ, ಪಶ್ಚಿಮದ ಕಲಶಗಳಲ್ಲಿ ಶುದ್ಧಜಲವನ್ನೂ, ಉತ್ತರದವುಗಳಲ್ಲಿ ಪುನಃ ಗಂಧೋದಕವನ್ನೂ ತುಂಬಬೇಕು. ಈ ೨೫ ಕಲಶಗಳಲ್ಲದೆ ಇನ್ನೊಂದು ವಿಶೇಷಕಲಶವುಂಟು; ಅದು ಪಂಚಗವ್ಯದ ಕಲಶ. ಅದನ್ನು ಬ್ರಾಹ್ಮಕಲಶ ಸುತ್ತ ಶುದ್ಧೋದಕ ಕಲಶಗಳ ನಡುವೆ ಮತ್ತೊಂದು ನಾಲ್ಕು ದಲಗಳುಳ್ಳ ಕೆಂಪಾದ ಸಣ್ಣ ಕಮಲವನ್ನು ಬರೆದು ಅದರಲ್ಲಿಡಬೇಕು.[4]

---

೧ 'ಬ್ರಹ್ಮಾಭಿಮನ್ಯಮಾನತ್ವಾನ್ಮಧ್ಯಕಲಶೋ ಬ್ರಾಹ್ಮಶಬ್ದವಾಚ್ಯಃ ।' (ಛಲಾ.)
'ಮಧ್ಯಸ್ಥಂ ಕಲಶಂ ಬ್ರಹ್ಮದೇವತಾಕತ್ವಾದ್ಬ್ರಾಹ್ಮಮ್ ।' (ನಾರಾ.)

೨ 'ರಸಃ=ಪಂಚಾಮೃತಮ್ ।' (ಛಲಾ.)

೩ 'ಗಂಧಾನ್=ಗಂಧೋದಕಪೂರ್ಣಕಲಶಾನ್ ।' (ಛಲಾ.)

೪ ಪಂಚಗವ್ಯದ ಕಲಶದ ಕುರಿತು ವಿದ್ವಾಂಸರಲ್ಲಿ ಮತಭೇದವಿದೆ. ಪಶ್ಚಿಮದ ಕಮಲದಲ್ಲಿ ಇಡಬೇಕಾದ ೫ ಕಲಶಗಳಲ್ಲಿ ಸುತ್ತಲಿನ ನಾಲ್ಕು ಕಲಶಗಳಲ್ಲಿ ಮಾತ್ರ ಶುದ್ಧೋದಕವನ್ನು ತುಂಬಿಸಿ ಮಧ್ಯದ ಕಲಶದಲ್ಲಿ ಪಂಚಗವ್ಯವನ್ನು ತುಂಬಬೇಕು. ಹೀಗೆ ಪಂಚಗವ್ಯ

**ಪಂಚಾಶತ್ತ್ವೇ ತು ಗಂಧೋದಂ[1] ಸರ್ವಮಧ್ಯೇ ನಿಧಾಪಯೇತ್ ।**
**ಬ್ರಾಹ್ಮಸ್ಯ ಪುರತಸ್ತ್ವೇಕಂ ಸಾರ್ವಂ ಸಂಸ್ಥಾಪಯೇದ್ಬುಧಃ[2] ।**
**ಅಷ್ಟದಿಕ್ಷ್ವಷ್ಟಪದ್ಮೇಷು ಪಂಚಕಂ ಪಂಚಕಂ ನ್ಯಸೇತ್ ॥ ೮೮ ॥**

೫೦ ಕಲಶಗಳ ಪಕ್ಷದಲ್ಲಿ ಬ್ರಾಹ್ಮಕಲಶದ ನಂತರ ಸುತ್ತಲೂ ಇರುವ ೪೦ ಕಲಶಗಳ ನಡುವೆ ೮ ಗಂಧೋದಕದ ಕಲಶಗಳನ್ನಿಡಬೇಕು. ಬ್ರಾಹ್ಮಕಲಶದ

---

ಕಲಶ ಕೂಡ ೨೫ ಕಲಶಗಳಲ್ಲಿಯೇ ಸೇರಿದೆ ಹೊರತು ಅದು ಒಂದು ವಿಶೇಷ ಕಲಶವಲ್ಲ ಎಂದು ಕೆಲವರ ವಾದ. ೨೫ ಕಲಶ, ೫೦ ಕಲಶ– ಹೀಗೆ ಸಾವಿರ ಕಲಶಗಳ ವರೆಗೂ ಪಂಚಗವ್ಯದ ಒಂದು ಕಲಶ ವಿಶೇಷ ಕಲಶವೆ. ಅದರಿಂದ ಅದರ ಸಂಖ್ಯೆಯನ್ನುಳಿದೇ ಆಚಾರ್ಯರು ಸಂಖ್ಯೆಯನ್ನು ಬರೆದಿದ್ದಾರೆ. ಎಂತಲೇ ಹಿಂದೆಯೇ ನಾನು ಸೂಚಿಸಿದಂತೆ– ಪ್ರತಿಯೊಂದು ಪಕ್ಷದಲ್ಲಿಯೂ ಒಂದು ವಿಶೇಷ ಕಲಶವನ್ನು ಸೇರಿಸಿಕೊಂಡು ೧೦೦೧, ೫೦೧, ೨೫೧, ೧೦೧, ೫೧, ೨೬– ಹೀಗೆ ಸಂಖ್ಯೆಯನ್ನಿಟ್ಟುಕೊಳ್ಳಬೇಕು ಎಂದು ಇನ್ನು ಕೆಲ ವಿದ್ವಜ್ಜನರ ವಾದ. ಈ ಪಕ್ಷವನ್ನು ಫಲಾರ್ಥೀಯದಲ್ಲೂ ಉಲ್ಲೇಖಿಸಿದ್ದಾರೆ—

'ಅಸ್ಮಿನ್ಪಕ್ಷೇ ಪಂಚವಿಂಶತ್ಯಾದಿಸರ್ವಪಕ್ಷೇಽಪಿ ಕುಶೋದಮಿತ್ಯಾದಿನಾ ವಕ್ಷ್ಯಮಾಣವಿಶೇಷಕಲಶವತ್ ಅಯಮಪಿ ಪಂಚಗವ್ಯಕಲಶಃ ಪಂಚವಿಂಶತ್ಯಾದ್ಯಪೇಕ್ಷಯಾಧಿಕೋ ವಿಶೇಷಕಲಶ ಇತಿ ಜ್ಞೇಯಮ್ ।' (ಫಲಾ.)

ಶುದ್ಧೋದಕದ ಕಮಲದ ನಡುವಿನಲ್ಲಿ ಪಂಚಗವ್ಯದ ಕಲಶವನ್ನಿಡುವುದಾಗಿದ್ದರೆ ಪ್ರತ್ಯೇಕವಾಗಿ ಕಮಲವನ್ನು ರಚಿಸಬೇಕು ಎಂದು ಆಚಾರ್ಯರು ಹೇಳಲು ಕಾರಣವಿಲ್ಲ. ಆ ಕಮಲದ ನಡುವಿನಲ್ಲೆ ಎಲ್ಲ ಕಮಲಗಳಂತೆ ಇದನ್ನು ಇಡಬಹುದು. ಎಂತಲೇ ಬೇರೆ ಕಮಲವೊಂದನ್ನು ರಚಿಸಬೇಕು ಎಂಬ ಆಚಾರ್ಯರ ಮಾತು ಪಂಚಗವ್ಯ ವಿಶೇಷಕಲಶ ಎಂಬ ಪಕ್ಷವನ್ನೆ ಪುರಸ್ಕರಿಸುವಂತಿದೆ. ಅದೂ ಅಲ್ಲದೆ ಶಾಸ್ತ್ರಸಂಪ್ರದಾಯಜ್ಞರಾದ ಗುರು ವಿದ್ವಾಂಸರು ಈ ಪಕ್ಷವನ್ನು ಸಮರ್ಥಿಸುವ ಕಾರಣದಿಂದಲೂ ಈ ಅರ್ಥವನ್ನೆ ಮೇಲೆ ಉಲ್ಲೇಖಿಸಿದ್ದೇನೆ

೧ '"ಮಧ್ಯಂ ಶುದ್ಧೋದೇನೈವ ಪೂರಯೇದಿ"ತ್ಯನೇನೈವ ಬ್ರಹ್ಮಕಲಶಸ್ಯೋಕ್ತತ್ವಾತ್, ತತ್ಪರಿತಃ ಸ್ಥಾಪ್ಯಕಲಶಾನಾಹ—"ಗಂಧೋದಮಿ"ತಿ । ಸರ್ವಮಧ್ಯೇ ಸರ್ವೇಷಾಂ ವಕ್ಷ್ಯಮಾಣಕಲಶಾನಾಂ ಮಧ್ಯೇ ಗಂಧೋದಕಕಲಶಾಷ್ಟಕಂ ಬ್ರಾಹ್ಮಕಲಶಸ್ಯಾಷ್ಟದಿಕ್ಷು ಸ್ಥಾಪಯೇತ್ ।' (ನಾರಾ.)

'ಗಂಧೋದಂ, ಸಮುದಾಯೈಕವಚನಂ, ಗಂಧೋದಪೂರ್ಣಕಲಶಾಷ್ಟಕಂ ಸ್ಥಾಪಯೇತ್ । ಅತ್ರ ಯೋಗ್ಯತಯಾ ಗಂಧೋದಕಕಲಶಾನಾಮಷ್ಟತ್ವಂ ಲಭ್ಯತೇ ।' (ಫಲಾ.)

೨ 'ಬುಧಃ' ಎಂಬ ಪಾಠದ ಬದಲು ಕೆಲವೆಡೆ 'ಬೃಹತ್' ಎಂದೂ ಪಾಠವಿದೆ. ಆ ಪಕ್ಷದಲ್ಲಿ ಸಾರ್ವಕಲಶ ಉಳಿದ ಕಲಶಗಳಿಗಿಂತ ದೊಡ್ಡದಾಗಿರಬೇಕು ಎಂದು ತಾತ್ಪರ್ಯ.

ಪೂರ್ವಭಾಗದಲ್ಲಿ ಮಧ್ಯಕಲಶ ಮತ್ತು ಗಂಧೋದಕ ಕಲಶಗಳ ನಡುವಿನಲ್ಲಿ ಇನ್ನೊಂದು ಕಲಶವನ್ನಿಡಬೇಕು. ಈ ಕಲಶಕ್ಕೆ ಸರ್ವದೇವತೆಗಳೂ ಅಭಿಮಾನಿಗಳಾದುದರಿಂದ ಇದನ್ನು ಸಾರ್ವಕಲಶವೆನ್ನುತ್ತಾರೆ. ಅನಂತರ ಗಂಧೋದಕದ ಕಲಶಗಳ ಹೊರಪಙ್ಕ್ತಿಯಲ್ಲಿ ೮ ದಿಕ್ಕುಗಳಲ್ಲಿ ೮ ಪದ್ಮಗಳನ್ನು ಬರೆದು ಹಿಂದಿನಂತೆಯೇ ಒಂದೊಂದು ಪದ್ಮಗಳಲ್ಲಿ ಐವ್ವೈದು ಕಲಶಗಳಂತೆ ಉಳಿದ ೪೦ ಕಲಶಗಳನ್ನು ತುಂಬಬೇಕು.[೧]

**ಅನೇನ ಕ್ರಮಯೋಗೇನ ಕಲಶಾ ಅಖಿಲಾ ಅಪಿ ।**
**ತತ್ತದ್ದ್ರವ್ಯಮಯಾಸ್ತತ್ರ ತತ್ರ ಸ್ಥಾಪ್ಯಾಸ್ತು ಬಾಹ್ಯತಃ ।**
**ತದೈವಾಂಕುರಪಾತ್ರಾಣಿ ಪರಿತಸ್ತತ್ರ ವಿನ್ಯಸೇತ್ ॥ ೮೯ ॥**

ಇದೇ ರೀತಿಯಲ್ಲಿ ನೂರರಿಂದ ಸಹಸ್ರ ಕಲಶಗಳ ವರೆಗಿನ ಪ್ರತಿಯೊಂದು ಪಕ್ಷಗಳಲ್ಲಿಯೂ ಪಂಚಾಮೃತಾದಿದ್ರವ್ಯಗಳಿಂದ ತುಂಬಿದ ಕಲಶಗಳನ್ನು ಒಂದರ ಹೊರಗೆ ಒಂದರಂತೆ ಮಂಡಲದ ಸುತ್ತಲೂ ಹಿಂದೆ ವಿವರಿಸಿದ ಕ್ರಮದಂತೆ ತುಂಬಬೇಕು.[೨] ಜತೆಗೆ ಹಿಂದೆ ಹೇಳಿದ ಹನ್ನೆರಡು ಅಂಕುರಪಾತ್ರೆಗಳನ್ನೂ ದಿಕ್ಕುಗಳಲ್ಲಿ ಎರಡು, ವಿದಿಕ್ಕುಗಳಲ್ಲಿ ಒಂದರಂತೆ ಸುತ್ತಲೂ ಇಡಬೇಕು.

**ಕುಶೋದಕಂ ಚ ಕಾರ್ಪೂರಂ ಕೌಂಕುಮಂ ಚಾಂದನಂ ತಥಾ ।**

---

೧ ಇಲ್ಲಿ ಪೂರ್ವದ ಮತ್ತು ಆಗ್ನೇಯದ ಕಲಶಗಳಲ್ಲಿ ಪಂಚಾಮೃತ; ದಕ್ಷಿಣ—ನೈಋತ್ಯದ ಕಲಶಗಳಲ್ಲಿ ತೊಗಟಿ ನೀರು, ಪಶ್ಚಿಮ—ವಾಯುವ್ಯದ ಕಲಶಗಳಲ್ಲಿ ಶುದ್ಧೋದಕ; ಉತ್ತರ—ಈಶಾನ್ಯದವುಗಳಲ್ಲಿ ಗಂಧೋದಕ ಮತ್ತು ಶುದ್ಧೋದಕ; ಬ್ರಹ್ಮಕಲಶಗಳ ನಡುವೆ ಒಂದು ಪಂಚಗವ್ಯಕಲಶ— ಹೀಗೆ ಹಿಂದಿನಂತೆಯೇ ಎಲ್ಲಾ ಕ್ರಮಗಳನ್ನೂ ಊಹಿಸಿಕೊಳ್ಳಬೇಕು.

೨ ಉದಾಹರಣೆಗೆ— ೧೦೦ ಕಲಶಗಳನ್ನಿಡುವುದಿದ್ದರೆ— ಮಧ್ಯದಲ್ಲಿ ಬ್ರಹ್ಮಕಲಶ ೨, ಸಾರ್ವಕಲಶ ೨, ಹೊರಪಙ್ಕ್ತಿಯ ಗಂಧೋದಕ ಕಲಶಗಳು ಹದಿನಾರು, ಅದರ ಹೊರಪಙ್ಕ್ತಿಯಲ್ಲಿ ಒಂದೊಂದು ದಿಕ್ಕಿನಲ್ಲಿ ಎರಡೆರಡರಂತೆ ಒಟ್ಟು ೮ ದಿಕ್ಕುಗಳಲ್ಲಿ ೧೬ ಪದ್ಮಗಳನ್ನು ಮಾಡಿ ಅವುಗಳಲ್ಲಿ ಒಂದು ಪದ್ಮದಲ್ಲಿ ಐದು ಕಲಶಗಳಂತೆ ೮೦ ಕಲಶಗಳನ್ನು ತುಂಬಬೇಕು. ಹೀಗೆಯೇ ೨೫೦, ೫೦೦, ೧೦೦೦ ಪಕ್ಷಗಳ ಕಲಶವನ್ನೂ ಊಹಿಸಿಕೊಳ್ಳಬಹುದು.

**ತುಹಿನೋದಂ ಹ್ರೈರಿಬೇರ[1]ಮೌಶೀರಂ[2] ಕೋಷ್ಠಸಾರ್ಷಪಮ್[3] ॥೯೦॥**
**ನದೀಸಂಗಮಗಂ ಚೈವ ತಾಟಾಕಂ ಕೌಪ್ಯಮೇವ ಚ ।**
**ನಿರ್ಝರೋದಮಿತಿ ಪ್ರೋಕ್ತಾ ವಿಶೇಷಕಲಶಾಸ್ತ್ವಮೀ ।**
**ಶುದ್ಧೋದದ್ವಯಮಪ್ಯೇತನ್ಮಹಾತೀರ್ಥಸಮುದ್ಭವಮ್ ॥ ೯೧ ॥**

ಈ ಅಂಕುರಪಾತ್ರೆಗಳ ಒಳಗಡೆ ಸುತ್ತಲೂ ೧೨ ವಿಶೇಷಕಲಶಗಳನ್ನಿಡಬೇಕು. ಅವುಗಳಲ್ಲಿ ತುಂಬತಕ್ಕ ದ್ರವ್ಯಗಳು ಈ ಕೆಳಗಿನಂತಿವೆ—

೧ ದರ್ಭೆಮಿಶ್ರಿತ ಜಲ
೨ ಕರ್ಪೂರಮಿಶ್ರಿತ ಜಲ
೩ ಕುಂಕುಮಮಿಶ್ರಿತ ಜಲ
೪ ಚಂದನಮಿಶ್ರಿತ ಜಲ
೫ ಮಂಜಿನ ನೀರು
೬ ಮುಡಿವಾಳಬೆರಸಿದ ನೀರು
೭ ಲವಂಚ ಬೆರಸಿದ ನೀರು
೮ ಕುಂಕುಮ ಮತ್ತು ಸಾಸಿವೆ ಬೆರಸಿದ ನೀರು
೯ ನದೀಸಂಗಮಸ್ಥಳದ ನೀರು
೧೦ ಕೆರೆಯ ನೀರು
೧೧ ಬಾವಿಯ ನೀರು
೧೨ ತಡಸಲಿನ ನೀರು

ಬ್ರಾಹ್ಮ ಮತ್ತು ಸಾರ್ವಕಲಶಗಳಲ್ಲಿ ತುಂಬತಕ್ಕ ಶುದ್ಧೋದಕವು ಪುಣ್ಯತೀರ್ಥಗಳದಾಗಿರಬೇಕು.

---

೧ ಹ್ರೈರಿಬೇರಂ=ಹ್ರೈಬೇರಮ್ ।
'ಉಶೀರಂ ವೀರಣೀಮೂಲಂ ಹ್ರೀಬೇರಂ ಬಾಲಕಂ ಜಲಮ್ ।'
(ಅಭಿಧಾನರತ್ನಮಾಲೆ)
'ಹ್ರೀವೇರಂ ವಾರಿ ವಾಲಕಮ್ ।' (ಹಾರಾವಳೀ)
'ಬಾಲಂ ಹ್ರೀಬೇರಬರ್ಹಿಷ್ಠೋದೀಚ್ಯಂ ಕೇಶಾಂಬುನಾಮ ಚ ।'
(ಅಮರಕೋಶ)

೨ 'ಉಶೀರಮಸ್ತ್ರಿಯಾಮ್ ।
ಅಭಯಂ ನಲದಂ ಸೇವ್ಯಮಮೃಣಾಲಂ ಜಲಾಶಯಮ್ ।
ಲಾಮಜ್ಜಕಂ ಲಘುಲಯಮವದಾಹೇಷ್ಟಕಾಪಥೇ ।' (ಅಮರ.)
'ತತ್ರ ಹೀರಬೇರಮಿತ್ಯಸ್ಯ 'ಮುಡಿವಾಳ' ಇತ್ಯಪಭ್ರಷ್ಟಭಾಷಾ ।' (ಛಲಾ.)

೩ ಇಲ್ಲಿ 'ಕುಷ್ಠ' 'ಸರ್ಷಪ'ಗಳಿಂದ ಕೂಡಿದ್ದು (ಕೌಷ್ಠಂ ಚ ತತ್ ಸಾರ್ಷಪಂ ಚ) 'ಕೌಷ್ಠಸಾರ್ಷಪ' ಎಂದಿದ್ದರೆ ಚೆನ್ನು. ಆದರೆ ಮೂಲದಲ್ಲಿ ಎಲ್ಲೆಡೆಯಲ್ಲೂ 'ಕೋಷ್ಠಸಾರ್ಷಪಂ' ಎಂದೇ ಇದೆ. 'ಕುಷ್ಠ'ವೃಕ್ಷ ಎಂಬ ಅರ್ಥದಲ್ಲಿ 'ಕೋಷ್ಠ'ಪದವೂ ಇದೆಯೆಂದು ಇದರಿಂದ ತಿಳಿಯುತ್ತದೆ. 'ಕೋಷ್ಠಸಹಿತಂ ಸಾರ್ಷಪಂ=ಕೋಷ್ಠಸಾರ್ಷಪಮ್.'

**ಚತುರ್ವಿಂಶತಿ ಮೂರ್ತೀನಾಂ[1] ವರ್ಣಮೂರ್ತೀ[2]ಸ್ತಥಾಽಪರಾಃ[3] ।**
**ಆವಾಹಯೇಚ್ಛತಕ್ತ್ವೇ ತು ಕ್ರಮವ್ಯುತ್ಕ್ರಮತಸ್ತು ತಾಃ ॥ ೯೨ ॥**

---

'ವ್ಯಾಧಿಃ ಕುಷ್ಠಂ ಪಾರಿಭಾವ್ಯಂ ವ್ಯಾಪ್ಯಂ ಪಾಕಲಮುತ್ಪಲಮ್ ।' (ಅಮರ.)
'ಕುಷ್ಠಂ ಗದಾಹ್ವಯಂ', 'ಕುಷ್ಠಂ ರೋಗೌಷಧಿಭಿದೋಃ' (ತ್ರಿಕಾಂಡಶೇಷ)
'ವ್ಯಾಧಿಃ ಕುಷ್ಠೇ ಚ ರೋಗೇ ನಾ' (ಮೇದಿನೀ.)

ಮೇಲಿನ ಮೇದಿನೀವಾಕ್ಯವನ್ನು ತಪ್ಪಾಗಿ ಅರ್ಥಮಾಡಿಕೊಂಡು ಶ್ರೀ। ಆಪ್ಟೆಯವರು ತಮ್ಮ ಕೋಶದಲ್ಲಿ 'ವ್ಯಾಧಿ' ಎಂಬ ಶಬ್ದಕ್ಕೆ 'ಕುಷ್ಠರೋಗ' ಎಂದರ್ಥ ಎಂದು ಬರೆದಿದ್ದಾರೆ—

'ವ್ಯಾಧಿಃ=Leprosy' (V. S. Apte)

ಆದರೆ ಮೇದಿನೀ ವಾಕ್ಯಕ್ಕೆ ಅವರು ಮಾಡಿಕೊಂಡ ಅರ್ಥ ಭ್ರಾಂತಿಮೂಲಕವಾಗಿದೆ. 'ವ್ಯಾಧಿ' ಎಂದರೆ 'ಕುಷ್ಠವೃಕ್ಷ' ಎಂದರ್ಥ ಹೊರತು 'ಕುಷ್ಠರೋಗ' ಎಂದರ್ಥವಲ್ಲ.

ಇದನ್ನು ಆಯುರ್ವೇದ ಗ್ರಂಥಗಳಲ್ಲಿ ಓಷಧಿಯೆಂದು ನಿರೂಪಿಸಿದ್ದಾರೆ—

'ಕುಷ್ಠಮುಷ್ಣಂ ಕಟು ಸ್ವಾದು ಶುಕ್ರಲಂ ತಿಕ್ತಕಂ ಲಘು ।
ಹಂತಿ ವಾತಾಸ್ರವೀಸರ್ಪಕಾಸಕುಷ್ಠಮರುತ್ಕಫಾನ್ ॥'

ಅದರಿಂದಲೇ 'ಕುಷ್ಣಾತಿ ರೋಗಂ' ಎಂದು ಇದರ ನಿಷ್ಪತ್ತಿಯನ್ನು ಬರೆದಿದ್ದಾರೆ.

ಸೋದೆಮಠದ ಪುಸ್ತಕದಲ್ಲಿ 'ಕೋಷ್ಠಸಾರ್ಷಪಂ' ಎಂಬ ಪಾಠದ ಬದಲು 'ಕೋಷ್ಠಸಾರಕೇ' ಎಂಬ ಪಾಠವಿದೆ. ನಾರಾಯಣೀಯಕಾರರಿಗೂ ಈ ಪಾಠವೇ ಸಮ್ಮತ. ಛಲಾರೀಯಕಾರರೂ ಈ ಪಾಠವನ್ನು ಉಲ್ಲೇಖಿಸಿದ್ದಾರೆ—

'ಸಾರಕಶಬ್ದೇನ ಚಂಪಕಕೋರಕಮುಚ್ಯತ ಇತ್ಯಾಹುಃ ।' (ನಾರಾ)
'ಸಾರಕಪದೇನ ಚಂಪಕಕುಡ್ಮಲಮುಚ್ಯತೇ ।' (ಛಲಾ.)

ಈ ಪಕ್ಷದಲ್ಲಿ ಕಲಶದ ಜಲವನ್ನು ಸಂಪಿಗೆಯ ಮೊಗ್ಗೆಗಳಿಂದ ಸುವಾಸಿತಗೊಳಿಸಬೇಕು ಎಂದರ್ಥ.

೧ 'ಮೂರ್ತೀನಾಂ ಚತುರ್ವಿಂಶತಿ=ಚತುರ್ವಿಂಶತಿಮ್ । 'ಪರಮೇ ವ್ಯೋಮನ್' ಇತ್ಯಾದಿವಚ್ಛಾಂದಸಃ ಪ್ರಕೃತಿನಿರ್ದೇಶಃ ।'

೨ ವರ್ಣಮೂರ್ತಿಗಳನ್ನು ಪ್ರಥಮಾಧ್ಯಾಯದ ೬–೧೦ ಶ್ಲೋಕಗಳಲ್ಲಿ ನೋಡಿಕೊಳ್ಳಬಹುದು.

೩ 'ಚತುರ್ವಿಂಶತಿಮೂರ್ತೀಃ, ವರ್ಣಮೂರ್ತೀಃ, ತಥಾಽಪರಾಃ=ಅಜಾದ್ಯಾಶ್ಚ ಶಿಂಶುಮಾರಾಂತಾಃ ।'

ಅಜಾದಿ ಶಿಂಶುಮಾರಾಂತ ಶತಮೂರ್ತಿಗಳನ್ನು ದ್ವಿತೀಯಾಧ್ಯಾಯದ ೭–೯ ಶ್ಲೋಕಗಳಲ್ಲಿ ಕಾಣಬಹುದು.

**ವರ್ಣಮೂರ್ತೀಃ ಪುನಶ್ಚೈವ ದ್ವಿಚತುರ್ವಾರಮೇವ ಚ ।**
**ಸಹಸ್ರಕಲಶಾದಿಷ್ವೇ[1] ತದೇಷ್ವಾಂತ್ರಾಂಚ್ಛ ಭಕ್ತಿತಃ ॥ ೯೩ ॥**

೨೫ ಕಲಶಗಳ ಪಕ್ಷದಲ್ಲಿ (ಬ್ರಾಹ್ಮಕಲಶದಲ್ಲಿ ಮೂಲಮೂರ್ತಿಯನ್ನು) ಉಳಿದ ಕಲಶಗಳಲ್ಲಿ ಕೇಶವಾದಿಚತುರ್ವಿಂಶತಿಮೂರ್ತಿಗಳನ್ನು ಆವಾಹಿಸಬೇಕು. ೫೦ ಕಲಶಗಳ ಪಕ್ಷದಲ್ಲಿ ಅಜಾದಿಕ್ಷಾಳುಕಾಂತ ೫೦ ವರ್ಣಮೂರ್ತಿಗಳನ್ನು ಆವಾಹಿಸಬೇಕು. ೧೦೦ ಕಲಶಗಳ ಪಕ್ಷದಲ್ಲಿ ಅಜಾದಿಶಿಂಶುಮಾರಾಂತ ನೂರು ಕಲಶದೇವತೆಗಳನ್ನು ಆವಾಹಿಸಬೇಕು. ೨೫೦ ಕಲಶಗಳ ಪಕ್ಷದಲ್ಲಿ ಅಜಾದಿಶಿಂಶುಮಾರಾಂತಮೂರ್ತಿಗಳನ್ನು ಕ್ರಮವಾಗಿ ಒಮ್ಮೆ, ಶಿಂಶುಮಾರನಿಂದ ಮೊದಲುಗೊಂಡು ಅಜನವರೆಗೆ ವ್ಯುತ್ಕ್ರಮವಾಗಿ ಒಮ್ಮೆ—ಹೀಗೆ ೨೦೦ ದೇವತೆಗಳು ಮತ್ತು ಪುನಃ ಅಜಾದಿಕ್ಷಾಳುಕಾಂತ ವರ್ಣದೇವತೆಗಳು ಒಟ್ಟು ೨೫೦ ದೇವತೆಗಳನ್ನು ಆವಾಹಿಸಬೇಕು. ೫೦೦ ಕಲಶಗಳ ಪಕ್ಷದಲ್ಲಿ ಹಿಂದೆ ಹೇಳಿದ ೨೫೦ ದೇವತೆಗಳನ್ನೆ ಎರಡು ಬಾರಿ, ಮತ್ತು ೧೦೦೦ ಕಲಶಪಕ್ಷದಲ್ಲಿ ನಾಲ್ಕು ಬಾರಿ ಆವಾಹಿಸಬೇಕು. ಮಂತ್ರಗಳನ್ನು ಕಲಶ ಸ್ಪರ್ಶಮಾಡಿಕೊಂಡು ಭಕ್ತಿಪೂರ್ವಕವಾಗಿ ಉಚ್ಚರಿಸಬೇಕು.

## ಕಲಶಾಭಿಷೇಕ

**ತತಸ್ತು ಪಂಚಘೋಷೈ[2]ಶ್ಚ ವೇದಘೋಷೈಸ್ತಥಾಽಽದರಾತ್ ।**
**ಆನೀಯ ಪ್ರತಿಮಾಂ ಸ್ನಾನಂ ಕಾರಯೇತ್ಪ್ರಣವೇನ ತು ॥ ೯೪ ॥**
**ಮಂತ್ರೈಃ[3] ಪುರುಷಸೂಕ್ತಾಂತ್ಯೈರ್ವಿಶ್ವತಶ್ಚಕ್ಷುಷಾ[4] ತಥಾ ।**
**ಪುನಶ್ಚಾಷ್ಟಾಕ್ಷರೇಣೈವ ಪ್ರಣವೇನೈವ ಭಕ್ತಿತಃ ॥ ೯೫ ॥**

---

೧ ‘ಆದಿಶಬ್ದೇನ ಪಂಚಶತಪಕ್ಷೋ ಗ್ರಾಹ್ಯಃ । ತತ್ರ ಪಂಚಶತಕಲಶಪಕ್ಷೇ ದ್ವಿವಾರಮಾವರ್ತನಂ ಕಾರ್ಯಮ್ । ಸಹಸ್ರಕಲಶಪಕ್ಷೇ ಚತುರ್ವಾರಮಿತಿ ಧ್ಯೇಯಮ್ ।’ (ನಾರಾ.)

೨ ಇದೇ ಅಧ್ಯಾಯದ ೪೯ನೆಯ ಶ್ಲೋಕದ ಟಿಪ್ಪಣಿಯಲ್ಲಿ ಬರೆದ ಪಂಚಧ್ವನಿಗಳನ್ನೆ ಇಲ್ಲೂ ಇಟ್ಟುಕೊಳ್ಳಬಹುದು. ಅಥವಾ ರಾಘವಭಟ್ಟನು ಹೇಳಿರುವ ಪಂಚವಾದ್ಯಗಳನ್ನೆ ಇಲ್ಲಿ ‘ಪಂಚಘೋಷ’ ಶಬ್ದದಿಂದಲೂ ಇಟ್ಟುಕೊಳ್ಳಬಹುದು—

‘ಪಂಚಘೋಷಾಸ್ತು ಪಟಹಢಕ್ಕಾಮೃದಂಗಮುಖವಾದ್ಯಶಂಖಾಃ ।’
(ಪದಾರ್ಥಾದರ್ಶ)

೩ ‘ಉತ್ತರತ್ರ ‘ತತ್ರಾಽತ್ಮಾಹಾರ್ಷಸೂಕ್ತಂ ಚೇ’ತ್ಯನೇನ ಶ್ಲೋಕೇನ ವಕ್ಷ್ಯಮಾಣೈಃ ಪುರುಷಸೂಕ್ತಾಂತ್ಯೈರ್ಮಂತ್ರೈಃ ।’

೪ ‘ವಿಶ್ವತಶ್ಚಕ್ಷುಃಪದಘಟಿತತ್ವಾನ್ಮಂತ್ರಸ್ಯಾಪಿ ತನ್ನಾಮತಾ । ಯದ್ವಸ್ಮಿನ್ಮಾಂಸಕನಯೇ ವಿದ್ವದ್ಭ್ಯಾವ್ಯಾಮಿತಿ ವ್ಯವಹೃತಿಃ । ವಿಶ್ವಕರ್ಮಸೂಕ್ತಮಿತ್ಯರ್ಥಃ ।’

**ಸ್ನಾಪಯಿತ್ವಾ ಗಂಧಜಲೈರ್ಗಂಧಪುಷ್ಪಾದಿಭಿಃ ಪುನಃ ।**
**ಅಲಂಕೃತ್ಯ ಸ್ಥಾಪಯೇತ್ತು ಪ್ರತಿಮಾಂ ಪ್ರಣವೇನ ತು ॥ ೯೬ ॥**

ಕಲಶಪೂಜೆಯಾದ ನಂತರ, ಪಂಚವಾದ್ಯಗಳು ಮೊಳಗುತ್ತಿರಲು, ವಿಪ್ರರು ವೇದಗಾನವನ್ನು ಮಾಡುತ್ತಿರಲು, ಭಕ್ತಿಪೂರ್ವಕವಾಗಿ ಪ್ರತಿಮೆಯನ್ನು ಸ್ನಾನಮಂಟಪಕ್ಕೆ ತಂದು ಪ್ರಣವದಿಂದಲೂ, ಪುರುಷಸೂಕ್ತಾದಿಗಳಿಂದಲೂ, ವಿಶ್ವಕರ್ಮಸೂಕ್ತದಿಂದಲೂ ಆ ಪ್ರತಿಮೆಗೆ ಪಂಚಗವ್ಯದಿಂದ ಸ್ನಾನಮಾಡಿಸಬೇಕು. ಅನಂತರ ಪುನಃ ಅಷ್ಟಾಕ್ಷರ ಪ್ರಣವಮಂತ್ರಗಳಿಂದ ಭಕ್ತಿಪೂರ್ವಕವಾಗಿ ಪರಿಮಳದ್ರವ್ಯಗಳಿಂದ ತುಂಬಿದ ೧೨ ವಿಶೇಷ ಕಲಶಗಳನ್ನೂ ಅಭಿಷೇಚಿಸಿ, ಗಂಧಪುಷ್ಪಾದಿಗಳಿಂದ ಪ್ರತಿಮೆಯನ್ನು ಮುದ್ದಾಗಿ ಅಲಂಕರಿಸಿ, ಪ್ರಣವಮಂತ್ರವನ್ನುಚ್ಚರಿಸುತ್ತಾ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಬೇಕು.

**ಜಪೇದಷ್ಟಾಕ್ಷರಂ ಮಂತ್ರಂ ತತ್ತನ್ಮೂರ್ತಿಮನುಂ[1] ತಥಾ ।**
**ಅಷ್ಟೋತ್ತರಶತಂ ಮಂತ್ರೀ[2] ಧ್ಯಾಯೇತ್ತೇಜೋಮಯೀಂ[3] ಪುನಃ ॥**
**ಪ್ರತಿಮಾಂ ಪ್ರತಿಮಾಂತಸ್ಥಂ ತನ್ಮಧ್ಯೇ ಪರಮಂ ವಪುಃ ।**
**ಚಿದಾನಂದರಸಂ ಸರ್ವಗುಣಸಂಪೂರ್ಣಮುತ್ತಮಮ್ ॥ ೯೮ ॥**

ಅನಂತರ ಪ್ರತಿಮೆಯನ್ನು ಮುಟ್ಟಿಕೊಂಡು ಅಷ್ಟಾಕ್ಷರಮಂತ್ರವನ್ನೂ ಪ್ರತಿಷ್ಠಾಪ್ಯದೇವತಾಮಂತ್ರವನ್ನೂ ೧೦೮ ಬಾರಿ ಜಪಿಸಬೇಕು. ಆ ಮೇಲೆ ಪ್ರತಿಮೆಯ ಒಳಗೆ ಸನ್ನಿಹಿತವಾಗಿರುವ ತೇಜೋಮಯವಾದ ವಾಯುರೂಪವನ್ನು ಧ್ಯಾನಿಸಬೇಕು. ಅದರ ಮಧ್ಯದಲ್ಲಿ ಜ್ಞಾನಾನಂದರೂಪನಾದ, ಸರ್ವಗುಣಪೂರ್ಣನಾದ, ಸರ್ವೋತ್ತಮನಾದ ಪರಮಪುರುಷನಾರಾಯಣನ ದಿವ್ಯರೂಪವನ್ನು ಧ್ಯಾನಿಸಬೇಕು.

**ಪಂಚವಿಂಶತಿತತ್ತ್ವಾನಾಂ ದೇವತಾಸ್ತದನಂತರಮ್ ।**
**ಸ್ಥಾಪಯೇತ್ಪ್ರತಿಮಾಮಧ್ಯೇ ಪರಿತಃ ಕೇಶವಸ್ಯ ತು ॥ ೯೯ ॥**

ಅನಂತರ ಪ್ರತಿಮಾಮಧ್ಯದಲ್ಲಿ ಸನ್ನಿಹಿತವಾದ ಭಗವತ್ಸ್ವರೂಪದ ಸುತ್ತಲೂ ಪಂಚವಿಂಶತಿತತ್ತ್ವಾಭಿಮಾನಿದೇವತೆಗಳ ಸನ್ನಿಧಾನವನ್ನೂ ಧ್ಯಾನಿಸಬೇಕು.

---

೧ 'ತತ್ತನ್ಮೂರ್ತಿಮನುಂ=ಪ್ರತಿಷ್ಠಾಪ್ಯದೇವತಾಮಂತ್ರಮಿತ್ಯರ್ಥಃ ।' (ನಾರಾ.)

೨ 'ಮಂತ್ರೀ=ಮಂತ್ರಾರ್ಥಜ್ಞಾನವಾನ್ ಮಂತ್ರಸಿದ್ಧಿಮಾಂಶ್ಚ ಪುರುಷಃ ।' (ಛಲಾ.)

೩ 'ಪ್ರತಿಮಾಂ ಪ್ರತಿಮಾಂತಸ್ಥಂ ವಾಯೋಸ್ತೇಜೋಮಯೀಂ ಸುಧೀಃ ।
ವಿಷ್ಣೋರ್ವಪುಶ್ಚ ತನ್ಮಧ್ಯೇ ಧ್ಯಾಯೇದಾನಂದಚಿದ್ಘನಮ್ ॥'

**ತತ್ರಾsತ್ವಾಹಾರ್ಷಸೂಕ್ತಂ[1] ಚ ಘರ್ಮಸೂಕ್ತಂ ಚ ವೈಷ್ಣವಮ್ ।**
**ಸೂಕ್ತಂ ಚ ವಿಶ್ವಕರ್ಮೀಣಯಂ[2] ಪೌರುಷಂ ಸೂಕ್ತಮೇವ ಚ ॥೧೦೦॥**
**ಜಪ್ತ್ವಾ ಚೈವ ನಿಜಂ ಮಂತ್ರಂ ಪುನರಷ್ಟಾಕ್ಷರಂ ಸುಧೀಃ ।**
**ಪ್ರಣವಂ ಚ ಜಪೇದ್ವಿಷ್ಣುಂ ಧ್ಯಾಯನ್ನುತ್ತಮರೂಪಿಣಮ್ ॥೧೦೧॥**

ಅನಂತರ ಪ್ರತಿಮೆಯ ಹೃದಯಸ್ಥಾನವನ್ನು ಸ್ಪರ್ಶಿಸಿಕೊಂಡು 'ಆತ್ವಾ-ಹಾರ್ಷಮಂತರೇಧಿ' (ಋ. ೮-೮-೩೧) ಇತ್ಯಾದಿ ಸೂಕ್ತವನ್ನೂ, 'ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಃ' (ಋ. ೮-೬-೧೬) ಇತ್ಯಾದಿ ಘರ್ಮಸೂಕ್ತ ವನ್ನೂ, 'ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ' (ಋ. ೨-೨-೨೪) ಇತ್ಯಾದಿ ವೈಷ್ಣವಸೂಕ್ತವನ್ನೂ 'ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವ-ತೋಬಾಹುಃ' (ಋ.೮-೩-೧೬) ಇತ್ಯಾದಿ ವಿಶ್ವಕರ್ಮಸೂಕ್ತವನ್ನೂ, 'ಸಹಸ್ರ ಶೀರ್ಷಾ ಪುರುಷಃ' (ಋ. ೮-೪-೧೭) ಇತ್ಯಾದಿ ಪುರುಷಸೂಕ್ತವನ್ನೂ ಜಪಿಸಿ ಸರ್ವೋತ್ತಮನಾದ ವಿಷ್ಣುವನ್ನು ಮನಸ್ಸಿನಲ್ಲಿ ನೆನೆದುಕೊಂಡು ಪ್ರತಿಷ್ಠಾಪ್ಯ ಮೂರ್ತಿಯ ಮಂತ್ರವನ್ನೂ, ನಾರಾಯಣಾಷ್ಟಾಕ್ಷರವನ್ನೂ ಪ್ರಣವವನ್ನೂ ಜಪಿಸಬೇಕು.

**ತತಸ್ತು ಕಲಶೈರ್ಬಾಹ್ಯಕ್ರಮೇಣೈವ ಜನಾರ್ದನಮ್ ।**
**ಸ್ನಾಪಯೇದುಕ್ತಮಂತ್ರೈಸ್ತು ಮಧ್ಯಮಂ ಪ್ರಣವೇನ ತು ॥ ೧೦೨ ॥**
**ಅಷ್ಟಾರ್ಣೇನ ನಿಜೇನಾಪಿ ತಥಾ ಪುರುಷಸೂಕ್ತತಃ ।**
**ಆವಾಹನಂ ಚ ಸ್ನಪನಂ ಪಂಚಗವ್ಯಸ್ಯ ಮಧ್ಯವತ್ ॥ ೧೦೩ ॥**

ಅನಂತರ ಸಹಸ್ರಾದಿಕಲಶಗಳಿಂದ, ಹೊರಭಾಗದ ಕಲಶಗಳಾದ ನಂತರ ಒಳಭಾಗದ ಕಲಶಗಳಂತೆ, ಕ್ರಮವಾಗಿ ಭಗವತ್ಪ್ರತಿಮೆಯನ್ನು ಅಭಿಷೇಚಿಸ ಬೇಕು. ಆಗ ಹೇಳಬೇಕಾದ ಮಂತ್ರಗಳು ಹಿಂದೆ ಹೇಳಿದ 'ಆತ್ವಾಹಾರ್ಷ-ಸೂಕ್ತ' ಮೊದಲಾದವುಗಳೆ. ಆದರೆ ಮಧ್ಯದ ಬ್ರಾಹ್ಮಕಲಶವನ್ನು ಮಾತ್ರ ಪ್ರಣವ, ಅಷ್ಟಾಕ್ಷರ, ಪ್ರತಿಷ್ಠೇಯದೇವತಾಮಂತ್ರ ಮತ್ತು ಪುರುಷಸೂಕ್ತ ಇವುಗಳಿಂದ ಮಾತ್ರ ಅಭಿಷೇಚಿಸಬೇಕು. ಪಂಚಗವ್ಯದ ಕಲಶದಲ್ಲಿ ಆವಾ ಹನೆ ಮಾಡತಕ್ಕ ದೇವತೆಗಳನ್ನೂ, ಅದರ ಅಭಿಷೇಕಮಂತ್ರಗಳನ್ನೂ ಹಿಂದೆ

---

೧ 'ವಿಶ್ವತಶ್ಚಕ್ಷು'ರಿತಿವದಯಂ ನಾಮನಿರ್ದೇಶಃ ।

೨ 'ವಾ ನಾಮಧೇಯಸ್ಯ ವೃದ್ಧಸಂಜ್ಞೇ'ತಿ ಶ್ರವಣಾತ್ 'ವಿಶ್ವಕರ್ಮೀಣಯ-ಮಿ'ತಿ ಸಾಧು ।

ಪ್ರತ್ಯೇಕವಾಗಿ ಹೇಳಿರದಿದ್ದರೂ ಪಾತ್ರಪ್ರಕಾರಕ್ಕೆ ಹೇಳಿದ ರೀತಿಯನ್ನೇ ಪಂಚ ಗವ್ಯಕಲಶಕ್ಕೂ ಅನ್ವಯಿಸಿಕೊಳ್ಳಬೇಕು. ಅದರಂತೆಯೇ ಆವಾಹನೆ, ಅದರಂತೆಯೇ ಅಭಿಷೇಕ.

**ಪೂರ್ವಾದ್ಯುತ್ತರಪರ್ಯಂತೈಃ ಕಲಶಕ್ರಮ ಉಚ್ಯತೇ ।**
**ಜಪ್ತ್ವಾ ಪುನಶ್ಚ ತನ್ಮಂತ್ರಾನ್ ಪೂಜಯೇಚ್ಚ ವಿಧಾನತಃ ॥ ೧೦೪ ॥**

ಸುತ್ತಲೂ ಇರುವ ಕಮಲಗಳಲ್ಲಿ ಪೂರ್ವದಿಂದ ಮೊದಲುಗೊಂಡು ಉತ್ತರದ ವರೆಗೆ ಒಂದೊಂದೇ ಕಮಲದ ಕಲಶಗಳನ್ನು ತೆಗೆಯುತ್ತಾ ಬರಬೇಕು. ಪೂರ್ವಾದಿ ಕಮಲದಲ್ಲಿರುವ ಐದು ಕಲಶಗಳಲ್ಲೂ ಇದೇ ತೆರನಾಗಿ ಕಮಲದ ಪೂರ್ವದಲದ ಕಲಶವನ್ನು ಮೊದಲು ತೆಗೆದು ಕ್ರಮವಾಗಿ ಉತ್ತರ ಕಲಶವನ್ನು ತೆಗೆದ ನಂತರ ಮಧ್ಯಕಲಶವನ್ನು ತೆಗೆದು ಅಭಿಷೇಚಿಸಬೇಕು. ಈ ಎಲ್ಲಾ ಕಲಶಗಳನ್ನೂ ಅಭಿಷೇಚಿಸಿದ ನಂತರ ಹಿಂದೆ ಹೇಳಿದ 'ಆತ್ಮಾವಹಾ-ಷಾರ್'ದಿ ಮಂತ್ರಗಳನ್ನು ಮತ್ತೊಮ್ಮೆ ಜಪಿಸಿ ಪ್ರಥಮಾಧ್ಯಾಯದಲ್ಲಿ ಬರೆದ ವಿಧಾನದಿಂದ ಪೂಜಿಸಬೇಕು.

**ದ್ವಾರಲೋಕಪತಿಭ್ಯಶ್ಚ ಬಲಿಂ[1] ದತ್ವಾ ಯಥಾಕ್ರಮಮ್ ।**
**ವಸ್ತ್ರರತ್ನಹಿರಣ್ಯಾದ್ಯೈರಲಂಕೃತ್ಯ ವಿಭೂತಿತಃ ॥ ೧೦೫ ॥**
**ಗುರವೇ ದಕ್ಷಿಣಾಂ ದದ್ಯಾತ್ಕೋಟಿಂ ಲಕ್ಷಂ ಸಹಸ್ರಕಮ್[2] ।**

---

೧ 'ಬಲಿಃ ಪೂಜೋಪಹಾರೇ ಚ' (ನಾನಾರ್ಥರತ್ನಮಾಲಾ)

ದ್ವಾರಪಾಲಕರು ನಂದ, ಸುನಂದ, ಚಂಡ, ಪ್ರಚಂಡ, ಜಯ, ವಿಜಯ, ಕುಮುದ, ಕುಮುದೇಕ್ಷಣ– ಎಂಟು ಮಂದಿ. ಆದರೆ ಗ್ರಂಥಾಂತರಗಳಲ್ಲಿ ನಾಮವ್ಯತ್ಯಾಸವೂ ಕಂಡುಬಂದಿದೆ.

ಒಂದು ತಂತ್ರದಲ್ಲಿ ಹೀಗಿದೆ—

'ನಂದಃ ಸುನಂದಶ್ಚಂಡಾಖ್ಯಃ ಪ್ರಚಂಡೋ ಬಲನಾಮಕಃ ।
ಪ್ರಬಲೋ ಭದ್ರನಾಮಾ ಚ ಸುಭದ್ರೋ ವೈಷ್ಣವಾ ಮತಾಃ ॥'

ಇನ್ನೊಂದು ಗ್ರಂಥದಲ್ಲಿ ಇನ್ನೊಂದು ತೆರನಾಗಿದೆ—

'ಚಂಡಪ್ರಚಂಡೌ ಪ್ರಾಗ್ದ್ವಾರ್ಸ್ಥೌ ವಿಧಾತಾರೌ ಚ ದಕ್ಷಿಣೇ ।
ಜಯಶ್ಚ ವಿಜಯಃ ಪಶ್ಚಾದ್ಬಲಃ ಪ್ರಬಲ ಉತ್ತರೇ ॥'

೨ ಈ ಮೊತ್ತ ರಾಜರೂ, ಚಕ್ರವರ್ತಿಗಳೂ ದೇವಾಲಯವನ್ನು ಕಟ್ಟಿಸುವುದಿದ್ದರೆ ಕೊಡಬೇಕಾದ ದಕ್ಷಿಣೆಯ ಸಂಖ್ಯೆಯನ್ನು ಸೂಚಿಸುತ್ತದೆ.

**ಶತಸುವರ್ಣಂ ತದರ್ಧಂ ವಾ ಶಕ್ತಿಹೀನೋ ಭಕ್ತ್ಯಾ ಕ್ಷಮಾಪಯೇತ್ ।**
**ತದರ್ಧಮೃತ್ವಿಜಾಂ[1] ದದ್ಯಾದಪರಾರ್ಧಂ ಪಾರಣಾಕೃತಾಮ್[2] ॥ ೧೦೬ ॥**

ಅನಂತರ ದ್ವಾರಪಾಲಕರಿಗೂ, ಇಂದ್ರಾದಿದಿಕ್ಪಾಲಕರಿಗೂ ಕ್ರಮಪೂರ್ವಕವಾಗಿ ಬಲಿಯನ್ನಿತ್ತು, ಗುರುಗಳನ್ನು ವಸ್ತ್ರ, ರತ್ನ, ಬಂಗಾರಗಳಿಂದ ಶಕ್ತ್ಯನುಸಾರವಾಗಿ ಅಲಂಕರಿಸಿ ಒಂದು ಕೋಟಿಯೋ, ಲಕ್ಷವೋ, ಸಹಸ್ರವೋ, ನೂರೋ ನಾಣ್ಯಗಳನ್ನು ದಕ್ಷಿಣೆಯಾಗಿ ಅರ್ಪಿಸಬೇಕು; ಇಲ್ಲವೆ ಐವತ್ತೋ, ಇಪ್ಪತ್ತೈದೋ ನಾಣ್ಯಗಳನ್ನಾದರೂ ಅರ್ಪಿಸಬೇಕು. ಅದಕ್ಕೂ ಶಕ್ತಿಯಿಲ್ಲದ ಬಡವನಾದರೆ, ಯಥಾಶಕ್ತಿಯಿತ್ತು ತನ್ನ ಅಶಕ್ತಿಗಾಗಿ ಗುರುಗಳಲ್ಲಿ ಭಕ್ತಿಯಿಂದ ಕ್ಷಮೆ ಕೇಳಿಕೊಳ್ಳಬೇಕು. ಗುರುದಕ್ಷಿಣೆಯ ಅರ್ಧದಷ್ಟು ಋತ್ವಿಕ್ಕುಗಳಿಗೂ, ಅಪರ ಅರ್ಧದಷ್ಟು ಪಾರಾಯಣದವರಿಗೂ ಕೊಡಬೇಕು.

## ಅನ್ನಾರಾಧನೆ

**ಆ ಶ್ವಭ್ಯ ಆ ಶ್ವಪಾಕೇಭ್ಯೋ[3] ದದ್ಯಾದನ್ನಂ ಸಮಸ್ತಶಃ ।**
**ಪುರಸ್ತಾತ್ಪರತಶ್ಚೈವ ಸಪ್ತರಾತ್ರಂ ನಿರಂತರಮ್ ॥ ೧೦೭ ॥**

---

೧ ಯಾಗಾದಿ ಕರ್ಮವಿಶೇಷವನ್ನು ನಿರ್ವಹಿಸುವುದಕ್ಕೋಸ್ಕರ ಸ್ವೀಕರಿಸಿದ ಪುರೋಹಿತರಿಗೆ 'ಋತ್ವಿಕ್' ಎಂದು ಹೆಸರು—

'ಅಗ್ನ್ಯಾಧೇಯಂ ಪಾಕಯಜ್ಞಾನಗ್ನಿಷ್ಟೋಮಾದಿಕಾನ್ ಮಖಾನ್ ।
ಯಃ ಕರೋತಿ ವೃತೋ ಯಸ್ಯ ಸ ತಸ್ಯರ್ತ್ವಿಗಿಹೋಚ್ಯತೇ ॥' (ಮನು)

೨ 'ಪಾರಣಾಕೃತಾಂ=ವೇದಪಾರಾಯಣಕೃತಾಮ್ ।' (ಸಾರಾ)

'ಪಾರಣ' ಮತ್ತು 'ಪಾರಣಾ' ಶಬ್ದಗಳು ವಸ್ತುತಃ 'ಉಪವಾಸೋತ್ತರ-ಭೋಜನ' ಎಂಬ ಅರ್ಥವನ್ನು ಬೋಧಿಸುತ್ತವೆ. ಆದರೆ ಇಲ್ಲಿ 'ಪಾರಾಯಣ' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಎಂತಲೇ 'ಪಾರಣಾ' ಎಂಬ ಶಬ್ದಕ್ಕೆ 'ಪಾರಾಯಣ' ಎಂಬ ಅರ್ಥವೂ ಸಾಧು ಎಂದು ತಿಳಿದುಬರುವುದು.

ಆಚಾರ್ಯರ್ತ್ವಿಗ್ದಕ್ಷಿಣೆಯ ವಿಷಯದಲ್ಲಿ 'ಪಂಚರಾತ್ರ'ದಲ್ಲಿ ಕೆಳಗಿನಂತೆ ಉಲ್ಲೇಖವಿದೆ—

'ಸಹಸ್ರಕಲಶಸ್ನಾನೇ ತತ್ಸಂಖ್ಯಾ ವರ್ಣದಕ್ಷಿಣಾ ।
ತದರ್ಧಮಥವಾ ಪಾದೋ ಯಥಾಶ್ರದ್ಧಾ ಯಥಾವಸು ॥
ಯಾವತೀ ದಕ್ಷಿಣಾ ತೇಷಾಂ ಸ್ಯಾದರ್ಧಮಥ ಋತ್ವಿಜಾಮ್ ।
ಸಹಸ್ರಾನ್ ಬ್ರಾಹ್ಮಣಾನಂತೇ ಭೋಜಯೇದ್ದಕ್ಷಿಣಾಮಪಿ ॥' (ಪಾದ್ಮಸಂ.)

೩ ಚಂಡಾಲರಿಗೆ ಉಚ್ಛಿಷ್ಟವನ್ನಲ್ಲದೆ ಬೇರೆ ಅನ್ನವನ್ನೀಯಬಾರದು ಎನ್ನುವ ಸಂಪ್ರ

**ಸುವರ್ಣವಸ್ತ್ರರತ್ನಾದ್ಯೈರಾಗತಾಭ್ಯಾಗತಾನಪಿ[1] ।**
**ಪೂಜಯೇಚ್ಛಕ್ತಿತೋ ಭಕ್ತ್ಯಾ ಪ್ರೀಯತಾಂ ಭಗವಾನಿತಿ ॥ ೧೦೮ ॥**

ಅನ್ನದಾನ ಬ್ರಾಹ್ಮಣರಿಗೆ ಮಾತ್ರ ಸೀಮಿತವಾಗಿರಬಾರದು, ಎಲ್ಲ ಜಾತಿಯ ಜನವೂ, ಚಂಡಾಲರೂ ಸಹ ಉಂಡುತಣಿವಂತೆ ಅನ್ನವನ್ನೀಯಬೇಕು; ಮನುಷ್ಯರೇ ಅಲ್ಲ ನಾಯಿಮೊದಲಾದ ಪಶುಗಳೂ ತಣಿವಂತೆ ಅನ್ನಸಂತರ್ಪಣೆ ನಡೆಯಬೇಕು; ಒಟ್ಟು ಎಲ್ಲ ಪ್ರಾಣಿಯೂ ಉಣ್ಣುವಂತಾಗಬೇಕು. ಈ ಅನ್ನಸಂತರ್ಪಣೆ ಪ್ರತಿಷ್ಠೆಯ ಮೊದಲು ಏಳು ದಿನಗಳು, ಅನಂತರ ಏಳು ದಿನಗಳು, ಒಟ್ಟು ಒಂದು ಪಕ್ಷಕಾಲ ನಡೆಯಬೇಕು. ಅತಿಥಿ ಅಭ್ಯಾಗತರನ್ನು ಕೂಡ ನಾನಾತೆರನಾದ ವಸ್ತ್ರ ಒಡವೆಗಳಿಂದ ಯಾವಚ್ಛಕ್ತಿ ಉಪಚರಿಸಬೇಕು. ಈ ಎಲ್ಲ ಉಪಚಾರ ಸಂತರ್ಪಣಗಳ ಹಿಂದೆಯೂ 'ಭಗವಂತನು ಪ್ರೀತನಾಗಲಿ' ಎನ್ನುವ ಅನುಸಂಧಾನ ಜಾಗೃತವಾಗಿರಬೇಕು.

---

ದಾಯವಾದಿಗಳಾದ ವ್ಯಾಖ್ಯಾತೃಗಳು ಈ ವಾಕ್ಯಕ್ಕೆ ಕೆಳಗಿನಂತೆ ತಾತ್ಪರ್ಯವನ್ನು ಬರೆದಿದ್ದಾರೆ—

'ಬ್ರಾಹ್ಮಣಭೋಜನಾನಂತರಂ ಬಹಿರುಚ್ಛಿಷ್ಟಪ್ರಕ್ಷೇಪೇ ತದ್ಭೋಜನೇನ ಯಥಾ ಶ್ವಚಂಡಾಲಾಸ್ತೃಪ್ಯೇರನ್ ತಥಾ ಬ್ರಾಹ್ಮಣೇಭ್ಯಃ ಪರಿವೇಶಯೇದಿತಿ ಭಾವಃ ।' (ನಾರಾ.)

'ಬ್ರಾಹ್ಮಣಭೋಜನಾನಂತರಂ ಬಹಿರುಚ್ಛಿಷ್ಟಪ್ರಕ್ಷೇಪೇ ಸತಿ ತದ್ಭೋಜನೇನ ಯಥಾ ಶುನಕಚಂಡಾಲಾದ್ಯಾಸ್ತೃಪ್ಯೇರನ್ ತಥಾ ಬ್ರಾಹ್ಮಣೇಭ್ಯಃ ಪರಿವೇಶಯೇದಿತ್ಯಾಹುಃ ।' (ಛಲಾ.)

೧ 'ಆಗತ' ಎಂದರೆ—ಆಕಸ್ಮಿಕವಾಗಿ ಮಾರ್ಗಕ್ರಮದಿಂದ ಬಂದ ಅತಿಥಿ. 'ಅಭ್ಯಾಗತ' ಎಂದರೆ—ಉತ್ಸವವನ್ನುದ್ದೇಶಿಸಿ, ಅಥವಾ ಆಹ್ವಾನಪೂರ್ವಕವಾಗಿ ಬಂದವನು.

'ಯದೃಚ್ಛಯಾ ಸಮಯ ಆಗತಾನ್, ಅಭ್ಯಾಗತಾನ್, ಅಭಿ=ಉತ್ಸವಮುದ್ದಿಶ್ಯೈವ ಆಗತಾನ್, ಅತಿಥೀನ್ ಅಭ್ಯಾಗತಾಂಶ್ಚ, ಕದಾಽಪ್ಯದೃಷ್ಟೋಽತಿಥಿಃ, ಪೂರ್ವದೃಷ್ಟೋಽಭ್ಯಾಗತ ಇತಿ ವಿಶೇಷಃ ।' (ಛಲಾ.)

'ಯದೃಚ್ಛಯಾ ಆಗತಾಃ ಆಗತಾಃ, ಉತ್ಸವಮುದ್ದಿಶ್ಯಾಗತಾ ಅಭ್ಯಾಗತಾಃ ।' (ನಾರಾ)

'ಆಗಂತುರತಿಥಿರ್ನಾ ಗೃಹಾಗತೇ' (ಅಮರ.) ತಸ್ಮಾದಾಗತಃ=ಆಗಂತುಃ ।
'ಅನಿತ್ಯಾಽಸ್ಯ ಸ್ಥಿತಿರ್ಯಸ್ಮಾತ್ತಸ್ಮಾದತಿಥಿರುಚ್ಯತೇ ।'

## ಅವಭೃಥಸ್ನಾನ

**ಗೀತನೃತ್ತೈಶ್ಚ ವಾದ್ಯೈಶ್ಚ[೧] ಪುರಾಣೈರಿತಿಹಾಸಕೈಃ ।**
**ಸ್ತೋತ್ರೈರ್ಮಂಗಲಘೋಷೈಶ್ಚ ವೈದಿಕೈರ್ದಿನಸಪ್ತಕಮ್ ॥ ೧೦೯ ॥**
**ನಯೇತ್ತತೋ ಮಹಾರಾಜವಿಭೂತ್ಯಾಽವಭೃಥಂ ಸುಧೀಃ ।**
**ಕಾರಯೇದ್ದೇವದೇವಸ್ಯ ಸ್ವಾಧ್ಯಾಯೈರ್ಗೀತನರ್ತನೈಃ ॥ ೧೧೦ ॥**
**ಮಹಾನದೀಸಂಗಮೇ ತು ತೀರ್ಥೇ ಚಾತಿಪ್ರಶಸ್ತಕೇ ।**
**ಸ್ನಾಪಯೇತ್ಪೂರ್ವವನ್ಮಂತ್ರೈಃ ಪುಂಸೂಕ್ತಾಂತೈಃ ಸ್ಮರನ್ ಹರಿಮ್ ॥**

ಪ್ರತಿಷ್ಠೆಯ ನಂತರದ ಏಳು ದಿನಗಳಲ್ಲೂ ರಾತ್ರಿಯಲ್ಲಿ ಸಂಗೀತ, ನರ್ತನ, ವಾದ್ಯಘೋಷಗಳನ್ನೇರ್ಪಡಿಸಬೇಕು; ಮತ್ತು ಆ ದಿನಗಳಲ್ಲಿ ಪುರಾಣಗಳು, ಭಾರತಾದಿ ಇತಿಹಾಸಗಳು—ಇವುಗಳ ಪಠನವಾಚನಗಳಿಂದ, ಸ್ತೋತ್ರಪಾಠಗಳಿಂದ, ವೇದಗಳ ಪುಣ್ಯಧ್ವನಿಯಿಂದ ಕಾಲವನ್ನು ಕಳೆಯಬೇಕು. ಏಳು ದಿನಗಳು ಕಳೆದ ಬಳಿಕ ಛತ್ರಚಾಮರಾದಿರಾಜವೈಭವಗಳಿಂದ ಕೂಡಿಕೊಂಡು, ಒಂದೆಡೆ ವೇದಧ್ವನಿ ಇನ್ನೊಂದೆಡೆ ನೃತ್ಯಗೀತಗಳು ಮೇಳವಿಸುತ್ತಿರಲು ಜಲಾಶಯದ ಬಳಿಸಾರಿ, ಮಹಾನದಿಗಳ ಸಂಗಮಸ್ಥಳದಲ್ಲಾಗಲಿ ಪುಣ್ಯತೀರ್ಥಗಳಲ್ಲಾಗಲಿ ಹಿಂದೆ ಹೇಳಿದಂತೆ 'ಆಪೋಹಿಷ್ಠಾದಿಸೂಕ್ತ', 'ಪುರುಷಸೂಕ್ತ' ಮೊದಲಾದ ಮಂತ್ರಗಳಿಂದ ಮನಸ್ಸಿನಲ್ಲಿ ಶ್ರೀಹರಿಯನ್ನೆ ನೆನೆದುಕೊಂಡು ಭಗವತ್ಪ್ರತಿಮೆಯನ್ನು ಮೀಯಿಸಬೇಕು. ಇದನ್ನು ಅವಭೃಥಸ್ನಾನ ಎನ್ನುವರು.

---

೧ ಇದರಿಂದ ನಾಟ್ಯಕಾರ್ಯಕ್ರಮವನ್ನು ಅಥವಾ ತೌರ್ಯತ್ರಿಕವನ್ನು ಮಾಡಿಸಬೇಕು ಎಂದ ಹಾಗಾಯಿತು.

'ತೌರ್ಯತ್ರಿಕಂ ನೃತ್ಯಗೀತವಾದ್ಯಂ ನಾಟ್ಯಮಿದಂ ತ್ರಯಮ್ ।' (ಅಮರ.)

ನೃತ್ಯಪ್ರಭೇದಗಳನ್ನು ಸಂಗೀತ ಗ್ರಂಥಗಳಿಂದ ತಿಳಿದುಕೊಳ್ಳಬಹುದು—

'ದೇವರುಚ್ಯಾ ಪ್ರತೀತೋ ಯಸ್ತಾಲಮಾನರಸಾಶ್ರಯಃ ।
ಸವಿಲಾಸೋಽಂಗವಿಕ್ಷೇಪೋ ನೃತ್ಯಮಿತ್ಯುಚ್ಯತೇ ಬುಧೈಃ ॥
ತಾಂಡವಂ ಚ ತಥಾ ಲಾಸ್ಯಂ ದ್ವಿವಿಧಂ ನೃತ್ಯಮುಚ್ಯತೇ ।
ಕ್ಲೇದನಂ ಭೇದನಂ ಯತ್ರ ಬಹುರೂಪಾ ಮುಖಾವಲೀ ।
ತಾಂಡವಂ ಬಹುರೂಪಂ ತತ್........'
ಛುರಿತಂ ಯೌವತಂ ಚೇತಿ ಲಾಸ್ಯಂ ದ್ವಿವಿಧಮುಚ್ಯತೇ ।
ಯತ್ರಾಭಿನಯಾದ್ಯೈರ್ಭಾವೈ ರಸೈರಾಶ್ಲೇಷಚುಂಬನೈಃ ।
ನಾಯಿಕಾನಾಯಕೌ ರಂಗೇ ನೃತ್ಯತಶ್ಛುರಿತಂ ಹಿ ತತ್ ।

ಮಧುರಂ ಬದ್ಧಲೀಲಾಭಿರ್ನಟೀಭಿರ್ಯತ್ರ ನೃತ್ಯತೇ ।
ವಶೀಕರಣವಿದ್ಯಾಖ್ಯಂ ತಲ್ಲಾಸ್ಯಂ ಯೌವತಂ ಮತಮ್ ।
ಗೇಯಾದುತ್ತಿಷ್ಠತೇ ವಾದ್ಯಂ ವಾದ್ಯಾದುತ್ತಿಷ್ಠತೇ ಲಯಃ ।
ಲಯತಾಲಸಮಾರಬ್ಧಂ ತತೋ ನೃತ್ಯಂ ಪ್ರವರ್ತತೇ ॥'

ರಸಿಕರಾದ ನಮ್ಮ ಪೂರ್ವಜರು ನೃತ್ತಕ್ಕೆ ಎಕ್ಕಿಯ ರೂಪಗಳನ್ನೆ ಅರಿಸಬೇಕು ಎನ್ನಲು ಮರೆಯಲಿಲ್ಲ—

'ನೃತ್ತೈಃನಾಲಮರೂಪೇಣ ಸಿದ್ಧಿರ್ನಾಟ್ಯಸ್ಯ ರೂಪತಃ ।
ಚಾರ್ವರ್ಥಿಷ್ಠಾನವನ್ನೃತ್ಯಂ ನೃತ್ಯಮನ್ಯದ್ವಿಡಂಬನಾ ॥' (ಮಾರ್ಕ. ಪು.)

ಜೀವನದಲ್ಲಿ ವಿರಾಗವನ್ನು ತಾಳಿದ ರಸಿಕತೆಯು ಭಕ್ತಿಯೇ ಗೃಹಸ್ಥನಿಗೆ ಬೇಕಾದುದು ಎಂಬ ತತ್ತ್ವವನ್ನು ಆಚಾರ್ಯರು ಇಲ್ಲಿ ಸೂಚಿಸಿದ್ದಾರೆ. ದೇವತಾಭಕ್ತಿಯಿಂದ ಸಂಸಾರ ವಿಮುಕ್ತರಾಗಬೇಡಿ, ಸಂಸಾರಿಗರಾಗಿ ದೇವರನ್ನು ಪೂಜಿಸಿ– ಎಂದು ಆಚಾರ್ಯರು ಗೃಹಸ್ಥರನ್ನು ಎಚ್ಚರಿಸಿದ್ದಾರೆ. ಈ ಮಾತನ್ನು ವ್ಯಾಸರೂ ಕೂಡ ಪುರಾಣಗಳಲ್ಲಿ ಉಲ್ಲೇಖಿಸಿದ್ದಾರೆ. ಶಿವಪುರಾಣದಲ್ಲಿ ರುದ್ರನು ಪಾರ್ವತಿಯ ಬಳಿ ನುಡಿದ ಮಾತು ಮಾರ್ಮಿಕವಾಗಿದೆ—

'ನ ಗೃಹೀ ಜ್ಞಾನಮಾತ್ರೇಣ ಪರತ್ರೇಹ ಚ ಮಂಗಲಮ್ ।
ಪ್ರಾಪ್ನೋತಿ ಚಂದ್ರವದನೇ ದಾನಹೋಮಾದಿಭಿರ್ವಿನಾ ॥
ಪರಿವ್ರಾಡವಿರಕ್ತಶ್ಚ ವಿರಕ್ತಶ್ಚ ಗೃಹೀ ತಥಾ ।
ಕುಂಭೀಪಾಕೇ ನಿಮಜ್ಜೇತೇ ದ್ವಾವಿಮೌ ಕಮಲಾನನೇ ॥
ಪುಣ್ಯಾಃ ಸ್ತ್ರಿಯೋ ಗೃಹಸ್ಥಾಶ್ಚ ಮಂಗಲೈರ್ಮಂಗಲಾರ್ಥಿನಃ ।
ಪೂಜೋಪಕರಣೈಃ ಕುರ್ಯುರ್ದದ್ಯುರ್ದಾನಾನಿ ಚಾರ್ಪಣಾಮ್ ॥'

ನೃತ್ಯಕ್ಕೆ ಸಹಾಯಕವಾದ ಗೀತದ ವಿವರಗಳನ್ನೂ ಶಾಸ್ತ್ರಗ್ರಂಥಗಳಿಂದ ತಿಳಿದುಕೊಳ್ಳಬಹುದು—

'ಧಾತುಮಾತ್ರಾಸಮಾಯುಕ್ತಂ ಗೀತಮಿತ್ಯುಚ್ಯತೇ ಬುಧೈಃ ।
ತತ್ರ ನಾದಾತ್ಮಕೋ ಧಾತುರ್ಮಾತ್ರಾ ಹ್ಯಕ್ಷರಸಂಚಯಃ ॥
'ಗೀತಂ ಚ ದ್ವಿವಿಧಂ ಪ್ರೋಕ್ತಂ ಯಂತ್ರಗಾತ್ರವಿಭೇದತಃ ।
ಯಂತ್ರಂ ಸ್ಯಾದ್ವೇಣುವೀಣಾದಿ ಗಾತ್ರಂ ತು ಮುಖಜಂ ಮತಮ್ ॥

ವಾದ್ಯಗಳನ್ನು ಪ್ರಾಚೀನರು ನಾಲ್ಕು ವಿಧವಾಗಿ ವಿಭಾಗಿಸಿದ್ದಾರೆ—

'ತತಂ ವೀಣಾದಿಕಂ ವಾದ್ಯಮಾನದ್ಧಂ ಮುರಜಾದಿಕಮ್ ।
ವಂಶಾದಿಕಂ ತು ಶುಷಿರಂ ಕಾಂಸ್ಯತಾಲಾದಿಕಂ ಘನಮ್ ।
ಚತುರ್ವಿಧಮಿದಂ ವಾದ್ಯಂ ವಾದಿತ್ರಾತೋದ್ಯನಾಮಕಮ್ ॥' (ಅಮರ.)

ವಾದ್ಯಗಳನ್ನು ಶಾಸ್ತ್ರಕಾರರು ಬಹುವಾಗಿ ಪ್ರಶಂಸಿಸಿದ್ದಾರೆ—

'ಕೃಷ್ಣಸ್ಯಾಷ್ಟಮಹಿಷೀಣಾಂ ಪುರೋದ್ವಾಹಮಹೋತ್ಸವೇ ।

**ತತಃ ಪೂರ್ವವದಾಗತ್ಯ ಪ್ರವೇಶ್ಯ ಪುರುಷೋತ್ತಮಮ್ ।**
**ಪೂಜಯಿತ್ವಾ ವಿಧಾನೇನ ದತ್ವಾ ದಾನಾನಿ ಶಕ್ತಿತಃ ।**
**ಗುರುಂ ಚ ಭಕ್ತ್ಯಾ ಸಂಪೂಜ್ಯ ಸ್ವೀಕುರ್ಯಾದಾಶಿಷಸ್ತತಃ ॥೧೧೨॥**

ಅನಂತರ ಹಿಂದಿನಂತೆಯೇ ರಾಜವೈಭವಗಳಿಂದ ದೇವಮಂದಿರಕ್ಕೆ ಹಿಂದಿರುಗಿ ಗರ್ಭಗೃಹಮಧ್ಯದಲ್ಲಿ ಭಗವತ್ಪ್ರತಿಮೆಯನ್ನು ಪ್ರತಿಷ್ಠಾಪಿಸಿ[1], ಪೂರ್ವೋಕ್ತವಿಧಿಯಿಂದ ಪೂಜೆಯನ್ನು ನೆರವೇರಿಸಿ, ಶಕ್ತ್ಯನುಸಾರವಾಗಿ ಸದ್ವಿಪ್ರರಿಗೆ ದಾನಗಳನ್ನಿತ್ತು, ಗುರುಗಳನ್ನು ಉಡುಗರೆಯಿಂದ ತೃಪ್ತಿಗೊಳಿಸಿ, ಅವರಿಂದ ಆಶೀರ್ವಚನವನ್ನು ಪಡೆದುಕೊಳ್ಳಬೇಕು.

**ಶತಪ್ರಸ್ಥಾದನೂನಂ[2] ತು ನೈವೇದ್ಯಂ ಪಾಯಸೋತ್ತರಮ್ ।**

---

ತತಂ ಸುಷಿರಮಾನದ್ಧಂ ಘನಂ ಚ ಯುಗಪಜ್ಜನಾಃ ।
ಅವಾದಯನ್ನಸಂಖ್ಯಾತಮಿತಿ ಪೌರಾಣಿಕೀ ಶ್ರುತಿಃ ॥
ತತಂ ವಾದ್ಯಂ ತು ದೇವಾನಾಂ ಗಂಧರ್ವಾಣಾಂ ತು ಶೌಷಿರಮ್ ।
ಆನದ್ಧಂ ರಾಕ್ಷಸಾನಾಂ ತು ಕಿನ್ನರಾಣಾಂ ಘನಂ ವಿದುಃ ॥'

ಇಲ್ಲಿ 'ರಾಕ್ಷಸ' ಪದದಿಂದ 'ರಕ್ಷೋಗಂಧರ್ವಕಿನ್ನರಾಃ' ಎಂಬಲ್ಲಿ ಉಕ್ತರಾದ ದೇವಯೋನಿಗಳೇ ವಿವಕ್ಷಿತರು.

ಗೀತವಾದ್ಯಾದಿಗಳೆಲ್ಲ ವೇದದಿಂದಲೇ ಉತ್ಪನ್ನಗಳಾದುದರಿಂದಲೂ ವೇದವೇದ್ಯನಾದ ವೇದಪ್ರಿಯನಾದ ಶ್ರೀಹರಿಗೆ ನಾಟ್ಯವು ಪ್ರಿಯವಾಗಿದೆ ಎಂದು ಪ್ರಾಚೀನರ ಆಶಯ–

'ಋಗ್ಭಿರ್ವಾದ್ಯಮಭೂದ್ಗೀತಂ ಸಾಮಭ್ಯಃ ಸಮಪದ್ಯತ ।
ಯಜುರ್ಭ್ಯೋಽಭಿನಯಾ ಜಾತಾ ರಸಾಶ್ಚಾಥರ್ವಣಾಃ ಸ್ಮೃತಾಃ ॥'

೧ 'ಪ್ರತಿಷ್ಠಾಶಬ್ದಸಂಸಿದ್ಧಿಃ ಪ್ರತಿಪೂರ್ವಾತ್ತು ತಿಷ್ಠತೇಃ ।
ಬಹ್ವರ್ಥತ್ವಾನ್ನಿಪಾತಾನಾಂ ಸಂಸ್ಕಾರಾದೌ ಪ್ರತೇಃ ಸ್ಥಿತಿಃ ॥
ಅರ್ಥಸ್ತದಯಮೇತಸ್ಯ ಗೀಯತೇ ಶಾಬ್ದಿಕೈರ್ಜನೈಃ ।
ವಿಶೇಷಸನ್ನಿಧಿರ್ಯಾ ತು ಕ್ರಿಯತೇ ವ್ಯಾಪಕಸ್ಯ ಹಿ ।
ಸನ್ಮೂರ್ತೌ ಭಾವನಾಮಂತ್ರೈಃ ಪ್ರತಿಷ್ಠಾ ಸಾಭಿಧೀಯತೇ ॥'
(ಮಹಾಕಪಿಲಪಂಚರಾತ್ರ)

೨ 'ಪ್ರಸ್ಥ' ಎಂದರೆ ೪೮ (೨ ಸೇರು) ತೊಲೆಗಳಿಗೆ ಸಮನಾದ ಒಂದು ಅಳತೆ.

'ಪಲಂ ಪ್ರಕುಂಚಕಂ ಮುಷ್ಟಿಃ ಕುಡವಸ್ತಚ್ಚತುಷ್ಟಯಮ್ ।
ಚತ್ವಾರಃ ಕುಡವಾಃ ಪ್ರಸ್ಥಶ್ಚತುಃಪ್ರಸ್ಥಮಥಾಢಕಮ್ ॥'

'ಕುಡವಶ್ಚತುಃಪಲಃ ಸ್ಯಾತ್ । ಪ್ರಸ್ಥಃ ಕುಡವೈಶ್ಚತುರ್ಭಿಃ ಸ್ಯಾತ್ । ಪ್ರಸ್ಥೈಶ್ಚತುರ್ಭಿರಾಢಕಃ ।'

**ದಿನೇಷ್ವೇತೇಷು ಪಾಕನ್ನಂ ಸಘೃತಂ ಸಸಿತಾದಿಕಮ್[೧] ।**
**ಪಶ್ಚಾದಪಿ ಯಥಾಶಕ್ತಿ ಪೂಜಾ ಕಾರ್ಯಾ ಹರೇಃ ಸದಾ ॥ ೧೧೩ ॥**

---

ಒಂದು 'ಪಲ' ಅಂದರೆ ೮ ತೊಲೆ ಪರಿಮಾಣ ಎಂದು ರಾಘವಭಟ್ಟನ ಮತ—

'ಶಾಸ್ತ್ರೋಕ್ತತೋಲಕಾಷ್ಟಕಂ ಪಲಮ್ ।' (ಪದಾರ್ಥಾದರ್ಶ)

ಆದರಿಂದ 'ಪ್ರಸ್ಥ' ಅಂದರೆ ೪ ಕುಡವಗಳು, ೧೬ ಪಲಗಳು ಅಥವಾ ೧೨೮ ತೊಲೆಗಳು ಎಂದಾಗುವುದು.

ಆದರೆ 'ಪಲ' ಅಂದರೆ ೩ ತೊಲೆಗಳು ಎಂದೂ ಉಲ್ಲೇಖವಿದೆ—

'ತೋಲಕತ್ರಿತಯಂ ಜ್ಞೇಯಂ ಜ್ಯೋತಿರ್ಜ್ಞೈಃ ಸ್ಮೃತಿಸಮ್ಮತಂ(ಪಲಮ್) ।'

ಈ ಪಕ್ಷದಲ್ಲಿ ೧ ಪ್ರಸ್ಥ=೪೮ ತೊಲೆ. ಲೋಕಪ್ರಸಿದ್ಧಿಯೂ ಹೀಗೆಯೇ ಇದೆ.

(ಇನ್ನೊಂದು ವಾಕ್ಯ ಮಾತ್ರ ಹೀಗಿದೆ—

'ದ್ವಾದಶಪ್ರಸೃತಿಭಿಃ ಕುಡವಸ್ತಚ್ಚತುರ್ಗುಣೋತ್ತರಂ ಪ್ರಸ್ಥಾಢಕದ್ರೋಣಾಃ ।'

ಅರ್ಥಾತ್ ಒಂದು ಪ್ರಸ್ಥ ಅಕ್ಕಿ ಅಂದರೆ ೪೮ ಸೆರೆ ಅಕ್ಕಿ.)

ಅಲ್ಲದೆ ಇನ್ನೂ ಇತರ ಗ್ರಂಥಗಳನ್ನು ವಿವೇಚಿಸುವಾಗ– ೧ ಪಲ=೩ ತೊಲೆ ಅನ್ನುವ ಪಕ್ಷವೇ ಸಾಧು ಎಂದು ಭಾಸವಾಗುವುದು. ಆದರಿಂದ (೩ ತೊಲೆ×೧೬=) ೪೮ ತೊಲೆಯೇ ಪ್ರಸ್ಥ. ಆದರಿಂದ ೧೦೦ ಪ್ರಸ್ಥ=೨೦೦ ಸೇರು=೫ ಮಣ.

ಶ್ರೀ. ಆಪ್ಟೆಯವರು ಮಾತ್ರ ೧ ಪ್ರಸ್ಥ=೩೨ ಪಲ ಎಂದು ಬರೆದಿದ್ದಾರೆ—

'ಪ್ರಸ್ಥ=A particular measure of capacity equal to thirty-two *palas*.' (V. S. Apte.)

ಮೇಲಿನ ವಿವರಣೆಗಳಿಂದ ಆಪ್ಟೆಯವರು ಬರೆದ ಅಳತೆ ಸರಿಯಾಗಿಲ್ಲ ಎಂದು ಕಂಡು ಬರುತ್ತದೆ.

ಛಲಾರೀಯ ವ್ಯಾಖ್ಯಾಕಾರರು ಇಲ್ಲಿ ಈ ಅಳತೆಗಳ ಗೋಜಿಗೇ ಹೋಗದೆ 'ಒಂದು ಪ್ರಸ್ಥ ಅನ್ನ=ಒಬ್ಬ ಮನುಷ್ಯ ಉಣಬಹುದಾದ ಅನ್ನ' ಎಂದು ಸುಲಭವಾದ ವ್ಯಾಖ್ಯೆಯನ್ನಿತ್ತಿದ್ದಾರೆ—

'ಪ್ರಸ್ಥಂ ನಾಮೈಕಪುರುಷಾಹಾರರೂಪಪರಿಮಾಣವಿಶೇಷಃ ।'

ಅಪರ ಪಕ್ಷದಲ್ಲಿ 'ಕನಿಷ್ಠವೆಂದರೆ ನೂರು ಮಂದಿಯ ಸಂತರ್ಪಣೆಗೆ ಸಾಲುವಷ್ಟು ಅನ್ನವನ್ನಾದರೂ ದಿನವೂ ಹರಿಗೆ ಅರ್ಪಿಸಬೇಕು' ಎಂದು ಮೂಲದ ಅರ್ಥ.

೧ 'ಪಾಯಸೋತ್ತರಂ=ಪಾಯಸಸಹಿತಮ್ ।' (ನಾರಾ.)

'ಖಂಡಂ ತು ಸಿಕತಾರೂಪಂ ಸುಶ್ವೇತೇ ಶರ್ಕರಾ ಸಿತಾ ।'

ಇಲ್ಲಿ ಛಲಾರೀಯದಲ್ಲಿ 'ಸಿತಂ ಶರ್ಕರಾ' ಎಂದು ತಪ್ಪಾಗಿ ಬಿದ್ದಿದೆ. ಸಿತಶಬ್ದ ಶಕ್ಕರೆ ಎಂಬರ್ಥದಲ್ಲಿ ನಿತ್ಯ ಸ್ತ್ರೀಲಿಂಗ.

'ಶರ್ಕರಾ ಸಿತಾ' (ಅಮರ.) 'ಶರ್ಕರಾಽಪಿ ಸಿತಾ' (ತ್ರಿಕಾಂಡಶೇ.)

'ಸಿತಮವಸಿತೇ ಚ ಬದ್ಧೇ ಧವಲೇ ತ್ರಿಷು । ಶರ್ಕರಾಯಾಂ ಸ್ತ್ರೀ'(ಮೇದಿನೀ.)

'ಶರ್ಕರಾ ಸಿಕತಾ ಸಿತಾ' (ಅಭಿಧಾನರತ್ನಮಾಲೆ)

ಆ ಏಳು ದಿನಗಳಲ್ಲಿ ನೂರು ಪ್ರಸ್ಥಕ್ಕೆ ಕಮ್ಮಿಯಾಗದಷ್ಟು ಅನ್ನವನ್ನೂ, ಪಾಯಸವನ್ನೂ, ಸಕ್ಕರೆ, ಜೇನು, ತುಪ್ಪ ಮೊದಲಾದುವನ್ನೂ ಶ್ರೀಹರಿಗೆ ಸಮರ್ಪಿಸಬೇಕು. ಅನಂತರದ ದಿನಗಳಲ್ಲಿ ಯಾವಜ್ಜೀವವೂ ಯಥಾಶಕ್ತಿ ಹರಿಪೂಜೆಯನ್ನು ನೆರವೇರಿಸುತ್ತಿರಬೇಕು.

## ಜೀರ್ಣೋದ್ಧಾರ

**ಜೀರ್ಣಾಲಯೋದ್ಧೃತೌ ಚೈವ ತತ್ತ್ವಮಂತ್ರಾನ್ ಸ್ವಕಂ ತಥಾ ।**
**ಪ್ರಾತಿಲೋಮ್ಯೇನ ಜಪ್ತ್ವೈವ ಮೂರ್ತೌ ಸಂಕೋಚಯೇದ್ಧರಿಮ್ ॥**

ಜೀರ್ಣಮಂದಿರವನ್ನು ಹೊಸತಾಗಿ ಕಟ್ಟಿಸುವ ಸಂದರ್ಭದಲ್ಲಿ ತತ್ತ್ವದೇವತಾಮಂತ್ರಗಳನ್ನೂ, ಆಯಾ ದೇವತಾಮಂತ್ರವನ್ನೂ ಸಂಹಾರಕ್ರಮದಿಂದ (ವ್ಯುತ್ಕ್ರಮವಾಗಿ) ಪಠಿಸಿ ಗರ್ಭಗೃಹ ಮಂಟಪಾದಿಗಳಲ್ಲೆಲ್ಲ ಸನ್ನಿಹಿತವಾಗಿರುವ ಭಗವದ್ವಿಭೂತಿಯನ್ನು ಸಂಕೋಚಗೊಂಡು ಪ್ರತಿಮೆಯಲ್ಲಷ್ಟೆ ಸನ್ನಿಹಿತವಾಗುವಂತೆ ಪ್ರಾರ್ಥಿಸಬೇಕು.[1]

**ಉಕ್ತೇನೈವ ವಿಧಾನೇನ ತದರ್ಥೈರ್ವಿಭವೈಃ ಸುಧೀಃ ।**
**ಪಾದಮಾತ್ರೈರಪಿ ಹರಿಂ ಸ್ನಾಪಯಿತ್ವಾ ಯಥೋದಿತಮ್[2] ॥೧೧೪॥**
**ಏತೇನೈವ ವಿಧಾನೇನ ಕೃತ್ವಾ ದೇವಾಲಯಂ ಪುನಃ ।**
**ಸ್ನಾಪಯೇತ್ಪುಂಡರೀಕಾಕ್ಷಂ ದ್ವಿಗುಣೇನ ಪ್ರವಾಹಣಾತ್[3] ॥ ೧೧೫ ॥**
**ವಿಭವೇನಾನುಲೋಮೇನ ಜಪನ್ಮಂತ್ರಾನ್ ಪುನಸ್ತಥಾ ।**
**ಆರಾಧಯೇಜ್ಜಗನ್ನಾಥಂ ಧ್ಯಾಯನ್ ಭಕ್ತ್ಯಾ ಯಥೋದಿತಮ್ ॥**

ಹಿಂದೆ ಹೇಳಿದಂತೆ ಚಕ್ರಾಬ್ಜಾದಿಮಂಡಲದಲ್ಲಿ ಕಲಶಾದಿಗಳನ್ನಿಟ್ಟು ಪ್ರತಿಷ್ಠಾಕಾಲದ ಅರ್ಧದಷ್ಟು ಅಥವಾ ಕಾಲುಪಾಲು ವೈಭವದಿಂದ ಶ್ರೀಹರಿಯನ್ನು ಮೀಯಿಸಿ (ದೇವಾಲಯ ನಿರ್ಮಾಣದ ತನಕ ಬೇರೊಂದೆಡೆಯಲ್ಲಿ ಕೊಂಡೊಯ್ದಿಡಬೇಕು.), ಅನಂತರ ಪೂರ್ವೋಕ್ತ ಲಕ್ಷಣಗಳನ್ನುಳ್ಳ ದೇವಾಲಯಗಳನ್ನು ನಿರ್ಮಿಸಿ (ಮತ್ತೆ ಭಗವಂತನನ್ನು ಗರ್ಭಗುಡಿಯಲ್ಲಿ ಪ್ರತಿಷ್ಠಾ

---

೧ ಭಗವತ್ಸನ್ನಿಧಾನವನ್ನು ಪ್ರತಿಮೆಯಲ್ಲಿ ಸಂಕೋಚಗೊಳಿಸಿದ ನಂತರ ಗರ್ಭಗುಡಿ ಮಂಟಪಾದಿಗಳಲ್ಲಿ ಶೂದ್ರರು ಕೆಲಸಕ್ಕೆ ತೊಡಗಬಹುದು ಎಂದು ತಾತ್ಪರ್ಯ.

೨ 'ಯಥಾ ಪ್ರಾಗುದಿತಂ ತೇನೈವ ವಿಧಾನೇನೇತಿ ಸಂಬಂಧಃ ।' (ನಾರಾ.)

೩ 'ಪ್ರವಾಹಣಾತ್=ಉದ್ಧರಣಕಾಲಕೃತೋತ್ಸವಾತ್ ।' (ಛಲಾ.)
'ಪ್ರವಾಹಣಾತ್=ಸನ್ನಿಧಿಸಂಕೋಚಕಾಲೀನವಿಭವಾತ್ ।' (ನಾರಾ.)

ಪಿಸಿ), ಉದ್ಧರಣಕಾಲಕ್ಕಿಂತ ದ್ವಿಗುಣಿತ ವೈಭವದಿಂದ ಪುನಃ ಭಗವತ್ಪ್ರತಿಮೆಯನ್ನು ಅಭಿಷೇಚಿಸಬೇಕು. ಮತ್ತೆ ಪುನಃ ತತ್ತ್ವದೇವತಾಮಂತ್ರಗಳನ್ನೂ ಮೂರ್ತಿಮಂತ್ರವನ್ನೂ ಸೃಷ್ಟಿಕ್ರಮದಿಂದ ಜಪಿಸಿ ಪ್ರಥಮಾಧ್ಯಾಯದಲ್ಲಿ ನಿರೂಪಿಸಿದಂತೆ ಹರಿಯನ್ನು ಭಕ್ತಿಯಿಂದ ನೆನೆಯುತ್ತಾ ಪೂಜಿಸಬೇಕು.

**ಯಾತ್ರಾ[1]ಽಪಿ ಪೂರ್ವವತ್ತತ್ರಾಪ್ಯುತ್ಸವೇಷು ಚ ಸರ್ವಶಃ |**
**ಕಲಶೋಕ್ತವಿಧಾನೇನ[2] ಪೂಜಾ ಬಲಿಹೃತಿಸ್ತಥಾ || ೧೧೮ ||**
**ಉತ್ಸವೇಷು ಸದಾ ಕಾರ್ಯಾ ಕಲಶಶ್ಚೋತ್ಸವಾದನು |**
**ಯಾತ್ರಾ ಸ್ನಾನಂ ಚ ಕರ್ತವ್ಯಂ ಸಮ್ಯಗುಕ್ತವಿಧಾನತಃ || ೧೧೯ ||**

ಪೂರ್ವೋಕ್ತ ವಿಧಿಯು ಅವಭೃಥಸ್ನಾನವು ಜೀರ್ಣೋದ್ಧಾರದ ನಂತರವೂ, ಎಲ್ಲ ಉತ್ಸವಗಳಲ್ಲಿಯೂ ವಿಹಿತವಾಗಿದೆ. ಪ್ರತಿಯೊಂದು ಉತ್ಸವಕಾಲದಲ್ಲಿಯೂ ಉಕ್ತವಿಧಿಪೂರ್ವಕವಾಗಿ ಕಲಶಸ್ಥಾಪನ, ಅಭಿಷೇಕಾದಿಗಳನ್ನು ನೆರವೇರಿಸಿ ಪೂಜಿಸಬೇಕು; ವಿಷ್ಣುಪಾರಿಷದರಿಗೆ ಬಲಿಯನ್ನೂ ಈಯಬೇಕು. ಉತ್ಸವಾನಂತರದಲ್ಲಿ ಹಿಂದೆ ಹೇಳಿದಂತೆ ಅವಭೃಥಸ್ನಾನವನ್ನು ಪೂರಯಿಸಿ ಕಲಶೋದಕದಿಂದಲೂ ಶ್ರೀಹರಿಯನ್ನು ಮೀಯಿಸಬೇಕು.

### ಸಂಪ್ರೋಕ್ಷಣವಿಧಿ

**ಚೋರಚಂಡಾಲಪತಿತಶ್ವೋದಕ್ಯಾದಿ[3]ಪ್ರವೇಶನೇ |**
**ಶವಾದ್ಯು[4]ಪಹತೌ ಚೈವ ಪೂಜಾವಿಚ್ಛೇದನೇ ತಥಾ |**
**ಸ್ನಪನೋಕ್ತೇನ ಮಾರ್ಗೇಣ ಪ್ರಾಯಶ್ಚಿತ್ತ[5]ವಿಧಿಃ ಸ್ಮೃತಃ[6] ||**

---

೧ 'ಯಾತ್ರಾಽವಭೃಥಸ್ನಾನಾರ್ಥಮ್' (ಛಲಾ.)

೨ 'ಕಲಶೇ ಉಕ್ತೇನ ವಿಧಾನೇನ, ಕಲಶಸ್ಥಾಪನಪೂರ್ವಕಮಭಿಷೇಕವಿಧಿನೇತ್ಯರ್ಥಃ |' (ಛಲಾ)

೩ ಶುದ್ಧ್ಯರ್ಥಮುದಕಾರ್ಹತ್ವಾದುದಕ್ಯಾ=ರಜಸ್ವಲಾ |
'ಉದಕ್ಯಾ=ರಜಸ್ವಲಾ, ಆದಿಶಬ್ದೇನ ಗರ್ದಭಾದಿಗ್ರಹಣಮ್ |' (ಛಲಾ.)

೪ 'ಆದಿಶಬ್ದೇನ ಪ್ರಸವಾದಿ ಗ್ರಾಹ್ಯಮ್ |' (ಛಲಾ.)

೫ ಪ್ರಾಯಶ್ಚಿತ್ತ ಶಬ್ದಾರ್ಥ 'ಪಾದ್ಮಸಂಹಿತೆ'ಯ 'ಚರ್ಯಾಪಾದ'ದಲ್ಲಿ ಉಕ್ತವಾಗಿದೆ–
'ಬ್ರಹ್ಮೋವಾಚ—
'ನೈಮಿತ್ತಿಕಾನಾಂ ನಿತ್ಯಾನಾಂ ಕರ್ಮಣಾಂ ಭಗವನ್ ಹರೇ |
ಆರಾಧನಾನಾಂ ವೈಕಲ್ಯಂ ಲೋಪೋ ವಾ ಪ್ರಾಯಸಂಜ್ಞಿತಮ್ |
ತಸ್ಯ ಚಿತ್ತಂ ಸಮಾಧಾನಮಿತಿ ನಿರ್ವಚನಕ್ರಿಯಾ ||' (ಪಂಚರಾತ್ರ)
'ಪ್ರಾಯಃ ಪಾಪಂ ಸಮುದ್ದಿಷ್ಟಂ ಚಿತ್ತಂ ತಸ್ಯ ವಿಶೋಧನಮ್ |'

೬ 'ರಜಸ್ವಲಾಪ್ರವೇಶೇ ಚ ಸೇಕೇ ವರ್ಷಜಲೈರಪಿ |

ಪೂಜಾಯಾಶ್ಚೈವ ವಿಚ್ಛೇದೇ ಗರ್ದಭಾದಿಪ್ರವೇಶನೇ ।
ಭೂವನೌ ಖಾತೇ ತಥೋಽಚ್ಛಿಷ್ಟಸ್ಪರ್ಶನೇಽಪ್ಯಂಗದಾಹನೇ ।
ಪುನಃ ಸಂಪ್ರೋಕ್ಷಯೇದ್ಬಿಂಬಂ ನ ಪ್ರತಿಷ್ಠಾಂ ಸಮಾಚರೇತ್ ।'
(ಹಾರೀತಸ್ಮೃತಿ)

'ಪೂರ್ವಸ್ಥಾಪಿತಬಿಂಬಸ್ಯ ನ ಪುನಃ ಸ್ಥಾಪನಂ ಸ್ಮೃತಮ್ ।
ಸ್ಥಾಪ್ಯತೇ ಚೇನ್ಮಹಾದೋಷಸ್ತಸ್ಯ ಸಂಪ್ರೋಕ್ಷಣಂ ಸ್ಮೃತಮ್ ॥' (ಪಂಚರಾ.)

ಪುನಃ ಪ್ರತಿಷ್ಠೆಯೇ ನ್ಯಾಯ್ಯ ಎನ್ನುವ ಪಕ್ಷವೂ ತಂತ್ರಜ್ಞರಲ್ಲಿ ಕಂಡುಬರುವುದರಿಂದ ಮೇಲಿನ ಸ್ಮೃತಿಕಾರರು ಆ ಅನ್ಯಥಾಜ್ಞಾನವನ್ನು ಪ್ರಬಲವಾಗಿ ನಿಷೇಧಿಸಿದ್ದಾರೆ.

'ಏಕಾಹಪೂಜಾವಿಹತೌ ಕುರ್ಯಾದ್ದ್ವಿಗುಣಮರ್ಚನಮ್ ।
ತ್ರಿರಾತ್ರೇ ತು ಮಹಾಪೂಜಾಂ ಸಂಪ್ರೋಕ್ಷಣಮತಃಪರಮ್ ॥
ಮಾಸಾದೂರ್ಧ್ವಮನೇಕಾಹಂ ಪೂಜಾ ಯದಿ ವಿಹನ್ಯತೇ ।
ಪ್ರತಿಷ್ಠೈವೇಷ್ಯತೇ ಕೈಶ್ಚಿತ್ಕೈಶ್ಚಿತ್ಸಂಪ್ರೋಕ್ಷಣಕ್ರಮಃ ॥'

ಸಂಪ್ರೋಕ್ಷಣೆಯು ಅವಧಿ ಮೂರು ವರ್ಷಗಳ ವರೆಗೆ ಮಾತ್ರ. ಅದರ ನಂತರವಾದರೆ ಪ್ರತಿಮಾಂತರ ಪ್ರತಿಷ್ಠೆಯೇ ವಿಹಿತವೆಂದೂ 'ಪಂಚರಾತ್ರ'ದಿಂದ ತಿಳಿದುಬರುವುದು—

'ಸಂವತ್ಸರತ್ರಯಾದರ್ವಾಕ್ ಮಾಸಾದೂರ್ಧ್ವಮನರ್ಚಿತೇ ।
ಸಂಪ್ರೋಕ್ಷಣಂ ಭವೇದೂರ್ಧ್ವಂ ಪ್ರತಿಷ್ಠಾವಿಧಿರಿಷ್ಯತೇ ॥'
'ಸ್ನಪನಂ ಪಂಚಗವ್ಯೇನ ಸೂಕ್ತೇನ ಪುರುಷಾತ್ಮನಾ ।
ಶಾಂತಯೇ ಜುಹುಯಾದಗ್ನೌ ಬ್ರಾಹ್ಮಣಾನಪಿ ತರ್ಪಯೇತ್ ॥
ಊರ್ಧ್ವಂ ಸಂಪ್ರೋಕ್ಷಣಂ ಕಾರ್ಯಂ ಯಾವತ್ಸಂವತ್ಸರಾವಧಿ ।
ಪ್ರತಿಷ್ಠಾವಿಧಿರೂರ್ಧ್ವಂ ತು ವತ್ಸರಾದುಕ್ತವರ್ತ್ಮನಾ ॥
ತ್ರಿದಶಾದಿಪ್ರತಿಷ್ಠಾಯಾಂ ಪೂಜಾಲೋಪೋ ನ ದೂಷಣಮ್ ।
ಪ್ರಾಯಶ್ಚಿತ್ತಂ ತು ಮೂರ್ತೀನಾಂ ಪ್ರತಿಷ್ಠಾಯಾಮುದೀರಿತಮ್ ॥
ಶಾಲಗ್ರಾಮಶಿಲಾದೀನಾಂ ಪೂಜಾಲೋಪೋ ನ ದೂಷಣಮ್ ।
ತಥೈವಾಶುಚಿಸಂಸ್ಪರ್ಶೇ ಕ್ಷಾಲಯಿತ್ವಾಽರ್ಚಯೇತ್ಪುನಃ ॥' (ಪಾದ್ಮಸಂ.)

ಸಂಪ್ರೋಕ್ಷಣದ ವಿಸ್ತಾರವಾದ ವಿಧಿ ಗ್ರಂಥಾಂತರದಲ್ಲಿ ಉಕ್ತವಾಗಿದೆ—

'ಸಂಪ್ರೋಕ್ಷಣಂ ತು ದೇವಸ್ಯ ದೇವಮುದ್ವಾಸ್ಯ ಪೂರ್ವವತ್ ।
ಪಂಚ ಪಂಚ ಕ್ರಮೇಣೈವ ಸ್ನಾಪಯಿತ್ವಾ ಮೃದಂಭಸಾ ॥
ಗವಾಂ ರಸೈಶ್ಚ ಸಂಸ್ನಾಪ್ಯ ದರ್ಭತೋಯೈರ್ವಿಶೋಧ್ಯ ಚ ।
ಪ್ರೋಕ್ಷಯೇತ್ಪ್ರೋಕ್ಷಣೀತೋಯೈರ್ಮೂಲೇನಾಷ್ಟೋತ್ತರಂ ಶತಮ್ ॥
ಸಪುಷ್ಪಂ ಸಕುಶಂ ಪಾಣಿಂ ನ್ಯಸ್ಯ ದೇವಸ್ಯ ಮಸ್ತಕೇ ।
ಪಂಚವಾರಂ ಜಪೇನ್ಮೂಲಮಷ್ಟೋತ್ತರಶತೋತ್ತರಮ್ ॥

ಕಳ್ಳರು, ಚಂಡಾಲರು, ಪಾತಕಿಗಳು, ನಾಯಿ, ರಜಸ್ವಲೆಯಾದ ಹೆಂಗಸು ಮುಂತಾದವರು ದೇವಾಲಯವನ್ನು ಪ್ರವೇಶಿಸಿದರೆ, ಶವಾದಿಸಂಪರ್ಕದಿಂದ ಪರಿಸರ ಮಲಿನವಾದರೆ, ವಿಧಿನಿಹಿತವಾದ ಪೂಜೆಗೆಯು ಭಂಗಬಂದರೆ, ಹಿಂದೆ ಹೇಳಿದಂತೆ ಕಲಶಸ್ನಾಪನಪೂರ್ವಕವಾಗಿ ಪುನರಭಿಷೇಕವೇ ಅದಕ್ಕೆ ಪ್ರಾಯಶ್ಚಿತ್ತವೆಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ.

**ಸರ್ವತ್ರ ವಿಷ್ಣುಗಾಯತ್ರ್ಯಾ ಹೋಮಃ ಸ್ಯಾದಯುತಾವರಃ ।**
**ನಾವಾದ್ಯಭಿಧಾನಾನು[1] ವಿದ್ಮಹೇ ಧೀಮಹೇ[2] ತಥಾ ।**
**ಪ್ರಚೋದಯಾತ್ತ್ವಿತಿ ಯಾಧಸ್ತನ್ನೋ ಗಾಯತ್ರಿನಾಮಿಕಾ ॥೧೨೧॥**

ಪ್ರತಿಷ್ಠೆ, ಜೀರ್ಣೋದ್ಧಾರ ಮತ್ತು ಸಂಪ್ರೋಕ್ಷಣೆ–ಈ ಎಲ್ಲ ಸಮಯದಲ್ಲೂ ವಿಷ್ಣುಗಾಯತ್ರೀ ಮಂತ್ರದಿಂದ ಹತ್ತುಸಾವಿರಕ್ಕೆ ಕಮ್ಮಿಯಿರದಷ್ಟು ಹೋಮವನ್ನಾಚರಿಸಬೇಕು. 'ನಾ' ಮತ್ತು 'ವಾ' ಎಂಬ ಅಕ್ಷರಗಳಿಂದ ಮೊದಲಾಗುವ (ಚತುರ್ಥ್ಯಂತಗಳಾದ) ಪದಗಳ ನಂತರ ಕ್ರಮವಾಗಿ 'ವಿದ್ಮಹೇ' ಮತ್ತು 'ಧೀಮಹಿ' ಎಂಬ ಪದಗಳನ್ನೂ, (ಪ್ರಥಮಾಂತವಾದ) 'ವಿ' ಎಂಬ ಅಕ್ಷರದಿಂದ ಮೊದಲಾಗುವ ಪದದ ತುದಿ ಮೊದಲುಗಳಲ್ಲಿ 'ಪ್ರಚೋದಯಾತ್' ಮತ್ತು 'ತನ್ನಃ' ಎಂಬ ಪದಗಳನ್ನೂ ಸೇರಿಸಿದರೆ ವಿಷ್ಣುಗಾಯತ್ರಿಯ ರೂಪ ನಿಷ್ಪತ್ತಿಯಾಗುವುದು.[3]

---

ತತೋ ಮೂಲೇನ ಮೂರ್ಧಾದಿ ಪೀಠಾಂತಂ ಸಂಸ್ಪೃಶೇದಪಿ ।
ತತ್ತ್ವನ್ಯಾಸಂ ಲಿಪಿನ್ಯಾಸಂ ಮಂತ್ರನ್ಯಾಸಂ ಚ ವಿನ್ಯಸೇತ್ ॥
ಪ್ರಾಣಪ್ರತಿಷ್ಠಾಮಂತ್ರೇಣ ಪ್ರತಿಷ್ಠಾಪನಮಾಚರೇತ್ ।
ಪೂಜಾಂ ಚ ಮಹತೀಂ ಕುರ್ಯಾತ್ಸ್ವತಂತ್ರೋಕ್ತಾಂ ಯಥಾವಿಧಿ ॥'

೧ ನಾಕಾರಾದ್ಯಭಿಧಾನಂ ನಾರಾಯಣಾಯೇತಿ, ವಾಕಾರಾದ್ಯಭಿಧಾನಂ ವಾಸುದೇವಾಯೇತಿ । ವಿಕಾರಾದ್ಯಭಿಧಾನಂ ವಿಷ್ಣುರಿತಿ ।

೨ 'ಧೀಮಹೀತ್ಯಸ್ಯ ಪ್ರತಿಪದಂ 'ಧೀಮಹೇ' ಇತಿ' (ಭಲಾ.)

೩ ಒಟ್ಟಿಗೆ ಮಂತ್ರದ ಆಕಾರ ಈ ತೆರನಾಗುವುದು—

नारायणाय विद्महे । वासुदेवाय धीमहि । तन्नो विष्णुः प्रचोदयात् ।

ತಂತ್ರಾಂತರಗಳಲ್ಲಿ ಈ ಗಾಯತ್ರಿಗೆ 'ನಾರಾಯಣಗಾಯತ್ರೀ' ಎಂದು ಹೆಸರಿಸಿ ವಿಷ್ಣುಗಾಯತ್ರಿಯನ್ನು ಬೇರೆ ತೆರನಾಗಿ ಬರೆದಿದ್ದಾರೆ—

' ॐ त्रैलोक्यमोहनाय विद्महे स्मराय धीमहि । तन्नो विष्णुः प्रचोदयात् ।'
ಇತಿ ವಿಷ್ಣುಗಾಯತ್ರೀ ।

## ಇತರದೇವತಾಪ್ರತಿಷ್ಠೆ

**ದುರ್ಗಾಶಿವಸ್ಕಂದಸೂರ್ಯವಿನಾಯಕಮುಖಾನಪಿ¹ ।**
**ಸ್ಥಾಪಯೇದುಕ್ತಮಾರ್ಗೇಣ ತತ್ತನ್ಮಂತ್ರೈಃ ಸ್ಮರನ್ ಹರಿಮ್ ॥೧೨೨॥**

ದುರ್ಗೆ, ರುದ್ರ, ಸ್ಕಂದ, ಸೂರ್ಯ, ಗಣಪತಿ ಮೊದಲಾದ ಇತರ ದೇವತೆಗಳನ್ನೂ ಪ್ರತಿಷ್ಠಿಸುವ ವಿಧಾನ ಮೇಲಿನಂತೆಯೇ ಆಗಿದೆ. ಆದರೆ ಆಯಾ ಮಂತ್ರಗಳಿಂದ ಆಯಾ ದೇವತೆಗಳಲ್ಲಿ ಸನ್ನಿಹಿತನಾದ ಶ್ರೀಹರಿಯನ್ನೇ ಸ್ಮರಿಸಿಕೊಳ್ಳಬೇಕು.

**ಗೋಲಕಾ² ದ್ವಿತಯಂ ವಿಷ್ಣೋಸ್ತ್ರಿತಯಂ ವಾ ಪ್ರಕೀರ್ತಿತಮ್ ।**
**ಅನ್ಯದೇವಪ್ರತಿಷ್ಠಾಸು ತದಂತಶ್ಚಿಂತಯೇದ್ಧರಿಮ್ ॥ ೧೨೩ ॥**

ಅನ್ಯ ದೇವತೆಗಳ ಪ್ರತಿಷ್ಠೆಯ ಕಾಲದಲ್ಲಿ ಪ್ರತಿಷ್ಠಾಪಿಸುವ ಪ್ರತಿಮೆ, ಅದರಲ್ಲಿ ಸನ್ನಿಹಿತವಾದ ದೇವತೆ–ಇವೆರಡೂ ಪರಮಾತ್ಮನ ಗೋಲಕಗಳು, ಪ್ರತಿಮಾಸ್ಥಾನೀಯಗಳು. ಆದ್ದರಿಂದ ಆ ದೇವತೆಯೊಳಗೆ ಪುನಃ ಶ್ರೀಹರಿಯ ಸನ್ನಿಧಾನವನ್ನು ಚಿಂತಿಸಬೇಕು. ಅಥವಾ ಪ್ರತಿಮೆ, ಅದರಲ್ಲಿ ಸನ್ನಿಹಿತರಾದ ಶಿವಾದಿದೇವತೆಗಳು, ಅವರಲ್ಲಿ ಸನ್ನಿಹಿತನಾದ ತೇಜೋಮಯನಾದ ಪ್ರಾಣ– ಹೀಗೆ ಮೂರು ಗೋಲಕಗಳನ್ನು ಧ್ಯಾನಿಸಿ ಅದರಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಚಿಂತಿಸಬೇಕು.

---

ॐ नारायणाय विद्महे वासुदेवाय धीमहि । तन्नो विष्णुः प्रचोदयात् ।
ಇತಿ ನಾರಾಯಣಗಾಯತ್ರೀ । (ಕೃಷ್ಣಾನಂದೀಯ)

ಶಾರದಾತಿಲಕದ ಉಲ್ಲೇಖವು ಇದೇ ತೆರನಾಗಿದೆ—

'ತ್ರೈಲೋಕ್ಯಮೋಹನಾಯೇತಿ ವಿದ್ಮಹೇ ಪದಮೀರಯೇತ್ ।
ಸ್ಮರಾಯ ಧೀಮಹಿ ಪಶ್ಚಾತ್ತನ್ನೋ ವಿಷ್ಣುಃ ಪ್ರಚೋದಯಾತ್ ।
ಗಾಯತ್ರ್ಯೇಷಾ ಸಮಾಖ್ಯಾತಾ ವೈಷ್ಣವೀ ಸರ್ವಸಿದ್ಧಿದಾ ॥'

೧ ಈ ಪದ್ಯದ ಅನುಪೂರ್ವಿಯಲ್ಲಿ ಅಸ್ಪಷ್ಟವಾಗಿಯಾದರೂ ಪಂಚಾಯತನ ಪೂಜೆಯ ಕುರುಹು ಕಾಣುತ್ತದೆ. ಇದರಲ್ಲಿ ಸ್ಕಂದನನ್ನುಳಿದು ಬೇರೆ ೪ ದೇವತೆಗಳೂ ಪಂಚಾಯತನ ಪೂಜೆಯ ಘಟಕಗಳೇ.

೨ 'ಗೋಲಕಮಿತ್ಯಧಿಷ್ಠಾನವಾಚೀ । ಚಕ್ಷುರ್ಗೋಲಕಮಿತಿ ಯಥಾ । ಗೋಲಕ ಇತಿ ಸಮಾನೋಽರ್ಥಃ । ಗೋಲಕದ್ವಿತಯಮಿತ್ಯೇವ ಪ್ರಚುರಃ ಪಾಠಃ । ಗೋಲಕಾ ಇತಿ ತು ಮೌಲೇ । ಗೋಲಕಾಃ ದ್ವಿತಯಂ ತ್ರಿತಯಂ ವಾ ಪ್ರಕೀರ್ತಿತಮ್ । ದ್ವೌ ವಾ ತ್ರಯೋ ವಾ ಗೋಲಕಾಃ ಪ್ರಕೀರ್ತಿತಾ ಇತ್ಯಾಶಯಃ ।'

**ವಿಷ್ಣುಸ್ಮೃತಿವಿಹೀನಾ ತು ಪೂಜಾ ಸ್ಯಾದಾಸುರೀ ಸದಾ ।**
**ಗೃಹ್ಣಂತಿ ದೇವತಾ ನೈತಾಂ ತತಃ ಸ್ಯಾದ್ದೇಶವಿಪ್ಲವಃ ।**
**ವ್ಯಾಧಿಚೋರಾದಿಭಿಸ್ತಸ್ಮಾದಂತರ್ಧ್ಯೇಯೋ ಹರಿಃ ಸದಾ ॥ ೧೨೪ ॥**

ವಿಷ್ಣುವಿನ ಸನ್ನಿಧಾನವನ್ನು ಸ್ಮರಿಸದೆ ಕ್ಷುದ್ರ ದೇವತೆಗಳನ್ನೇ ಪ್ರಧಾನವಾಗಿ ಪೂಜಿಸಿದರೆ ಅದನ್ನು ಯಾವ ದೇವತೆಗಳೂ ಸ್ವೀಕರಿಸುವುದಿಲ್ಲ. ಅದು ಕೇವಲ ಅಸುರರಿಗೆ ಮಾತ್ರ ತೃಪ್ತಿಯನ್ನೀಯಬಲ್ಲುದು. ಅದರಿಂದಲೇ ಅಂಥ ಪೂಜೆಯನ್ನು 'ಆಸುರೀ ಪೂಜೆ' ಎನ್ನುವರು ಇಂಥ ಆಸುರೀ ಪೂಜೆಯಿಂದ ವ್ಯಾಧಿ, ಕಳ್ಳರ ಪೀಡೆ, ಅನಾವೃಷ್ಟಿ ಮೊದಲಾದ ಪೀಡೆಗಳು ತುಂಬಿ ದೇಶ ವಿಪ್ಲವಗೊಂಡೀತು. ಆದರಿಂದ ಎಲ್ಲ ದೇವತೆಗಳಲ್ಲೂ ಅಂತರ್ಗತನಾದ ಹರಿಯನ್ನು ತಪ್ಪದೆ ಸ್ಮರಿಸಬೇಕು.೧

**ವಿಷ್ಣುಭಕ್ತಿವಿಹೀನಸ್ಯ ಗತಿಃ ಸ್ಯಾನ್ನ ಶುಭಾ ಕ್ವಚಿತ್ ।**
**ಭಕ್ತಸ್ಯಾಪ್ಯನ್ಯದೇವೇಷು ತಸ್ಮಾದ್ಧ್ಯೇಯೋ ಹರಿಃ ಸದಾ ॥ ೧೨೫ ॥**

ವಿಷ್ಣುಭಕ್ತಿಯಿಲ್ಲದ ಜನ ಇತರ ದೇವತೆಗಳನ್ನು ಎಷ್ಟು ಭಜಿಸಿದರೂ, ಪೂಜಿಸಿದರೂ ಸದ್ಗತಿಯನ್ನು ಪಡೆಯಲಾರರು. ಆದರಿಂದ ಹರಿಯನ್ನೇ ಧ್ಯಾನಿಸಬೇಕು.

---

೧ ಇದೇ ರೀತಿ ನೈವೇದ್ಯಕಾಲದಲ್ಲೂ ತತ್ತದ್ದೇವತಾಂತರ್ಗತನಾದ ಹರಿಗೇ ನೈವೇದ್ಯವನ್ನು ಅರ್ಪಿಸುತ್ತಿದ್ದೇನೆ ಎಂಬ ಅನುಸಂಧಾನ ಜಾಗೃತವಾಗಿರಬೇಕು, ವಿಷ್ಣ್ವಿತರ ದೇವತೆಗಳಿಗೆ ಅರ್ಪಿತವಾದ ನೈವೇದ್ಯ ಪ್ರಸಾದ ಎನ್ನಿಸಲಾರದು, ಭೋಜ್ಯವೂ ಆಗಲಾರದು—

**'ಪವಿತ್ರಂ ವಿಷ್ಣುನೈವೇದ್ಯಂ ಸುರಸಿದ್ಧರ್ಷಿಭಿಃ ಸ್ಮೃತಮ್ ।**
**ಅನ್ಯದೇವಸ್ಯ ನೈವೇದ್ಯಂ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥**
**ಅಗ್ರಾಹ್ಯಂ ಶಿವನಿರ್ಮಾಲ್ಯಂ ಪತ್ರಂ ಪುಷ್ಪಂ ಫಲಂ ಜಲಮ್ ।**
**ಶಾಲಗ್ರಾಮಶಿಲಾಸ್ಪರ್ಶಾತ್ಸರ್ವಂ ಯಾತಿ ಪವಿತ್ರತಾಮ್ ॥'**

(ಬಹ್ವೃಚಪರಿಶಿಷ್ಟ)

ಪಂಚಾಯತನ ಪೂಜಾಕ್ರಮವನ್ನನುಸರಿಸುವವರು ಕೂಡ ವಿಷ್ಣ್ವರ್ಪಿತ ನೈವೇದ್ಯವನ್ನಷ್ಟೆ ಉಣಬೇಕು. ಉಳಿದ ದೇವತೆಗಳ ಪ್ರಸಾದವನ್ನು ಸ್ವೀಕರಿಸುವುದಾಗಿದ್ದರೆ ಶಾಲಗ್ರಾಮಶಿಲಾಸ್ಪರ್ಶದಿಂದ ಮೊದಲು ಅದನ್ನು ಪವಿತ್ರೀಕರಿಸಿಕೊಳ್ಳಬೇಕು ಎಂದೂ ರಾಘವಭಟ್ಟ ಬರೆದಿದ್ದಾನೆ—

**'ಪಂಚದೇವತಾಪೂಜಾಯಾಂ ತು ವಿಷ್ಣೋರೇವ, ಶಾಲಗ್ರಾಮಶಿಲಾಸ್ಪರ್ಶಾದನ್ಯೇಷಾಂ ಚ ।'** (ಪದಾರ್ಥಾದರ್ಶ)

**ಸಂಸ್ಮೃತೋ[1] ಭಗವಾನ್ವಿಷ್ಣುಃ ಸರ್ವಮಂಗಲಮಂಗಲಃ ।**
**ಸಮಸ್ತಾಭೀಷ್ಟದಾಯೀ ಸ್ಯಾತ್ತೇನ ಧ್ಯೇಯೋಽಖಿಲೈರ್ಜನೈಃ ॥**

ಪರಮಮಂಗಲನಾದ ಶ್ರೀಹರಿಯನ್ನು ಧ್ಯಾನಿಸಿದರೆ ಕರುಣಾಳುವಾದ ಆತ ನಮ್ಮ ಸಕಲಾಭೀಷ್ಟಗಳನ್ನು ಪೂರೈಸುತ್ತಾನೆ. ಅದರಿಂದ ಎಲ್ಲರೂ ಶ್ರೀಹರಿಯನ್ನೇ ಧ್ಯಾನಿಸಬೇಕು.

## ತತ್ವಗಳು— ತತ್ವದೇವತೆಗಳು

**ಪುರುಷೋಽವ್ಯಕ್ತಂ ಚ ಮಹಾನಹಂಕಾರೋ ಮನಸ್ತಥಾ ।**
**ದಶೇಂದ್ರಿಯಾಣಿ ಶಬ್ದಾದ್ಯಾ ಭೂತೇತಾಃ ಪಂಚವಿಂಶತಿಃ ॥ ೧೨೭ ॥**
**ತತ್ವಾಖ್ಯಾಃ ಕಾಲಮಾಯೇ ಚ ನಿಯತಿರ್ಮತಿರೇವ ಚ ।**
**ವಿದ್ಯಾ ಕಲಾ ಪ್ರವೃತ್ತಿಶ್ಚ ದ್ವಾತ್ರಿಂಶತ್ತತ್ವಸಂಗ್ರಹಃ ॥ ೧೨೮ ॥**

ಪುರುಷತತ್ವ, ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರತತ್ವ, ಮನಸ್ತತ್ವ, ದಶೇಂದ್ರಿಯಗಳು[2], ಶಬ್ದಾದಿ ಪಂಚಕಗಳು[3], ಪಂಚಭೂತಗಳು[4], ಇವೇ ಪಂಚವಿಂಶತಿ ತತ್ವಗಳು. ಈ ೨೫ ತತ್ವಗಳಿಗೆ ಕಾಲ, ಮಾಯೆ, ನಿಯತಿ, ಮತಿ, ವಿದ್ಯೆ, ಕಲೆ, ಪ್ರವೃತ್ತಿ, ಈ ೭ ತತ್ವಗಳನ್ನು ಸೇರಿಸಿದರೆ ಅವೇ ದ್ವಾತ್ರಿಂಶತ್ತತ್ವಗಳು.

**ಸ್ಫೂರ್ತಿಃ ಸಂವಿತ್ಪ್ರತಿಷ್ಠಾ ಚ ಶಕ್ತಿರಿತ್ಯಪರಾಣಿ ಚ ।**
**ಮಹಾಲಕ್ಷ್ಮೀಸ್ವರೂಪಾಣಿ ಏಕಾದಶ ವಿದೋ ವಿದುಃ ।**
**ವಿಷ್ಣೋರಪಿ ಹಿ ರೂಪಾಣಿ ತನ್ನಾಮ್ನ್ಯೇಕಾದಶೈವ ತು ॥ ೧೨೯ ॥**

ಸ್ಫೂರ್ತಿ, ಸಂವಿತ್, ಪ್ರತಿಷ್ಠೆ, ಶಕ್ತಿ ಎಂದು ಬೇರೆ ನಾಲ್ಕು ತತ್ವಗಳೂ ಇವೆ. ಪಂಚವಿಂಶತಿತತ್ವಗಳ ನಂತರ ಉದಿತಗಳಾದ ಕಾಲ, ಮಾಯೆ

---

೧ 'ನ ಕೇವಲಂ ಹರಿಸ್ಮೃತಾವನಿಷ್ಟಾಭಾವಃ, ಇಷ್ಟಪ್ರಾಪ್ತಿಶ್ಚ ಭವತೀತ್ಯಾಹ— 'ಸಂಸ್ಮೃತ' ಇತಿ ।' (ನಾರಾ)

೨ ಕಿವಿ, ಚರ್ಮ, ಕಣ್ಣು, ನಾಲಗೆ, ಮೂಗು— ಇವು ೫ ಜ್ಞಾನೇಂದ್ರಿಯಗಳು, ಬಾಯಿ, ಕೈ, ಕಾಲು, ಗುದ, ಉಪಸ್ಥ—ಇವು ೫ ಕರ್ಮೇಂದ್ರಿಯಗಳು ಸೇರಿ ೧೦ ಇಂದ್ರಿಯಗಳು.

೩ ಶಬ್ದ, ಸ್ಪರ್ಶ, ರೂಪ, ರಸ, ಗಂಧ— ಇವು ಶಬ್ದಾದಿಪಂಚಕಗಳು.

೪ ಆಕಾಶ, ವಾಯು, ಅಗ್ನಿ, ನೀರು, ಭೂಮಿ— ಇವು ೫ ಭೂತಗಳು.

ಮೊದಲಾದ ೭ ತತ್ತ್ವಗಳು ಮತ್ತು ಸ್ಫೂರ್ತಿ, ಸಂವಿತ್ ಮೊದಲಾದ ೪ ತತ್ತ್ವಗಳು ಸೇರಿ ಈ ೧೧ ತತ್ತ್ವಗಳೂ ಈ ಹೆಸರುಗಳಿಂದಲೇ ಕರೆಯಲ್ಪಡುವ ಮಹಾಲಕ್ಷ್ಮಿಯು ಏಕಾದಶ ರೂಪಗಳಿಂದ ನಿಯಮಿಸಲ್ಪಟ್ಟಿವೆ ಎಂದು ಬಲ್ಲವರ ಅಂಬೋಣವಿದೆ. ಅಲ್ಲದೆ ಈ ಏಕಾದಶ ತತ್ತ್ವಗಳನ್ನು ನಿಯಮಿಸುವ ಇದೇ ಹೆಸರಿನ ವಿಷ್ಣುವಿನ ೧೧ ರೂಪಗಳೂ ಬೇರೆಯಿವೆ.

**ಪ್ರಧಾನೋಪಮವರ್ಣಾನಿ[1] ದ್ವಿಭುಜಾನ್ಯಪ್ಯಶೇಷತಃ ।**
**ಕೃತಾಂಜಲಿಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ ॥ ೧೩೦ ॥**
**ಸರ್ವಾಣ್ಯೇತಾನಿ ತತ್ತ್ವಾನಿ[2]**

ಈ ಎಲ್ಲ ತತ್ತ್ವದೇವತೆಗಳೂ ಪ್ರಧಾನದೇವತೆಯಾದ ನಾರಾಯಣನಂತೆಯೆ ಸೂರ್ಯಪ್ರಕಾಶರಾಗಿದ್ದಾರೆ, ದ್ವಿಭುಜರಾಗಿದ್ದು ಪ್ರಧಾನನಾದ ಶ್ರೀಹರಿಯ ಕಡೆಗೆ ಕೈಮುಗಿದು ನಿಂತವರಾಗಿದ್ದಾರೆ.

**ಬ್ರಹ್ಮಾ ತು ಪುರುಷಃ[3] ಸ್ಮೃತಃ ।**
**ಮಹಾಂಶ್ಚಾವ್ಯಕ್ತನಾಮ್ನೀ ತು ಬ್ರಹ್ಮಾಣೀ ಸಂಪ್ರಕೀರ್ತಿತಾ ।**
**ಏವಂ ವಾಯುರಪಿ ಜ್ಞೇಯೋ ಭಾರತೀ ಚಾಪಿ ತತ್ತ್ರಯಮ್[4] ॥**

ಪುರುಷತತ್ತ್ವ ಮಹತ್ತತ್ತ್ವಗಳಿಗೆ ಬ್ರಹ್ಮನು ದೇವತೆ. ಅವ್ಯಕ್ತಶಬ್ದವಾಚ್ಯಳಾದ ಸರಸ್ವತಿಯು ಅವ್ಯಕ್ತತತ್ತ್ವದ ದೇವತೆ.[5] ಹೀಗೆಯೇ ಈ ಮೂರು

---

೧ 'ಉದ್ಯದಾದಿತ್ಯವರ್ಣಾನೀತ್ಯರ್ಥಃ' (ನಾರಾ.)
'ಉದ್ಯದಾದಿತ್ಯಸದೃಶಕಾಂತಿಮಂತೀತಿ ಭಾವಃ' (ಛಲಾ.)

೨ 'ವಿಷ್ಣುರೂಪಾಣಾಮಪಿ ಸ್ವೇಚ್ಛಯಾ ಸ್ವಾತ್ಮಾನಂ ಪ್ರತಿ ಕೃತಾಂಜಲಿಪುಟತ್ವಮವಿರುದ್ಧಮ್ ।' (ನಾರಾ.)

೩ 'ಪುರುಷಃ=ಜೀವತತ್ತ್ವಮ್' (ಛಲಾ.)
ಅತ್ರ ಸರ್ವತ್ರಾಭಿಮಾನ್ಯಭಿಮನ್ಯಮಾನಯೋರೈಕ್ಯಮ್ ।

೪ 'ತ್ರಯೋವಿಂಶತಿತತ್ತ್ವೇಭ್ಯೋ ಪರಾ ಪ್ರಕೃತಿರುಚ್ಯತೇ ।
ಪ್ರಕೃತೇಸ್ತು ಪರಂ ಪ್ರಾಹುಃ ಪುರುಷಂ ಪಂಚವಿಂಶಕಮ್ ॥
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ।
ತದಧೀನಪ್ರವೃತ್ತಿತ್ವಾತ್ ಪ್ರಕೃತೇಃ ಪುರುಷಸ್ಯ ಚ ॥' (ಶಿವಪುರಾಣ)

೫ ಹೀಗೆಯೇ ಎಲ್ಲ ದೇವತೆಗಳೂ ತಮ್ಮಿಂದ ಅಭಿಮನ್ಯಮಾನವಾದ ವಸ್ತುವಿನ ಹೆಸರುಳ್ಳವರಾಗಿದ್ದಾರೆ.

ತತ್ತ್ವಗಳಿಗೆ ವಾಯು ಮತ್ತು ಭಾರತಿಯರೂ ದೇವತೆಗಳಾಗುವರು.[1]

**ರುದ್ರೋಽಹಂಕಾರ ಉದ್ದಿಷ್ಟಃ ಸ್ಕಂದೇಂದ್ರೌ ಮನ ಉಚ್ಯತೇ[2] ।**
**ಅಹಂಕಾರಃ ಶೇಷವೀಂದ್ರಾವಪಿ ವಿದ್ವದ್ಭಿರೀರಿತೌ[3] ॥ ೧೩೨ ॥**

---

೧ ಓಂದಿನಂತೆ ಪುರುಷತತ್ತ್ವ ಮಹತ್ತತ್ತ್ವಗಳಿಗೆ ವಾಯು ಮತ್ತು ಅವ್ಯಕ್ತತತ್ತ್ವಕ್ಕೆ ಭಾರತಿ ದೇವತೆಗಳು.

ಇಲ್ಲಿ ಒಂದು ಸಂದೇಹಕ್ಕೆಡೆಯಿದೆ 'ಮಹತಃ ಪರಮವ್ಯಕ್ತಂ' ಎಂದು ಉಪನಿಷತ್ತಿನಲ್ಲಿ ಮಹತ್ತತ್ತ್ವಕ್ಕಿಂತ ಅವ್ಯಕ್ತತತ್ತ್ವ ಶ್ರೇಷ್ಠ ಎಂದಿದೆ 'ಅವ್ಯಕ್ತರೂಪಾ ಲಕ್ಷ್ಮೀಶ್ಚ ವರಾತೋಽತೋ ಹರಿಃ ಸ್ವಯಂ' ಎಂದು ಆಚಾರ್ಯರೂ ಗೀತಾತಾತ್ಪರ್ಯದಲ್ಲಿ ಈ ಮಾತನ್ನು ಸ್ಫುಟಗೊಳಿಸಿದ್ದಾರೆ. ಎಂದ ಮೇಲೆ ಇವು ಪರಸ್ಪರ ವಿರುದ್ಧಗಳಾಗಲಿಲ್ಲವೆ? ಇಲ್ಲಿ ಸಮಾಧಾನ ಸ್ಫುಟವಾಗಿದೆ—ಇಲ್ಲಿ ಅವ್ಯಕ್ತಪದದಿಂದ ಬುದ್ಧಿತತ್ತ್ವವೇ ವಿವಕ್ಷಿತವಾಗಿದೆ ಈಗ ಯಾವ ತೊಡಕೂ ಇಲ್ಲವೆ 'ಬುದ್ಧೇರಾತ್ಮಾ ಮಹಾನ್ ಪರಃ' ಎಂಬ ಉಪನಿಷದ್ವಾಣಿಯೂ, 'ಯೋ ಬುದ್ಧೇಃ ಪರತಸ್ತು ಸಃ' ಎಂಬ ಗೀತಾವಾಣಿಯೂ ಸರಿಹೊಂದುವುದು ಅಲ್ಲದೆ ಎಲ್ಲ ದೇವತೆಗಳೂ ಒಂದಲ್ಲ ಒಂದು ದೃಷ್ಟಿಯಿಂದ ಎಲ್ಲ ತತ್ತ್ವಗಳಿಗೂ ಅಭಿಮಾನಿಗಳೇ. ಅವರಲ್ಲಿ ತಾರತಮ್ಯವನ್ನು ಸೂಚಿಸುವುದಕ್ಕೆ ಮಾತ್ರ ಶಾಸ್ತ್ರಗಳಲ್ಲಿ ವಿಶೇಷವನ್ನು ನಿರ್ದೇಶಿಸುತ್ತಾರೆ ಆದರಿಂದ ಪರಸ್ಪರ ವಿರೋಧವನ್ನಾಶಂಕಿಸುವುದಕ್ಕೆ ಎಡೆಯಿಲ್ಲ ಎಂದು ಆಚಾರ್ಯರೇ ಗೀತಾತಾತ್ಪರ್ಯದಲ್ಲಿ ನುಡಿದಿದ್ದಾರೆ—

**'ಸರ್ವಾಭಿಮಾನಿನೋ ದೇವಾಃ ಸರ್ವೇಽಪಿ ಹ್ಯುತ್ತರೋತ್ತರಮ್ ।**
**ಆಧಿಕ್ಯಂ ವಕ್ತುಮೇವೈಷಾಂ ಪೃಥಕ್ಸ್ಥಾನಮುದೀರ್ಯತೇ ।**
**ಅವ್ಯಕ್ತಾದಿಪದಾರ್ಥಾನಾಂ ಸರ್ವೇ ತದಭಿಮಾನಿನಃ ।'**

ತಂದೆಯ ಆಸ್ತಿ ಮಗನ ಆಸ್ತಿಯೂ ಆಗಿರುವಂತೆ ಉತ್ತಮದೇವತೆಗಳಿಂದ ನಿಯಮ್ಯವಾದ ವಸ್ತು ಒಂದು ದೃಷ್ಟಿಯಿಂದ ಅಧಮದೇವತೆಗಳಿಂದಲೂ ನಿಯಮ್ಯವಾಗಿದೆ, ಎಂದ ಮೇಲೆ ಸರಸ್ವತಿಯೂ ಅವ್ಯಕ್ತತತ್ತ್ವಕ್ಕೆ ಅಭಿಮಾನಿದೇವತೆ ಎಂದರೆ ತಪ್ಪಿಲ್ಲ.

**'ಯತ್ರ ವಾ ಪಿತುಸ್ತತ್ಪುತ್ರಸ್ಯೇತ್ಯೇತತ್ತದುಕ್ತಂ ಭವತೀತ್ಯಾದಿಶ್ರುತೇಶ್ಚ ।'**
(ಗೀತಾತಾ.)

೨ **ಸ್ಕಂದೇಂದ್ರೌ ಮನೋಽಭಿಮಾನಿನಾವಿತಿ ವಿದ್ವದ್ಭಿರುಚ್ಯತೇ ।**

೩ ಅಹಂಕಾರ ಎಂದರೆ ಮನಸ್ಸಿನದ್ದೇ ಒಂದು ಪ್ರಭೇದ. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನಾ ಎಂಬ ಪಂಚವಿಧ ಅಂತಃಕರಣಗಳಲ್ಲಿ ಅದೂ ಒಂದು. ಆದರಿಂದ ಗರುಡ ಶೇಷ ರುದ್ರರನ್ನು ಮನೋಭಿಮಾನಿಗಳೆಂದೇ ಕರೆವುದೂ ಉಂಟು—

**'ಮನೋಽಭಿಮಾನಿನೋ ರುದ್ರವೀಂದ್ರಶೇಷಾಸ್ತ್ರಯೋಽಪಿತು ।'** (ಕಾರಕಭಾ.)

ಗರುಡ-ಶೇಷ-ರುದ್ರರು ಅಹಂಕಾರದ ಅಭಿಮಾನಿಗಳು ಮತ್ತು ಸ್ಕಂದ-ಪುರಂದರರು ಮನಸ್ತತ್ವದ ಅಭಿಮಾನಿಗಳು.

**ದಿಗ್ವಾಯುಸೂನುಸೂರ್ಯಾಶ್ಚ ವರುಣಶ್ಚಾಶ್ವಿನಾವಪಿ ।**
**ವಹ್ನಿದಕ್ಷಾವಿಂದ್ರಸೂನುರ್ಮಿತ್ರಶ್ಚೈವ ಮನುಸ್ತಥಾ[೧] ॥ ೧೩೩ ॥**
**ಇಂದ್ರಿಯಾಖ್ಯಾಃ ಶಬ್ದನಾಮಾ ಬೃಹಸ್ಪತಿರುದಾಹೃತಃ ।**
**ಅನ್ಯೇ ತು ಸೂನವೋ ವಾಯೋಃ ರುದ್ರಸ್ಯಾಪಿ ಪ್ರಕೀರ್ತಿತಾಃ[೨] ॥**

---

'ತೇಭ್ಯೋ ಮನೋಽಭಿಮಾನೀ ತು ರುದ್ರಸ್ತಸ್ಮಾತ್ಸರಸ್ವತೀ ।
ಬುದ್ಧ್ಯಾತ್ಮಿಕಾ ತತೋ ಬ್ರಹ್ಮಾ ಮಹಾನಾತ್ಮಾ ಪರಃ ಸ್ಮೃತಃ ॥' (ಗೀತಾತಾ.)

೧ 'ದಿಕ್‌ಶಬ್ದೇನ ದಿಗ್ದೇವತಾ ಉಚ್ಯಂತೇ । ವಾಯುಸೂನುಃ=ಪ್ರಾಣಃ । ಇಂದ್ರಸೂನುಃ=ಜಯಂತಃ ।' (ಛಲಾ. ಸಾರಾ.)

'ಮಿತ್ರಃ=Name of an Aditya and usually associated with Varuna'. (V S. Apte)

'ಮನುಃ=ಸ್ವಾಯಂಭುವಃ' (ಛಲಾ.)

ಇಲ್ಲಿ 'ದಿಕ್' ಶಬ್ದದಿಂದ ದಿಗ್ದೇವತೆಗಳನ್ನಿಟ್ಟುಕೊಳ್ಳಬೇಕು ಎಂದು ಮಾತ್ರ ವ್ಯಾಖ್ಯಾಕಾರರು ಬರೆದಿದ್ದಾರೆ. ದಿಗ್ದೇವತೆಗಳು ಇಂದ್ರ, ಯಮ, ವರುಣ, ಕುಬೇರರು ತಾನೆ? ಆದರೆ 'ವರುಣಶ್ಚಾಶ್ವಿನಾವಪಿ' ಎಂದು ವರುಣನನ್ನು ಆಚಾರ್ಯರು ಪ್ರತ್ಯೇಕವಾಗಿ ನಿರ್ದೇಶಿಸಿದ್ದಾರೆ. ಮಾತ್ರವಲ್ಲ, ಇಂದ್ರಿಯಾಭಿಮಾನಿಗಳಲ್ಲೊಬ್ಬನಾದ ಚಂದ್ರನನ್ನು ಪ್ರತ್ಯೇಕವಾಗಿ ನಿರ್ದೇಶಿಸಿಲ್ಲ. ಅದರಿಂದ ಇಲ್ಲಿ 'ದಿಕ್' ಶಬ್ದದಿಂದ ಇಂದ್ರ, ಯಮ, ಸೋಮ, ಕುಬೇರರು ವಿವಕ್ಷಿತರಾಗಿರಬಹುದೇನೋ ಎನ್ನಿಸುತ್ತದೆ.

'ಸೋಮವಿತ್ತಪಸೂರ್ಯಾಪ್ಪಾ ಅಶ್ವ್ಯಗ್ನೀಂದ್ರೇಂದ್ರಸೂನವಃ ।
ಯಮೋ ದಕ್ಷಶ್ಚೇಂದ್ರಿಯೇಶಾಃ' (ಕಾರಕಭಾಷ್ಯ)

ದಿಕ್ ಸ್ವರೂಪವಾದ ಶ್ರೋತ್ರಕ್ಕೆ ದಿಗಧಿಪತಿಗಳೇ ದೇವತೆಗಳು ಉಳಿದ ೯ ದೇವತೆಗಳು ಕ್ರಮವಾಗಿ ತ್ವಕ್, ಚಕ್ಷುಸ್ಸು, ನಾಲಿಗೆ, ಮೂಗು, ಬಾಯಿ, ಕೈ, ಕಾಲು, ಪಾಯು, ಉಪಸ್ಥ, ಇವುಗಳಿಗೆ ಅಭಿಮಾನಿಗಳು.

೨ ಪಂಚಭೂತಾಭಿಮಾನಿಗಳಾದ ಗಣಪತಿ, ಭೂತವಾಯು, ವಹ್ನಿ, ವರುಣ, ಪೃಥಿವಿಯರು ಪ್ರಸಿದ್ಧರೇ ಆದುದರಿಂದ ಆಚಾರ್ಯರು ಇಲ್ಲಿ ಪ್ರತ್ಯೇಕವಾಗಿ ಅವರ ಹೆಸರನ್ನು ಬರೆದಿಲ್ಲ. 'ರುದ್ರಸ್ಯ ಸೂನವಃ' ಎಂಬಲ್ಲಿ ಬಹುವಚನವು ಅನ್ವರ್ಥಕ. ಅದರಿಂದ ರುದ್ರಪುತ್ರನ ಮಗನಾದ ಗಣಪತಿಯೇ ಮೊದಲಾದವರು ಭೂತಾಭಿಮಾನಿಗಳು ಎಂದೂ ಮೂಲಕ್ಕೆ ಅರ್ಥಮಾಡಬಹುದು ಎಂದು ಛಲಾರೀಯದಲ್ಲಿ ಬರೆದಿದ್ದಾರೆ. ಈ ಅರ್ಥ ಸೊಗಸಾಗಿದ್ದು ಗ್ರಾಹ್ಯವಾಗಿದೆ.

ದಿಗಭಿಮಾನಿ ದೇವತೆಗಳು. ವಾಯುಪುತ್ರನಾದ ಪ್ರಾಣ, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ದಕ್ಷ, ಇಂದ್ರಪುತ್ರನಾದ ಜಯಂತ, ಮಿತ್ರ ಮತ್ತು ಸ್ವಾಯಂಭುವಮನು– ಇವರು ಇಂದ್ರಿಯಾಭಿಮಾನಿಗಳು. ಬೃಹಸ್ಪತಿ ಮತ್ತು ರುದ್ರಪುತ್ರನಾದ ಪ್ರಾಣ ಈ ಇಬ್ಬರು ಶಬ್ದಾಭಿಮಾನಿ ದೇವತೆಗಳು. ಉಳಿದ ಸ್ಪರ್ಶರೂಪ ರಸಗಂಧಗಳಿಗೆ ಪ್ರಧಾನ ವಾಯುಪುತ್ರರಾದ ಅಪಾನ-ವ್ಯಾನ-ಉದಾನ-ಸಮಾನರೂ, ರುದ್ರಪುತ್ರರಾದ ಅಪಾನ-ವ್ಯಾನ ಉದಾನ-ಸಮಾನರೂ ಅಭಿಮಾನಿಗಳು.

**ಏತೇಷು ಭಗವಾನ್ವಿಷ್ಣುಃ ಪ್ರಧಾನತನುರೇವ ತು ।**
**ಧ್ಯೇಯಃ**

ಈ ಎಲ್ಲ ತತ್ವಗಳಲ್ಲೂ ಅಂತರ್ಗತನಾದ ಸರ್ವೋತ್ತಮನಾದ ವಿಷ್ಣು ಸ್ವರೂಪವನ್ನು ಚಿಂತಿಸಬೇಕು.

**ಪರಾತ್ಮನೋರ್ಮಧ್ಯೇ ತತ್ವನಾಮ ತದರ್ಥಯೋಃ ।**
**ಜಪೇ ನ್ಯಾಸೇ ನಮೋಽಂತಸ್ತು ಸ್ವಾಹಾಂತೋ ಹೋಮಕರ್ಮಣಿ ॥**

ಭಗವದ್ವಾಚಕಗಳಾದ 'ಪರ' ಮತ್ತು 'ಆತ್ಮ' ಶಬ್ದಗಳ ನಡುವೆ ತತ್ವಗಳ ಹೆಸರನ್ನೂ, 'ಆತ್ಮ' ಶಬ್ದದ ನಂತರ ಜಪ ಮತ್ತು ನ್ಯಾಸಗಳಲ್ಲಾದರೆ 'ನಮಃ' ಶಬ್ದವನ್ನೂ, ಹೋಮದಲ್ಲಾದರೆ 'ಸ್ವಾಹಾ' ಶಬ್ದವನ್ನೂ ಉಚ್ಚರಿಸಬೇಕು.[೧]

**ತ್ರಿಚತುಃಷಡ್ದಶಾವೃತ್ತಿರೇತೇಷಾಂ ತು ಹುತಾದಿಕೇ ।**
**ನ್ಯಾಸೋಽಂಗುಲೀಷೂರುಬಾಹುಮಧ್ಯೇಷು ವ್ಯುತ್ಕ್ರಮೋ ಸ್ಮೃತಃ ।**
**ಕ್ರಮೋ ವಿಪರ್ಯಯೋಽಣಾತ್ರ ಶಕ್ತ್ಯಾದಿತ್ವಂ ಪ್ರಕೀರ್ತಿತಮ್ ॥೧೩೬॥**

ಈ ತತ್ವಮಂತ್ರಗಳ ಹೋಮ ಜಪ ನ್ಯಾಸಾದಿಗಳಲ್ಲಿ ಯಥಾಶಕ್ತಿ ಮೂರು ಸಾರೆ, ನಾಲ್ಕು ಸಾರೆ, ಆರು ಸಾರೆ ಅಥವಾ ಹತ್ತುಸಾರೆ ಈ ಮಂತ್ರಗಳನ್ನು

---

೧ ಜಪದಲ್ಲಿ ಮಂತ್ರಗಳ ಆಕಾರ ಈ ತೆರನಾಗಿದೆ—

**'ಪರಾಯ ಪುರುಷಾತ್ಮನೇ ನಮಃ, ಪರಾಯ ಅವ್ಯಕ್ತಾತ್ಮನೇ ನಮಃ' ಇತ್ಯಾದಿ. ಹೋಮದಲ್ಲಿ– 'ಪರಾಯ ಪುರುಷಾತ್ಮನೇ ಸ್ವಾಹಾ, ಪರಾಯ ಅವ್ಯಕ್ತಾತ್ಮನೇ ಸ್ವಾಹಾ' ಇತ್ಯಾದಿ.**

ಮಂತ್ರಾರ್ಥವನ್ನು ಛಲಾರೀಯದಲ್ಲಿ ಬರೆದಿದ್ದಾರೆ—

**'ಸರ್ವೋತ್ಕೃಷ್ಟಾಯ ಶಕ್ತ್ಯಾದಿತತ್ವನಿಯಾಮಕಾಯೇತಿ ಮಂತ್ರಾರ್ಥಃ ।'**
(ಛಲಾ.

ಆವೃತ್ತಿ ಮಾಡಬೇಕು. ೩೦ ಬೆರಳುಗಳು, ೬ ತೊಡೆ. ೨ ತೋಳು ಮತ್ತು ಹೃದಯ ಇವು ಕ್ರಮವಾಗಿ ಸಂಹಾರ ಕ್ರಮದಲ್ಲಿ ಅಂಗನ್ಯಾಸ ಸ್ಥಾನಗಳು. ಸೃಷ್ಟಿಕ್ರಮದಲ್ಲಾದರೆ ಹೃದಯದಿಂದಾರಂಭಿಸಿ ಎಡಗಾಲಿನ ಕಿರಿಬೆರಳಿನ ವರೆಗೆ ಅಂಗನ್ಯಾಸವನ್ನಾಚರಿಸಬೇಕು. ಸೃಷ್ಟಿಕ್ರಮದಲ್ಲಿ ಮಂತ್ರಗಳನ್ನೂ ಹಿಂದೆ ಬರುವ ಕ್ರಮಕ್ಕೆ ವಿಪರೀತವಾಗಿ ಶಕ್ತ್ಯಾದಿಯಾಗಿ ನ್ಯಾಸ ಮಾಡಬೇಕು. (ಸಂಹಾರಕ್ರಮದಲ್ಲಾದರೆ ಉಕ್ತರೀತಿಯಲ್ಲಿ ಪೃಥಿವ್ಯಾದಿ ಶಕ್ತ್ಯಂತವಾಗಿ ನ್ಯಾಸಮಾಡಬೇಕು.)[1]

**ಋಷಿಚ್ಛಂದೋದೇವತಾಂಗಧ್ಯಾನಾನ್ಯುಕ್ತ್ವಾ ಪ್ರಧಾನವತ್ ।**
**ಜ್ಞೇಯಾಸ್ತು ಮಂತ್ರಾಃ ಸಮಸ್ತಾಸ್ತೇ ಪೃಥಙ್ಮೋಕ್ಷಪ್ರದಾಯಕಾಃ ॥**

ಯಾವ ಮಂತ್ರದಲ್ಲಿ ಋಷಿ ಛಂದಸ್ಸು, ದೇವತೆ, ನ್ಯಾಸದ ಅಂಗಗಳು ಮತ್ತು ಧ್ಯಾನಕ್ರಮ ಪ್ರತ್ಯೇಕವಾಗಿ ಹೇಳಲ್ಪಡಲಿಲ್ಲವೋ ಅಂಥ ಸ್ಥಳದಲ್ಲಿ ಪ್ರಧಾನಮಂತ್ರಗಳಾದ ಪ್ರಣವಾದ್ಯಕ್ಷರಗಳಿಗೆ ಹೇಳಿದ ಋಷ್ಯಾದಿಗಳನ್ನೆ ಆಯಾ ಮಂತ್ರಗಳ ಋಷ್ಯಾದಿಗಳೆಂದು ಭಾವಿಸಬೇಕು.[2] ಈ ಎಲ್ಲ ಮಂತ್ರಗಳೂ ಪ್ರತ್ಯೇಕವಾಗಿ ಮೋಕ್ಷಪ್ರದಗಳಾಗಿವೆ.

---

೧ ನ್ಯಾಸಕ್ರಮ ನಾರಾಯಣೀಯದಲ್ಲಿ ಸ್ಫುಟವಾಗಿದೆ—

'ವಾಮಪಾದಕನಿಷ್ಠಿಕಾಮಾರಭ್ಯ ತದಂಗುಷ್ಠಪರ್ಯಂತಂ ಪೃಥಿವ್ಯಾದಿಪಂಚಕಂ ನ್ಯಸೇತ್ । ಅನಂತರಂ ದಕ್ಷಪಾದಕನಿಷ್ಠಿಕಾಮಾರಭ್ಯ ತದಂಗುಷ್ಠಪರ್ಯಂತಂ ಗಂಧಾದಿಪಂಚಕಂ ನ್ಯಸೇತ್ । ಅನಂತರಂ ವಾಮಹಸ್ತಕನಿಷ್ಠಿಕಾಮಾರಭ್ಯ ತದಂಗುಷ್ಠಪರ್ಯಂತಂ ವಾಗಾದಿ(ಕರ್ಮೇಂದ್ರಿಯ)ಪಂಚಕಂ ನ್ಯಸೇತ್ । ಅನಂತರಂ ದಕ್ಷಹಸ್ತಕನಿಷ್ಠಿಕಾಮಾರಭ್ಯ ತದಂಗುಷ್ಠಪರ್ಯಂತಂ ಶ್ರೋತ್ರಾದಿ(ಜ್ಞಾನೇಂದ್ರಿಯ)ಪಂಚಕಂ ನ್ಯಸೇತ್ । ಅನಂತರಂ ವಾಮೋರೌ ಮನಃ ನ್ಯಸೇತ್ । ಏವಂ ದಕ್ಷೋರಾವಹಂಕಾರಂ ನ್ಯಸೇತ್ । ಅಥ ವಾಮಬಾಹೌ ಮಹಾಂತಂ, ದಕ್ಷಿಣಬಾಹಾವವ್ಯಕ್ತಂ ನ್ಯಸೇತ್ । ಅನಂತರಂ ಹೃದಯ ಏವ ಪುರುಷಾದಿದ್ವಾದಶಕಂ ನ್ಯಸೇದಿತಿ ।'

ಸೃಷ್ಟಿಕ್ರಮದಲ್ಲಾದರೆ ಇದನ್ನೆ ಹಿಂದುಮುಂದಾಗಿ ಪುರುಷಾದಿ ದ್ವಾದಶಕವನ್ನು ಮೊದಲು ನ್ಯಾಸಮಾಡಬೇಕು. ಛಲಾರೀಯದ ವಿವರಣೆಯೂ ಇದೇ ತೆರನಾಗಿದೆ. ಮೇಲೆ ಹೇಳಿದ ಎಲ್ಲ ವಾಕ್ಯಗಳಲ್ಲೂ ಆ ತತ್ತ್ವದ ಅಭಿಮಾನಿಗಳನ್ನು ಅನುಸಂಧಾನಮಾಡಿಕೊಳ್ಳಬೇಕು. ಪೃಥಿವ್ಯಾದಿ ಪಂಚಕ ಎಂದರೆ ಅವರ ಅಭಿಮಾನಿದೇವತೆಗಳೇ ವಿವಕ್ಷಿತರು. ಹೀಗೆಯೇ ಮುಂದೆ ಕೂಡ.

೨ ತಥಾಚ ಪ್ರಕೃತದಲ್ಲಿ ಈ ತತ್ತ್ವಮಂತ್ರಗಳಿಗೂ—ಪ್ರಣವದಂತೆಯೇ ಅಂತರ್ಯಾ

## ಉಪಸಂಹಾರ

**ತಂತ್ರಮಾರ್ಗಾಸ್ತು ಹರಿಣಾ ಪ್ರಸಂಖ್ಯಾತಾಃ ಕೀರ್ತಿತಾ ಅಪಿ ।**
**ತೇಷ್ವಯಂ ಸುಗಮೋ ಮಾರ್ಗಃ ಸುಫಲತ್ವಾತ್ಸುನಿಶ್ಚಿತಾತ್ ॥**

ಶ್ರೀಹರಿಯು ಪಂಚರಾತ್ರಾದಿಗಳಲ್ಲಿ ಅಸಂಖ್ಯಗಳಾದ ತಂತ್ರಪದ್ಧತಿಗಳನ್ನು ಉಪದೇಶಿಸಿದ್ದರೂ ಇದು ಅವೆಲ್ಲವುಗಳ ಸಾರವಾಗಿದ್ದು ತಿಳಿಯಲು ಮತ್ತು ಆಚರಿಸಲು ಸುಗಮವಾಗಿದೆ ಎಂತಲೆ ಸುಫಲಪ್ರದವೂ ಆಗಿದೆ.

**ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ ।**
**ತಾವತ್ಸಮಸ್ತಂ ಕಥಿತಂ ಹ್ಯಸ್ಮಿಂಸ್ತಂತ್ರೇ ಯಥಾವಿಧಿ ॥ ೧೯ ॥**

ಕರ್ತವ್ಯಕರ್ಮಗಳ ಪೂರ್ತಿಗಾಗಿ ಎಷ್ಟನ್ನು ಆಚರಿಸಿಯೇ ತೀರಬೇಕೋ ಅಷ್ಟು ಭಾಗ ಮಾತ್ರ ಸಂಪೂರ್ಣವಾಗಿ ವಿಧಿಪೂರ್ವಕವಾಗಿ ಇಲ್ಲಿ ನಿರೂಪಿತವಾಗಿದೆ.

**ಪ್ರೀಯತೇಽನೇನ ಮಾರ್ಗೇಣ ಪೂಜಿತೋ ಮುಕ್ತಿದೋ ಭವೇತ್ ।**
**ಕಾಮದಶ್ಚ ಸ್ವಭಕ್ತಾನಾಂ ಭಗವಾನ್ ಪುರುಷೋತ್ತಮಃ ॥ ೨೦ ॥**

ಈ ವಿಧಾನದಿಂದ ಪೂಜಿಸಿದರೆ ಪುರುಷೋತ್ತಮನಾದ ಭಗವಂತನು ಸಂತುಷ್ಟನಾಗುವನು: ಭಕ್ತರಿಗೆ ಅಪೇಕ್ಷಿತವಾದ ಫಲವನ್ನೀಯುವನು; ಹೆಚ್ಚೇಕೆ? ಅಂಥ ಭಕ್ತರಿಗೆ ಮೋಕ್ಷಪದವಿ ಕೂಡ ದುರ್ಲಭವಲ್ಲ.

ಇತಿ ತೃತೀಯೋಽಧ್ಯಾಯಃ

---

ಮಿಯೆ ಋಷಿ, ದೈವೀ ಗಾಯತ್ರಿಯೇ ಛಂದಸ್ಸು. ನಾರಾಯಣನೇ ದೇವತೆ, ವ್ಯಾಹೃತಿಗಳಿಂದ ಅಂಗನ್ಯಾಸ, ಉದ್ಯದಾದಿತ್ಯವರ್ಣ ಎಂಬುದಾಗಿ ಧ್ಯಾನ ಎಂದು ಸಿದ್ಧವಾಗುವುದು. ಇಲ್ಲಿ ಪ್ರಥಮಾಧ್ಯಾಯದ ೧೭–೧೮ನೆಯ ಶ್ಲೋಕಗಳನ್ನು ಗಮನಿಸಬಹುದು—

**'ಋಷಿಶ್ಚ ದೇವತೈಕೋಽಹಂ ತಾರಾದೀನಾಂ ವಿಶೇಷತಃ ।**
**ಛಂದೋ ಮದೀಯಾ ಗಾಯತ್ರೀ ತಾರಾಷ್ಟಾಕ್ಷರಯೋರ್ಮತಾ ।**
**ಉದ್ಯದ್ಭಾಸ್ವತ್ಸಮಾಭಾಸಶ್ಚಿದಾನಂದೈಕದೇಹವಾನ್ ।**
**ಚಕ್ರಶಂಖಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥'**

ಇಲ್ಲಿ ಅಂಗನ್ಯಾಸದ ವಿಷಯದಲ್ಲಿ ಮಾತ್ರ ಮತಭೇದವಿದೆ. ಪ್ರಣವದಂತೆಯೆ ವ್ಯಾಹೃತಿಮಂತ್ರಗಳಿಂದ ಅಂಗನ್ಯಾಸ ಎಂದು ಛಲಾರೀಯದಲ್ಲಿ ಹೇಳಿದೆ. ಕೃದ್ಧೋಲ್ಕಾದಿಗಳಿಂದ ಅಂಗನ್ಯಾಸವೆಂದು ನಾರಾಯಣೀಯದ ಮತ. ಅದರಿಂದಲೇ—**'ಪ್ರಧಾನವತ್=ಅಷ್ಟಾಕ್ಷರಮಂತ್ರವತ್'** ಎಂದು ಅವರು ವ್ಯಾಖ್ಯಾನಿಸಿದ್ದಾರೆ. ಈ ಪಕ್ಷಗಳ ನಿರ್ಣಯಕ್ಕೆ ಸಂಪ್ರದಾಯವೊಂದೇ ಶರಣು.

## ಚತುರ್ಥೋಽಧ್ಯಾಯಃ

**ಅಥ ವಿಷ್ಣೂದಿತೇ ತಂತ್ರಸಾರೇ ಮಂತ್ರಗಣೋ ಹಿ ಯಃ ।**
**ಉದಿತಃ ಸಂಗ್ರಹೇಣಾಸಾವುಚ್ಯತೇಽಖಿಲಸಾಧಕಃ ॥ ೧ ॥**

ನಾರಾಯಣನೆ ಹಾಡಿರುವ 'ತಂತ್ರಸಾರ'ದಲ್ಲಿ ಉಕ್ತಗಳಾದ ಸರ್ವಾರ್ಥ ಸಾಧಕಗಳಾದ ಕೆಲಮಂತ್ರಗಳು ಸಂಗ್ರಹವಾಗಿ ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.

### ಭೂವರಾಹಮಂತ್ರ

**ಯಾಷ್ಟಮಸ್ತೂಯುತೋಽಂತೇನ[1] ಸಮೇತಶ್ಚೈವ ಭೂಭೃತಃ ।**
**ಬೀಜಂ ನಮಶ್ಚ ಭಗವಾನುದ್ದೇಶ್ಯೋ[2] ರೂಪಸಂಯುತಃ ॥ ೨ ॥**
**ಸ ಏವ ತಾದೃಶೋ[3] ಲೋಕತ್ರಯಪಾಲೋ[4] ಭುವಃಪತೇಃ ।**
**ಭಾವಂ ಮೇ ದೇಹಿ[5] ದಾಂತೇ ತು ದಾಪಯ ಸ್ವಾಹಯಾ ಯುತಃ[6]॥**

ಯಕಾರದಿಂದ ಎಂಟನೆಯ ಅಕ್ಷರವಾದ ಹಕಾರಕ್ಕೆ ಊಕಾರ ಮತ್ತು

---

೧ ಯಾಂತಃ=ಹಕಾರಃ, ಊಯುತಃ, ಅಂತೇನ='ಅಂತೋಽರ್ಧಗರ್ಭಃ ಕಪಿಲಃ' ಇತ್ಯತ್ರೋದಿತಾಂತನಾಮಕಭಗವದ್ವಾಚಕೇನ ಬಿಂದುನಾ ಚ ಸಮೇತಃ ಭೂ-ಭೃತಃ=ಭೂವರಾಹಸ್ಯ ಬೀಜಾಕ್ಷರಂ ಭವತಿ । ತದ್ಯಥಾ 'ಹ್ಲೂಂ' ಇತಿ ।

'ತಿಥಿಸ್ವರಯುತಂ ವ್ಯೋಮ ವಾಮಕರ್ಣವಿಭೂಷಿತಮ್ ।
ವರಾಹಬೀಜಮುದಿತಂ ಸರ್ವಸಂಪತ್ಪ್ರದಾಯಕಮ್ ॥' (ವೈಹಾಯಸಸಂ.)

['ತಿಥಿಃ=ಪಂಚದಶಸ್ವರೋಽನುಸ್ವಾರಃ, ವ್ಯೋಮ=ಹಕಾರಃ, ವಾಮಕರ್ಣೇನ ವಾಮಕರ್ಣೇ ನ್ಯಸನೀಯೇನೋಕಾರೇಣ ವಿಭೂಷಿತಂ=ಯುತಮ್ ।' (ಛಲಾ.)]

೨ 'ಉದ್ದೇಶ್ಯ=ಚತುರ್ಥೀವಿಭಕ್ತ್ಯುಪೇತಃ । ಏವಮುತ್ತರತ್ರಾಪ್ಯುದ್ದೇಶಶಬ್ದ-ಶ್ಚತುರ್ಥೀವಿಭಕ್ತಿವಾಚಕ ಇತಿ ದ್ರಷ್ಟವ್ಯಮ್ ।' (ನಾರಾ.)

೩ ರೂಪಸಂಯುತಃ ಸ ಏವ ವರಾಹಶಬ್ದಃ, ತಾದೃಶಶ್ಚತುರ್ಥೀಯುತಃ । 'ವರಾಹರೂಪಾಯ'

೪ ತಾದೃಶೋ ಲೋಕತ್ರಯಪಾಲ ಇತ್ಯರ್ಥಕಃ ಶಬ್ದಃ । 'ಭೂರ್ಭುವಃಸ್ವಃ ಪತಯೇ'

೫ ಭುವಃಪತೇರಿತ್ಯಲುಕ್ಕರಣಾದೇವ ಸಮಸ್ತಂ ಪದಮಿತಿ ಸೂಚಿತಮ್ । 'ಭೂಪತಿತ್ವಂ ಮೇ ದೇಹಿ'

೬ ದಕಾರಾಂತೇ ದಾಪಯಶಬ್ದಃ ಪರಸ್ತಾಚ್ಚ ಸ್ವಾಹಾಶಬ್ದಃ । 'ದದಾಪಯ ಸ್ವಾಹಾ'

ಅನುಸ್ವಾರಗಳನ್ನು ಸೇರಿಸಿದಾಗ ಅದು ಭೂವರಾಹನ ಬೀಜಾಕ್ಷರವಾಗುವುದು. ಈ ಬೀಜಾಕ್ಷರ, ನಮಃಶಬ್ದ, ಚತುರ್ಥೀವಿಭಕ್ತಿಯ ಭಗವಚ್ಛಬ್ದ, 'ವರಾಹರೂಪ' ಶಬ್ದ ಮತ್ತು ಮೂರು ಲೋಕಗಳ ನಾಥ ಎಂಬರ್ಥವನ್ನು ಕೊಡುವ 'ಭೂರ್ಭುವಃಸ್ವಃಪತಿ' ಶಬ್ದ, ಅನಂತರ 'ಭೂಪತಿತ್ವಂ ಮೇ ದೇಹಿ ದದಾಪಯ' ಎಂಬ ಪದಗಳು ಕೊನೆಯಲ್ಲಿ 'ಸ್ವಾಹಾ' ಪದ ಇವಿಷ್ಟು ಸೇರಿದರೆ ೩೩ ಅಕ್ಷರಗಳ ವರಾಹಮಂತ್ರವಾಗುವುದು.[1]

---

[1] ಒಟ್ಟಿನಲ್ಲಿ ಮಂತ್ರದ ಆನುಪೂರ್ವಿ ಈ ತೆರನಾಗುವುದು—

'ॐ हूँ नमो भगवते वराहरूपाय भूर्भुवःस्वःपतये भूपतित्वं मे देहि ददापय स्वाहा ।'

ಇಲ್ಲಿ 'ದಾದಾಪಯ ಸ್ವಾಹಾ' ಎಂಬುದಾಗಿ ಮಂತ್ರದ ಆನುಪೂರ್ವಿ ಎಂದು ಮುದ್ರಿತವಾದ ಛಲಾರೀಯದಲ್ಲಿದೆ ಆದರೆ 'ದದಾಪಯ ಸ್ವಾಹಾ' ಎಂಬುದೇ ಪ್ರಾಮಾಣಿಕವೆಂದು ಭಾಸವಾಗುವುದು—

'ತಾರಂ ನಮೋ ಭಗವತೇ ವರಾಹಪದಮೀರಯೇತ್ ।
ರೂಪಾಯ ಭೂರ್ಭುವಃಸ್ವಃ ಸ್ಯಾತ್ಪತಯೇ ತದನಂತರಮ್ ॥
ಭೂಪತಿತ್ವಂ ಮೇಪದಾಂತೇ ದೇಹ್ಯಂತೇ ಚ ದದಾಪಯ ।
ವಹ್ನಿಜಾಯಾವಧಿರ್ಮಂತ್ರಃ ಸ್ಯಾತ್ ತ್ರಯಸ್ತ್ರಿಂಶದಕ್ಷರಃ ॥' (ಶಾರದಾ )

'ವಹ್ನಿಜಾಯಾ=ಸ್ವಾಹಾ । ಹೂಂ ಬೀಜಮ್ । ಸ್ವಾಹಾ ಶಕ್ತಿಃ।'(ಪದಾರ್ಥಾ.)

ಶಾರದಾತಿಲಕದಲ್ಲಿ ಬೀಜಾಕ್ಷರದ ಬದಲು 'ತಾರಂ' ಎಂದಿದ್ದಾರೆ. ಅವರಿಗೆ 'ತಾರಂ' ಎಂದರೆ ಬೀಜಾಕ್ಷರವೂ ವಿವಕ್ಷಿತವೇನೊ!

ಇಲ್ಲಿ ಕೆಲವರು 'ಹುಮ್' ಎಂಬುದು ಬೀಜಾಕ್ಷರ ಎಂದು ಭ್ರಮಿಸಿಕೊಂಡಿದ್ದಾರೆ. 'ಯಾಷ್ಟಮಸ್ತೂಯುತಃ' ಎಂದು ಎರಡು ತೆರನಾಗಿಯೂ ಛೇದಮಾಡಲು ಬರುವ ಆಚಾರ್ಯರ ಮಾತು ಅಂಥವರ ಸಂಶಯಕ್ಕೆ ಕಾರಣವಿರಬಹುದು. ಈ ಭ್ರಾಂತಿಯಿಂದಲೇ ಛಲಾರೀಯದಲ್ಲೂ ಇದೇ ತೆರನಾಗಿ ಮುದ್ರಿಸಿದ್ದಾರೆ ಆದರೆ ಇದು ಛಲಾರೀಯಕಾರರಿಗೂ ಸಮ್ಮತವಲ್ಲವೆಂದು ಸುಲಭವಾಗಿ ಅರಿತುಕೊಳ್ಳಬಹುದು ಅವರು ತನ್ನ ವ್ಯಾಖ್ಯೆಯಲ್ಲಿಉದಾಹರಿಸಿದಹೈಹಾಯಸಸಂಹಿತೆಯಲ್ಲಿ'ವಾಮಕರ್ಣವಿಭೂಷಿತಮ್' ಎಂದಿದೆ. ವಾಮಕರ್ಣದಲ್ಲಿ ನ್ಯಾಸ ಮಾಡುವ ವರ್ಣ ಊಕಾರವೇ ಹೊರತು ಉಕಾರವಲ್ಲ. ಉಕಾರದ ನ್ಯಾಸಸ್ಥಾನ ದಕ್ಷಿಣಕರ್ಣ.

'ಊಕಾರಃ ಸ್ವರವರ್ಣಭೇದಃ । ತಸ್ಯ ವಾಮಕರ್ಣೇ ನ್ಯಾಸಃ । ಅತ ಏವ ವಾಮಕರ್ಣಶಬ್ದೇನ ತಸ್ಯಾಭಿಧೇಯತಾ' (ವಾಚಸ್ಪತ್ಯ)

ಎಂದ ಮೇಲೆ 'ಹ್ಞೂಂ' ಎಂಬುದೇ ಬೀಜಮಂತ್ರವೆಂದು ಸಿದ್ಧವಾಗುವುದು. ಶಾರದಾತಿಲಕದ ಮಾತೂ ಇದಕ್ಕೆ ಸಂವಾದಿಯಾಗಿಯೇ ಇದೆ—

## ವರಾಹಸಪ್ತಾಕ್ಷರ–ವರಾಹಚತುರ್ದಶಾಕ್ಷರ

**ಮನುಸ್ತ್ವಸ್ಯಾಪರೋ ನಾಮಬೀಜೋದ್ದೇಶಸಮೋಯುತಃ[೧] ।**
**ನಮಃ ಸೋದ್ದೇಶಭಗವಾನ್ ಮಹಾಶಬ್ದಯುತಶ್ಚ ಸಃ ।**

---

'ಸಾಕ್ಷೀಶಬಿಂದುಗಗನಂ ಬೀಜಂ ವಾರಾಹಮೀರಿತಮ್ ।' (ಶಾರದಾ.)

'ಅಕ್ಷೀಶಃ=ಊಕಾರಃ, ಬಿಂದುಃ, ಏತದ್ಯುತಂ, ಗಗನಂ=ಹಕಾರಃ । ಅಯ-ಮಪಿ ಸ್ವತಂತ್ರೋ ಮಂತ್ರಃ ।' (ಪದಾರ್ಥಾ.)

'ಅಕ್ಷೀಶ' ಎಂಬ ಶಬ್ದಕ್ಕೆ ರುದ್ರ ಎಂದು ಅರ್ಥವಿದ್ದುದರಿಂದ ಊಕಾರವೂ ರುದ್ರವಾಚಕವಾದುದರಿಂದ ಅಕ್ಷೀಶ=ಊಕಾರವೆಂದು ಬರೆದಿದ್ದಾರೆ.

ಅಲ್ಲದೆ ಊಕಾರವಾಚಕ ಪದಗಳಲ್ಲಿ ಈ ಪದವೂ ಸೇರಿದೆ—

'ಊಃ ಕಂಟಕೋ ರತಿಃ ಶಾಂತಿಃ ಕ್ರೋಧನೋ ಮಧುಸೂದನಃ ।
ಕಾಮೋ ರಾಜಕುಜೇಶಶ್ಚ ಮಹೇಶೋ ವಾಮಕರ್ಣಕಃ ॥
ಅಕ್ಷೀಶೋ ಭೈರವಃ ಸೂಕ್ಷ್ಮೋ ದೀರ್ಘಘೋಣಾ ಸರಸ್ವತೀ ।
ವಿಲಾಸಿನೀ ವಿಘ್ನಕರ್ತಾ ಲಕ್ಷಣೋ ರೂಪಕರ್ಷಿಣೀ ।
ಮಹಾವಿದ್ಯೇಶ್ವರೀ ಷಷ್ಠೀ ಷಂಡೋ ಭೂಃ ಕಾನ್ಯಕುಬ್ಜಕಃ ॥

ಇವೆಲ್ಲ ಊಕಾರವಾಚಕ ಪದಗಳು. ಅದರಿಂದ 'ವಾಮಕರ್ಣ' ಮತ್ತು ಅಕ್ಷೀಶ ಎನ್ನುವ ಪದಗಳಿಗೆ ಊಕಾರವೆಂದೇ ಅರ್ಥ, ಎಂತಲೇ 'ಹ್ಲೂಂ' ಎಂಬುದು ಬೀಜಾಕ್ಷರ ಎಂಬ ಪಕ್ಷವೇ ನ್ಯಾಯ್ಯವಾಗಿದೆ.

೧ 'ಉದ್ದೇಶಃ=ಚತುರ್ಥೀ, ಚತುರ್ಥ್ಯಂತತ್ವಂ ನಾಮ್ನ ಏವೇತಿ ಜ್ಞಾತವ್ಯಮ್ । ಇತರತ್ರಾಯೋಗಾತ್ । ಬೀಜಸ್ಯಾದಿವರ್ಣತ್ವಂ ಸುಪ್ರಸಿದ್ಧಮ್ । ತಥಾ ಚೇತ್ಥಂ ಮಂತ್ರನಿಷ್ಪತ್ತಿಃ—

'ॐ ह्लूं वराहाय नमः' (ನಾರಾ.)

ಇಲ್ಲಿ ಮೊದಲನೆಯ ಅಕ್ಷರವಾದ ಓಂಕಾರವನ್ನೂ ಮಂತ್ರದಲ್ಲಿ ಸೇರಿಸಿ ಇದನ್ನು ಅಷ್ಟಾಕ್ಷರವೆಂದೂ ಕರೆವುದುಂಟು.

'ಅಷ್ಟಾಕ್ಷರೇ ಮಹಾಮಂತ್ರೇ ವೇದಾದಿಃ ಪ್ರಥಮಾಕ್ಷರಮ್ ।
ದ್ವಿತೀಯಂ ಬೀಜಕಂ ತಸ್ಮಾದ್ವರಾಹಾಯ ಹೃದಂತತಃ ॥' (ವೈಹಾಯಸ.)

ಈ ಶ್ಲೋಕದ ಪಾಠ ಗ್ರಂಥಾಂತರದಲ್ಲಿ ಬೇರೆ ತೆರನಾಗಿದೆ—

'ಅಷ್ಟಾಕ್ಷರೇ ಮಹಾಮಂತ್ರೇ ಶಾಖಾದಿಃ ಪ್ರಥಮಾಕ್ಷರಮ್ ।
ದ್ವಿತೀಯಂ ವ್ಯಾಹೃತಿಸ್ತಸ್ಮಾದ್ವರಾಹಾಯ ಹೃದಂತತಃ ॥'

ಈ ಪಕ್ಷದಲ್ಲಿ ಮಂತ್ರದ ಆನುಪೂರ್ವಿ 'ॐ भूः वराहाय नमः' ಎಂದಾಗುವುದು. 'भूः' ಎಂಬುದೇ ವರಾಹಬೀಜಾಕ್ಷರ ಎನ್ನುವವರೂ ಉಂಟು—

'ನಾಭಿರ್ವಾಮಶ್ರವಾಃ ಸರ್ಗಸ್ತಸ್ಯ ಬೀಜಮಿಹೋಚ್ಯತೇ ।'

**ತಾದೃಶಃ ಸ್ವಾಹಯಾ ಯುಕ್ತೋ ವರಾಹಸ್ಯಾಪರೋ ಮನುಃ[1] ॥**

ಚತುರ್ಥ್ಯಂತವಾದ ವರಾಹಪದದ ತುದಿಮೊದಲುಗಳಲ್ಲಿ ಬೀಜಾಕ್ಷರ ಮತ್ತು ನಮಃಪದಗಳನ್ನು ಸೇರಿಸಿದಾಗ ವರಾಹಸಪ್ತಾಕ್ಷರ ಮಂತ್ರವಾಗುವುದು. ನಮಃ ಶಬ್ದದ ನಂತರ ಚತುರ್ಥೀವಿಭಕ್ತ್ಯಂತಗಳಾದ 'ಭಗವತೇ ಮಹಾವರಾಹಾಯ' ಎಂಬ ಪದಗಳು ಮತ್ತು ಕೊನೆಗೆ ಸ್ವಾಹಾ ಶಬ್ದ ಇವಿಷ್ಟು ಕೂಡಿ ವರಾಹಚತುರ್ದಶಾಕ್ಷರ ಮಂತ್ರವಾಗುವುದು.

**ಶ್ಯಾಮಃ ಸುದರ್ಶನದರಾಭಯಸದ್ವರೇತೋ**
**ಭೂಮ್ಯಾ ಯುತೋಽಖಿಲನಿಜೋಕ್ತಪರಿಗ್ರಹೈಶ್ಚ ।**
**ಧ್ಯೇಯೋ ನಿಜೈಶ್ಚ ತನುಭಿಃ ಸಕಲೈರುಪೇತಃ**
**ಕೋಲೋ ಹರಿಃ ಸಕಲವಾಂಛಿತಸಿದ್ಧಯೇಽಜಃ ॥ ೫ ॥**

ಕಪ್ಪುಮೈಯ, ಚಕ್ರಶಂಖ-ಅಭಯವರಮುದ್ರೆಗಳನ್ನು ಧರಿಸಿರುವ, ಕೋರೆದಾಡೆಯ ತುದಿಯಲ್ಲಿ ಭೂಮಿಯನ್ನು ಹೊತ್ತಿರುವ, ತನ್ನ ಪರಿವಾರಗಳಾದ ಬ್ರಹ್ಮವಾಯುಶಿವಾದಿಗಳಿಂದ ಕೂಡಿರುವ, ತನ್ನದೇ ಆದ ಮತ್ಸ್ಯಾದಿ ರೂಪಗಳಿಂದಲೂ ಕೃದ್ಧೋಲ್ಕಾದಿಗಳಿಂದಲೂ ಸುತ್ತುವರಿದಿರುವ, ವರಾಹ ರೂಪಿಯಾದ ನಿತ್ಯಮೂರ್ತಿ ನಾರಾಯಣನನ್ನು ಸಕಲಾಭೀಷ್ಟಸಿದ್ಧಿಗಾಗಿ ಧ್ಯಾನಿಸಬೇಕು.[2]

---

೧ 'ॐ नमो भगवते महावराहाय स्वाहा ।' ಇತಿ ಮಂತ್ರಃ ।

೨ ಆಚಾರ್ಯರು ವರಾಹನ ತೋಳುಗಳಲ್ಲಿ ಎರಡು ಆಯುಧವನ್ನೂ, ಎರಡು ಮುದ್ರೆಗಳನ್ನೂ ನಿರೂಪಿಸಿರುವುದರಿಂದ ವರಾಹನು ಚತುರ್ಭುಜ ಎಂಬುದಾಗಿ ಸಿದ್ಧವಾಗುವುದು ಎಂದು ವ್ಯಾಖ್ಯಾಕಾರರು ಅಭಿಪ್ರಾಯಪಡುತ್ತಾರೆ. ಫಲಾರೀಯೋದಾಹೃತ ವೈಹಾಯಸವಾಕ್ಯದಲ್ಲೂ ಚತುರ್ಭುಜತ್ವ ಸಮ್ಮತವಿದ್ದಂತಿದೆ. ಆದರೆ ಬಾಹುಗಳಲ್ಲಿ ಚಕ್ರ ಶಂಖಗದಾಪದ್ಮಗಳನ್ನು ಧರಿಸಿದ್ದಾನೆ ಎಂದು ಉಲ್ಲೇಖವಿದೆ—

**'ಉದಾರಬಾಹುಭಿರಥೋ ಶಂಖಂ ಗದಾಮಂಬುಜಮ್ । ಚಕ್ರಂ ಬಿಭ್ರತಮ್ ।'** (ವೈಹಾಯಸ.)

ಶಾರದಾತಿಲಕದ ಧ್ಯಾನಶ್ಲೋಕದಲ್ಲಿ ಅಷ್ಟಭುಜಗಳನ್ನೂ ವಿವಿಧ ವರ್ಣಗಳನ್ನೂ ಉಲ್ಲೇಖಿಸಿದ್ದಾರೆ—

**'ಆಪಾದಂ ಜಾನುದೇಶಾದ್ವರಕನಕನಿಭಂ ನಾಭಿದೇಶಾದಧಸ್ತಾ-**
**ನ್ಮುಕ್ತಾಭಂ ಕಂಠದೇಶಾತ್ತರುಣರವಿನಿಭಂ ಮಸ್ತಕಾನ್ನೀಲಭಾಸಮ್ ।**
**ಈಡೇ ಹಸ್ತೈರ್ದಧಾನಂ ರಥಚರಣದರೌ ಖಡ್ಗಖೇಟೌ ಗದಾಖ್ಯಾಂ**
**ಶಕ್ತಿಂ ದಾನಾಭಯೇ ಚ ಕ್ಷಿತಿಚರಣಲಸದ್ದಂಷ್ಟ್ರಮಾದ್ಯಂ ವರಾಹಮ್ ॥'**

**ವೈಷ್ಣವಾನಾಂ ಮುನಿರ್ಬ್ರಹ್ಮಾ ಮಂತ್ರಾಣಾಂ ವರ್ಣಭೇದತಃ ।**
**ಜ್ಞೇಯಂ ಛಂದೋ ದೈವತ್ಯೈ[1]ಕಸ್ತತ್ತದ್ರೂಪೋ ಹರಿಃ ಪರಃ ॥ ೬ ॥**

ವೈಷ್ಣವ ಮಂತ್ರಗಳಿಗೆಲ್ಲ ಬ್ರಹ್ಮನೆ ದ್ರಷ್ಟೃ-ಋಷಿ. ಇನ್ನು ಛಂದಸ್ಸನ್ನು ಅಕ್ಷರಗಳ ಗಣನೆಯಿಂದ ತಿಳಿದುಕೊಳ್ಳಬಹುದು.[2] ಎಲ್ಲ ಮಂತ್ರಗಳಿಗೂ ತತ್ತದ್ರೂಪನಾದ ಪರಮಪುರುಷ ಶ್ರೀಹರಿಯೊಬ್ಬನೆ ಪ್ರತಿಪಾದ್ಯದೇವತೆ.

**ಪ್ರಣವೇನ ಸ್ವನಾಮ್ನಾ ಚ ಭೂಧರೇಣ ಪರಾತ್ಮನಾ ।**
**ಸರ್ವಜ್ಞಸರ್ವಶಕ್ತಿಭ್ಯಾಂ ಷಡಂಗಾನಿ ವಿದೋ ವಿದುಃ ॥ ೭ ॥**

ಪ್ರಣವದಿಂದ, ವರಾಹಪದದಿಂದ, ಭೂಧರ-ಪರಾತ್ಮಪದಗಳಿಂದ, ಮತ್ತು ಸರ್ವಜ್ಞ-ಸರ್ವಶಕ್ತಿಪದಗಳಿಂದ ಷಡಂಗನ್ಯಾಸವನ್ನಾಚರಿಸಬೇಕು.[3]

**ಜ್ಞಾನೈಶ್ವರ್ಯಪ್ರಭಾನಂದತೇಜಃಶಕ್ತಿಭಿರೇವ ವಾ ।**
**ಪೂರ್ಣಾತ್ಮಮಧ್ಯಗೈಃ ಸರ್ವವೈಷ್ಣವಾಂಗಾನ್ಯಥೋ ವಿದುಃ ॥ ೮ ॥**

'ಪೂರ್ಣ' ಮತ್ತು 'ಆತ್ಮ' ಶಬ್ದಗಳ ನಡುವಿನಲ್ಲಿರುವ 'ಜ್ಞಾನ', 'ಐಶ್ವರ್ಯ'

---

೧ ದೇವಶಬ್ದಾತ್ ಸ್ವಾರ್ಥೇಽಣಿ ತಲಿ ಚ ಕೃತೇ 'ದೈವತಾ' ಇತಿ ಚ ಭವತಿ ।

೨ ಪ್ರಕೃತ ಮಂತ್ರಗಳಲ್ಲಿ ೩೩ ಅಕ್ಷರದ ಮಂತ್ರದ ಛಂದಸ್ಸು 'ಅನುಷ್ಟುಪ್'. ವಸ್ತುತಃ ಈ ಛಂದಸ್ಸಿಗೆ ೩೨ ಅಕ್ಷರಗಳು. ಆದರೆ ವೇದಗಳಲ್ಲಿ ಒಂದೆರಡು ಅಕ್ಷರಗಳ ವ್ಯತ್ಯಾಸದಿಂದ ಛಂದೋಭಂಗವಾಗಲಾರದು ಎಂದು ಪ್ರಮಾಣವಿರುವುದರಿಂದ (ನವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ) ಇದು ಅನುಷ್ಟುಪ್ ಛಂದಸ್ಸು ಆಗಬಲ್ಲುದು. ದೇವತೆಯಂತೂ ವರಾಹರೂಪಿಯಾದ ನಾರಾಯಣನೆ. ಮಂತ್ರದ್ರಷ್ಟೃ ಚತುರ್ಮುಖ ಬ್ರಹ್ಮ. ಭಾರ್ಗವ ಎಂಬ ಪಕ್ಷವೂ ಉಂಟು—

'ಭಾರ್ಗವೋ ಮುನಿರಾಖ್ಯಾತಶ್ಛಂದೋಽನುಷ್ಟುಬುದಾಹೃತಮ್ ।
ದೇವತಾಽಽದಿವರಾಹೋಽಸ್ಯ ಮಂತ್ರಸ್ಯ ಕಥಿತೋ ಬುಧೈಃ ॥' (ಶಾರದಾ.)

ಒಂದು ಮಂತ್ರಕ್ಕೆ ಅನೇಕ ದ್ರಷ್ಟೃಗಳಿರಬಹುದು ಎಂತಲೇ ಈ ಪಕ್ಷಗಳು ವಿರುದ್ಧಗಳಲ್ಲ. ದ್ವಿತೀಯ ತೃತೀಯ ಮಂತ್ರಗಳ ಛಂದಸ್ಸು 'ಗಾಯತ್ರಿ' ಎಂದು ಪ್ರಾಚೀನರ ಉಲ್ಲೇಖವಿದೆ.

೩ ನ್ಯಾಸಕ್ರಮ—

'ಓಂ ಹೃದಯಾಯ ನಮಃ । ವರಾಹಾಯ ಶಿರಸೇ ಸ್ವಾಹಾ । ಭೂಧರಾಯ ಶಿಖಾಯೈ ವಷಟ್ । ಪರಾತ್ಮನೇ ಕವಚಾಯ ಹುಮ್ । ಸರ್ವಜ್ಞಾಯ ನೇತ್ರಾಭ್ಯಾಂ ವೌಷಟ್ । ಸರ್ವಶಕ್ತಯೇ ಅಸ್ತ್ರಾಯ ಫಟ್ ।'

'ಪ್ರಭಾ', 'ಆನಂದ', 'ತೇಜಃ', 'ಶಕ್ತಿ',–ಈ ಪದಗಳಿಂದ ಎಲ್ಲ ವೈಷ್ಣವ ಮಂತ್ರಗಳಿಗೂ ಅಂಗನ್ಯಾಸ ವಿಹಿತವೇ ಆಗಿದೆ.[೧]

## ಶ್ರೀಕರಮಂತ್ರ

**ತಿಷ್ಠೋದಾದಿಃ ಸ್ವಜಾಯಾಯಾಃ ಕಾರಣಂ ಸ್ವಾಹಯಾ ಯುತಃ ।**
**ಶ್ರೀಕರೋಽಷ್ಟಾರ್ಣಕೋ[೨] ಮಂತ್ರೋ ಗರುಡಾರೂಢಸಂಸ್ಮೃತಿಃ[೩] ॥**

'ಉತ್ತಿಷ್ಠ' ಎಂಬ ಪದದ ಮೇಲೆ ಸಂಪತ್ಕರ ಎಂಬ ಅರ್ಥದ 'ಶ್ರೀಕರ' ಶಬ್ದ ಮತ್ತು ಸ್ವಾಹಾಶಬ್ದಗಳು ಸೇರಿದರೆ ಶ್ರೀಕರಾಷ್ಟಾಕ್ಷರವಾಗುವುದು.[೪] ಈ ಮಂತ್ರಕ್ಕೆ ಗರುಡಾರೂಢವಾದ ಭಗವದ್ರೂಪವೇ ಧ್ಯೇಯವಾಗಿದೆ.

---

೧ ನ್ಯಾಸಕ್ರಮ—

'ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ । ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ । ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ । ಪೂರ್ಣಾನಂದಾತ್ಮನೇ ಕವಚಾಯ ಹುಮ್ । ಪೂರ್ಣತೇಜಆತ್ಮನೇ ನೇತ್ರಾಭ್ಯಾಂ ವೌಷಟ್ । ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ ।

೨ 'ಉತ್ತಿಷ್ಠಪದಮಾಭಾಷ್ಯ ಶ್ರೀ ಕ್ರೋಧೀಶಹುತಾಶನೌ ।
ವಹ್ನಿಜಾಯಾವಧಿರ್ಮಂತ್ರೋ ವಸ್ವಕ್ಷರಸಮನ್ವಿತಃ ॥
ಋಷಿರಸ್ಯ ಭವೇದ್ವಾಮಃ ಪಂಕ್ತಿಶ್ಛಂದ ಉದಾಹೃತಮ್ ।
ಶ್ರೀಕರಾಖ್ಯೋ ಹರಿಃ ಪ್ರೋಕ್ತೋ ದೇವತಾಽಸ್ಯ ಮನೀಷಿಭಿಃ ॥' (ಶಾರದಾ.)

['ಕ್ರೋಧೀಶಃ=ಕಃ । ಹುತಾಶಃ=ರೇಫಃ । ವಸ್ವಕ್ಷರಃ=ಅಷ್ಟಾಕ್ಷರಃ । ವಾಮಃ=ವಾಮದೇವಃ । ತದುಕ್ತಂ 'ಋಷಿರಸ್ಯ ವಾಮದೇವಃ' ಇತಿ ।' (ಪದಾರ್ಥಾ.)]

ತಥಾಚ ಮಂತ್ರಃ—'ॐ उत्तिष्ठ श्रीकर स्वाहा ।'

೩ ಧ್ಯಾನಮಂತ್ರವನ್ನು ಸಂಪ್ರದಾಯಜ್ಞರು ಈ ತೆರನಾಗಿ ಹೇಳುತ್ತಾರೆ—
ಆದಿತ್ಯಚಂದ್ರಾವಪಿ ಚಕ್ರಶಂಖೌ ಶಂಖಪ್ರಸೂನಾಖ್ಯನಿಧೀ ದಧಾನಃ ।
ಚಿಂತ್ಯಃ ಕರಾಭ್ಯಾಂ ವಸುತರ್ಪಯನ್ನಃ ಸ್ವಾಂಕಸ್ಥಲಕ್ಷ್ಮೀರ್ಗರುಡಾಂಸಸಂಸ್ಥಃ ॥
ಶಾರದಾತಿಲಕದ ಧ್ಯಾನಶ್ಲೋಕ ಈ ತೆರನಾಗಿದೆ—
'ಕಾಂಚನಾದ್ರಿಸಮಪ್ರಭಂ ಕಮಲಾನನಂ ಕಮಲೇಕ್ಷಣಂ
ಚಕ್ರಶಂಖಗದಾಸರೋಜಧರಂ ಮನೋಹರದರ್ಶನಮ್ ।
ಕೌಸ್ತುಭಾಂಕಿತವಕ್ಷಸಂ ಮುಕುಟಾಂಗದಾದಿವಿಭೂಷಣಂ
ತಾರ್ಕ್ಷ್ಯವಾಹನಮಚ್ಯುತಂ ಹೃದಿ ಭಾವಯಾಮಿ ಜಗತ್ಪತಿಮ್ ॥'
(ಶಾರದಾ.)

೪ ಈ ಮಂತ್ರದ ಛಂದಸ್ಸು 'ಗಾಯತ್ರೀ' ಎಂದು ನಾರಾಯಣೀಯದ ಮತ.

**ದ್ವಿಭಿರ್ಭೀಷಯ ತ್ರಾಸಯ ಚ ಪ್ರಮರ್ದಯ ತಥೈವ ಚ ।**
**ಪ್ರಧ್ವಂಸಯಾಥೋ ರಕ್ಷೇತಿ ಪಂಚಾಂಗಶ್ಚೇದುದಾಹೃತಃ[೧] ॥ ೧೦ ॥**

ಮಂತ್ರದ ಪಂಚಾಂಗನ್ಯಾಸವನ್ನು ಮಾಡುವುದಿದ್ದರೆ 'ಭೀಷಯ ಭೀಷಯ' 'ತ್ರಾಸಯ ತ್ರಾಸಯ', 'ಪ್ರಮರ್ದಯ ಪ್ರಮರ್ದಯ', 'ಪ್ರಧ್ವಂಸಯ ಪ್ರಧ್ವಂಸಯ', 'ರಕ್ಷ ರಕ್ಷ', ಈ ಐದು ಮಂತ್ರಗಳಿಂದ ನ್ಯಾಸವನ್ನೆಸಗಬೇಕು.[೨]

## ನಾರಸಿಂಹಮಂತ್ರ

**ಕ್ರೂರಂ ವೀರಂ ಬೃಹದ್ವಿಷ್ಣುಂ ದೀಪ್ಯಂತಂ ವಿಶ್ವತೋಮುಖಮ್ ।**
**ಪುಂಮೃಗೇಂದ್ರಂ ಭಯಕರಂ ಶುಭಂ ಮೃತ್ಯೋಶ್ಚ ಮಾರಕಮ್ ।**
**ನಮಾಮಿ ಸ್ವಯಮಿತ್ಯೇಷ ದ್ವಾತ್ರಿಂಶಾರ್ಣೋ ಮನುರ್ಹರೇಃ[೩] ॥**

ಕ್ರೂರ ಎಂಬ ಅರ್ಥದ 'ಉಗ್ರಂ' ಎಂಬ ಪದ, ಅನಂತರ 'ವೀರಂ' ಎಂಬ ಪದ, ಅನಂತರ 'ಮಹಾವಿಷ್ಣುಂ' ಎಂಬ ಪದ, ಆ ಮೇಲೆ ಪ್ರಕಾಶಿಸುವ ಎಂಬ ಅರ್ಥದ 'ಜ್ವಲಂತಂ' ಎಂಬ ಪದ, ಅನಂತರ 'ಸರ್ವತೋಮುಖಂ' ಎಂಬ ಪದ, ಅನಂತರ 'ನೃಸಿಂಹಂ' ಎಂಬ ಪದ, ಭಯಂಕರ ಎಂಬರ್ಥದ 'ಭೀಷಣಂ' ಎಂಬ ಪದ, ಮೃತ್ಯುವಿಗೂ ಮಾರಕ ಎಂಬರ್ಥದ 'ಮೃತ್ಯು-ಮೃತ್ಯುಂ' ಎಂಬ ಪದ ಮತ್ತು 'ನಮಾಮ್ಯಹಂ' ಎಂಬ ಪದ– ಇವಿಷ್ಟು ಸೇರಿದರೆ ೩೨ ಅಕ್ಷರಗಳ ನರಸಿಂಹಮಂತ್ರವಾಗುವುದು.

---

೧ 'ಹೃದಯಂ ಭೀಷಯದ್ವಂದ್ವಂ ತ್ರಾಸಯದ್ವಿತಯಂ ಶಿರಃ ।
ಶಿಖಾ ಪ್ರಮರ್ದಯಯುಗಂ ವರ್ಮ ಪ್ರಧ್ವಂಸಯದ್ವಯಮ್ ।
ಅಸ್ತ್ರಂ ರಕ್ಷಯುಗಂ ಸರ್ವೇ ಹುಂಮಂತಾಃ ಸಮುದೀರಿತಾಃ ॥' (ಶಾರದಾ.)

ಪಂಚಾಂಗಶ್ಚೇದಿತಿ । ಅಷ್ಟಾಂಗಶ್ಚೇಚ್ಚಿಕೀರ್ಷಿತಸ್ತರ್ಹಿ ಮಂತ್ರವರ್ಣೈರೇವೇತ್ಯರ್ಥಃ ।

'ಪಂಚಾಂಗಾನಂತರಮಷ್ಟಾಂಗಂ ಕರ್ತವ್ಯಮ್' (ಪದಾರ್ಥಾ.)

೨ ನ್ಯಾಸಕ್ರಮ—

'ಭೀಷಯ ಭೀಷಯ ಹೃದಯಾಯ ನಮಃ । ತ್ರಾಸಯ ತ್ರಾಸಯ ಶಿರಸೇ ಸ್ವಾಹಾ । ಪ್ರಮರ್ದಯ ಪ್ರಮರ್ದಯ ಶಿಖಾಯೈ ವಷಟ್ । ಪ್ರಧ್ವಂಸಯ ಪ್ರಧ್ವಂಸಯ ಕವಚಾಯ ಹುಮ್ । ರಕ್ಷ ರಕ್ಷ ಅಸ್ತ್ರಾಯ ಫಟ್ ।'

೩ 'ಉಗ್ರಂ ವೀರಂ ವದೇತ್ಪೂರ್ವಂ ಮಹಾವಿಷ್ಣುಮನಂತರಮ್ ।
ಜ್ವಲಂತಂ ಪದಮಾಭಾಷ್ಯ ಸರ್ವತೋಮುಖಮೀರಯೇತ್ ॥

ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ವದೇತ್ತತಃ ।
ನವಾಕ್ಷಾತ್ಮಕಮಯಂ ಪ್ರೋಕ್ತೋ ಮಂತ್ರರಾಜಃ ಸುರದ್ರುಮಃ ॥
ಋಷಿರ್ಬ್ರಹ್ಮಾ ಸಮುದ್ದಿಷ್ಟಶ್ಛಂದೋಽನುಷ್ಟುಬುದಾಹೃತಮ್ ।
ದೇವತಾ ನಾರಸಿಂಹೋಽಸ್ಯ ಸುರಾಸುರನಮಸ್ಕೃತಃ ॥' (ಶಾರದಾ.)

ತಥಾಚ ಮಂತ್ರಃ—

'ॐ उग्रं वीरं महाविष्णुं ज्वलन्तं सर्वतोमुखम् ।
नृसिंहं भीषणं भद्रं मृत्युमृत्युं नमाम्यहम् ॥'

ಅಗ್ನಿಪುರಾಣದಲ್ಲಿಯೂ ಈ ಮಂತ್ರದ ಉಲ್ಲೇಖವಿದೆ—

'ಆನುಷ್ಟುಭನೃಸಿಂಹೇನ ವಿಷವ್ಯಾಧಿವಿನಾಶನಮ್ ।
ॐ हम्, क्ष्म्, उग्रं वीरं महाविष्णुं ज्वलन्तं सर्वतोमुखम् ।
नृसिंहं भीषणं भद्रं मृत्युमृत्युं नमाम्यहम् ॥'
ಅಯಮೇವ ತು ಪಂಚಾಂಗೋ ಮಂತ್ರಃ ಸರ್ವಾರ್ಥಸಾಧಕಃ ॥' (ಅಗ್ನಿಪು.)

ಈ ಮಂತ್ರದ ವಿಸ್ತಾರವಾದ ಅರ್ಥವು ನೃಸಿಂಹತಾಪಿನೀ ಉಪನಿಷತ್ತಿನಲ್ಲಿ ಉಕ್ತವಾಗಿದೆ—

'ದೇವಾ ಹ ವೈ ಮೃತ್ಯೋಃ ಪಾಪ್ಮಭ್ಯಃ ಸಂಸಾರಾಚ್ಚ ಬಿಭೀಯುಸ್ತೇ ಪ್ರಜಾಪತಿಮುಪಾಧಾವಂಸ್ತೇಭ್ಯ ಏತಂ ಮಂತ್ರರಾಜಂ ನಾರಸಿಂಹಮಾನುಷ್ಟುಭಂ ಪ್ರಾಯಚ್ಛತ್ತೇನ ವೈ ತೇ ಮೃತ್ಯುಮಜಯನ್ ಪಾಪ್ಮಾನಂ ಚಾತರನ್, ಸಂಸಾರಂ ಚಾತರಂಸ್ತಸ್ಮಾದ್ಯೋ ಮೃತ್ಯೋಃ ಪಾಪ್ಮಭ್ಯಃ ಸಂಸಾರಾಚ್ಚ ಬಿಭೀಯಾತ್ಸ ಏತಂ ಮಂತ್ರರಾಜಂ ನಾರಸಿಂಹಮಾನುಷ್ಟುಭಂ ಪ್ರತಿಗೃಹ್ಣೀಯಾತ್ಸ ಮೃತ್ಯುಂ ತರತಿ ಸ ಪಾಪ್ಮಾನಂ ತರತಿ ಸ ಸಂಸಾರಂ ತರತಿ ।'

'ತಸ್ಯ ಹ ವಾ ಉಗ್ರಂ ಪ್ರಥಮಂ ಸ್ಥಾನಂ ಜಾನೀಯಾದ್ಯೋ ಜಾನೀತೇ ಸೋಽಮೃತತ್ವಂ ಚ ಗಚ್ಛತಿ ವೀರಂ ದ್ವಿತೀಯಂ ಸ್ಥಾನಂ ಮಹಾವಿಷ್ಣುಂ ತೃತೀಯಂ ಸ್ಥಾನಂ ಜ್ವಲಂತಂ ಚತುರ್ಥಂ ಸ್ಥಾನಂ ಸರ್ವತೋಮುಖಂ ಪಂಚಮಂ ಸ್ಥಾನಂ ನೃಸಿಂಹಂ ಷಷ್ಠಂ ಸ್ಥಾನಂ ಭೀಷಣಂ ಸಪ್ತಮಂ ಸ್ಥಾನಂ ಭದ್ರಮಷ್ಟಮಂ ಸ್ಥಾನಂ ಮೃತ್ಯುಮೃತ್ಯುಂ ನವಮಂ ಸ್ಥಾನಂ ನಮಾಮಿ ದಶಮಂ ಸ್ಥಾನಮಹಮೇಕಾದಶಂ ಸ್ಥಾನಂ ಜಾನೀಯಾದ್ಯೋ ಜಾನೀತೇ ಸೋಽಮೃತತ್ವಂ ಚ ಗಚ್ಛತಿ ।

'ದೇವಾ ಹ ವೈ ಪ್ರಜಾಪತಿಮಬ್ರುವನ್ನಥ ಕಸ್ಮಾದುಚ್ಯತ ಉಗ್ರಮಿತಿ ಸಹೋವಾಚ ಪ್ರಜಾಪತಿರ್ಯಸ್ಮಾತ್ಸ್ವಮಹಿಮ್ನಾ ಸರ್ವಾನ್ ಲೋಕಾನ್ ಸರ್ವಾನ್ ದೇವಾನ್ ಸರ್ವಾನಾತ್ಮನಃ ಸರ್ವಾಣಿ ಭೂತಾನ್ಯುದ್ಗೃಹ್ಣಾತ್ಯಜಸ್ರಂ ಸೃಜತಿ ವಿಸೃಜತಿ ವಾಸಯತ್ಯುದ್ಗ್ರಾಹ್ಯತ ಉದ್ಗೃಹ್ಯತೇ........ತಸ್ಮಾದುಚ್ಯತ ಉಗ್ರಮಿತಿ ।

## ಚತುರ್ವಿಂಶತ್ಯಕ್ಷರನರಸಿಂಹಮಂತ್ರ

**ದ್ವಿರ್ಜಯಸ್ಯೋಪರಿ ನಿಜಂ ಸೋಽನ್ತೇಽಶಂ ಸರ್ವವಿತ್ತಥಾ ।**
**ಮಹಾತೇಜೋ ಬಲಂ ವೀರ್ಯಂ ತಾದೃಶಂ ಸ್ವಾಹಯಾ ಯುತಮ್।**
**ಚತುರ್ವಿಂಶಾಕ್ಷರೋ ಮಂತ್ರೋ ನಿಖಿಲೇಷ್ಟಪ್ರದಾಯಕಃ ॥ ೧೨ ॥**

ಎರಡು ಬಾರಿ 'ಜಯ'ಶಬ್ದ, ಚತುರ್ಥ್ಯಂತವಾದ 'ನರಸಿಂಹ'ಶಬ್ದ, 'ಸರ್ವಜ್ಞ'ಶಬ್ದ ಮತ್ತು 'ಮಹಾತೇಜೋಬಲವೀರ್ಯ'ಶಬ್ದ, ಕೊನೆಯಲ್ಲಿ 'ಸ್ವಾಹಾ'ಶಬ್ದ ಇವಿಷ್ಟು ಸೇರಿದರೆ ೨೪ ಅಕ್ಷರಗಳ ನರಸಿಂಹಮಂತ್ರವಾಗುವುದು. ಈ ಮಂತ್ರ ಸಕಲ ಅಭೀಷ್ಟಗಳನ್ನೂ ಕೊಡಬಲ್ಲುದು.[1]

---

'ಅಥ ಕಸ್ಮಾದುಚ್ಯತೇ ವೀರಮಿತಿ........ವಿರಮತಿ ವಿರಾಮಯತ್ಯಜಸ್ರಂ....... ತಸ್ಮಾದುಚ್ಯತೇ ವೀರಮಿತಿ ।

'ಅಥ ಕಸ್ಮಾದುಚ್ಯತೇ ಮಹಾವಿಷ್ಣುಮಿತಿ.. ..ವ್ಯಾಪ್ನೋತಿ ವ್ಯಾಪಯತಿ...... ವ್ಯಾಪ್ಯತೇ ವ್ಯಾಪಯತೇ ತಸ್ಮಾದುಚ್ಯತೇ ಮಹಾವಿಷ್ಣುಮಿತಿ ।

'ಅಥ ಕಸ್ಮಾದುಚ್ಯತೇ ಜ್ವಲಂತಮಿತಿ ......ಜ್ವಲತಿ ಜ್ವಾಲಯತಿ ಜ್ವಾಲ್ಯತೇ ಜ್ವಾಲಯತೇ. ......ತಸ್ಮಾದುಚ್ಯತೇ ಜ್ವಲಂತಮಿತಿ ।'

'ಅಥ ಕಸ್ಮಾದುಚ್ಯತೇ ಸರ್ವತೋಮುಖಮಿತಿ......ಸ್ವಯಮನಿಂದ್ರಿಯೋಽಪಿ ಸರ್ವತಃ ಪಶ್ಯತಿ ಸರ್ವತಃ ಶೃಣೋತಿ ಸರ್ವತೋ ಗಚ್ಛತಿ ಸರ್ವತ ಆದತ್ತೇ........ ತಸ್ಮಾದುಚ್ಯತೇ ಸರ್ವತೋಮುಖಮಿತಿ ।'

'ಅಥ ಕಸ್ಮಾದುಚ್ಯತೇ ನೃಸಿಂಹಮಿತಿ ಯಸ್ಮಾತ್ಸರ್ವೇಷಾಂ ಭೂತಾನಾಂ ವಾ ವೀರ್ಯತಮಃ ಶ್ರೇಷ್ಠತಮಶ್ಚ ಸಿಂಹಃ ತಸ್ಮಾದುಚ್ಯತೇ ನೃಸಿಂಹಮಿತಿ ।'

'ಅಥ ಕಸ್ಮಾದುಚ್ಯತೇ ಭೀಷಣಮಿತಿ ಯಸ್ಮಾದ್ಭೀಷಣಂ ಯಸ್ಯ ರೂಪಂ ದೃಷ್ಟ್ವಾ ಸರ್ವೇ........ಭೀತಾಃ ಪಲಾಯಂತೇ ಸ್ವಯಂ ಯತಃ ಕುತಶ್ಚ ನ ಬಿಭೇತಿ........।'

'ಅಥ ಕಸ್ಮಾದುಚ್ಯತೇ ಭದ್ರಮಿತಿ ಯಸ್ಮಾತ್ಸ್ವಯಂ ಭದ್ರೋ ಭೂತ್ವಾ ಸರ್ವದಾ ಭದ್ರಂ ದದಾತಿ ।'

'ಅಥ ಕಸ್ಮಾದುಚ್ಯತೇ ಮೃತ್ಯುಮೃತ್ಯುಮಿತಿ........ಸ್ಮೃತ ಏವ ಮೃತ್ಯುಮಪಮೃತ್ಯುಂ ಚ ಮಾರಯತಿ...... .ತಸ್ಮಾದುಚ್ಯತೇ ಮೃತ್ಯುಮೃತ್ಯುಮಿತಿ ।'

'ಅಥ ಕಸ್ಮಾದುಚ್ಯತೇ ನಮಾಮೀತಿ ಯಸ್ಮಾದ್ಯಂ ಸರ್ವೇ ದೇವಾ ನಮಂತಿ ಮುಮುಕ್ಷವೋ ಬ್ರಹ್ಮವಾದಿನಶ್ಚ ।'

'ಅಥ ಕಸ್ಮಾದುಚ್ಯತೇಽಹಮಿತಿ..... .ಅಹಮನ್ನಮನ್ನಮದಂತಮದ್ಮಿ ಅಹಂ ವಿಶ್ವಂ ಭುವನಮಭ್ಯಭವಾಮ್. ..... ।'

[1] ತಥಾಚ ಮಂತ್ರಃ— 'जय जय नरसिंहाय सर्वज्ञाय महातेजोबलवीर्याय स्वाहा ।'

## ನೃಸಿಂಹಗಾಯತ್ರೀ

**ವಿದ್ಮಹೇ ಧೀಮಹೇ ಪೂರ್ವಂ ಸ್ವಯಂ ಚೈವ ಮಹಾಬಲಃ ।**
**ಪ್ರೇರಯೇತ್ತನ್ನ ಇತ್ಯೇನ್ಮಧ್ಯೇಽನಂತಃ ಪ್ರಕೀರ್ತಿತಃ ॥ ೧೩ ॥**

'ವಿದ್ಮಹೇ' ಮತ್ತು 'ಧೀಮಹಿ' ಪದಗಳ ಮೊದಲು ನರಸಿಂಹಶಬ್ದ ಮಹಾಬಲಶಬ್ದಗಳು, 'ತನ್ನಃ' ಮತ್ತು 'ಪ್ರಚೋದಯಾತ್' ಪದಗಳ ನಡುವೆ 'ಅನಂತಃ' ಎಂಬ ಪದ– ಇವಿಷ್ಟು ಸೇರಿದಾಗ ಅದನ್ನು ನರಸಿಂಹಗಾಯತ್ರೀ ಎನ್ನುವರು.[೧]

**ಪಾದೈರ್ವ್ಯಸ್ತೈಃ ಸಮಸ್ತೈಶ್ಚ ಪಾದೈಶ್ಚಾಂಗಂ ಪ್ರಕೀರ್ತಿತಮ್ ।**
**ಪೂರ್ವಯೋಸ್ತತ್ರ ಪೂರ್ವಂ ತು ಸರ್ವಜ್ಞೇನ ಷಡಂಗಕಮ್ ।**
**ತೃತೀಯಂ ತು ದ್ವಿರಾವೃತ್ತೈಃ ಪಾದೈರಂಗಸಮನ್ವಿತಮ್ ॥ ೧೪ ॥**

ಮೊದಲನೆಯ ಮಂತ್ರಕ್ಕೆ ಪಂಚಾಂಗನ್ಯಾಸವನ್ನು ಮಂತ್ರದ ೪ ಪಾದಗಳಿಂದ ಮತ್ತು ಸಮಸ್ತ ಮಂತ್ರದಿಂದ ಆಚರಿಸಬೇಕು; 'ಸರ್ವಜ್ಞ' ಪದವನ್ನೂ ಸೇರಿಸಿಕೊಂಡು ಷಡಂಗನ್ಯಾಸವನ್ನಾದರೂ ಆಚರಿಸಬಹುದು. ಎರಡನೆಯ ಮಂತ್ರದಲ್ಲಿಯ ೬ ಪದಗಳೇ ಆ ಮಂತ್ರದ ಷಡಂಗನ್ಯಾಸ ಮಂತ್ರಗಳು. ಮೂರನೆಯದಾದ ನರಸಿಂಹಗಾಯತ್ರಿಗೆ ಅದರ ಪಾದಗಳನ್ನೇ ಎರಡುಬಾರಿ ಉಚ್ಚರಿಸಿ ಷಡಂಗನ್ಯಾಸವನ್ನೆಸಗಬೇಕು.[೨]

---

೧ ತಥಾಚ ಮಂತ್ರಃ— 'ॐ नरसिंहाय विद्महे महाबलाय धीमहि । तन्नोऽनन्तः प्रचोदयात् ।'

ಕೃಷ್ಣಾನಂದ ವಾಗೀಶ ಭಟ್ಟಾಚಾರ್ಯನ ತಂತ್ರಸಾರದಲ್ಲಿ ಉಕ್ತವಾದ ನರಸಿಂಹ ಗಾಯತ್ರಿ ಕೆಳಗಿನಂತಿದೆ—

'ॐ वज्रनखाय विद्महे तीक्ष्णदंष्ट्राय धीमहि । तन्नो नारसिंहः प्रचोदयात् ।'

'ನೃಸಿಂಹಪೂರ್ವತಾಪಿನಿಯಲ್ಲಿ ಇನ್ನೊಂದು ತೆರನಾದ ಗಾಯತ್ರಿಯೂ ಉಕ್ತವಾಗಿದೆ—

'ॐ नृसिंहाय विद्महे वज्रनासाय धीमहि । तन्नः सिंहः प्रचोदयात् ಇತ್ಯೇಷಾ ವೈ ನೃಸಿಂಹಗಾಯತ್ರೀ ದೇವಾನಾಂ ವೇದಾನಾಂ ನಿದಾನಂ ಭವತಿ ಯ ಏವಂ ವೇದ ನಿದಾನವಾನ್ಭವತಿ ।'

೨ ಮೊದಲನೆಯ ಮಂತ್ರದ ನ್ಯಾಸ—

'ಉಗ್ರಂ ವೀರಂ ಮಹಾವಿಷ್ಣುಂ ಹೃದಯಾಯ ನಮಃ । ಜ್ವಲಂತಂ ಸರ್ವತೋಮುಖಂ ಶಿರಸೇ ಸ್ವಾಹಾ । ನೃಸಿಂಹಂ ಭೀಷಣಂ ಭದ್ರಂ ಶಿಖಾಯೈ ವಷಟ್ ।

ಧ್ಯಾಯೇನ್ನೃಸಿಂಹಮುರುವೃತ್ತರವಿತ್ರಿನೇತ್ರಂ
ಜಾನುಪ್ರಸಕ್ತಕರಯುಗ್ಮಮಥಾಪರಾಭ್ಯಾಮ್ ।
ಚಕ್ರಂ ದರಂ ಚ ದಧತಂ ಪ್ರಿಯಯಾ ಸಮೇತಂ
ತಿಗ್ಮಾಂಶುಕೋಟ್ಯಧಿಕತೇಜಸಮಗ್ರ್ಯಶಕ್ತಿಮ್ ॥ ೧೫ ॥

ವಿಶಾಲವರ್ತುಲಗಳಾದ ಸೂರ್ಯನಂತೆ ಬೆಳಗುವ ಮೂರು ಕಣ್ಣುಗಳುಳ್ಳ, ಎರಡು ಕೈಗಳನ್ನು ಮೊಣಗಾಲಿನಲ್ಲಿರಿಸಿ ಉಳಿದೆರಡರಿಂದ ಚಕ್ರಶಂಖಗಳನ್ನು ಧರಿಸಿಕೊಂಡಿರುವ, ಕೋಟಿಕೋಟಿ ಸೂರ್ಯರಿಂದಲೂ ಮಿಗಿಲಾಗಿ ಉಜ್ಜ್ವಲನಾದ, ರಮೆಯೊಡನಿರುವ ಶ್ರೀನರಸಿಂಹನನ್ನು ಧ್ಯಾನಿಸಬೇಕು.[೧]

---

ಮೃತ್ಯುಮೃತ್ಯುಂ ನಮಾಮ್ಯಹಂ ಕವಚಾಯ ಹುಮ್ । ಓಂ ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಮ್ । ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಂ ಅಸ್ತ್ರಾಯ ಫಟ್ ।

ಷಡಂಗನ್ಯಾಸವಾಗಿದ್ದರೆ ಸಮಸ್ತ ಮಂತ್ರವನ್ನು ಹೇಳಿದ ನಂತರ–'ನೇತ್ರತ್ರಯಾಯ ವೌಷಟ್ । ಸರ್ವಜ್ಞಾಯ ಅಸ್ತ್ರಾಯ ಫಟ್ ।'

ಅಂಗನ್ಯಾಸದಲ್ಲಿ ಸಮಸ್ತ ಮಂತ್ರವನ್ನುಚ್ಚರಿಸುವಾಗ ಮೊದಲು ಓಂಕಾರವನ್ನೂ ಸೇರಿಸಿಕೊಂಡೇ ಹೇಳಬೇಕು ಎಂದು ನೃಸಿಂಹ ಪೂರ್ವತಾಪಿನಿಯಲ್ಲಿದೆ—

'ತಸ್ಯ ಹ್ಯೈತಸ್ಯ ಪಂಚಾಂಗಾನಿ ಭವಂತಿ ಚತ್ವಾರಃ ಪಾದಾಶ್ಚತ್ವಾರ್ಯಂಗಾನಿ ಭವಂತಿ ಸಪ್ರಣವಂ ಸರ್ವಂ ಪಂಚಮಂ ಭವತಿ । ಹೃದಯಾಯ ನಮಃ ಶಿರಸೇ ಸ್ವಾಹಾ ಶಿಖಾಯೈ ವಷಟ್ ಕವಚಾಯಹುಂ ಅಸ್ತ್ರಾಯ ಫಡಿತಿ ।'

ಎರಡನೆಯ ಮಂತ್ರದ ಅಂಗನ್ಯಾಸ—

'ಜಯ ಹೃದಯಾಯ ನಮಃ । ಜಯ ಶಿರಸೇ ಸ್ವಾಹಾ । ನರಸಿಂಹಾಯ ಶಿಖಾಯೈ ವಷಟ್ । ಸರ್ವಜ್ಞಾಯ ಕವಚಾಯ ಹುಮ್ । ಮಹಾತೇಜೋಬಲವೀರ್ಯಾಯ ನೇತ್ರತ್ರಯಾಯ ವೌಷಟ್ । ಸ್ವಾಹಾ ಅಸ್ತ್ರಾಯ ಫಟ್ ।'

ನರಸಿಂಹಗಾಯತ್ರಿಯ ನ್ಯಾಸಕ್ರಮ—

'ನರಸಿಂಹಾಯ ವಿದ್ಮಹೇ ಹೃದಯಾಯ ನಮಃ । ಮಹಾಬಲಾಯ ಧೀಮಹಿ ಶಿರಸೇ ಸ್ವಾಹಾ । ತನ್ನೋಽನಂತಃ ಪ್ರಚೋದಯಾತ್ ಶಿಖಾಯೈ ವಷಟ್ । ನರಸಿಂಹಾಯ ವಿದ್ಮಹೇ ಕವಚಾಯ ಹುಮ್ । ಮಹಾಬಲಾಯ ಧೀಮಹಿ ನೇತ್ರತ್ರಯಾಯ ವೌಷಟ್ । ತನ್ನೋಽನಂತಃ ಪ್ರಚೋದಯಾತ್ ಅಸ್ತ್ರಾಯ ಫಟ್ ।'

೧ 'ಮಾಣಿಕ್ಯಾದ್ರಿಸಮಪ್ರಭಂ ನಿಜರುಚಾ ಸಂತ್ರಸ್ತರಕ್ಷೋಗಣಂ
ಜಾನುನ್ಯಸ್ತಕರಾಂಬುಜಂ ತ್ರಿನಯನಂ ರತ್ನೋಲ್ಲಸದ್ಭೂಷಣಮ್ ।
ಬಾಹುಭ್ಯಾಂ ಧೃತಶಂಖಚಕ್ರಮನಿಶಂ ದಂಷ್ಟ್ರೋಗ್ರವಕ್ತ್ರೋಲ್ಲಸ-
ಜ್ಜ್ವಾಲಾಜಿಹ್ವಮುದಗ್ರಕೇಶನಿಚಯಂ ವಂದೇ ನೃಸಿಂಹಂ ವಿಭುಮ್ ॥'
(ಶಾರದಾ.)

**ಸರ್ವೇಷ್ವಪಿ ಹಿ ಮಂತ್ರೇಷು ದ್ವ್ಯಾದ್ಯನಂತಾಂತಬಾಹುಕಃ ।**
**ಚೇತನಾಂತಸ್ತ್ವಮಾರಭ್ಯ ಸರ್ವಗಾಂತಸ್ವರೂಪವಾನ್ ॥ ೧೬ ॥**
**ಅನಂತರೂಪೋ ಧ್ಯೇಯೋಽತಃ ಸ್ವಗುರೂಕ್ತ್ಯನುಸಾರತಃ ।**
**ಯಥಾಯೋಗ್ಯಂ ಯಥಾಶಕ್ತಿ ತತ್ತದಾಯುಧಭೂಷಣಃ ॥ ೧೭ ॥**

ಪ್ರತಿಯೊಂದು ಮಂತ್ರಪ್ರತಿಪಾದ್ಯವಾದ ಭಗವನ್ಮೂರ್ತಿಗೂ ಎರಡೋ ನಾಲ್ಕೋ ಕೈಗಳೆಂದೇನೂ ನಿಯಮವಿಲ್ಲ. ಶ್ರೀಹರಿಯ ಬಾಹುಗಳನ್ನೆಣಿಸುವ ಕೊನೆಯ ಸಂಖ್ಯೆ ಅಂದರೆ ಅನಂತಸಂಖ್ಯೆಯೊಂದೆ. ಭಗವಂತನ ರೂಪದ ವಿಷಯದಲ್ಲೂ ಹೀಗೆಯೆ. ಅಣುರೂಪನಾದ ಜೀವನ ಅಂತರ್ಗತವಾದ 'ಅಣೋರಣೀಯಾನ್' ಎನ್ನಿಸಿಕೊಂಡ ರೂಪದಿಂದ ಎಲ್ಲೆಡೆಯಲ್ಲೂ ತುಂಬಿರುವ ಆಕಾಶವನ್ನೂ ವ್ಯಾಪಿಸಿರುವ 'ಮಹತೋ ಮಹೀಯಾನ್' ಎನ್ನಿಸಿಕೊಂಡ ರೂಪದ ವರೆಗೆ ಎಲ್ಲ ಆಕಾರಗಳೂ ಧ್ಯೇಯಗಳಾಗಿವೆ. ಹೀಗೆಯೇ ಆತನ ಅನಂತರೂಪಗಳೂ ಧ್ಯೇಯಗಳಾಗಿವೆ. ಆದರೆ ಯೋಗ್ಯರಾದ ಗುರುಗಳ ಉಪದೇಶದಿಂದ ತನ್ನ ಸಾಮರ್ಥ್ಯವನ್ನೂ, ತನ್ನ ಅರ್ಹತೆಯನ್ನೂ ಅರಿತುಕೊಂಡು ತನ್ನ ಅಳವಿಗೆ ಸಿಲುಕುವಷ್ಟೆ ಭಗವಂತನ ರೂಪವ್ಯಾಪ್ತಿಯನ್ನು, ಭಗವಂತನ ಶರೀರ-ಅವಯವಗಳನ್ನು, ಅದಕ್ಕುಚಿತವಾದ ಆಯಾ ಆಯುಧ ಅಲಂಕಾರಗಳೊಡನೆ ಧ್ಯಾನಿಸಬೇಕು.

**ಚಕ್ರಶಂಖಗದಾಪದ್ಮಖಡ್ಗಖೇಟಾಃ ಸಶಾರ್ಙ್ಗಕಾಃ ।**
**ಶರೋ ಮುಸಲ[1]ವಜ್ರೌ ಚ ಹಲಃ ಪಾಶಾಂಕುಶೌ ತಥಾ ॥ ೧೮ ॥**
**ಶೂಲಂ ಚ ಭಿಂಡಿಪಾಲಶ್ಚ ಪಟ್ಟಿಸೋಽಗ್ನಿರ್ವರಾಭಯೇ[2] ।**

---

೧ 'ಮುಸಲಃ-ಲಂ=A mace.' (V. S. Apte)

೨ 'ಭಿಂದ(ದಿ)ಪಾಲಃ=A small javelin thrown from the hand.' (V. S. Apte)

'ಪಟ್ಟಿ(ಟ್ಟೀ)ಶಃ(ಸಃ)=A kind of spear with a sharp edge.' (V. S. Apte)

'ಪಟ್ಟಿಶೋ ಲೌಹದಂಡೋ ಯಸ್ತೀಕ್ಷ್ಣಧಾರಃ ಕ್ಷುರೋಪಮಃ ।' (ವೈಜಯಂತೀ.)

ಸಂಸ್ಕೃತದಲ್ಲಿ ಹೆಚ್ಚಾಗಿ 'ಭಿಂದಿಪಾಲ' ಎಂದೂ 'ಪಟ್ಟಿಶ' ಎಂದೂ ವ್ಯವಹಾರವಿದೆ. 'ಭಿಂಡಿಪಾಲ' ಮತ್ತು 'ಪಟ್ಟಿಸ' ಶಬ್ದಗಳು ಕನ್ನಡದಲ್ಲಿ ಬಳಕೆಯವುಗಳು. ಕನ್ನಡಿಗರಾದ ಆಚಾರ್ಯರು ಈ ಪದಗಳನ್ನೆ ಬಳಸಿದ್ದಾರೆ. ಇಲ್ಲಿ ಸಂಸ್ಕೃತದ ಮೂಲಶಬ್ದ ಯಾವುದಿರಬಹುದು ಎನ್ನುವುದನ್ನು ನಿರ್ಧರಿಸುವುದು ಅಸಾಧ್ಯವಾಗಿದೆ. ಈ ಆಯುಧ

**ತತ್ತ್ವಮುದ್ರಾಽಕ್ಷಮಾಲಾಂ ಚ ಪುಸ್ತಕಂ ಚ ವಿದಾರಣಮ್[1] ।**

---

ಗಳ ಹೆಸರು ಅನೇಕ ಕೋಶಗಳಲ್ಲಿ ಅನೇಕ ರೂಪವನ್ನು ಹೊಂದಿವೆ. ಹಿಂದೆ ಬರೆದಂತೆ 'ಭಿಂದವಾಲ', 'ಭಿಂದಿಪಾಲ' ಅಲ್ಲದೆ ಹಲಾಯುಧನ ಕೋಶದಲ್ಲಿ 'ಭಿಂದಮಾಲ' ಎಂಬ ಪಾಠವೂ ಕಂಡುಬರುವುದು. ಅದಕ್ಕೆ ಟೀಕೆ ಬರೆದ ಕನ್ನಡಿಗನಾದ ನಾಗವರ್ಮ 'ಪಿಂಡಿ-ಪಾಲ' ಎಂಬ ಶಬ್ದವನ್ನು ಉಲ್ಲೇಖಿಸಿದ್ದಾನೆ. ಹೀಗೆ ಕೋಶಗಳೆಲ್ಲ ಒಂದೊಂದು ಒಂದೊಂದು ತೆರನಾಗಿ ಬರೆದಾಗ ಇದೇ ಸಾಧು, ಇದೇ ಅಸಾಧು ಎಂಬ ನಿರ್ಣಯಕ್ಕೆ ಬರುವಂತಿಲ್ಲ. ನಿಷ್ಪತ್ತಿಯ ವ್ಯತ್ಯಾಸದಿಂದ ಇವೆಲ್ಲವೂ ಸಾಧುಗಳೇ. ಉದುಂಬರವು ಉಡುಂಬರವಾದಂತೆ ಭಿಂದಿಪಾಲವೂ ಪೃಷೋದರಾದಿಗಣದಲ್ಲಿ ಸೇರಿದಾಗ ಭಿಂಡಿವಾಲವೆಂದೂ ಆಗಬಹುದು

'ಊರ್ಧ್ವೀಕೃತೋ ದಕ್ಷಹಸ್ತಃ ಪ್ರಸೃತೋಽಭಯಮುದ್ರಿಕಾ ।
ಅಧೋಮುಖೋ ವಾಮಹಸ್ತಃ ಪ್ರಸೃತೋ ವರಮುದ್ರಿಕಾ ॥'

೧ ತತ್ತ್ವಮುದ್ರಾ=ಜ್ಞಾನಮುದ್ರಾ ।

'ತರ್ಜನ್ಯಂಗುಷ್ಠಕೌ ಸಕ್ತಾವಗ್ರತೋ ವಿನ್ಯಸೇದ್ಧೃದಿ ।
ವಾಮಹಸ್ತಾಂಬುಜಂ ವಾಮಜಾನುಮೂರ್ಧನಿ ವಿನ್ಯಸೇತ್ ।
ಜ್ಞಾನಮುದ್ರಾ ಭವೇದೇಷಾ ರಾಮಚಂದ್ರಸ್ಯ ಪ್ರೇಯಸೀ ॥' (ತಂತ್ರಸಾರ)

೨ ಈ ಎಲ್ಲ ಆಯುಧಗಳನ್ನು ಧರಿಸುವುದು ಕ್ರಮಬದ್ಧವಾಗಿದೆ. ಆದರಿಂದಲೆ ಯಾವ ಕೈಯಿಂದ ಯಾವ ಆಯುಧವನ್ನು ಧರಿಸಿಕೊಂಡಿರುವುದು ಎಂಬ ಕುರಿತು ತಂತ್ರಾಂತರಗಳಿಂದ ತಿಳಿದುಕೊಳ್ಳಬಹುದು—

'ದಕ್ಷೇಽಂಕುಶಾಭಯೇ ಪ್ರೋಕ್ತೇ ವಾಮೇ ಪಾಶಮಭೀಷ್ಟದಮ್ ।'
(ಶಾರದಾ.)

'ಚಕ್ರಂ ಖಡ್ಗಂ ಮುಸಲಮಭಯಂ ದಕ್ಷಿಣಾಭಿರ್ಭುಜಾಭಿಃ
ಶಂಖಂ ಖೇಟಂ ಹಲಮಪಿ ವರಂ ಬಿಭ್ರತೀ ವಾಮದೋರ್ಭಿಃ ॥'
(ಗೌತಮೀಯತಂತ್ರ)

ಇಲ್ಲಿ ದೇವತಾಂತರ ಧ್ಯಾನ ಉಕ್ತವಾಗಿದ್ದರೂ ಆಯುಧಕ್ರಮ ಸಮವಾಗಿಯೇ ಇದೆ. ಮುಂದಿನ ಪ್ರಮಾಣಗಳಲ್ಲೂ ಈ ವಿಷಯವನ್ನು ಗಮನಿಸಬೇಕು—

'ಪಾಶಂ ಪತಾಕಾಂ ಚರ್ಮಾಪಿ ಶಾರ್ಙ್ಗಂ ಚಾಪಂ ವರಂ ಕರೈಃ ।
ದಧಾನಾಂ ವಾಮಪಾರ್ಶ್ವಸ್ಥೈಃ ಸರ್ವಾಭರಣಭೂಷಿತೈಃ ॥
ಅಂಕುಶಂ ಚ ತತೋ ದಂಡಂ ಖಡ್ಗಂ ಬಾಣಂ ತಥಾಽಭಯಮ್ ।
ದಧಾನಾಂ ದಕ್ಷಿಣೈರ್ಹಸ್ತೈರಾಸೀನಾಂ ಪದ್ಮವಿಷ್ಟರೇ ॥'
'ವಾಮದಕ್ಷಿಣಯೋಃ ಸ್ಯಾತಾಂ ದ್ವಿಭುಜೇ ತು ವರಾಭಯೌ ।
ಪಾಶಾಂಕುಶೌ ಚತುರ್ಬಾಹೌ ಷಡ್ಭುಜೇ ಚಾಪಸಾಯಕೌ ।
ಚರ್ಮಖಡ್ಗಾವಷ್ಟಭುಜೇ ಗದಾಶೂಲೇ ದಶೋದಿತೇ ॥'

**ಇತ್ಯಾದೀನ್ಯಖಿಲಾನ್ಯೇವ ವಿಷ್ಣೋ[೧]ಶ್ಚಿಂತ್ಯಾನಿ ಬಾಹುಷು ॥ ೧೯ ॥**

ಚಕ್ರ, ಶಂಖ, ಗದೆ, ಪದ್ಮ, ಖಡ್ಗ, ಗುರಾಣಿ, ಬಿಲ್ಲು, ಬಾಣ, ಒನಕೆ, ವಜ್ರಾಯುಧ, ನೇಗಿಲು, ಪಾಶ, ಅಂಕುಶ, ಶೂಲ, ಎಸೆಯೀಟಿ, ಯುದ್ಧದ ಕೊಡಲಿ ಮೊದಲಾದ ಆಯುಧಗಳನ್ನೋ, ಬೆಂಕಿಯಂಥ ಭಯಾನಕ ವಸ್ತುಗಳನ್ನೋ, ವರಮುದ್ರೆ-ಅಭಯಮುದ್ರೆಗಳನ್ನೋ, ತತ್ತ್ವಮುದ್ರೆಯನ್ನೋ, ಪದ್ಮಾಕ್ಷದ ಮಾಲೆಯನ್ನೋ, ಪುಸ್ತಕವನ್ನೋ, ಇನ್ನೂ ಯಾವುದೇ ಆಯುಧಗಳನ್ನು ಶ್ರೀಹರಿ ತನ್ನ ಕೈಗಳಲ್ಲಿ ಹಿಡಿದುಕೊಂಡಿರುವಂತೆ ಧ್ಯಾನಿಸಬಹುದು. ಎರಡೂ ಕೈಗಳಿಂದ ಶತ್ರುವನ್ನು ಸಿಗಿಯುತ್ತಿರುವಂತೆಯೂ ನೃಸಿಂಹಾದಿ ರೂಪಗಳನ್ನು ಧ್ಯಾನಿಸಬಹುದು.

---

೧ ಆಚಾರ್ಯರು ಇಲ್ಲಿ 'ವಿಷ್ಣು' ಎಂಬ ಸಾಮಾನ್ಯ ಶಬ್ದವನ್ನು ಬಳಸಿದ್ದರೂ ಈ ಆಯುಧಗಳು, ಈ ರೂಪನಿರ್ದೇಶನ, ಈ ಬಾಹುಗಳು—ಇವೆಲ್ಲ ಹೆಚ್ಚಾಗಿ ನರಸಿಂಹರೂಪವನ್ನು ವಿಶೇಷವಾಗಿ ಲಕ್ಷಿಸುತ್ತವೆ. ಬಹುಬಾಹು ಸಂಖ್ಯೆ ಮತ್ತು ಈ ಆಯುಧಭೇದಗಳು ತಂತ್ರಾಂತರದಲ್ಲಿ ನರಸಿಂಹನಿಗೆ ಉಕ್ತವಾಗಿವೆ. ಅವು ಕೇವಲ ನರಸಿಂಹನಿಗೆ ಮಾತ್ರ ಅನ್ವಯಿಸತಕ್ಕವಲ್ಲ ಎಂದು ತೋರಿಸುವುದಕ್ಕೋಸ್ಕರ ಆಚಾರ್ಯರು 'ವಿಷ್ಣೋಃ' ಎಂದು ಸಾಮಾನ್ಯಪದವನ್ನು ಬಳಸಿಕೊಂಡಿದ್ದಾರೆ. ಆದರೆ ವಿಶೇಷತಃ ನರಸಿಂಹಪ್ರಕರಣಕ್ಕೇ ಇವು ಅನ್ವಿತವಾಗಿವೆ ಎಂದು ತೋರಿಸುವುದಕ್ಕಾಗಿಯೇ ನರಸಿಂಹಮಂತ್ರದ ನಂತರವೇ ಇದನ್ನು ಉಲ್ಲೇಖಿಸಿದ್ದಾರೆ. ಇಲ್ಲದಿದ್ದರೆ ಈ ವಿಚಾರ ಅಧ್ಯಾಯಾರಂಭದಲ್ಲಾಗಲಿ, ಎಲ್ಲ ಮಂತ್ರಗಳನ್ನು ನಿರೂಪಿಸಿದ ಮೇಲಾಗಲಿ ಉಲ್ಲೇಖಿತವಾಗಬೇಕಲ್ಲವೆ? ಇಲ್ಲಿ ಮಂತ್ರಗಳ ನಡುವೆ ಬರೆವ ಆವಶ್ಯಕತೆಯೇನಿತ್ತು? ಇದನ್ನು ಗಮನಿಸಿದಾಗ ಆಚಾರ್ಯರ ಆಶಯ ನಮಗೆ ಸ್ಫುಟವಾಗುವುದು. ಹೀಗೆ—ಆಚಾರ್ಯರ ಪ್ರಯೋಗಗಳಲ್ಲಿ—ಪ್ರಯೋಗದ ಆನುಪೂರ್ವಿಯ ಬದಲಾವಣೆಗಳಲ್ಲಿ ಕೂಡ ಅನೇಕ ತಂತ್ರರಹಸ್ಯವಡಗಿದೆ ಎಂದು ತಿಳಿದಾಗ ಯಾವನೂ ಮೂಗಿಗೆ ಬೆರಳೇರಿಸಬೇಕು. ಇಂಥ ಪಾಂಡಿತ್ಯ ಅಂಥಿಂಥವರಿಗೆ ಬೇಕೆಂದಾಗ ಬರುವಂಥದಲ್ಲ. ಮಾತ್ರವಲ್ಲ, ಸಾಮಾನ್ಯ ಜನ ಇದನ್ನು ಅರಿತುಕೊಳ್ಳಲೂ ಆರರು.

ತಂತ್ರಾಂತರದ ಉಲ್ಲೇಖ ಕೆಳಗಿನಂತಿದೆ—

'ನರಸಿಂಹಂ ಮಹಾಭೀಮಂ ಕಾಲಾನಲಸಮಪ್ರಭಮ್ ।
ಅಂತ್ರಮಾಲಾಧರಂ ರೌದ್ರಂ ಕಂಠಹಾರೇಣ ಶೋಭಿತಮ್ ॥
ನಾಗಯಜ್ಞೋಪವೀತಂ ಚ ಪಂಚಾನನಸುಶೋಭಿತಮ್ ।
ಚಂದ್ರಮೌಲಿಂ ನೀಲಕಂಠಂ ಪ್ರತಿವಕ್ತ್ರಂ ತ್ರಿನೇತ್ರಕಮ್ ॥
ಭುಜೈಃ ಪರಿಘಸಂಕಾಶೈರ್ದಶಭಿಶ್ಚೋಪಶೋಭಿತಮ್ ।
ಅಕ್ಷಸೂತ್ರಂ ಗದಾಂ ಪದ್ಮಂ ಶಂಖಂ ಗೋಕ್ಷೀರಸನ್ನಿಭಮ್ ॥
ಧನುಶ್ಚ ಮುಷಲಂ ಚೈವ ಬಿಭ್ರಾಣಂ ಚಕ್ರಮುತ್ತಮಮ್ ।

## ಹಂಸಮಂತ್ರ

**ವಿಯತ್[೧] ಸ ಇತಿ ಯುಗ್ಮಾರ್ಣೋ ವಿಸರ್ಗೀ ತಶ್ಚ ಸ ಸ್ಮೃತಃ ।**

---

ಖಡ್ಗಂ ಶೂಲಂ ಚ ಬಾಣಂ ಚ ನೃಹರಿಂ ರುದ್ರರೂಪಿಣಮ್ ॥
ಇಂದ್ರಗೋಪಾಭನೀಲಾಭಂ ಚಂದ್ರಾಭಂ ಸ್ವರ್ಣಸನ್ನಿಭಮ್ ।
ಪೂರ್ವಾದಿ ಚೋತ್ತರಂ ಯಾವದೂರ್ಧ್ವಾಸ್ಯಂ ಸರ್ವವರ್ಣಕಮ್ ॥
ಏವಮುಗ್ರಂ ಹರಿಂ ಧ್ಯಾಯೇತ್ಸರ್ವವ್ಯಾಧಿವಿಮುಕ್ತಯೇ ।
ಸರ್ವಮೃತ್ಯುಹರಂ ದಿವ್ಯಂ ಸ್ಮರಣಾತ್ಸರ್ವಸಿದ್ಧಿದಮ್ ॥
ಧ್ಯೇಯೋ ಯದಾ ಮಹತ್ಕರ್ಮ ತದಾ ಷೋಡಶಹಸ್ತವಾನ್ ।
ನೃಸಿಂಹಃ ಸರ್ವಲೋಕೇಶಃ ಸರ್ವಾಭರಣಭೂಷಿತಃ ॥
ದ್ವೌ ವಿದಾರಣಕರ್ಮಾಢ್ಯೌ ದ್ವೌ ಚಾಂತ್ರೋದ್ಧರಣಾಂಚಿತೌ ।
ಚಕ್ರಶಂಖಧರೌ ದ್ವೌ ತು ದ್ವೌ ಚ ಬಾಣಧನುರ್ಧರೌ ॥
ಖಡ್ಗಖೇಟಧರೌ ದ್ವೌ ಚ ದ್ವೌ ಗದಾಪದ್ಮಧಾರಿಣೌ ।
ಪಾಶಾಂಕುಶಧರೌ ದ್ವೌ ತು ದ್ವೌ ರಿಪೋರ್ಮುಕುಟಾರ್ಪಿತೌ ॥
ಇತಿ ಷೋಡಶದೋರ್ದಂಡಮಂಡಿತಂ ನೃಹರಿಂ ವಿಭುಮ್ ।
ಧ್ಯಾಯೇನ್ನೀರದನೀಲಾಭಮುಗ್ರಕರ್ಮಣ್ಯನನ್ಯಧೀಃ ॥
ಧ್ಯೇಯೋ ಮಹತ್ತಮೇ ಕಾರ್ಯೇ ದಶದ್ವಾವಿಂಶಹಸ್ತವಾನ್ ।
ನೃಹರಿಃ ಸರ್ವಭೂತಾಢ್ಯಃ ಸರ್ವಸಿದ್ಧಿಕರಃ ಪ್ರಭುಃ ॥
ದಕ್ಷಿಣೇ ಚಕ್ರಪದ್ಮೇ ಚ ಪರಶುಂ ಪಾಶಮೇವ ಚ ।
ಹಲಂ ಚ ಮುಸಲಂ ಚೈವಮಭಯಂ ಚಾಂಕುಶಂ ತಥಾ ॥
ಪಟ್ಟಿಶಂ ಭಿಂದಿಪಾಲಂ ಚ ಖಡ್ಗಮುದ್ಗರತೋಮರಾನ್ ।
ವಾಮಭಾಗೇ ಕರೈಃ ಶಂಖಂ ಖೇಟಂ ಪಾಶಂ ಚ ಶೂಲಕಮ್ ॥
ಅಗ್ನಿಂ ಚ ವರದಂ ಶಕ್ತಿಂ ಕುಂಡಿಕಾಂ ಚ ತತಃ ಪರಮ್ ।
ಕಾರ್ಮುಕಂ ತರ್ಜನೀಮುದ್ರಾಂ ಗದಾಂ ಡಮರುಸರ್ಪಕೌ ॥
ದ್ವಾಭ್ಯಾಂ ಕರಾಭ್ಯಾಂ ಚ ರಿಪೋರ್ಜಾನುಮಸ್ತಕಪೀಡನಮ್ ।
ಊರ್ಧ್ವೀಕೃತಾಭ್ಯಾಂ ಬಾಹುಭ್ಯಾಮಂತ್ರಮಾಲಾಧರಂ ಹರಿಮ್ ॥
ಅಧಃಸ್ಥಿತಾಭ್ಯಾಂ ಬಾಹುಭ್ಯಾಂ ಹಿರಣ್ಯಕವಿದಾರಣಮ್ ।
ಪ್ರಿಯಂಕರಂ ಚ ಭಕ್ತಾನಾಂ ದೈತ್ಯಾನಾಂ ಚ ಭಯಂಕರಮ್ ।
ನೃಸಿಂಹಂ ಸಂಸ್ಮರೇದಿತ್ಥಂ ಮಹಾಮೃತ್ಯುಭಯಾಪಹಮ್ ॥'

೧ ವಿಯತ್=ಹಕಾರಃ । ಸ ಚ ಬಿಂದುಯುಕ್ತಃ, ತತಃ ಸಃ ತಥಾಚ 'ಹ್ಸಃ ।'
'ಶುಕ್ರಶ್ಚಾಥ ಹಕಾರೋಽಂಶಃ ಪ್ರಾಣಃ ಶಾಂತಃ ಶಿವೋ ವಿಯತ್ ।
ಅಕುಲೋ ನಕುಲೀಶಶ್ಚ ಹಂಸಃ ಶೂನ್ಯಂ ಚ ಹಾಕಿನೀ ।
ಅನಂತೋ ನಕುಲೀ ಜೀವಃ ಪರಮಾತ್ಮಾ ಲಲಾಟಜಃ ॥' (ಬೀಜವರ್ಣಾಭಿಧಾನ)

**ಸಃ ಸರ್ಗಹೀನೋ ವೇತಶ್ಚ ಬಿಂದುಹೀನೋತ್ತರಸ್ತಥಾಽಽ[೧] || ೨೦ ||**
**ತ್ರಯ ಏತೇ ಮಹಾಮಂತ್ರಾಃ[೨] ಪುರುಷಾರ್ಥಚತುಷ್ಟಯೇ |**
**ಕಲ್ಪವೃಕ್ಷಾಃ ಪ್ರಿಯಾ ವಿಷ್ಣೋರ್ವಿಶೇಷಾತ್ ಜ್ಞಾನದಾಯಕಾಃ ||**

‘ಹಂಸಃ’ ಎಂದು ಎರಡಕ್ಷರಗಳ ಒಂದು ಮಂತ್ರ, ಅದರ ಅಕ್ಷರಗಳನ್ನೇ ಮುಂದುಹಿಂದಾಗಿಸಿದ ‘ಸೋಽಹಂ’ ಎಂಬ ಇನ್ನೊಂದು ಮಂತ್ರ, ಮತ್ತು ಆ ಮಂತ್ರದ ಮೊದಲ ಅಕ್ಷರವಾದ ‘ಸಃ’ ಎಂಬಲ್ಲಿ ಕೊನೆಯ ವಿಸರ್ಗವನ್ನು ತೆಗೆದು ‘ವಾಕಾರ’ವನ್ನು ಸೇರಿಸಿ, ಅದರ ನಂತರದ ಅಕ್ಷರವಾದ ‘ಹಂ’ ಎಂಬುದರಲ್ಲಿ ಅನುಸ್ವಾರವನ್ನು ತೆಗೆದು ‘ಆ’ಕಾರವನ್ನು ಸೇರಿಸಿದಾಗ ಇನ್ನೊಂದು ಮಂತ್ರ– ಹೀಗೆ ಇವು ಮೂರು ಮೂಲರೂಪಗಳಾದ ಮಹಾಮಂತ್ರಗಳು. ಪುರುಷಾರ್ಥವನ್ನೀವ ವಿಷಯದಲ್ಲಿ ಕಲ್ಪಲತೆಯಂತಿರುವ ಈ ಮಂತ್ರಗಳು ನಾರಾಯಣನಿಗೆ ಅತ್ಯಂತ ಪ್ರಿಯವಾದವುಗಳೂ ವಿಶೇಷತಃ ಜ್ಞಾನಪ್ರದಾಯಕಗಳೂ ಆಗಿವೆ.

---

‘ಹಕಾರೋ ನಕುಲೀಶೋಽಪಿ ಹಂಸಃ ಪ್ರಾಣೋಽಂಕುಶಃ ಪ್ರಿಯಃ |
ಮಹೇಶೋ ನಕುಲೀ ಚೈವ ಪರಾಕೋ ಗಗನಂ ರವಿಃ ||’ (ರುದ್ರಯಾಮಲ)
‘ಹಃ ಶಿವೋ ಗಗನಂ ಹಂಸೋ ನಾಗಲೋಕೋಽಂಬಿಕಾಪತಿಃ ||’

೧ ವಾಯುತಃ ಸರ್ಗಹೀನಃ ಸಃ, ಬಿಂದುಹೀನ ಆಯುತಶ್ಚ ಹಃ | ತಥಾಚ ‘स्वाहा ।’

ಇಲ್ಲಿ ಮೂಲದಲ್ಲಿ ‘ವಾಕಾರದಿಂದ ಕೂಡಿದ ಸಕಾರ’ ಮತ್ತು ‘ಹಕಾರ’ ಇವು ಮೂರನೆಯ ಮಂತ್ರ ಎಂದಿದೆ. ಈ ಎರಡಕ್ಷರಗಳನ್ನು ಸೇರಿಸಿದಾಗ ‘ಸ್ವಹ’ ಎಂದಾಗುವುದು ಹೊರತು ಮಂತ್ರರೂಪ ನಿಷ್ಪನ್ನವಾಗುವುದಿಲ್ಲ. ಅದಕ್ಕಾಗಿ ವ್ಯಾಖ್ಯಾಕಾರರಿಬ್ಬರೂ– **‘ಆಕಾರೇಣ ಸಹಿತಶ್ಚ’** ಎಂಬಷ್ಟು ಭಾಗವನ್ನು ಮೂಲದಲ್ಲಿ ಸೇರಿಸಿಕೊಳ್ಳಬೇಕು, ಆಗ **‘ಸ್ವಾಹಾ’** ಎಂಬ ರೂಪ ಸಿದ್ಧವಾಗುವುದು ಎಂದು ಬರೆದಿದ್ದಾರೆ. ಆದರೆ ನನಗೆ ಈ ವ್ಯಾಖ್ಯಾನದಲ್ಲಿ ಅಷ್ಟೊಂದು ಔಚಿತ್ಯ ಕಾಣುವುದಿಲ್ಲ. ಮೂಲದಲ್ಲಿರುವ **‘ತಥಾಽಽ’** ಎಂಬ ಪದವನ್ನು **‘ತಥಾ + ಆ’** ಎಂದು ಛೇದಮಾಡಿದರೆ ಹಕಾರದ ನಂತರ ಆಕಾರವನ್ನು ಸೇರಿಸಬೇಕು ಎಂದು ಮೂಲದಿಂದಲೇ ಸಿದ್ಧವಾಗುವಾಗ ಉಪಲಕ್ಷಣವಾಗಿಟ್ಟುಕೊಳ್ಳಬೇಕೆನ್ನುವುದಾಗಲಿ, ಅಧ್ಯಾಹಾರಮಾಡಬೇಕೆನ್ನುವುದಾಗಲಿ, ಎಷ್ಟು ಔಚಿತ್ಯಪೂರ್ಣವೋ ಸಂದೇಹಗ್ರಸ್ತವಾಗಿದೆ. ಆಚಾರ್ಯರ ಮೂಲವಚನವೇ ಎಲ್ಲ ಅರ್ಥವನ್ನು ಹೇಳಬಲ್ಲುದಿರುವಾಗ ವ್ಯಾಖ್ಯಾಕಾರರ ಕೈವಾಡಕ್ಕೆ ಎಲ್ಲಿಯ ಬೆಲೆ?

೨ ತಥಾಚ ಮಿಲಿತಾ ಮಂತ್ರಾಃ— ‘हंसः सोऽहं स्वाहा’

**ಏತೈರೇವ ದ್ವಿರಾವೃತ್ತೈರಂಗಮೋಕ್ಷಣಂ ಪ್ರಕೀರ್ತಿತಮ್ ।**

ಎರಡು ಬಾರಿ ಉಚ್ಚರಿತಗಳಾದ ಈ ಮೂರು ಮಂತ್ರಗಳಿಂದಲೇ ಷಡಂಗ ನ್ಯಾಸವನ್ನೆಸಗಬೇಕು.[1]

**ಶ್ವಾಸರೂಪೋ ಜಪೋ ನಿತ್ಯಮುಭಯೋರ್ವಿದ್ವದಜ್ಞಯೋಃ ॥೨೨॥**
**ಏಕವಿಂಶತ್ಸಹಸ್ರಾತ್ಮಾ ಸಷಟ್ಛತಮಹರ್ನಿಶಮ್[2] ।**

---

೧ ನ್ಯಾಸಕ್ರಮ—

‘ಹಂಸಃ ಹೃದಯಾಯ ನಮಃ । ಸೋಽಹಂ ಶಿರಸೇ ಸ್ವಾಹಾ । ಸ್ವಾಹಾ ಶಿಖಾಯೈ ವಷಟ್ । ಹಂಸಃ ಕವಚಾಯ ಹುಮ್ । ಸೋಽಹಂ ನೇತ್ರಾಭ್ಯಾಂ ವೌಷಟ್ । ಸ್ವಾಹಾ ಅಸ್ತ್ರಾಯ ಫಟ್ ।’

೨ ಹಂಸಮಂತ್ರ ಜಪದ ಉಲ್ಲೇಖ ಭಾರತತಾತ್ಪರ್ಯನಿರ್ಣಯದ ೨೨ನೇ ಅಧ್ಯಾಯದಲ್ಲಿಯೂ ಬಂದಿದೆ. ಕೃಷ್ಣ ರುದ್ರನನ್ನು ಕುರಿತು ತಪಸ್ಸು ಮಾಡುತ್ತಿದ್ದಾಗ– ೧೨ ವರ್ಷಗಳ ತನಕ ತಪಸ್ಸುಮಾಡುವುದಾಗಿ ರುದ್ರನಿಗೆ ಮೊದಲು ಕೊಟ್ಟ ಮಾತನ್ನು ನಿಜವಾಗಿಸುವುದಕ್ಕಾಗಿ– ಶ್ರೀಹರಿ ತನ್ನ ವಿಚಿತ್ರ ಮಾಯೆಯಿಂದ ವರ್ಷಕ್ಕೊಮ್ಮೆ ರಾಶಿಯನ್ನು ಬದಲಿಸುವ ಬೃಹಸ್ಪತಿಯನ್ನು ಒಂದೇ ದಿನದಲ್ಲಿ ೧೨ ರಾಶಿಗಳಲ್ಲಿಯೂ ಸುತ್ತಿಸಿದನು. ಆಗ ಒಂದು ದಿನವೇ ೧೨ ವರ್ಷಗಳಿಗೆ ಸಮನಾದಂತಾಯಿತು. ಅರ್ಥಾತ್ ೧೫೦ ಬಾರಿ ಶ್ವಾಸರೂಪವಾದ ಹಂಸಮಂತ್ರವನ್ನು ಜಪಿಸುವ ಕಾಲವನ್ನು ಒಂದು ತಿಂಗಳು ಎಂದಿಟ್ಟುಕೊಂಡಂತಾಯಿತು. (೧೫೦ × ೧೨ × ೧೨ = ೨೧೬೦೦.) ತಿಂಗಳಿಗೆ ೧೫೦ ಬಾರಿ ಮಂತ್ರ ಜಪವಾದರೆ ೧೨ ವರ್ಷಗಳಿಗೆ ಸರಿಯಾಗಿ ೨೧೬೦೦ ಬಾರಿ ಜಪಿಸಿದಂತಾಗುವುದು. ಅದೇ ಒಂದು ದಿನ ಈ ವಿಚಾರವನ್ನು ಆಚಾರ್ಯರ ಕೆಳಗಿನ ಮಾತುಗಳಲ್ಲಿ ಕಾಣಬಹುದು—

‘ತದಾ ಕೃಷ್ಣ ಏಕಾಹೇನ ಬೃಹಸ್ಪತಿಮ್ ।
ಆಜ್ಞಯಾ ಚಾರಯಾಮಾಸ ಕ್ಷಿಪ್ರಂ ದ್ವಾದಶರಾಶಿಷು ॥
ದ್ವಾದಶಾಬ್ದಮಭೂತ್ತೇನ ತದಹಃ ಕೇಶವಾಜ್ಞಯಾ ।
ಏಕಸ್ಮಿನ್ನಹ್ನಿ ಭಗವಾನ್ ರಾಶಿಂ ರಾಶಿಂ ಚ ವತ್ಸರಮ್ ॥
ಕಲ್ಪಯಿತ್ವೋಪವಾಸಾದೀನ್ಮನಸಾ ನಿಯಮಾನಪಿ ।
ಮಾಸವ್ರತಂ ಸಾರ್ಧಶತಶ್ವಾಸಕಾಲೈರಕಲ್ಪಯತ್ ॥’

(ಮಹಾಭಾರತತಾತ್ಪರ್ಯನಿರ್ಣಯ)

‘ಏಕೈಕರಾಶೌ ವತ್ಸರಮಾತ್ರಸ್ಥಾಯಿನೋ ಬೃಹಸ್ಪತೇರೇಕಸ್ಮಿನ್ನೇವ ದಿವಸೇ ದ್ವಾದಶರಾಶಿಷು ಸಂಚಾರಾತ್ ಏಕಮೇವ ದಿನಂ ದ್ವಾದಶವರ್ಷೋಪಮ-ಮಾಸೀತ್.... .ಏವಂ ಚೈಕಸ್ಮಿನ್ ದಿನೇ ಕ್ರಿಯಮಾಣಹಂಸಮಂತ್ರಜಪಾನಾಂ ದ್ವಾದಶವರ್ಷಮಾಸಾನಾಂ ಚ ಸಮ್ಯೈವ ಸಂಖ್ಯೇತಿ ಭಾವೇನ ‘ಮಾಸವ್ರತಂ ಸಾರ್ಧಶತಶ್ವಾಸಕಾಲೈರಕಲ್ಪಯದಿ’ತ್ಯುಕ್ತಮ್ ।’ (ಭಾವಪ್ರಕಾಶಿಕಾ)

**ಅರ್ಪಣೀಯೋ ಹರೌ ನಿತ್ಯಂ ಪ್ರಾತರ್ಯೋಗೋ[1] ಮಹಾಮನುಮ್ ||**

ಜ್ಞಾನಿಗಳೂ ಅಜ್ಞಾನಿಗಳೂ ತಿಳಿದೋ ತಿಳಿಯದೆಯೋ ಉಸಿರನ್ನೆಳೆವ ಪ್ರತಿಯೊಂದು ಸಲವೂ ಶ್ವಾಸರೂಪವಾದ ಹಂಸಮಂತ್ರವನ್ನು ದಿನವೊಂದರಲ್ಲಿ ೨೧೬೦೦ ಬಾರಿ ಜಪಿಸುತ್ತಲೇ ಇರುವರು. ಬಲ್ಲವರು ಅದನ್ನು ಶ್ರೀಹರಿಗೆ ಅರ್ಪಿಸಿ ಫಲಭಾಜನರಾಗುವರು. ಈ ಮಹಾಮಂತ್ರಕ್ಕೆ 'ಪ್ರಾತರ್ಯೋಗ' ಎಂಬ ಹೆಸರೂ ಉಂಟು.

**ಅಶೇಷದೋಷದಹನಸ್ತತ್ತ್ವಜ್ಞಾನಪ್ರದಾಯಕಃ ।**
**ಅಷ್ಟೈಶ್ವರ್ಯಪ್ರದಶ್ಚೈವ[2] ಕೃತಾದೌ[3] ಸಮುಪಾಸಿತಮ್ ।**
**ತಾರಯೋಗೋಽಸ್ಯೈವನಾಮ ಬ್ರಹ್ಮಾದಾವೇವ ವರ್ತತೇ ॥ ೨೪ ॥**

ಈ ಮಹಾಮಂತ್ರವು ಕೃತತ್ರೇತಾದಿ ಚತುರ್ಯುಗಗಳಲ್ಲೂ ಜಪಿಸುವವರ

---

ಉಪನಿಷತ್ತಿನಲ್ಲಿಯೂ ಇದರ ಉಲ್ಲೇಖವಿದೆ—

'ಅಹೋರಾತ್ರಯೋರೇಕವಿಂಶತಿಸಹಸ್ರಾಣಿ ಷಟ್‌ಶತಾನ್ಯಧಿಕಾನಿ ಭವಂತಿ।'
(ಹಂಸೋಪ.)

೧ ಈ ಮಂತ್ರವನ್ನು ವಾಯುದೇವರು ನಮ್ಮ ಹೃದಯದಲ್ಲಿ ಸನ್ನಿಹಿತರಾಗಿದ್ದು ಪ್ರತಿದಿನವೂ ಪ್ರಾತಃಕಾಲದಲ್ಲಿ ಹರಿಚರಣಗಳಿಗೆ ಅರ್ಪಿಸುತ್ತಿರುವುದರಿಂದ ಇದನ್ನು 'ಪ್ರಾತರ್ಯೋಗ' ಎಂದು ಕರೆಯುತ್ತಾರೆ.

೨ ಅಷ್ಟೈಶ್ವರ್ಯಾಣಿ ಚ—

'ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಈಶಿತ್ವಂ ಚ ವಶಿತ್ವಂ ಚ ಪ್ರಾಕಾಮ್ಯಂ ಪ್ರಾಪ್ತಿರೇವ ಚ ॥' ಇತ್ಯುಕ್ತಾನಿ ।

'ತತ್ರಾಣಿಮಾ ಅಣುಭಾವಃ, ಯತಃ ಶಿಲಾಮಪಿ ಪ್ರವಿಶತಿ । ಲಘಿಮಾ ಲಘುಭಾವಃ, ಯತಃ ಸೂರ್ಯಮರೀಚಿಮಾಲಂಬ್ಯ ಸೂರ್ಯಲೋಕಂ ಯಾತಿ । ಮಹಿಮಾ ಮಹತೋ ಭಾವಃ, ಯತೋ ಮಹಾನ್ ಸಂಭವತಿ । ಪ್ರಾಪ್ತಿರಂಗುಲ್ಯಗ್ರೇಣ ಸ್ಪೃಶತಿ ಚಂದ್ರಮ್ । ಪ್ರಾಕಮ್ಯಮಿಚ್ಛಾನಭಿಘಾತಃ, ಯತೋ ಭೂಮಾವುನ್ಮಜ್ಜತಿ ನಿಮಜ್ಜತಿ ಯಥೋದಕೇ । ವಶಿತ್ವಂ ಭೂತಭೌತಿಕಂ ವಶೀಭವತ್ಯಸ್ಯಾವಶ್ಯಮ್ । ಈಶಿತ್ವಂ ಭೂತಭೌತಿಕಾನಾಂ ಪ್ರಭವಸ್ಥಿತಿಮೀಷ್ಟೇ । ಯಚ್ಚ ಕಾಮಾವಸಾಯಿತ್ವಂ ಸತ್ಯಸಂಕಲ್ಪತಾ, ಯಥಾಽಸ್ಯ ಸಂಕಲ್ಪೋ ಭವತಿ ಭೂತೇಷು ತಥೈವ ಭೂತಾ ಭವಂತಿ । ಅನ್ಯೇಷಾಂ ನಿಶ್ಚಯಾ ನಿಶ್ಚೇತವ್ಯಮನುವಿಧೀಯಂತೇ, ಯೋಗಿನಸ್ತು ನಿಶ್ಚೇತವ್ಯಾಃ ಪದಾರ್ಥಾ ನಿಶ್ಚಯಮಿತಿ' । (ವಾಚಸ್ಪತಿಮಿಶ್ರ)

೩ ತಥಾಚ ಮಂತ್ರಃ— 'ॐ हंसः सोऽहं स्वाहा ।'

ದೋಷಗಳನ್ನೆಲ್ಲ ಸುಟ್ಟುಹೋಗಿಡು ತತ್ವಜ್ಞಾನವನ್ನೀಯುಬಲ್ಲುದು; ಅಣಿಮಾದ್ಯಷ್ಟೈಶ್ವರ್ಯಗಳನ್ನೀಯಬಲ್ಲುದು. ಈ ಮಂತ್ರದ ಮೊದಲು 'ಓಂ'ಕಾರವನ್ನು ಸೇರಿಸಿದರೆ ಅದು ಇನ್ನೊಂದು ಮಹಾಮಂತ್ರವಾಗುವುದು. ಆದರೆ ಈ ಮಂತ್ರಜಪಕ್ಕೆ ಬ್ರಹ್ಮಾದಿದೇವತೆಗಳು ಮಾತ್ರವೆ ಅಧಿಕಾರಿಗಳು.

**ಧ್ಯಾಯೇದ್ರವೀಂದುಕರಮಿಂದುಸಹಸ್ರಲಕ್ಷ[೧]-**
**ಕಾಂತಿಂ ಪ್ರಿಯಾಸಹಿತಮಾಸ್ಥಿತಮಿಂದುಬಿಂಬೇ ।**
**ಶಂಖಾರಿದೋರ್ದ್ವಯಮುದರ್ಕಮಹೇಂದುಬಿಂಬಾತ್[೨]**
**ಸಂಸಿಚ್ಯಮಾನಮಮೃತೇನ ರಮಾಧಿನಾಥಮ್ ॥ ೨೫ ॥**

ಮೇಲಿನ ಎರಡು ಕೈಗಳಲ್ಲಿ ಸೂರ್ಯಚಂದ್ರರನ್ನೂ ಉಳಿದೆರಡು ಕೈಗಳಲ್ಲಿ ಶಂಖಚಕ್ರಗಳನ್ನೂ ಧರಿಸಿಕೊಂಡು, ಅನಂತಾನಂತ ಚಂದ್ರರಿಗಿಂತಲೂ ಅಧಿಕ ಪ್ರಕಾಶನಾಗಿ ರಮೆಯೊಡನೆ ಚಂದ್ರಬಿಂಬದಲ್ಲಿ ಕುಳಿತಿರುವ ಶ್ರೀಹರಿ, ತಾನು ಕುಳಿತಿರುವ ಚಂದ್ರಮಂಡಲದ ಮೇಲು ಬದಿಯಿಂದ ಸುರಿಯುತ್ತಿರುವ ಅಮೃತದಿಂದ ಅಭಿಷೇಚಿಸಲ್ಪಡುತ್ತಿದ್ದಾನೆ ಎಂದು ಧ್ಯಾನಿಸಬೇಕು.

**ಅಂತ್ಯಸ್ಯ ರಕ್ತವರ್ಣೋ ವಾ ಧ್ಯೇಯೋ ವಿಷ್ಣುಃ ಸನಾತನಃ ।**
**ವಿದ್ಯುದ್ವರ್ಣೋಽಥವಾ ಜ್ಞೇಯಃ ಶಕ್ತ್ಯೇತಃ ಪಂಚಮಂತ್ರಯುಕ್[೩] ॥**

---

೧ ಈ ಎಲ್ಲ ಶಬ್ದಗಳೂ ಅನಂತ ಎಂಬ ಅರ್ಥವನ್ನೇ ಹೇಳುವವು

'ಶತಂ ದಶ ಸಹಸ್ರಂ ಚ ಸರ್ವಮಕ್ಷಯ್ಯವಾಚಕಮ್ ।' (ಮಹಾಭಾರತ)

೨ 'ಉದರ್ಕಮಹೇಂದುಬಿಂಬಾತ್ = ಉಪರ್ಯವಶಿಷ್ಟಮಹಾಚಂದ್ರಮಂಡಲೈಕದೇಶಾತ್ ।' (ನಾರಾ)

೩ 'ವೇದಾದಿಃ ಶಕ್ತಿರಜಪಾ ಪರಮಾತ್ಮಮಹಾಮನುಃ ।
ವಹ್ನೇರ್ಜಾಯಾ ಚ ಕಥಿತಾ ಪಂಚಮಂತ್ರಾಃ ಶುಭಾವಹಾಃ ॥' (ಶಾರದಾ.)

'ವೇದಾದಿಃ=ಪ್ರಣವಃ । ಅಜಪಾ='हसः' । ಆತ್ಮಮಹಾಮನುಃ='सोऽहम्' । ವಹ್ನೇರ್ಜಾಯಾ='स्वाहा' ।' (ಪದಾರ್ಥಾ.)

ತಥಾಚ ಮಂತ್ರಃ— 'ॐ ह्रीं हंसः सोऽहं स्वाहा ।'

ಈ ಮಂತ್ರದ ಋಷ್ಯಾದಿಗಳನ್ನೂ ಶಾರದಾತಿಲಕದಿಂದ ತಿಳಿದುಕೊಳ್ಳಬಹುದು—

'ಋಷಿರ್ಬ್ರಹ್ಮಾ ಸಮುದ್ದಿಷ್ಟಶ್ಛಂದೋ ಗಾಯತ್ರಮೀರಿತಮ್ ।
ಸಮಸ್ತವರ್ಣಸಂವ್ಯಾಪ್ತಂ ಪರಂ ತೇಜೋಽಸ್ಯ ದೇವತಾ ॥'

**ಅಷ್ಟಾಕ್ಷರೋ ಮಹಾಮಂತ್ರಸ್ತೈರೇವಾಂಗೈಃ ಸಮನ್ವಿತಃ[೧] ।**
**ಅಂತ್ಯಧ್ಯಾನ[೨]ಯುತಶ್ಚೈವ ನಿಃಶೇಷಪುರುಷಾರ್ಥದಃ ॥ ೨೭ ॥**

ಕೊನೆಯದಾದ ಹಂಸಸಪ್ತಾಕ್ಷರಮಂತ್ರದ ಧ್ಯಾನದಲ್ಲಿ ಶ್ರೀಹರಿಯನ್ನು ರಕ್ತವರ್ಣನೆಂದೋ ವಿದ್ಯುದ್ವರ್ಣನೆಂದೋ ಧ್ಯಾನಿಸುವುದೂ ಯುಕ್ತವಾಗಿದೆ. ಇದರ ಜತೆಗೆ ಶಕ್ತಿಬೀಜವಾದ 'ಹ್ರೀಂ'ಕಾರವನ್ನೂ ಸೇರಿಸಿದರೆ ಅದು ಆಗ ಐದು ಮಂತ್ರಗಳನ್ನೊಳಗೊಂಡ ಒಂದು ಮೂಲಮಂತ್ರವಾಗುವುದು. ಇದನ್ನೆ ಹಂಸಾಷ್ಟಾಕ್ಷರಮಹಾಮಂತ್ರ ಎಂದು ಕರೆಯುವರು. ಈ ಮಂತ್ರದ ಐದು ಪದಗಳಿಂದಲೆ ಇದರ ಅಂಗನ್ಯಾಸವನ್ನಾಚರಿಸಬೇಕು. ಸಪ್ತಾಕ್ಷರದಂತೆಯೇ ಈ ಮಂತ್ರದ ಧ್ಯೇಯಮೂರ್ತಿಯ ಬಣ್ಣವೂ ಕೆಂಪು ಅಥವಾ ಮಿಂಚಿನಂತಿದೆ. ಈ ಮಂತ್ರವು ಸಮಸ್ತ ಪುರುಷಾರ್ಥಗಳನ್ನೂ ಕೊಡಬಲ್ಲ ಮಹಾಮಂತ್ರವಾಗಿದೆ.

## ದಧಿವಾಮನಮಂತ್ರ

**ಮೂಲಂ ನಃ ಪ್ರತಿಷೇಧಶ್ಚ ಸೋಽದ್ದೇಶೋ ಭಗವಾನಪಿ ।**
**ವಿಷ್ಣುರ್ಭೋಜ್ಯಾಧಿಪಃ ಸ್ವಾಹಾಯುಕ್ತೋಽಷ್ಟಾದಶವರ್ಣಕಃ ॥೨೮॥**

ಸರ್ವವೇದಮೂಲವಾದ 'ಓಂ'ಕಾರ, ನಕಾರ, ನಿಷೇಧಾರ್ಥಕವಾದ 'ಮ'ಕಾರ(ವಿಸರ್ಗಸಹಿತ), ಚತುರ್ಥ್ಯಂತಗಳಾದ 'ಭಗವತ್' ಶಬ್ದ, 'ವಿಷ್ಣು'

---

೧ ಅಂಗನ್ಯಾಸ ಕ್ರಮ—

ಓಂ ಹೃದಯಾಯ ನಮಃ । ಹ್ರೀಂ ಶಿರಸೇ ಸ್ವಾಹಾ । ಹಂಸಃ ಶಿಖಾಯೈ ವಷಟ್ । ಸೋಽಹಂ ಕವಚಾಯ ಹುಮ್ । ಸ್ವಾಹಾ ಅಸ್ತ್ರಾಯ ಫಟ್ ।

ಛಲಾರೀಯಾದಿ ವ್ಯಾಖ್ಯಾನಕಾರರು ಬರೆದಿರುವ ಅಂಗನ್ಯಾಸದ ಕ್ರಮದಂತೆ ಇದನ್ನು ಬರೆದಿದ್ದೇನೆ. ಆದರೆ ತಂತ್ರಾಂತರಗಳಲ್ಲಿ— ಈ ಮಂತ್ರಗಳನ್ನು ವ್ಯತ್ಯಸ್ತವಾಗಿ ನ್ಯಾಸಮಾಡಬೇಕು ಎಂದಿದೆ. ಅದರ ರೀತ್ಯಾ—ಕೊನೆಯಿಂದ ಮೊದಲುಗೊಂಡು— 'ಸ್ವಾಹಾ ಹೃದಯಾಯ ನಮಃ । ಸೋಽಹಂ ಶಿರಸೇ ಸ್ವಾಹಾ । ಹಂಸಃ ಶಿಖಾಯೈ ವಷಟ್' ಇತ್ಯಾದಿಯಾಗಿ ನ್ಯಾಸವೆಸಗಬೇಕು—

'ಸ್ವಾಹಾದ್ಯೈಃ ಪಂಚಮನುಭಿಃ ಪಂಚಾಂಗಾನಿ ಪ್ರಕಲ್ಪಯೇತ್ ।(ಶಾರದಾ.)

೨ ಶಾರದಾತಿಲಕದ ಧ್ಯಾನಶ್ಲೋಕ ಈ ತೆರನಾಗಿದೆ—

'ತಾರಾದಿಪಂಚಮನುಭಿಃ ಪರಿಚೀಯಮಾನಂ
ಮಾನ್ಯೈರಗಮ್ಯಮನಿಶಂ ಜಗದೇಕಮೂಲಮ್ ।
ಪಚ್ಚಿತ್ಸಮಸ್ತಗಮನಶ್ವರಮಚ್ಯುತಂ ತತ್
ತೇಜಃ ಪರಂ ಭಜತ ಸಾಂದ್ರಸುಧಾಂಶುರಾಶಿಮ್ ॥'

ಶಬ್ದ ಮತ್ತು ಭೋಜ್ಯವಸ್ತುಗಳಿಗೆ ಸ್ವಾಮಿ ಎಂಬ ಅರ್ಥವನ್ನು ಕೊಡುವ 'ಅನ್ನಾಧಿಪತಿ'ಶಬ್ದ, ಇವೆಲ್ಲವುಗಳ ಕೊನೆಯಲ್ಲಿ 'ಸ್ವಾಹಾ'ಶಬ್ದ ಇವಿಷ್ಟು ಸೇರಿದರೆ ೧೮ ಅಕ್ಷರಗಳ ಮಂತ್ರವಾಗುವುದು.[1]

**ಅಂಗಾನಿ ತತ್ಪದೈರೇವ ಮಂತ್ರಚಿಂತಾಮಣೀ[2]ಸ್ವಯಮ್ ।**
**ಯಥೇಷ್ಟಭಕ್ಷ್ಯಭೋಜ್ಯಾದಿದಾತಾ ಮುಕ್ತಿಪ್ರದಾಯಕಃ ॥ ೨೯ ॥**

ಮಂತ್ರದ ೬ ಪದಗಳಿಂದಲೆ ಷಡಂಗನ್ಯಾಸವನ್ನಾಚರಿಸಬೇಕು.[3] ಈ ಮಂತ್ರವು ಪುಷ್ಕಲವಾದ ಭಕ್ಷ್ಯ ಭೋಜ್ಯ ಮೊದಲಾದ ಯಾವತ್ತೂ ಐಹಿಕ ಸಂಪತ್ತನ್ನೂ ಹೆಚ್ಚೇನು ಮೋಕ್ಷವನ್ನೆ ಬೇಕಾದರೂ ಕೊಡಬಲ್ಲುದು. ಅಭಿಲಷಿತವನ್ನೆಲ್ಲ ಧಾರೆಯೆರೆವ ಮಂತ್ರವೆಂದೆ ಇದನ್ನು 'ಮಂತ್ರಚಿಂತಾಮಣಿ' ಎನ್ನುವರು.

**ಧ್ಯಾಯೇತ್ಸುಶುಕ್ಲಮರವಿಂದದಲಾಯತಾಕ್ಷಂ**
**ಸೌವರ್ಣಪಾತ್ರದಧಿಭೋಜ್ಯಮಥಾಮೃತಂ ಚ ।**
**ದೋರ್ಭ್ಯಾಂ ದಧಾನಮಖಿಲೈಶ್ಚ ಸುರೈಃ ಪರೀತಂ**
**ಶೀತಾಂಶುಮಂಡಲಗತಂ ರಮಯಾ ಸಮೇತಮ್[4] ॥ ೩೦ ॥**

---

೧ ತಥಾಚ ಮಂತ್ರಃ— 'ॐ नमो भगवते विष्णवे अन्नाधिपतये स्वाहा ।'
ಶಾರದಾತಿಲಕದಲ್ಲಿ ಹೇಳಿರುವ ದಧಿವಾಮನಮಂತ್ರ ಇನ್ನೊಂದು ತೆರನಾಗಿದೆ—
'ತಾರೋ ಹೃದ್ವಿಷ್ಣವೇ ಪಶ್ಚಾತ್ ಜನೇಂತಃ ಸುರಪತಿರ್ಭವೇತ್ ।
ಮಹಾಬಲಾಯ ತದ್ವಂದ್ವಂ ಮನುರಷ್ಟಾದಶಾಕ್ಷರಃ ॥'
ಈ ವಚನದ ಪ್ರಕಾರ ಮಂತ್ರ ಕೆಳಗಿನಂತಿದೆ—
'ॐ नमो विष्णवे सुरपतये महाबलाय स्वाहा ।'

೨ 'ಮಂತ್ರಚಿಂತಾಮಣಿ' ಎಂದೇ ಈ ಮಂತ್ರದ ಹೆಸರು ಎಂದು ಛಲಾರೀಯದ ಪಕ್ಷ. ನಾರಾಯಣೀಯದಲ್ಲಿ ಮಾತ್ರ ಇದನ್ನು 'ದಧಿವಾಮನಮಂತ್ರ' ಎಂದು ಉಲ್ಲೇಖಿಸಿದ್ದಾರೆ. ಛಲಾರೀಯಕಾರರೂ ಈ ಪಕ್ಷವನ್ನು ಉಲ್ಲೇಖಿಸಿದ್ದಾರೆ—
'ಇಮಮೇವ ಮಂತ್ರಂ ದಧಿವಾಮನಮಂತ್ರ ಇತ್ಯಪ್ಯಾಹುಃ ।' (ಛಲಾ.)

೩ ಅಂಗನ್ಯಾಸ ಕ್ರಮ—
'ಓಂ ಹೃದಯಾಯ ನಮಃ । ನಮಃ ಶಿರಸೇ ಸ್ವಾಹಾ । ಭಗವತೇ ಶಿಖಾಯೈ ವಷಟ್ । ವಿಷ್ಣವೇ ಕವಚಾಯ ಹುಮ್ । ಅನ್ನಾಧಿಪತಯೇ ನೇತ್ರಾಭ್ಯಾಂ ವೌಷಟ್ । ಸ್ವಾಹಾ ಅಸ್ತ್ರಾಯ ಫಟ್ ।'

೪ 'ಮುಕ್ತಾಗೌರಂ ನವಮಣಿಲಸದ್ಭೂಷಣಂ ಚಂದ್ರಸಂಸ್ಥಂ
ಭೃಂಗಾಕಾರೈರಲಕನಿಕರೈಃ ಶೋಭಿವಕ್ತ್ರಾರವಿಂದಮ್ ।

ಚಿನ್ನದ ಬಟ್ಟಲಲ್ಲಿರುವ ದಧ್ಯನ್ನವನ್ನೂ ಅಮೃತವನ್ನೂ ತನ್ನೆರಡು ಕೈಗಳಿಂದ ಹಿಡಿದುಕೊಂಡು, ತನ್ನ ಪರಿವಾರಭೂತರಾದ ಎಲ್ಲ ದೇವತೆಗಳೊಡನೆ ಮತ್ತು ರಮಾದೇವಿಯೊಡನೆ ಚಂದ್ರಮಂಡಲದಲ್ಲಿ ಕುಳಿತಿರುವ, ತಾವರೆಯಂತೆ ಅರಳ್ಗಣ್ಣಿನ, ಗೌರಾಂಗನಾದ ಶ್ರೀಹರಿಯನ್ನು ಧ್ಯಾನಿಸಬೇಕು.

## ವಾಮನಾಷ್ಟಾಕ್ಷರಮಂತ್ರ

**ಅಮೃತಃ ಸ್ವಯಮುದ್ದೇಶಯುತಃ ಸಹೃದಯೋ ಮನುಃ ।**
**ಸತಾರೋಽಷ್ಟಾಕ್ಷರೋಽಂಗಾನಿ ಪದೈರ್ವ್ಯಸ್ತಸಮಸ್ತಕೈಃ ॥ ೩೧ ॥**

ಅಮೃತಬೀಜವಾದ ವಕಾರ ಚತುರ್ಥ್ಯಂತವಾದ ವಾಮನಶಬ್ದ, ಕೊನೆಯಲ್ಲಿ 'ನಮಃ'ಶಬ್ದ ಮತ್ತು ಆರಂಭದಲ್ಲಿ 'ಓಂ'ಕಾರ– ಈ ಎಂಟು ಅಕ್ಷರಗಳು ಸೇರಿ ವಾಮನಾಷ್ಟಾಕ್ಷರಮಂತ್ರವಾಗುವುದು.[1] ಮಂತ್ರದ ನಾಲ್ಕು ಪದಗಳಿಂದ ಮತ್ತು ಸಮಸ್ತ ಮಂತ್ರದಿಂದ ಪಂಚಾಂಗನ್ಯಾಸವನ್ನೆಸಗಬೇಕು.[2]

**ಉದ್ಯದ್ರವಿಪ್ರಭಮರೀಂದ್ರದರೌ ಗದಾಂ ಚ**
**ಜ್ಞಾನಂ ಚ ಬಿಭ್ರತಮಜಂ ಪ್ರಿಯಯಾ ಸಮೇತಮ್ ।**
**ವಿಶ್ವಾವಕಾಶಮಭಿತಃ ಪ್ರತಿಪೂರಯಂತಂ**
**ಭಾಸಾ ಸ್ವಯಾ ಸ್ಮರತ ವಿಷ್ಣುಮಜಾದಿವಂದ್ಯಮ್ ॥ ೩೨ ॥**

ಉದಿಸುತ್ತಿರುವ ಸೂರ್ಯನಂತೆ ಸುಂದರನಾದ, ಕೈಗಳಲ್ಲಿ ಚಕ್ರ-ಶಂಖ-ಗದಾ-ಜ್ಞಾನಮುದ್ರೆಗಳನ್ನು ಧರಿಸಿರುವ, ತನ್ನ ಪ್ರಭೆಯಿಂದ ಜಗತ್ತನ್ನೆಲ್ಲ ತುಂಬುತ್ತಿರುವ, ಬ್ರಹ್ಮಾದಿದೇವತೆಗಳಿಂದ ವಂದ್ಯನಾದ, ರಮೆಯಿಂದೊಡಗೂಡಿದ, ಅನಾದಿನಿಧನನಾದ ನಾರಾಯಣನನ್ನು ಧ್ಯಾನಿಸಬೇಕು.

---

ಹಸ್ತಾಬ್ಜಾಭ್ಯಾಂ ಕನಕಕಲಶಂ ಶುದ್ಧತೋಯಾಭಿಪೂರ್ಣಂ
ದಧ್ಯನ್ನಾಢ್ಯಂ ಕನಕಚಷಕಂ ಧಾರಯಂತಂ ಭಜಾಮಃ ॥' (ಶಾರದಾ.)

೧ ತಥಾಚ ಮಂತ್ರಃ— 'ॐ वां वामनाय नमः ।'
ನಾರಾಯಣೀಯದಲ್ಲಿ 'ವಾಂ' ಎಂಬಕ್ಷರದ ಬದಲು 'ವಂ' ಎಂದೇ ಇದೆ.

೨ ಅಂಗನ್ಯಾಸ—
'ಓಂ ಹೃದಯಾಯ ನಮಃ । ವಾಂ ಶಿರಸೇ ಸ್ವಾಹಾ । ವಾಮನಾಯ ಶಿಖಾಯೈ ವಷಟ್ । ನಮಃ ಕವಚಾಯ ಹುಮ್ । ಓಂ ವಾಂ ವಾಮನಾಯ ನಮಃ ಅಸ್ತ್ರಾಯ ಫಟ್ ।'

### ತ್ರಿವಿಕ್ರಮಗಾಯತ್ರೀ

**ತ್ರಿವಿಕ್ರಮಸ್ತು ಸೋದ್ದೇಶೋ ವಿಶ್ವರೂಪಶ್ಚ ತತ್ಪುರಃ[೧] ।**
**ಧೀವಿದೌ ಚ ಮಹೇ ವಿಷ್ಣುಸ್ತನ್ನಃಪ್ರೇರಣಮಧ್ಯಗಃ ॥ ೩೩ ॥**

ಚತುರ್ಥ್ಯಂತವಾದ 'ತ್ರಿವಿಕ್ರಮ' ಶಬ್ದ ಮತ್ತು 'ವಿಶ್ವರೂಪ' ಶಬ್ದಗಳು, ಅನಂತರ 'ವಿದ್ಮಹೇ' ಮತ್ತು 'ಧೀಮಹಿ' ಪದಗಳು, ಅನಂತರ 'ತನ್ನಃ' ಎಂಬ ಅಕ್ಷರಗಳ ಮತ್ತು ಪ್ರೇರಣಾರ್ಥಕವಾದ 'ಪ್ರಚೋದಯಾತ್' ಎಂಬ ಪದದ ನಡುವೆ 'ವಿಷ್ಣು' ಶಬ್ದ. ಇದು ತ್ರಿವಿಕ್ರಮಗಾಯತ್ರಿಯ ಸ್ವರೂಪ.[೨]

### ರಾಮಷಡಕ್ಷರ

**ಸ್ವಯಮುದ್ದೇಶಸಂಯುಕ್ತಸ್ತದಾದ್ಯರ್ಣಪುರಃಸರಃ ।**
**ಸನತಿಃ ಷಡಕ್ಷರೋ ಮಂತ್ರೋ ವರ್ಣೈರಂಗಕ್ರಿಯಾ ಮತಾ ॥ ೩೪ ॥**

ಚತುರ್ಥ್ಯಂತವಾದ 'ರಾಮ'ಶಬ್ದ, ಆದ್ಯಂತಗಳಲ್ಲಿ 'ರಾಂ' ಎಂಬ ಶಬ್ದ ಮತ್ತು 'ನಮಃ'ಶಬ್ದ. ಇದೇ ಪರಶುರಾಮಷಡಕ್ಷರ ಮತ್ತು ದಾಶರಥಿರಾಮ ಷಡಕ್ಷರ. ಮಂತ್ರದ ೬ ಅಕ್ಷರಗಳಿಂದ ಷಡಂಗನ್ಯಾಸವನ್ನಾಚರಿಸಬೇಕು.[೩]

---

೧ 'ತತ್ಪುರ ಇತ್ಯವ್ಯಯಮ್ । ತತ್ಪುರಃ=ತದುಪರಿ, ತ್ರಿವಿಕ್ರಮಶಬ್ದಾದುಪರಿ ವಿಶ್ವರೂಪಃ=ವಿಶ್ವರೂಪಶಬ್ದಃ । ಸೋದ್ದೇಶ ಇತ್ಯಸ್ಯಾನುಕರ್ಷಣಾರ್ಥಶ್ಚಶಬ್ದಃ । ತದುಪರಿ ಧೀವಿದೌ=ಧೀಶಬ್ದವಿಚ್ಛಬ್ದೌ । ತತ್ರ ತ್ರಿವಿಕ್ರಮಶಬ್ದಾದುಪರಿ ವಿಚ್ಛಬ್ದಃ, ವಿಶ್ವರೂಪಶಬ್ದಾದುಪರಿ ಧೀಶಬ್ದ ಇತಿ ವಿವೇಕಃ । ತತ್ಪುರ ಇತ್ಯನುವರ್ತತೇ, ತದುಪರಿ=ಧೀವಿಚ್ಛಬ್ದಯೋರುಪರಿ ಮಹೇಶಬ್ದಃ ।' (ನಾರಾ.)

೨ ತಥಾಚ ಮಂತ್ರಃ— 'त्रिविक्रमाय विद्महे विश्वरूपाय धीमहि । तन्नो विष्णुः प्रचोदयात् ।'

ಇದರ ಧ್ಯಾನಾದಿಗಳು ಹಿಂದಿನಂತೆಯೆ ಇವೆ. ಅದರಿಂದಲೆ ಆಚಾರ್ಯರು ಪೂರ್ವ ಶ್ಲೋಕದಲ್ಲಿ ವಾಮನಶಬ್ದವನ್ನು ಹಾಕದೆ ಎರಡು ಕಡೆಗೂ ಅನ್ವಯವಾಗುವಂತೆ 'ವಿಷ್ಣುಮಚಾದಿವಂದ್ಯಂ' ಎಂದು ಸಾಮಾನ್ಯ ಪದವನ್ನು ಬಳಸಿದ್ದಾರೆ. ಛಲಾರೀಯದಲ್ಲಿ ಈ ಮಂತ್ರಕ್ಕೆ ವಾಮನಗಾಯತ್ರಿ ಎಂದೇ ಹೆಸರು ಬರೆದಿದ್ದಾರೆ.

೩ ತಥಾಚ ಉಭಯತ್ರಾಪಿ ಮಂತ್ರಃ— 'राँ रामाय नमः ।'

'ಅನಂತೋಽಗ್ನ್ಯಾಸನಃ ಸೇಂದುರ್ಬೀಜಂ ರಾಮಾಯ ಹೃನ್ಮನುಃ ।
ಷಡಕ್ಷರೋಽಯಮಾದಿಷ್ಟೋ ಭಜತಾಂ ಕಾಮದೋ ಮಣಿಃ ॥
ಬ್ರಹ್ಮಾ ಪ್ರೋಕ್ತೋ ಮುನಿಶ್ಛಂದೋ ಗಾಯತ್ರಂ ದೇವತಾ ಮನೋಃ ।
ದೇಶಿಕೇಂದ್ರೈಃ ಸಮಾಖ್ಯಾತೋ ರಾಮೋ ರಾಕ್ಷಸಮರ್ದನಃ ॥' (ಶಾರದಾ.)

### ಪರಶುರಾಮಧ್ಯಾನ

ಅಂಗಾರವರ್ಣಮಭಿತೋಽಂಡಬಹಿಃಪ್ರಭಾಭಿ-
ರ್ವ್ಯಾಪ್ತಂ ಪರಶ್ವಧಧನುರ್ಧರಮೇಕವೀರಮ್ ।
ಧ್ಯಾಯೇದಜೇಶಪುರುಹೂತಮುಖೈಃ ಸ್ತುವದ್ಭಿ-
ರಾವೀತಮಾತ್ಮಪದವೀಂ[1] ಪ್ರತಿಪಾದಯಂತಮ್ || ೩೫ ||

ಕೆಂಡದಂತೆ ತೊಳಗುವ, ಬ್ರಹ್ಮಾಂಡದ ಒಳಗೂ ಹೊರಗೂ ಎತ್ತೆತ್ತಲೂ ತನ್ನ ಪ್ರಭೆಯಿಂದ ವ್ಯಾಪಿಸಿರುವ, ಕೈಯಲ್ಲಿ ಕೊಡಲಿಯನ್ನೂ ಬಿಲ್ಲನ್ನೂ ಧರಿಸಿರುವ, ಸ್ತುತಿಸುತ್ತ ಸುತ್ತುವರಿದಿರುವ ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳಿಗೆ ತನ್ನ ಸ್ವರೂಪವನ್ನು ಉಪದೇಶಿಸುತ್ತಿರುವ, ಮಹಾವೀರನಾದ ಪರಶುರಾಮನನ್ನು ಧ್ಯಾನಿಸಬೇಕು.

### ದಾಶರಥಿರಾಮಧ್ಯಾನ

ಶ್ಯಾಮಂ ರವೀಂದ್ವಧಿಕದೀಧಿತಿಕಾಂತಿಯುಕ್ತಂ[2]
ಜ್ಞಾನಂ ಶರಂ ಚ ದಧತಂ[3] ಪ್ರಿಯಯಾ ಸಮೇತಮ್ ।
ಸ್ವಾತ್ಮಸ್ವರೂಪಮಮಿತಂ ಹನುಮನ್ಮುಖೇಷು
ಸಂದರ್ಶಯಂತಮಜಿತಂ ಸ್ಮರತೋರುಗೀರ್ಭಿಃ[4] || ೩೬ ||

ಸೂರ್ಯನಿಂದಲೂ ಉಜ್ಜ್ವಲನಾದ, ಚಂದ್ರನಿಂದಲೂ ಮಿಗಿಲಾದ ಕಾಂತಿಯುಳ್ಳ, ಜ್ಞಾನಮುದ್ರೆಯನ್ನೂ ಬಾಣವನ್ನೂ ಧರಿಸಿರುವ, ಅಜ್ಞೇಯವೂ ಅಜೇಯವೂ ಆದ ತನ್ನ ರೂಪವನ್ನು ಹನುಮದಾದಿಗಳಿಗೆ ಉಪದೇಶಿಸುತ್ತಿರುವ, ಸೀತೆಯೊಡನೆ ಕುಳಿತಿರುವ ಕಪ್ಪುಮೈಯ ರಾಮಭದ್ರನನ್ನು ವೇದವಚನಗಳಿಂದ ಕೊಂಡಾಡಿ ಧ್ಯಾನಿಸಬೇಕು.

---

['ಅನಂತಃ=ಆಕಾರಃ, ಅಗ್ನ್ಯಾಸನಃ=ರೇಫಾಸನಃ, ಸೇಂದುಃ=ಸಬಿಂದುಃ ।' (ಪದಾರ್ಥಾ.)]

ಅಂಗನ್ಯಾಸ—

'ರಾಂ ಹೃದಯಾಯ ನಮಃ । ರಾಂ ಶಿರಸೇ ಸ್ವಾಹಾ । ಮಾಂ ಶಿಖಾಯೈ ವಷಟ್ । ಯಂ ಕವಚಾಯ ಹುಮ್ । ನಂ ನೇತ್ರಾಭ್ಯಾಂ ವೌಷಟ್ । ಮಂ ಅಸ್ತ್ರಾಯ ಫಟ್ ।'

೧ 'ಆತ್ಮಪದವೀಂ=ಸ್ವಸ್ವರೂಪಮ್' (ನಾರಾ.)

೨ ರವೀಂದುಭ್ಯಾಮಧಿಕದೀಧಿತಿರಧಿಕಕಾಂತಿಶ್ಚ ।

೩ 'ವಾಮಕರೇ ಧನುರ್ಧರಮಿತ್ಯಪಿ ಜ್ಞೇಯಮ್' (ಛಲಾ.)

೪ 'ಕಾಲಾಂಭೋಧರಕಾಂತಿಕಾಂತಮನಿಶಂ ವೀರಾಸನಾಧ್ಯಾಸಿನಂ

## ಭಾರ್ಗವಮಂತ್ರ–ರಾಘವಮಂತ್ರ

**ನಿಜಗೋತ್ರಂ ತು ಸೋದ್ದೇಶಂ ಪೂರ್ವಾರ್ಣಸ್ವರಪುರಃಸರಮ್ ।**
**ನತ್ಯಂತಂ ತಾರಪೂರ್ವಂ ಚ ಮಾನುರಷ್ಟಾಕ್ಷರೋ ಮತಃ ॥ ೩೭ ॥**

ಚತುರ್ಥ್ಯಂತಗಳಾದ ಪರಶುರಾಮ ಮತ್ತು ದಾಶರಥಿರಾಮರ ಗೋತ್ರ ವಾಚಕಗಳಾದ 'ಭಾರ್ಗವ' 'ರಾಘವ' ಪದಗಳು, ಅವುಗಳ ಆದಿಯಲ್ಲಿ ನಾಮಧೇಯದ ಪೂರ್ವಾರ್ಣಸ್ವರಗಳಾದ 'ಭಾಂ' 'ರಾಂ' ಎಂಬ ಅಕ್ಷರಗಳು ಮತ್ತು ಓಂಕಾರ, ತುದಿಯಲ್ಲಿ 'ನಮಃ' ಪದ. ಇವು ಭಾರ್ಗವಾಷ್ಟಾಕ್ಷರ ಮತ್ತು ರಾಘವಾಷ್ಟಾಕ್ಷರ ಮಂತ್ರಗಳು.[೧]

## ಏಕಾಕ್ಷರ ಮಂತ್ರದ್ವಯ

**ತೇ ಚ ಬೀಜೇ[೨] ಬೀಜಭೂತೇ ಧರ್ಮಾದೀನಾಮಶೇಷತಃ ।**

ಬೀಜಾಕ್ಷರಗಳಾದ 'ಭಾಂ' ಮತ್ತು 'ರಾಂ' ಎಂಬ ಅಕ್ಷರಗಳು ಕೂಡ ಸ್ವತಂತ್ರ ಮಂತ್ರಗಳೇ ಆಗಿದ್ದು ಧರ್ಮಾದಿಪುರುಷಾರ್ಥಚತುಷ್ಟಯಕ್ಕೂ ಕಾರಣಗಳಾಗಿವೆ.

**ಏತೇ ವಿಜಯದಾ ಮಂತ್ರಾ ಜ್ಞಾನಮೋಕ್ಷಪ್ರದಾಯಕಾಃ ।**
**ಹಿರಣ್ಯರತ್ನರಾಜ್ಯಾದಿಸಮಭೀಷ್ಟಸುರದ್ರುಮಾಃ ॥ ೩೮ ॥**

ವಿಜಯಪ್ರದಗಳಾದ ಈ ಮಂತ್ರಗಳು ಜ್ಞಾನವನ್ನೂ ಮೋಕ್ಷವನ್ನೂ ಕೊಡಬಲ್ಲವು. ಚಿನ್ನ, ರತ್ನ, ರಾಜ್ಯ ಮೊದಲಾದ ಐಹಿಕ ಕಾಮನೆಗಳನ್ನು ಪೂರಯಿಸುವುದರಲ್ಲಿ ಈ ಮಂತ್ರಗಳೆಲ್ಲ ಕಲ್ಪವೃಕ್ಷಗಳಂತಿವೆ.

---

ಮುದ್ರಾಂ ಜ್ಞಾನಮಯೀಂ ದಧಾನಮಪರಂ ಹಸ್ತಾಂಬುಜಂ ಜಾನುನಿ ।
ಸೀತಾಂ ಪಾರ್ಶ್ವಗತಾಂ ಸರೋರುಹಕರಾಂ ವಿದ್ಯುನ್ನಿಭಾಂ ರಾಘವಂ
ಪಶ್ಯಂತಂ ಮುಕುಟಾಂಗದಾದಿವಿವಿಧಾಕಲ್ಪೋಜ್ಜ್ವಲಾಂಗಂ ಭಜೇ ॥'
(ಶಾರದಾ.)

೧ ತಥಾಚ ಮಂತ್ರೌ— 'ॐ भाँ भार्गवाय नमः ।' 'ॐ राँ राघवाय नमः ।'
ಇವುಗಳ ಧ್ಯಾನ ಹಿಂದಿನಂತೆಯೆ. ಪೂರ್ಣಜ್ಞಾನಾತ್ಮಾದಿ ಮಂತ್ರಗಳಿಂದ ಅಂಗನ್ಯಾಸ.

೨ 'ವಹ್ನಿಸ್ಥಂ ಶಯನಂ ವಿಷ್ಣೋರರ್ಧಚಂದ್ರವಿಭೂಷಿತಮ್ ।
ಏಕಾಕ್ಷರೋ ಮನುಃ ಪ್ರೋಕ್ತೋ ಮಂತ್ರರಾಜಃ ಸುರದ್ರುಮಃ ॥'
(ರೇಫಸ್ಥಂ ಶಯನಮಾಕಾರಃ ।)
ಈ ಮಂತ್ರದ ಛಂದಸ್ಸು ಗಾಯತ್ರಿಯೆ.

## ಕೃಷ್ಣಮಂತ್ರ

**ಕೃಷ್ಣೋ ಗೋವಿಂದ ಕಾಮಾಂತೌ ಸೋಪೀಶೋ ವಲ್ಲವೀಜನಃ ।**
**ಪ್ರಿಯಶ್ಚ ತಾದೃಶಃ ಸ್ವಾಹಾಯುಗಷ್ಟಾದಶವರ್ಣಕಃ ।**
**ಪದೈರಂಗಾನಿ ಸಂಪ್ರೀತಿಕಾಮಮೋಕ್ಷಪ್ರದೋ ಮನುಃ ॥ ೩೯ ॥**

ಕಾಮಬೀಜವಾದ 'ಕ್ಲೀಂ'ಕಾರದಿಂದ ಕೂಡಿದ, ಚತುರ್ಥ್ಯಂತವಾದ 'ಕೃಷ್ಣ' ಶಬ್ದ ಮತ್ತು ವೇದವೇದ್ಯ ಎಂಬ ಅರ್ಥದ 'ಗೋವಿಂದ' ಶಬ್ದ, ಅನಂತರ ಗೋಪಿಯರಿಗೆ ಪ್ರಿಯ ಎನ್ನುವ ಅರ್ಥದ ಚತುರ್ಥ್ಯಂತವಾದ 'ಗೋಪೀಜನವಲ್ಲಭ' ಶಬ್ದ ಮತ್ತು 'ಸ್ವಾಹಾ' ಶಬ್ದ– ಈ ೧೮ ಅಕ್ಷರಗಳು ಸೇರಿ ಗೋಪಾಲಮಂತ್ರವಾಗುವುದು.[೧] ಈ ಮಂತ್ರವು ಐಹಿಕ ಸಕಲ ಭೋಗಗಳನ್ನೂ, ವಿಷ್ಣುಪ್ರೀತಿಯನ್ನೂ, ಮೋಕ್ಷವನ್ನೂ ಕೊಡುವಂಥದು. ಮಂತ್ರದ ೫ ಪದಗಳಿಂದ ಪಂಚಾಂಗನ್ಯಾಸವನ್ನಾಚರಿಸಬೇಕು.[೨]

**ಧ್ಯಾಯೇದ್ಧರಿನ್ಮಣಿನಿಭಂ[೩] ಜಗದೇಕವಂದ್ಯಂ**
**ಸೌಂದರ್ಯಸಾರಮರಿಶಂಖವರಾಭಯಾನಿ ।**

---

೧ ತಥಾಚ ಮಂತ್ರಃ— 'क्लीं कृष्णाय गोविन्दाय गोपीजनवल्लभाय स्वाहा ।'
'ಕೃಷ್ಣಾಯ ಪದಮಾಭಾಷ್ಯ ಗೋವಿಂದಾಯ ತತಃಪರಮ್ ।
ಗೋಪೀಜನಪದಸ್ಯಾಂತೇ ವಲ್ಲಭಾಯ ದ್ವಿಠಾವಧಿಃ ॥
ಕಾಮಬೀಜಾದಿರಾಖ್ಯಾತೋ ಮನುರಷ್ಟಾದಶಾಕ್ಷರಃ ।
ನಾರದೋಽಸ್ಯ ಮುನಿಃ ಪ್ರೋಕ್ತೋ ಗಾಯತ್ರಂ ಛಂದ ಉಚ್ಯತೇ ।
ದೇವತಾ ಕಥಿತಃ ಕೃಷ್ಣಃ ಸರ್ವಕಾಮಫಲಪ್ರದಃ ॥' (ಶಾರದಾ.)
'ಧೃತಿಶ್ಛಂದಃ । ಗಾಯತ್ರೀ ಛಂದ ಇತ್ಯಪ್ಯಾಹುಃ' (ಛಲಾ.)
'ಬೃಹತೀ ಛಂದಃ' (ಸಾರಾ.)
ಇದನ್ನು ಗೋಪಾಲಮಂತ್ರವೆಂದೂ ಮದನಗೋಪಾಲಮಂತ್ರವೆಂದೂ ಕರೆವರು.

೨ ಅಂಗನ್ಯಾಸ—
ಕ್ಲೀಂ ಹೃದಯಾಯ ನಮಃ । ಕೃಷ್ಣಾಯ ಶಿರಸೇ ಸ್ವಾಹಾ । ಗೋವಿಂದಾಯ ಶಿಖಾಯೈ ವಷಟ್ । ಗೋಪೀಜನವಲ್ಲಭಾಯ ಕವಚಾಯ ಹುಮ್ । ಸ್ವಾಹಾ ಅಸ್ತ್ರಾಯ ಫಟ್ ।'

೩ 'ಹರಿನ್ಮಣಿ' ಅಂದರೆ ನಿಜವಾಗಿ ಪಚ್ಚೆಮಣಿ ಹೊರತು ನೀಲಮಣಿಯಲ್ಲ. ಆದರೆ ಸಂಸ್ಕೃತದಲ್ಲಿ 'ಹರಿತ್' ಎಂಬ ಶಬ್ದ ನೀಲ ಮತ್ತು ಪಚ್ಚೆ ಎಂಬ ಎರಡರ್ಥಗಳಲ್ಲೂ ಇರುವುದರಿಂದ ಇಲ್ಲಿ ಹರಿನ್ಮಣಿ ಎಂಬ ಶಬ್ದಕ್ಕೆ ನೀಲಮಣಿ ಎಂಬ ಅರ್ಥ ಕೊಡುತ್ತದೆ.
'ಹರಿನ್ಮಣೀಃ=ಇಂದ್ರನೀಲಮಣಿಃ' (ಛಲಾ.)

**ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ-**
**ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥ ೪೦ ॥**

ಸಮಸ್ತ ಜನರಿಂದಲೂ ವಂದ್ಯನಾದ, ಸೌಂದರ್ಯಪೂರ್ಣನಾದ, ನಾಲ್ಕು ಕೈಗಳಲ್ಲಿ ಚಕ್ರಶಂಖವರಾಭಯಮುದ್ರೆಗಳನ್ನು ಧರಿಸಿರುವ, ಭಕ್ತರ ಮೇಲೆ ದಯಾರಸವನ್ನು ಬೀರುತ್ತಿರುವ, ಸಕಲ ಪುರುಷಾರ್ಥಪ್ರದನಾದ, ರುಕ್ಮಿಣಿ ಸತ್ಯಭಾಮೆಯರೊಡನೆ ಕುಳಿತಿರುವ, ನೀಲಮಣಿಯಂತೆ ಕಪ್ಪುಮೈಯ, ಅಜೇಯನಾದ ಶ್ರೀಹರಿಯನ್ನು ಧ್ಯಾನಿಸಬೇಕು.[೧]

## ಕೃಷ್ಣ ಷಡಕ್ಷರ–ಏಕಾಕ್ಷರ

**ಸಕಾಮಃ ಸ್ವಯಮುದ್ದೇಶೀ ನತ್ಯಂತೋಽಯಂ ಷಡಕ್ಷರಃ ।**
**ತದಾದಿರಪಿ ಸರ್ವೇಷ್ಟಚಿಂತಾಮಣಿರುದೀರಿತಃ ॥ ೪೧ ॥**

ಕಾಮಬೀಜದಿಂದ ಮತ್ತು ನಮಃಪದದಿಂದ ಕೂಡಿದ ಚತುರ್ಥ್ಯಂತ ವಾದ 'ಕೃಷ್ಣ'ಶಬ್ದವು ಕೃಷ್ಣಷಡಕ್ಷರ ಎನ್ನಿಸಿಕೊಳ್ಳುವುದು.[೨] ಅದರ ಆದ್ಯಕ್ಷರವಾದ ಕಾಮಬೀಜವೂ ಒಂದು ಸ್ವತಂತ್ರ ಮಂತ್ರವಾಗಿದ್ದು ಚಿಂತಾ ಮಣಿಯಂತೆ ಸರ್ವೇಷ್ಟಪ್ರದವಾಗಿದೆ.[೩]

---

೧ 'ಸ್ಮರೇದ್ವೃಂದಾವನೇ ರಮ್ಯೇ ಮೋಹಯಂತಂ ಮನೋರಮಮ್ ।
ಗೋವಿಂದಂ ಪುಂಡರೀಕಾಕ್ಷಂ ಗೋಪಕನ್ಯಾಃ ಸಹಸ್ರಶಃ ॥
ಆತ್ಮನೋ ವದನಾಂಭೋಜಪ್ರೇಷಿತಾಕ್ಷಿಮಧುವ್ರತಾಃ ।
ಪೀಡಿತಾಃ ಕಾಮಬಾಣೇನ ಚಿರಮಾಶ್ಲೇಷಣೋತ್ಸುಕಾಃ ॥
ಮುಕ್ತಾಹಾರಲಸತ್ಪೀನತುಂಗಸ್ತನಭರಾನತಾಃ ।
ಸ್ರಸ್ತಧಮ್ಮಿಲ್ಲವಸನಾ ಮದಸ್ಖಲಿತಭಾಷಣಾಃ ॥
ದಂತಪಂಕ್ತಿಪ್ರಭೋದ್ಭಾಸಿಸ್ಪಂದಮಾನಾಧರಾಂಚಿತಾಃ ।
ವಿಲೋಭಯಂತೀರ್ವಿವಿಧೈರ್ವಿಭ್ರಮೈರ್ಭಾವಗರ್ಭಿತೈಃ ॥
ಫುಲ್ಲೇಂದೀವರಕಾಂತಿಮಿಂದುವದನಂ ಬರ್ಹಾವತಂಸಪ್ರಿಯಂ
ಶ್ರೀವತ್ಸಾಂಕಮುದಾರಕೌಸ್ತುಭಧರಂ ಪೀತಾಂಬರಂ ಸುಂದರಮ್ ।
ಗೋಪೀನಾಂ ನಯನೋತ್ಪಲಾರ್ಚಿತತನುಂ ಗೋಪಾಲಸಂಘಾವೃತಂ
ಗೋವಿಂದಂ ಕಲವೇಣುವಾದನಪರಂ ದಿವ್ಯಾಂಗಭೂಷಂ ಭಜೇ ॥' (ಶಾರದಾ.)

೨ ತಥಾಚ ಮಂತ್ರಃ— 'क्लीँ कृष्णाय नमः ।'

೩ ಮಂತ್ರಾಕಾರಸ್ತು— 'क्लीँ' ।
'ಬ್ರಹ್ಮಾ ಭೂಮ್ಯಾಂ ಸಮಾಸೀನಃ ಶಾಂತಿಬಿಂದುಸಮನ್ವಿತಃ ।
ಬೀಜಂ ಮನೋಭುವಃ ಪ್ರೋಕ್ತಂ ಜಗತ್ತ್ರಿತಯಮೋಹನಮ್ ॥

ದೃಷ್ಟಾರ್ಥ ಏವ ಮಂತ್ರಾಣಾಂ ಕಲೌ ವೀರ್ಯಂ ತಿರಸ್ಕೃತಮ್ ।
ತತ್ರಾಪ್ಯುದ್ದೀಪ್ತವೀರ್ಯಾ ಹಿ ಮಂತ್ರಾ ಅತ್ರ ಪ್ರಕೀರ್ತಿತಾಃ ।
ವಾಸಿಷ್ಠವೃಷ್ಣಿಪ್ರವರಮಂತ್ರಾಸ್ತತ್ರಾಪಿ ವೀರ್ಯದಾಃ ॥ ೪೨ ॥

ಕಲಿಯುಗದಲ್ಲಿ– ಮಂತ್ರಗಳಿಗೆ ಐಹಿಕಫಲವನ್ನು ಸಾಧಿಸುವ ಶಕ್ತಿ ಮಾತ್ರವೆ ತಿರೋಹಿತವಾಗಿದೆ ಹೊರತು ಪಾರತ್ರಿಕ ಫಲಸಾಧನಶಕ್ತಿಯಲ್ಲ. ಅವುಗಳಲ್ಲಿ ಐಹಿಕಫಲವನ್ನೂ ಕೊಡಬಲ್ಲ ಅತಿರೋಹಿತವಾದ ಸಾಮರ್ಥ್ಯವುಳ್ಳ ಮಂತ್ರಗಳಷ್ಟೆ ಈ ಗ್ರಂಥದಲ್ಲಿ ಉಕ್ತವಾಗಿವೆ. ಇಲ್ಲಿ ಹೇಳಿರುವ ಮಂತ್ರಗಳಲ್ಲೂ ವೇದವ್ಯಾಸಮಂತ್ರ–ಕೃಷ್ಣಮಂತ್ರಗಳು ಜಪಿಸುವವನಿಗೆ ಹೆಚ್ಚಿನ ಶಕ್ತಿ ಸಾಮರ್ಥ್ಯಗಳನ್ನೀಯುವವು.

## ವೇದವ್ಯಾಸಮಂತ್ರ

ಸ್ವಯಂ ವೇದಪದಾರೂಢಃ ಪೂರ್ವವರ್ಣಪುರಃಸರಃ ।
ನತ್ಯಂತೋಽಷ್ಟಾಕ್ಷರೋ ಮಂತ್ರಃ[1] ಪ್ರಿಯೋ ವಿಜ್ಞಾನಗೋಪತೇಃ ॥
ವ್ಯಾಖ್ಯಾಶ್ರೀ[2]ಸರ್ವವಿಜ್ಞಾನಕವಿತಾದಿಗುಣಪ್ರದಃ ।
ವಾದೇ[3] ವಿಜಯದೋ ನಿತ್ಯಂ ಯಥಾ ಯುದ್ಧೇ ನೃಕೇಸರೀ ॥ ೪೪ ॥

---

ಋಷಿಃ ಸಮ್ಮೋಹನಃ ಪ್ರೋಕ್ತೋ ಗಾಯತ್ರಂ ಛಂದ ಏವ ಹಿ ।
ಸರ್ವಸಮ್ಮೋಹನಃ ಸಾಕ್ಷಾದ್ದೇವತಾ ಮಕರಧ್ವಜಃ ॥' (ಶಾರದಾ.)

'ಬ್ರಹ್ಮಾ=ಕಃ, ಭೂಮಿಃ=ಲಃ, ಏತದಾಸೀನಃ, ಶಾಂತಿಃ=ಈ, ಬಿಂದುಃ, ತೇನ ಕ್ಲೀಮ್ ।....."ಸರ್ವಸಮ್ಮೋಹನಕೃಷ್ಣ ಏತಯೋಃ ಸ್ಯಾದ್ದೇವತಾ" ಇತ್ಯುಕ್ತೇಃ ಸಾಕ್ಷಾದಿತ್ಯನೇನ ಕೇವಲಃ ಕೃಷ್ಣೋಽಪಿ (ದೇವತಾ) ।' (ಪದಾರ್ಥಾ.)

ಅದರಿಂದ ಈ ಮಂತ್ರ ಕಾಮದೇವತಾಕವೂ ಹೌದು, ಕೃಷ್ಣದೇವತಾಕವೂ ಹೌದು. ಇಲ್ಲಿ ಕೃಷ್ಣದೇವತಾಕವಾದ ಮಂತ್ರವನ್ನು ಮಾತ್ರ ಆಚಾರ್ಯರು ಉಲ್ಲೇಖಿಸಿದ್ದಾರೆ. ಕಾಮದೇವತಾಕ ಎಂಬ ಪಕ್ಷದಲ್ಲಿ ಧ್ಯಾನಾದಿಗಳನ್ನು ಶಾರದಾತಿಲಕದಿಂದ ತಿಳಿದುಕೊಳ್ಳಬಹುದು—

'ಜಪಾರುಣಂ ರಕ್ತವಿಭೂಷಣಾಢ್ಯಂ ಮೀನಧ್ವಜಂ ಚಾರುಕೃತಾಂಗರಾಗಮ್ ।
ಕರಾಂಬುಜೈರಂಕುಶಮಿಕ್ಷುಚಾಪಂ ಪುಷ್ಪಾಸ್ತ್ರಪಾಶೌ ದಧತಂ ಭಜಾಮಿ ॥'

೧ ತಥಾಚ ಮಂತ್ರಃ— 'व्याँ वेदव्यासाय नमः'

೨ 'ವ್ಯಾಖ್ಯಾಶ್ರೀ=ವ್ಯಾಖ್ಯಾನಸಂಪತ್' (ಛಲಾ.)

೩ 'ವಾದೇ=ಜಲ್ಪವಿತಂಡಾವಾದೇ' (ನಾರಾ.)
'ವಾದೇ=ಜಲ್ಪಾದಿಕಥಾಯಾಮ್' (ಛಲಾ.)

ಮೊದಲು 'ವ್ಯಾಂ' ಎಂಬ ಬೀಜಾಕ್ಷರ, ಅನಂತರ 'ವೇದ'ಪದದಿಂದ ಕೂಡಿದ 'ವ್ಯಾಸ'ಪದ, ಆ ಮೇಲೆ 'ನಮಃ'ಶಬ್ದ– ಇದು ೮ ಅಕ್ಷರಗಳುಳ್ಳ ವ್ಯಾಸಮಂತ್ರ; ಜ್ಞಾನಸಭಾಸ್ಫುರಣೆಸಿಸಿದ ವೇದವ್ಯಾಸರಿಗೆ ಪ್ರಿಯವಾದ ಮಂತ್ರ. ಈ ಮಂತ್ರವು ಜಪಿಸುವವನಿಗೆ ಶಾಸ್ತ್ರವ್ಯಾಖ್ಯಾನದಲ್ಲಿ ಪ್ರಭುತ್ವ, ಎಲ್ಲ ವಸ್ತುಗಳ ತಿಳಿವು, ಕಾವ್ಯರಚನಾಪಾಟವ ಮೊದಲಾದ ಗುಣಗಳನ್ನು ಕೊಡುವುದು. ಯುದ್ಧದಲ್ಲಿ ನರಸಿಂಹಮಂತ್ರವು ಜಯಪ್ರದವಾಗುವಂತೆ ವಾಗ್ಯುದ್ಧದಲ್ಲಿ ಈ ಮಂತ್ರವೂ ಜಯಪ್ರದವಾಗಿದೆ.

**ವಿಜ್ಞಾನರೋಚಿಃಪ್ರತಿಪೂರಿತಾಂತ-**
**ರ್ಬಾಹ್ಯಾಂಡಕೋಶಂ ಹರಿತೋಪಲಾಭಮ್ ।**
**ತರ್ಕಾಭಯೋತಂ ವಿಧಿಶರ್ವಪೂರ್ವ-**
**ಗೀರ್ವಾಣವಿಜ್ಞಾನ[೧]ದಮಾನತೋಽಸ್ಮಿ[೨] ॥ ೪೫ ॥**

ತನ್ನ ವಿಜ್ಞಾನದ ತನಿಬೆಳಕಿನಿಂದ ಜಗತ್ತಿನ ಒಳಹೊರಗನ್ನೆಲ್ಲ ಬೆಳಗಿಸಿದ, ಪಚ್ಚೆಮಣಿಯಂತೆ ಶುಭ್ರಕಾಂತಿಯುಳ್ಳ, ಜ್ಞಾನಮುದ್ರೆ–ಅಭಯಮುದ್ರೆಗಳನ್ನು ಕೈಯಲ್ಲಿ ಧರಿಸಿರುವ, ಬ್ರಹ್ಮ ರುದ್ರ ಮೊದಲಾದ ಎಲ್ಲ ದೇವತೆಗಳಿಗೂ ಸುಜ್ಞಾನವನ್ನು ಕರುಣಿಸುತ್ತಿರುವ ಶ್ರೀವೇದವ್ಯಾಸರಿಗೆ ಭಕ್ತಿಯಿಂದ ಮಣಿಯುವೆನು.

**ಜ್ಞಾನಾನಂದಪುರಃ ಪೂರ್ಣೋ ವಿದ್ಮಹೇ ಧೀಮಹೇ ತಥಾ ।**
**ತನ್ನಃಪ್ರೇರಣಮುಖ್ಯೇ ತು ವ್ಯಾಸೋ ಮಂತ್ರಾಧಿಪಾಧಿಪಃ[೩] ॥ ೪೬ ॥**

---

ಇಲ್ಲಿರುವ ವಾದಶಬ್ದವು ಜಲ್ಪ, ವಿತಂಡಾ, ವಾದ ಎಂಬ ಮೂರು ಕಥಾ ಪ್ರಸಂಗಗಳಲ್ಲಿ ಜಲ್ಪ-ವಿತಂಡಾಗಳನ್ನು ಮಾತ್ರ ಪ್ರತಿಪಾದಿಸುತ್ತದೆ. ತತ್ತ್ವನಿರ್ಣಯಕ್ಕಾಗಿ ನಡೆಯುವ ವಾದದಲ್ಲಿ ಜಯಪರಾಜಯದ ಪ್ರಶ್ನೆಯೇ ಉಳಿಯುವುದಿಲ್ಲ ತಾನೆ!

೧ ದೇವತೆಗಳಿಗೆ ಜ್ಞಾನವನ್ನು ಕೊಡುವವನು ಎಂಬಲ್ಲಿ 'ವಿಜ್ಞಾನ' ಪದವನ್ನು ಬಳಸುವುದರಲ್ಲಿ ಒಂದು ಔಚಿತ್ಯವಿದೆ. ದೇವತೆಗಳಂಥ ಉತ್ತಮ ಚೇತನದಲ್ಲಿರುವ ವಿಶಿಷ್ಟ ಜ್ಞಾನವನ್ನು ಮಾತ್ರ ಶಾಸ್ತ್ರದಲ್ಲಿ 'ವಿಜ್ಞಾನ'ವೆಂದು ಕರೆಯುತ್ತಾರೆ—

'ದೇವಾದೀನಾಂ ತು ಯತ್ ಜ್ಞಾನಂ ವಿಜ್ಞಾನಮಿತಿ ಕೀರ್ತಿತಮ್ ।'

೨ 'ಜ್ಞಾನಾದೀನ್ಯಂಗಾನಿ ಗಾಯತ್ರೀ ಛಂದಃ ।' (ನಾರಾ.)

೩ ತಥಾಚ ಮಂತ್ರಃ— 'पूर्णज्ञानाय विद्महे पूर्णानन्दाय धीमहि । तन्नो व्यासः प्रचोदयात् ।'

'ಜ್ಞಾನಾದಿಕಾನ್ಯಂಗಾನಿ, ಗಾಯತ್ರೀ ಛಂದಃ, ವಿಜ್ಞಾನರೋಚಿರಿತಿ ವಾ ಧ್ಯಾಯೇಚ್ಛಶಾಂಕೇತಿ ವಾ ಧ್ಯಾನಮ್' (ನಾರಾ.)

‘ಪೂರ್ಣ’ಶಬ್ದದಿಂದ ಕೂಡಿದ ‘ಜ್ಞಾನಾನಂದ’ಶಬ್ದಗಳು— ಅನಂತರ ‘ವಿದ್ಮಹೇ’ ಮತ್ತು ‘ಧೀಮಹಿ’ಪದಗಳು, ‘ತನ್ನಃ’ ಮತ್ತು ‘ಪ್ರಚೋದಯಾತ್’ಪದಗಳ ನಡುವೆ ‘ವ್ಯಾಸ’ಶಬ್ದ,— ಇದು ಮಂತ್ರಗಳಲ್ಲಿ ಶ್ರೇಷ್ಠವೆನಿಸಿದ ವ್ಯಾಸಗಾಯತ್ರಿ.

## ಏಕಾಕ್ಷರವೇದವ್ಯಾಸಮಂತ್ರ

**ಆದಿಬೀಜಂ[1] ಸ್ಥಿರಾದೋಷಜ್ಞಾನಬೀಜಂ ವಿಮುಕ್ತಿದಮ್ ।**
**ಸರ್ವಪಾಪಕ್ಷಯಕರಂ ಸರ್ವವ್ಯಾಧಿವಿನಾಶನಮ್[2] ॥ ೪೭ ॥**

ಈ ಮಂತ್ರದ ಮೊದಲಿನ ಬೀಜಾಕ್ಷರವೂ ಒಂದು ಸ್ವತಂತ್ರ ಮಂತ್ರವೇ ಆಗಿದೆ. ಈ ಮಂತ್ರವು ನಿರ್ದುಷ್ಟವಾದ, ನಿಶ್ಚಲವಾದ, ಜ್ಞಾನವನ್ನು ಕೊಡಬಲ್ಲುದು, ಮುಕ್ತಿಯನ್ನು ಕೊಡಬಲ್ಲುದು. ಇದರ ಜಪದಿಂದ ಎಲ್ಲ ಪಾಪಗಳೂ, ಎಲ್ಲ ರೋಗಗಳೂ ನಾಶಹೊಂದುವವು.

**ಧ್ಯಾಯೇಚ್ಛಶಾಂಕಶತಕೋಟ್ಯತಿಸೌಖ್ಯಕಾಂತಿಂ[3]**
**ಸಂಸಿಚ್ಯಮಾನಮಮೃತೋರುಘಟೈಃ[4] ಸುರೇಶೈಃ ।**
**ವರ್ಣಾಭಿಮಾನಿಭಿರಜೇಶಮುಖೈಃ ಸಹೈವ**
**ಪಂಚಾಶತಾ[5] ಪ್ರತಿಗಿರಂತಮಶೇಷವಿದ್ಯಾಃ ॥ ೪೮ ॥**

ಅನಂತಕೋಟಿ ಚಂದ್ರರ ಬೆಳುದಿಂಗಳಿಗಿಂತಲೂ ಮಧುರವಾದ ಆಹ್ಲಾದಕವಾದ ಕಾಂತಿವುಳ್ಳ, ವರ್ಣಾಭಿಮಾನಿಗಳಾದ ಬ್ರಹ್ಮರುದ್ರಾದಿ ದೇವತೆಗಳು ಸುರಿಯುತ್ತಿರುವ ಪೂರ್ಣಕಲಶದ ಅಮೃತದಿಂದ ಆಪ್ಲಾವಿತವಾದ, ಅಕಾರಾದಿ ಪಂಚಾಶದ್ವರ್ಣಗಳನ್ನೂ ಜತೆಗೆ ಸಕಲ ವಿದ್ಯೆಗಳನ್ನೂ ಬ್ರಹ್ಮಾದಿಗಳಿಗೆ ಉಪದೇಶಿಸುತ್ತಿರುವ ವ್ಯಾಸರೂಪವನ್ನು ಧ್ಯಾನಿಸಬೇಕು.

---

೧ ತಥಾಚ ‘ವ್ಯೌಂ’ ಇತಿ ಸ್ವತಂತ್ರೋ ಮಂತ್ರಃ ।

೨ ‘ಅಸ್ಯಾಪಿ ಪೂರ್ವೋಕ್ತಮೇವಾಂಗಾದಿಕಮ್’ (ಛಲಾ.)

೩ ‘ಸೌಖ್ಯಕಾಂತಿಂ=ಸುಖಾತ್ಮಕಕಾಂತಿಮ್’ (ನಾರಾ.)
‘ಚಂದ್ರಶತಕೋಟಿವತ್ ಅತಿಸೌಖ್ಯಕರಕಾಂತಿಯುಕ್ತಮ್’ (ಛಲಾ.)

೪ ‘ಅಮೃತೋರುಘಟೈಃ=ಸುಧಾಪೂರ್ಣಸ್ಥೂಲಕಲಶೈಃ ।’ (ಛಲಾ.)

೫ ‘ಪಂಚಾಶತಾ=ಪಂಚಾಶದ್ವರ್ಣೈಃ, ಸಹೈವ=ಸಾರ್ಧಂ, ಅಶೇಷವಿದ್ಯಾಃ=ವೇದಾದಿಸರ್ವವಿದ್ಯಾಃ, ಪ್ರತಿಗಿರಂತಂ=ಉದ್ಗಿರಂತಮ್ । ಅಕಾರಾದಿಪಂಚಾಶದ್ವರ್ಣಾನ್ ವೇದಾದಿವಿದ್ಯಾಶ್ಚ ಬ್ರಹ್ಮಾದಿಭ್ಯೋ ವ್ಯಾಚಕ್ಷಾಣಮಿತಿ ಭಾವಃ ।’ (ಛಲಾ.)

## ಹಯಗ್ರೀವಮಂತ್ರ

**ಸೋದ್ದೇಶಸ್ತು ಸ್ವಯಂ ದೀರ್ಘಪೂರ್ವಾರ್ಣಾದ್ಯೋ ನಮೋಯುತಃ ।**
**ಸರ್ವವಿದ್ಯಾಪ್ರದೋಽಷ್ಟಾರ್ಣಃ[1] ಪ್ರತಿವಾದಿಜಯಪ್ರದಃ ।**
**ವಿಮುಕ್ತಿಸಾಧನಃ[2] ಕೀರ್ತಿಬುದ್ಧಿಸ್ಥೈರ್ಯ[3]ಪ್ರದಃ ಸದಾ ॥ ೪೯ ॥**

ಚತುರ್ಥ್ಯಂತವಾದ ಹಯಗ್ರೀವವಾಚಕ ಪದ, ಅದರ ತುದಿಮೊದಲುಗಳಲ್ಲಿ ದೀರ್ಘಯುಕ್ತವಾದ ಹೆಸರಿನ ಮೊದಲನೆಯ ಅಕ್ಷರವಾದ ಹಕಾರ ಮತ್ತು 'ನಮಃ'ಶಬ್ದ—ಇದು ೮ ಅಕ್ಷರಗಳುಳ್ಳ ಹಯಗ್ರೀವ ಮಂತ್ರ. ಈ ಮಂತ್ರವು ಎಲ್ಲ ವಿದ್ಯೆಗಳಲ್ಲಿ ಪಾಂಡಿತ್ಯವನ್ನೂ, ಪ್ರತಿವಾದಿಗಳನ್ನು ಸೋಲಿಸುವ ವಾದಶಕ್ತಿಯನ್ನೂ ಕೊಡುವುದು; ಕೀರ್ತಿಯನ್ನೂ ಧಾರಣಾಶಕ್ತಿಯನ್ನೂ ಹೆಚ್ಚಿಸುವುದು; ಅಲ್ಲದೆ ಪರಮಪುರುಷಾರ್ಥವಾದ ಮೋಕ್ಷಕ್ಕೂ ಸಾಧನವಾಗಿದೆ.

**ವಂದೇ ತುರಂಗವದನಂ ಶಶಿಬಿಂಬಸಂಸ್ಥಂ**
**ಚಂದ್ರಾವದಾತಮಮೃತಾತ್ಮಕರೈಃ[4] ಸಮಂತಾತ್ ।**
**ಅಂಡಾಂತರಂ ಬಹಿರಪಿ ಪ್ರತಿಭಾಸಯಂತಂ**
**ಶಂಖಾಕ್ಷಪುಸ್ತಕಸುಬೋಧಯುತಾಬ್ಜಬಾಹುಮ್[5] ॥ ೫೦ ॥**

---

೧ ಇಲ್ಲಿ ಹೆಸರಿನ ವ್ಯತ್ಯಾಸದಿಂದ ಮಂತ್ರವನ್ನು ನಾಲ್ಕು ತೆರನಾಗಿ ನಿರ್ದೇಶಿಸಬಹುದು—
'हां हयग्रीवाय नमः'; 'हां हयशिरसे नमः'; 'हां हयशीर्षाय नमः'; 'हां हयशीर्ष्णे नमः ।'

ನಾಲ್ಕನೆಯ ಮಂತ್ರದಲ್ಲಿ ವಿಷ್ಣುಮಂತ್ರದಂತೆ ಷಕಾರಣಕಾರಗಳನ್ನು ಬೇರೆ ಬೇರೆ ಎಣಿಸಿದರೆ ೮ ಅಕ್ಷರಗಳಾಗುವುವು. ಈ ನಾಲ್ಕು ಮಂತ್ರಗಳೂ ಇಲ್ಲಿ ವಿವಕ್ಷಿತಗಳು ಎಂದು ಛಲಾರೀಯಕಾರರ ಆಶಯ. ನಾರಾಯಣೀಯದಲ್ಲಿ ಮೊದಲನೆಯ ಮಂತ್ರವನ್ನು ಮಾತ್ರ ಉಲ್ಲೇಖಿಸಿದ್ದಾರೆ.

೨ ಅಯನಶಬ್ದವತ್ ಲ್ಯುಡಂತಃ ಸಾಧನಶಬ್ದೋಽಪಿ ಪುಂಸಿ ವರ್ತತೇ । ಟಿತ್ಕರಣನ್ಯಾಯಸ್ಯ ಸಾಮ್ಯಾತ್ ।

೩ 'ಬುದ್ಧಿಸ್ಥೈರ್ಯಂ=ಮೋಹಶಾಸ್ತ್ರೈರನುಚ್ಛೇದ್ಯತ್ವಂ, ಯದ್ವಾ ಸ್ಮೃತಸ್ಯ ವಿಸ್ಮೃತ್ಯಭಾವಃ, ಧಾರಣಾಶಕ್ತಿರಿತಿ ಯಾವತ್ ।' (ಛಲಾ.)

೪ 'ಅಮೃತೈಃ=ನಾಶರಹಿತೈಃ, ಅಮೃತಸ್ರಾವಿಭಿರ್ವಾ, ಅಮೃತತ್ವಪ್ರದೈರ್ವಾ, ಸ್ವರೂಪಕಿರಣೈಃ ।' (ಛಲಾ.)

೫ 'ಅಬ್ಜಬಾಹುಮಿತ್ಯನೇನ ಬಾಹೂನಾಂ ನಾಲಸಾಮ್ಯಂ ಹಸ್ತಾನಾಂ ಪದ್ಮ-ಸಾಮ್ಯಂ ವ್ಯಜ್ಯತೇ ।' (ಛಲಾ.)

ನಸ್ತೋ[1] ಮುಖಾದಪಿ ನಿರಂತರಮುದ್ಗಿರಂತಂ
ವಿದ್ಯಾ ಅಶೇಷತ ಉತಾಬ್ಜಭವೇಶಮುಖ್ಯೈಃ ।
ಸಂಸೇವ್ಯಮಾನಮತಿಭಕ್ತಿಭರಾವನಮ್ರೈಃ
ಲಕ್ಷ್ಮ್ಯಾಽಮೃತೇನ ಸತತಂ ಪರಿಷಿಚ್ಯಮಾನಮ್ ॥ ೫೧ ॥

ಕುದುರೆಯ ಮೋರೆಯನ್ನು ಧರಿಸಿರುವ ಶ್ರೀಹರಿಯು ಚಂದ್ರಬಿಂಬದಲ್ಲಿ ಕುಳಿತಿದ್ದಾನೆ, ಚಂದ್ರನಂತೆಯೆ ಬೆಳಗುತಿದ್ದಾನೆ, ಅಮೃತವನ್ನು ಸುರಿಸುವ ತನ್ನ ಕಿರಣಗಳಿಂದ ಬ್ರಹ್ಮಾಂಡವನ್ನು ಒಳಗೂ ಹೊರಗೂ ಎತ್ತೆತ್ತಲೂ ಬೆಳಗಿಸುತ್ತಿದ್ದಾನೆ, ತಾವರೆಯ ದಂಡಿನಂತೆ ನವುರಾದ ಅವನ ತೋಳುಗಳಲ್ಲಿ ಶಂಖ, ಅಕ್ಷಮಾಲೆ, ಪುಸ್ತಕ, ಜ್ಞಾನಮುದ್ರೆಗಳಿವೆ. ಅವನು ತನ್ನ ಮೂಗಿನಿಂದಲೂ ಮೋರೆಯಿಂದಲೂ ನಿರಂತರವೂ ಎಲ್ಲ ವಿದ್ಯೆಗಳನ್ನೂ ಹೊರಗೆಡಹುತಿದ್ದಾನೆ, ಭಕ್ತಿಯ ಭರದಿಂದ ಬಗ್ಗಿರುವ ಬ್ರಹ್ಮ ರುದ್ರ ಮೊದಲಾದ ದೇವತೆಗಳಿಂದ ಸೇವಿಸಲ್ಪಡುತಿದ್ದಾನೆ, ಬಳಿಯಲ್ಲೆ ಕುಳಿತಿರುವ ರಮಾದೇವಿ ಅವನಿಗೆ ಅಮೃತಾಭಿಷೇಕವನ್ನು ಗೈಯುತಿದ್ದಾಳೆ; ಅಂಥ ಹಯಗ್ರೀವನನ್ನು ವಂದಿಸುತ್ತೇನೆ.

### ಕಪಿಲಮಂತ್ರ–ದತ್ತಾತ್ರೇಯಮಂತ್ರ

ಸ್ವಯಮುದ್ದೇಶವಾನ್ ಪೂರ್ವವರ್ಣಪೂರ್ವೋ ನಮೋಯುತಃ ।
ಸತಾರೋಽಷ್ಟಾಕ್ಷರಶ್ಚೈವ ನವಾರ್ಣಶ್ಚ ಮನೂ ಸ್ಮೃತೌ[2] ॥ ೫೨ ॥

ಓಂಕಾರ ಮತ್ತು ತನ್ನ ಮೊದಲನೆಯ ಅಕ್ಷರಗಳಿಂದ ಕೂಡಿದ, ಚತುರ್ಥ್ಯಂತಗಳಾದ 'ಕಪಿಲ'-'ದತ್ತಾತ್ರೇಯ' ಶಬ್ದಗಳು ಕೊನೆಯಲ್ಲಿ ನಮಃಶಬ್ದ, ಇವು ಕಪಿಲಾಷ್ಟಾಕ್ಷರ ಮತ್ತು ದತ್ತಾತ್ರೇಯನವಾಕ್ಷರ ಮಂತ್ರಗಳು.

ಪ್ರೋದ್ಯದ್ದಿವಾಕರಸಮಾನತನುಂ ಸಹಸ್ರ[3]-
ಸೂರ್ಯೋರುದೀಧಿತಿಭಿರಾಪ್ತಸಮಸ್ತಲೋಕಮ್ ।
ಜ್ಞಾನಾಭಯಾಂಕಿತಕರಂ ಕಪಿಲಂ ಚ ದತ್ತಂ[4]
ಧ್ಯಾಯೇದಜಾದಿಸಮಿತಿಂ ಪ್ರತಿಬೋಧಯಂತಮ್ ॥ ೫೩ ॥

---

೧ 'ನಸ್ತಃ=ನಾಸಿಕಾತಃ' (ನಾರಾ.)

೨ ತಥಾಚ ಮಂತ್ರೌ— 'ॐ कं कपिलाय नमः' । 'ॐ दं दत्तात्रेयाय नमः' ।

೩ 'ಸಹಸ್ರಶಬ್ದೋಽಮಿತಪರಃ' (ನಾರಾ., ಛಲಾ.)

೪ 'ಧ್ಯಾನಮೇವ ಮಂತ್ರಾಂಗಂ ನ ಶ್ಲೋಕಪಠನಮಪೀತಿ ಭಾವೇನೈಕಸ್ಮಿನ್ನೇವ ಶ್ಲೋಕೇ ಕಪಿಲದತ್ತಶಬ್ದಪ್ರಯೋಗ ಇತಿ ಜ್ಞಾತವ್ಯಮ್ ।' (ಛಲಾ.)

ಉದಿಸುವ ಸೂರ್ಯನಂತೆ ಕೆಂಬಣ್ಣದ ಪ್ರೈಯುಳ್ಳ, ಅಮಿತ ಸೂರ್ಯ ರಿಂದಲೂ ಹೆಚ್ಚು ಪ್ರಭೆಯುಳ್ಳ ಕಿರಣಗಳಿಂದ ಎಲ್ಲ ಲೋಕಗಳನ್ನೂ ತುಂಬಿ ರುವ, ಜ್ಞಾನಮುದ್ರೆ-ಅಭಯಮುದ್ರೆಗಳನ್ನು ಧರಿಸಿರುವ, ಬ್ರಹ್ಮಾದಿದೇವತಾ ಸಮೂಹಕ್ಕೆ ತತ್ವವನ್ನು ಬೋಧಿಸುತ್ತಿರುವ ಕಪಿಲನನ್ನೂ, ದತ್ತಾತ್ರೇಯ ನನ್ನೂ ಧ್ಯಾನಿಸಬೇಕು.

**ಅಧೃಷ್ಯತಾಜ್ಞಾನಮೋಕ್ಷಪ್ರದೌ[1] ಭಕ್ತೇಷ್ವಿಮೌ ಸದಾ ।**

ಈ ಎರಡು ಮಂತ್ರಗಳೂ ಉಪಾಸಕರಿಗೆ ಪರಾಭವರಾಹಿತ್ಯವನ್ನೂ ಜ್ಞಾನಮೋಕ್ಷಗಳನ್ನೂ ಕೊಡುವ ಮಹಾಮಂತ್ರಗಳು.[2]

## ವೈದಿಕಮಂತ್ರಗಳು

**ಸೂಕ್ತಂ ದೀರ್ಘತಮೋದೃಷ್ಟಂ 'ವಿಷ್ಣೋರ್ನು ಕಮಿ'ತಿ ಪ್ರಭೋಃ ॥**
**ಸರ್ವಾರ್ಥದಂ ಗಾರ್ತ್ಸಮದಂ 'ಯೋ ಜಾತ' ಇತಿ ಚಾಪರಮ್ ।**
**ವಾಸಿಷ್ಠಂ ಚ 'ಪರೋ ಮಾತ್ರಯೋ'ತಿ ಜ್ಞಾನವಿಮುಕ್ತಿದಮ್ ॥ ೫೫ ॥**
**ಭೌವನೀಯಂ ಸರ್ವಕಾಮಮೋಕ್ಷದಂ 'ಯ ಇಮೋ'ತ್ಯಪಿ ।**
**ಏವಮೇವಾಖಿಲಾ ವೇದಾ ಜ್ಞಾತವ್ಯಾ ವಿಷ್ಣುತತ್ಪರಾಃ ॥ ೫೬ ॥**

'ದೀರ್ಘತಮಸ್' ಎಂಬ ಋಷಿಯಿಂದ ದೃಷ್ಟವಾದ, ವಿಷ್ಣುಪ್ರತಿಪಾದಕ ವಾದ 'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ' (ಋ. ೨-೨-೨೪) ಇತ್ಯಾದಿ ಸೂಕ್ತವೂ ಸರ್ವಾರ್ಥಪ್ರದವಾದ ಮಂತ್ರವಾಗಿದೆ. ಗೃತ್ಸಮದ ಎಂಬ ಮುನಿ ಕಂಡಿರುವ 'ಯೋ ಜಾತ ಏವ ಪ್ರಥಮೋ ಮನಸ್ವಾನ್' (ಋ. ೨-೬-೭) ಇತ್ಯಾದಿ ಮಂತ್ರವೂ ಸರ್ವಾರ್ಥಪ್ರದವಾದ ವಿಷ್ಣು ಮಂತ್ರವೇ ಆಗಿದೆ. ಜ್ಞಾನ ಮೋಕ್ಷಗಳನ್ನು ಕೊಡಬಲ್ಲ 'ಪರೋ ಮಾತ್ರಯಾ ತನ್ವಾ ವೃಧಾನ' (ಋ. ೫-೬-೨೪) ಎಂದು ಮೊದಲಾದ ಮಂತ್ರವೂ ವಸಿಷ್ಠ ದೃಷ್ಟವಾದ ವಿಷ್ಣುಮಂತ್ರವೇ ಆಗಿದೆ. ಸಮಸ್ತ ಐಹಿಕ ಕಾಮಿತವನ್ನೂ ಮೋಕ್ಷವನ್ನೂ ಕೊಡಬಲ್ಲ 'ಯ ಇಮಾ ವಿಶ್ವಾ ಭುವನಾನಿ ಜುಹ್ವತ್' (ಋ. ೮-೩-೧೬) ಮೊದಲಾದ ಮಂತ್ರವು ಭೌವನನಾಮಕನಾದ ವಿಶ್ವ

---

೧ 'ಅಧೃಷ್ಯತಾ ಚ ಜ್ಞಾನಂ ಚ ಮೋಕ್ಷಶ್ಚೇತಿ ದ್ವಂದ್ವಃ ।' (ನಾರಾ., ಛಲಾ.)

೨ 'ಜ್ಞಾನಾದೀನ್ಯಂಗಾನಿ । ಆದ್ಯಸ್ಯ ಗಾಯತ್ರೀ ಛಂದಃ । ದ್ವಿತೀಯಸ್ಯ ಬೃಹತೀ ಛಂದ ಇತಿ ಜ್ಞೇಯಮ್ ।' (ನಾರಾ.)

ಕರ್ಮನಿಂದ ದೃಷ್ಟವಾದ ವಿಷ್ಣುಪರವಾದ ಮಂತ್ರವು. ಇವು ನಾಲ್ಕೇ ಎಂದೇಕೆ? ಇದೇ ರೀತಿಯಾಗಿ 'ಅಥ'ದಿಂದ 'ಇತಿ'ಯ ವರೆಗೆ ಎಲ್ಲ ವೇದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತಿವೆ ಎಂದು ತಿಳಿದುಕೊಳ್ಳಬೇಕು.[೧]

## ಲಕ್ಷ್ಮೀಮಂತ್ರಗಳು

**ಸ್ವದೃಷ್ಟಂ ಸೂಕ್ತಮಖಿಲಕಾಮದಂ ಹರಿತುಷ್ಟಿದಮ್ ।**
**ವಾಚೋಽಂಭೃಣ್ಯಾಃ[೩] ಶ್ರಿಯೋಽಂಗಾನಿ ಶ್ರೀರ್ಲಕ್ಷ್ಮೀರ್ಮೇಂದಿರಾ ರಮಾ ॥ ೫೭ ॥**

ವಾಕ್-ಶಕ್ತಿಗೆ ನಿಯಾಮಕಳಾಗಿ 'ವಾಕ್' ಎನ್ನಿಸಿಕೊಂಡ 'ಅಂಭೃಣೀ' ನಾಮಕಳಾದ ಲಕ್ಷ್ಮೀದೇವಿಯನ್ನು ಪ್ರತಿಪಾದಿಸುವ, ಲಕ್ಷ್ಮಿಯಿಂದಲೆ ದೃಷ್ಟವಾದ ಅಂಭೃಣೀಸೂಕ್ತವು (ಋ. ೮-೭-೧೧) ಅಖಿಲಾಭೀಷ್ಟಪ್ರದವಾಗಿದೆ. ಮತ್ತು ಭಗವತ್ಪ್ರೀತಿಸಂಪಾದಕವಾಗಿದೆ. ಈ ಮಂತ್ರಕ್ಕೆ 'ಶ್ರೀಃ', ಲಕ್ಷ್ಮೀಃ', 'ಮಾ', 'ಇಂದಿರಾ', 'ರಮಾ'– ಈ ಪದಗಳಿಂದ ಅಂಗನ್ಯಾಸವನ್ನಾಚರಿಸಬೇಕು.[೪]

**ಕೌಶೇಯ[೫]ಪೀತವಸನಾಮರವಿಂದನೇತ್ರಾಂ**
**ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್[೬] ।**

---

೧ 'ಭುವನನಾಮಕಸ್ಯ ಪುತ್ರೋ ವಿಶ್ವಕರ್ಮಾ ಭೌವನಃ । 'ಕಶ್ಯಪೋ ವಿಶ್ವಕರ್ಮಾಣಂ ಭೌವನಮಭಿಷಿಷೇಚೇ'ತಿ ಶ್ರುತೇಃ । ತೇನ ದೃಷ್ಟಂ ಭೌವನೀಯಮ್ ।' (ಛಲಾ.)

೨ ಈ ಮಂತ್ರಗಳ ಅಂಗನ್ಯಾಸ ಧ್ಯಾನಾದಿಗಳನ್ನು ಪೂರ್ವೋಕ್ತವಿಧಾನದಿಂದ ಊಹಿಸಿಕೊಳ್ಳಬೇಕು.

೩ 'ವಾಙ್ನಿಯಾಮಕತ್ವೇನ ವಾಗಾಖ್ಯಾಯಾಃ, ಅಂ=ಪರಮಾತ್ಮಾನಂ ಬಿಭರ್ತೀತಿ ಅಂಭೃಣೀನಾಮಿಕಾಯಾಃ ಶ್ರಿಯಃ ಪ್ರತಿಪಾದಕಮ್ ।' (ನಾರಾ.)

'ಅಂ=ಅಕಾರವಾಚ್ಯಂ ಬ್ರಹ್ಮ । 'ಅಃ ಇತಿ ಬ್ರಹ್ಮೇ'ತಿ ಶ್ರುತೇಃ ।' (ಛಲಾ.)

೪ ಅಂಗನ್ಯಾಸ—

'ಶ್ರಿಯೇ ಹೃದಯಾಯ ನಮಃ । ಲಕ್ಷ್ಮ್ಯೈ ಶಿರಸೇ ಸ್ವಾಹಾ । ಮಾಯೈ ಶಿಖಾಯೈ ವಷಟ್ । ಇಂದಿರಾಯೈ ಕವಚಾಯ ಹುಮ್ । ರಮಾಯೈ ಅಸ್ತ್ರಾಯ ಫಟ್ ।'

೫ 'ಕೌಶೇಯಂ ಕೃಮಿಕೋಶೋತ್ಥಮ್' (ಅಮರ.)

೬ 'ಚತುರ್ಭುಜಾಂ ಸುವರ್ಣಾಭಾಂ ಸಪದ್ಮೋರ್ಧ್ವಕರದ್ವಯಾಮ್ ।
ದಕ್ಷಿಣಾಭಯಹಸ್ತಾಂ ತಾಂ ವಾಮಹಸ್ತವರಪ್ರದಾಮ್ ॥' (ನಾರಾ. ತಂತ್ರ)

**ಉದ್ಯಚ್ಛತಾರ್ಕಸದೃಶಾಂ ಪರಮಾಂಕಸಂಸ್ಥಾಂ[1]**
**ಧ್ಯಾಯೇದ್ವಿಧೀಶನತಪಾದಯುಗಾಂ ಜನಿತ್ರೀಮ್ ॥ ೫೮ ॥**

ಹಳದಿ ಬಣ್ಣದ ರೇಶಿಮೆಯು ಒಟ್ಟೆಯನ್ನು ಉಟ್ಟಿರುವ, ಕಮಲದಂತೆ ಮುದ್ದಾದ ಕೈಗಳಲ್ಲಿ ಎರಡು ಕಮಲಗಳನ್ನೂ ಅಭಯ ವರಮುದ್ರೆಗಳನ್ನೂ ಧರಿಸಿರುವ, ಅನಂತ ಸೂರ್ಯರು ಉದಿಸಿಬಂದಂತೆ ಬೆಳಗುವ, ಬ್ರಹ್ಮರುದ್ರರಿಂದ ನಮಸ್ಕೃತವಾದ ಚರಣಗಳುಳ್ಳ, ಪರಮಪುರುಷನ ತೊಡೆಯಲ್ಲಿ ಕುಳಿತಿರುವ, ಲೋಕಜನನಿಯಾದ, ತಾವರೆಗಣ್ಣಿನ ಶ್ರೀದೇವಿಯನ್ನು ಧ್ಯಾನಿಸಬೇಕು.

**ಲಜ್ಜಾಬೀಜಂ ಚ ತದ್ಬೀಜಂ ತಸ್ಯಾ ಏವಾಭಿಧಾಯಕಮ್[2] ।**

---

೧ 'ವಕ್ಷಸಿ ಲಕ್ಷಣಭೂತಾ ಲಕ್ಷ್ಮೀಃ । ಅಂಕಾಶ್ರಿತಾ ಶ್ರೀಃ ।' (ತತ್ತ್ವದೀಪಿಕಾ)

೨ ತಥಾಚ ಮಂತ್ರೌ— 'ಹ್ರೀಂ' ಇತಿ 'ಶ್ರೀಂ' ಇತಿ ಚ ।

'ಅಥ ವಕ್ಷ್ಯೇ ಶ್ರಿಯೋ ಮಂತ್ರಾನ್ ಶ್ರೀಸೌಭಾಗ್ಯಫಲಪ್ರದಾನ್ ।
ಯಸ್ಯಾಃ ಕಟಾಕ್ಷಮಾತ್ರೇಣ ತ್ರೈಲೋಕ್ಯಮಭಿವರ್ಧತೇ ॥
ವಾಂತಂ ವಹ್ನಿಸಮಾರೂಢಂ ವಾಮನೇತ್ರೇಂದುಸಂಯುತಮ್ ।
ಬೀಜಮೇತಚ್ಛ್ರಿಯಃ ಪ್ರೋಕ್ತಂ ಚಿಂತಾಮಣಿರಿವಾಪರಃ ॥' (ಶಾರದಾ.)

['ವಾಂತಂ=ಶಃ । ವಹ್ನಿಃ=ರೇಫಃ । ವಾಮನೇತ್ರಂ=ಈಕಾರಃ । ಇಂದುಃ=ಬಿಂದುಃ ।' (ಪದಾರ್ಥಾ.)]

ಇಪರ ಋಷಿ, ಛಂದಸ್ಸು ಮೊದಲಾದುವನ್ನೂ ತಂತ್ರಾಂತರದಿಂದ ತಿಳಿದುಕೊಳ್ಳಬಹುದು—

'ಭೃಗುರಸ್ಯ ಮುನಿಃ ಪ್ರೋಕ್ತಶ್ಛಂದಶ್ಚಾಸ್ಯ ನಿಚೃನ್ಮತಮ್ ।
ದೇವತಾ ಗದಿತಾ ಲಕ್ಷ್ಮೀರ್ಭೋಗಮೋಕ್ಷಫಲಪ್ರದಾ ॥ (ನಾರಾ. ತಂತ್ರ)
ಋಷಿರ್ಭೃಗುರ್ನಿಚೃಚ್ಛಂದೋ ದೇವತಾ ಶ್ರೀಃ ಸಮೀರಿತಾ ।
ಷಡ್ದೀರ್ಘಯುಕ್ತಬೀಜೇನ ಕುರ್ಯಾದಂಗಾನಿ ಷಟ್ ಕ್ರಮಾತ್ ॥
ಕಾಂತ್ಯಾ ಕಾಂಚನಸನ್ನಿಭಾಂ ಹಿಮಗಿರಿಪ್ರಖ್ಯೈಶ್ಚತುರ್ಭಿರ್ಗಜೈಃ
ಹಸ್ತೋತ್ಕ್ಷಿಪ್ತಹಿರಣ್ಮಯಾಮೃತಘಟೈರಾಸಿಚ್ಯಮಾನಾಂ ಶ್ರಿಯಮ್ ।
ಬಿಭ್ರಾಣಾಂ ವರಮಬ್ಜಯುಗ್ಮಮಭಯಂ ಹಸ್ತೈಃ ಕಿರೀಟೋಜ್ಜ್ವಲಾಂ
ಕ್ಷೌಮಾಬದ್ಧನಿತಂಬಬಿಂಬಲಸಿತಾಂ ವಂದೇಽರವಿಂದಾಸ್ಥಿತಾಮ್ ॥'
(ಶಾರದಾ.)

ಲಜ್ಜಾಬೀಜವೂ ಶಾರದಾತಿಲಕದಲ್ಲಿ ಉಕ್ತವಾಗಿದೆ—

'ಅಥ ವಕ್ಷ್ಯೇ ಜಗದ್ಧಾತ್ರೀಮಧುನಾ ಭುವನೇಶ್ವರೀಮ್ ।
ಬ್ರಹ್ಮಾದಯೋಽಪಿ ಯಾಂ ಜ್ಞಾತ್ವಾ ಲೇಭಿರೇ ಶ್ರಿಯಮೂರ್ಜಿತಾಮ್ ॥

**ಪಾಶಾಂಕುಶೌ ರಕ್ತವಸ್ತ್ರಂ ಲಜ್ಜಾಬೀಜೇ ವಿಶಿಷ್ಯತೇ¹ ॥ ೫೯ ॥**
**ಅಮಧ್ಯಯುಗ್ಮಸ್ವರಗತೈರ್ನ್ಯಸೇದಂಗಮುದಾಹೃತಮ್² ।**

ಲಜ್ಜೆ ಎಂಬ ಅರ್ಥವನ್ನು ಕೊಡುವ, 'ಹ್ರೀ' ಎಂಬ ಅಕ್ಷರವುಳ್ಳ ಭುವನೇಶೀ ಬೀಜಾಕ್ಷರ ಮತ್ತು 'ಶ್ರೀ' ಬೀಜಾಕ್ಷರ ಇವೆರಡೂ ಲಕ್ಷ್ಮೀದೇವಿಯನ್ನು

---

ನಕುಲೀಶೋಽಗ್ನಿಮಾರೂಢೋ ವಾಮನೇತ್ರಾರ್ಧಚಂದ್ರವಾನ್ ।
ಬೀಜಂ ತಸ್ಯಾ ಯಥಾಖ್ಯಾತಂ ಸೇವಿತಂ ಸಿದ್ಧಿಕಾಂಕ್ಷಿಭಿಃ ॥
ಋಷಿಃ ಶಕ್ತಿರ್ಭವೇಚ್ಛಂದೋ ಗಾಯತ್ರೀ ದೇವತಾ ಮನೋಃ ।
ಕಥಿತಾ ಸ್ವರಸಂಘೇನ ಸೇವಿತಾ ಭುವನೇಶ್ವರೀ ।
ಷಡ್ದೀರ್ಘಯುಕ್ತಬೀಜೇನ ಕುರ್ಯಾದಂಗಾನಿ ಷಟ್‌ಕ್ರಮಾತ್ ॥'
(ಶಾರದಾ.)

['ನಕುಲೀಶಃ=ಹಕಾರಃ । ಅಗ್ನಿಃ=ರೇಫಃ । ವಾಮನೇತ್ರಂ=ಈಕಾರಃ । ಶಕ್ತಿರಿತಿ ವಶಿಷ್ಠಪುತ್ರಃ ।' (ಪದಾರ್ಥಾ.)]

'ಸ ಶ್ಲಾಘ್ಯಃ ಸ ಗುಣೀ ಧನ್ಯಃ ಸ ಕುಲೀನಃ ಸ ಬುದ್ಧಿಮಾನ್ ।
ಸ ಶೂರಃ ಸ ಚ ವಿಕ್ರಾಂತೋ ಯಸ್ತ್ವಯಾ ದೇವಿ ವೀಕ್ಷಿತಃ ॥' (ವಿಷ್ಣುಪು.)
'ಮತ್ಸಮಃ ಪುರುಷೋ ನಾಸ್ತಿ ತ್ವತ್ಸಮಾ ನಾಸ್ತಿ ಚಾಂಗನಾ ।
ಮಾಯಾಬೀಜಸಮೋ ಮಂತ್ರೋ ನ ಭೂತೋ ನ ಭವಿಷ್ಯತಿ ॥'
(ಭುವನೇಶ್ವರೀಪಾರಿಜಾತ)

೧ ಮೇಲಿನ ಶ್ಲೋಕದಲ್ಲಿ ಹೇಳಿರುವ ವ್ಯತ್ಯಾಸದಿಂದ ಕೂಡಿದ ಲಜ್ಜಾಬೀಜದ ಧ್ಯಾನ—
'ಕೌಶೇಯರಕ್ತವಸನಾಮರವಿಂದನೇತ್ರಾಂ
ಪಾಶಾಂಕುಶಾಭಯವರೋದ್ಯತಪದ್ಮಹಸ್ತಾಮ್ ।'
ಉಳಿದೆರಡು ಪಾದಗಳು ಹಿಂದಿನಂತೆಯೆ.

ಶಾರದಾತಿಲಕದ ಧ್ಯಾನ ಕೆಳಗಿನಂತಿದೆ—
'ಉದ್ಯದಿನದ್ಯುತಿಮಿಂದುಕಿರೀಟಾಂ ತುಂಗಕುಚಾಂ ನಯನತ್ರಯಯುಕ್ತಾಮ್ ।
ಸ್ಮೇರಮುಖೀಂ ವರದಾಂಕುಶಪಾಶಾಭೀತಿಕರೀಂ ಪ್ರಭಜೇತ್ ಭುವನೇಶೀಮ್ ॥'

ಮೇಲಿನ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಪಾಶ, ಕೆಳಬದಿಯ ಬಲಗೈಯಲ್ಲಿ ಅಭಯ, ಎಡಗೈಯಲ್ಲಿ ವರ—ಈ ತೆರನಾಗಿ ಧ್ಯಾನಿಸಬೇಕು—

'ದಕ್ಷಿಣೇ ಚಾಂಕುಶಂ ದದ್ಯಾದ್ವಾಮೇ ಪಾಶಂ ಪ್ರದಾಪಯೇತ್ ।
ವರದಂ ವಾಮತೋ ದದ್ಯಾದಭಯಂ ದಕ್ಷಿಣೇ ಕರೇ ॥' (ಮಹಾಸಮ್ಮೋಹನ.)

೨ ಮಧ್ಯೌ ಯುಗ್ಮಸ್ವರೌ=ಋೂ ಲೃಾ ಇತ್ಯೇತೌ, ತದ್ಭಿನ್ನಾ ಅಮಧ್ಯಾ ಯೇ ಯುಗ್ಮಸ್ವರಾ ಆದೀದೂದೈದೌತೋ ವಿಸರ್ಗಶ್ಚ । ತದನುಗೇನ ತೇನ ಬೀಜಾಕ್ಷರೇಣ ನ್ಯಾಸಃ ।

ಪ್ರತಿಪಾದಿಸುವ ಮಂತ್ರಗಳೇ ಆಗಿವೆ. ಭುವನೇಶೀ ಬೀಜಾಕ್ಷರದಲ್ಲಿ ಪದ್ಮದ್ವಯದ ಬದಲು ಪಾಶ-ಅಂಕುಶಗಳನ್ನೂ, ಪೀತಾಂಬರದ ಬದಲು ರಕ್ತಾಂಬರವನ್ನೂ ಧ್ಯಾನಿಸಬೇಕು ಎಂಬುದಿಷ್ಟೇ ವಿಶೇಷ. ಸರಿಸಂಖ್ಯೆಯ ಸ್ವರಗಳಾದ ಆ, ಈ, ಊ, ೠ, ೡ, ಐ, ಔ, ಅಃ—ಈ ಎಂಟು ಅಕ್ಷರಗಳಲ್ಲಿ ಮಧ್ಯದ ೠ, ೡ—ಈ ಎರಡು ಸ್ವರಗಳನ್ನು ಬಿಟ್ಟು ಉಳಿದ ೬ ಸ್ವರಗಳಿಂದ ಕೂಡಿದ ಮಂತ್ರಾಕ್ಷರದಿಂದಲೇ ಅಂಗನ್ಯಾಸವನ್ನೆಸಗಬೇಕು.[೧]

### ಭೂಬೀಜ—ದುರ್ಗಾಬೀಜ

**ಸತ್ತಾಬೀಜಂ ಚ ದುರ್ಬೀಜಂ ತದ್ವದೇವ ಪ್ರಕೀರ್ತಿತಮ್[೨] ॥ ೬೦ ॥**
**ವರ್ಣಃ ಶ್ಯಾಮೋ ವಿಶೇಷೋಽತ್ರ ತಾಂಬೂಲಂ ನೀಲಮುತ್ಪಲಮ್ ।**
**ಚಕ್ರಶಂಖೌ ತರ್ಜನಂ[೩] ಚ ಶೂಲಮಿತ್ಯಪರತ್ರ ಚ[೪] ॥ ೬೧ ॥**

---

೧ ಲಜ್ಜಾಬೀಜದ ನ್ಯಾಸಕ್ರಮ—

‘ಹ್ರಾಂ ಹೃದಯಾಯ ನಮಃ । ಹ್ರೀಂ ಶಿರಸೇ ಸ್ವಾಹಾ । ಹ್ರೂಂ ಶಿಖಾಯೈ ವಷಟ್ । ಹ್ರೈಂ ಕವಚಾಯ ಹುಮ್ । ಹ್ರೌಂ ನೇತ್ರಾಭ್ಯಾಂ ವೌಷಟ್ । ಹ್ರಃ ಅಸ್ತ್ರಾಯ ಫಟ್ ।’

ಶ್ರೀಬೀಜದ ನ್ಯಾಸಕ್ರಮ—

‘ಶ್ರಾಂ ಹೃದಯಾಯ ನಮಃ । ಶ್ರೀಂ ಶಿರಸೇ ಸ್ವಾಹಾ । ಶ್ರೂಂ ಶಿಖಾಯೈ ವಷಟ್ । ಶ್ರೈಂ ಕವಚಾಯ ಹುಮ್ । ಶ್ರೌಂ ನೇತ್ರಾಭ್ಯಾಂ ವೌಷಟ್ । ಶ್ರಃ ಅಸ್ತ್ರಾಯ ಫಟ್ ।’

೨ ತತ್ರ ಭೂಬೀಜಮ್— ‘ಷ್ಣೈಂ’ ಇತಿ । ದುರ್ಗಾಬೀಜಮ್— ‘ಕ್ಷ್ರಃ’ ಇತಿ ।
ಶಾರದಾತಿಲಕದಲ್ಲಿ ‘ಕ್ಷ್ರೈಂ’ ಎಂಬ ದುರ್ಗಾಬೀಜವನ್ನೂ ಉಲ್ಲೇಖಿಸಿದ್ದಾರೆ—
‘........ಅತ್ರಿಃ ಕರ್ಣಬಿಂದ್ವಾಢ್ಯೋ ಭೂಯೋಽಸೌ ಸರ್ಗವಾನ್ ಭವೇತ್ ।’

[‘ಅತ್ರಿಃ=ದಕಾರಃ, ಕರ್ಣಃ=ಉಕಾರಃ, ಬಿಂದುಃ=ಅನುಸ್ವಾರಃ, ಏತದಾಢ್ಯ ಇತ್ಯನೇನ ‘ಕ್ಷ್ರೈಂ’ । ಭೂಯೋಽಸೌ=ದುಕಾರಃ ಸರ್ಗವಾನ್=ವಿಸರ್ಗಯುಕ್ತಃ । ಅನೇನೈತಾದೃಶಮಪಿ ಬೀಜಮಿತಿ ಸೂಚಿತಮ್ ।’ (ಪದಾರ್ಥಾ.)]

೩ ‘ತರ್ಜನ್ಯೇಕಾಕಿನೀ ತೂರ್ಧ್ವಾ ಶೇಷಾಃ ಸಂಮಿಲಿತಾಸ್ತ್ವಧಃ ।
ಮುದ್ರೇಯಂ ತರ್ಜನೀ ಪ್ರೋಕ್ತಾ ವಕ್ತುಃ ಶ್ರೋತುಸ್ತು ಭೀತಿದಾ ॥’

೪ ‘ದೂರ್ವೋಪಮಾಂ ತ್ರಿನೇತ್ರಾಂ ಚ ಶಂಖಚಕ್ರಸಮನ್ವಿತಾಮ್ ।
ಶೂಲತರ್ಜನಸಂಯುಕ್ತಾಂ ಧ್ಯಾಯೇದ್ದುರ್ಗಾಮಭೀಷ್ಟದಾಮ್ ॥’

ವೇದಸೇ ಸುನವಾಮ ಸೋಮಂ' (ಋ. ೧-೭-೭) ಇತ್ಯಾದಿ ಋಙ್ಮಂತ್ರ ದುರ್ಗಾದೇವತಾಕವೇ ಆಗಿದೆ. ಆದರೆ ಈ ಮಂತ್ರ ಧ್ಯೇಯವಾದ ದುರ್ಗಾ ಮೂರ್ತಿ ಬೆಂಕಿಯಂತೆ ಬೆಳಗುವ ರೂಪವುಳ್ಳದ್ದು.

**ತ್ರಿನೇತ್ರತ್ವಂ ಚ ದುರ್ಗಾಯಾಃ ಪ್ರಾಯಃ[1] ಸರ್ವತ್ರ ಕಥ್ಯತೇ[2] ।**
**ಪಾದೈಃ ಸಮಸ್ತೇನ[3] ತಥಾ ಷಡರ್ಣೇನಾಂಗಮುಚ್ಯತೇ[4] ॥ ೬೩ ॥**

ದುರ್ಗೆಯನ್ನು ಧ್ಯಾನಮಾಡುವಾಗ ಆಕೆ ಮೂರು ಕಣ್ಣುಗಳುಳ್ಳವಳು ಎಂದು ಧ್ಯಾನಮಾಡುವುದೇ ಹೆಚ್ಚು. ವೈದಿಕ ದುರ್ಗಾಮಂತ್ರದ ಅಂಗ ನ್ಯಾಸವನ್ನು ಮಂತ್ರದ ನಾಲ್ಕು ಪಾದಗಳು ಮತ್ತು ಇಡಿಯ ಮಂತ್ರ ಇವು

---

೧ 'ವಿದ್ಯಾಪೇಕ್ಷಯಾ ಜಪಾದಿಕರಣಸಮಯೇ ಅತಿಕೋಪವ್ಯಂಜಕತ್ರಿನೇತ್ರತ್ವ-ಧ್ಯಾನಸ್ಯಾಕರ್ತವ್ಯತ್ವಾತ್ 'ಪ್ರಾಯಃ' ಇತ್ಯುಕ್ತಮಿತ್ಯಾಹುಃ' (ಛಲಾ.)

೨ ತಥಾ ಹಿ ಶಾರದಾಯಾಂ ದುರ್ಗಾಧ್ಯಾನಾನಿ—

'ಸಿಂಹಸ್ಥಾ ಶಶಿಶೇಖರಾ ಮರಕತಪ್ರಖ್ಯೈಶ್ಚತುರ್ಭಿರ್ಭುಜೈಃ
ಶಂಖಂ ಚಕ್ರಧನುಃಶರಾಂಶ್ಚ ದಧತೀ ನೇತ್ರೈಸ್ತ್ರಿಭಿಃ ಶೋಭಿತಾ ।
ಆಮುಕ್ತಾಂಗದಹಾರಕಂಕಣರಣತ್ಕಾಂಚೀರಣನ್ನೂಪುರಾ
ದುರ್ಗಾ ದುರ್ಗತಿಹಾರಿಣೀ ಭವತು ವೋ ರತ್ನೋಲ್ಲಸತ್ಕುಂಡಲಾ ॥'
'ನೌಮಿ ಭಾಲವಿಲೋಚನಾಂ ಮಹಿಷೋತ್ತಮಾಂಗನಿಷೇದುಷೀಮ್ ।'
'ಶಂಖಂ ಚಕ್ರಂ ಕೃಪಾಣಂ ತ್ರಿಶಿಖಮಪಿ ಕರೈರುದ್ವಹಂತೀಂ ತ್ರಿನೇತ್ರಾಮ್ ।'
'ಚಂದ್ರೋತ್ತಂಸಾಂ ತ್ರಿನೇತ್ರಾಮ್'
'ಸೌವರ್ಣಾಂಬುಜಮಧ್ಯಗಾಂ ತ್ರಿನಯನಾಂ ಸೌದಾಮಿನೀಸನ್ನಿಭಾಮ್'
'ಭಾಲನೇತ್ರವಿಭೂಷಣಾಂ ಭಯದಾಯಿಸಿಂಹನಿಷೇದುಷೀಮ್'

೩ 'ಜಾತವೇದಸೇ ಸುನವಾಮ ಸೋಮಂ' ಹೃದಯಾಯ ನಮಃ । 'ಅರಾತೀ-ಯತೋ ನಿ ದಹಾತಿ ವೇದಃ' ಶಿರಸೇ ಸ್ವಾಹಾ । 'ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ' ಶಿಖಾಯೈ ವಷಟ್ । 'ನಾವೇವ ಸಿಂಧುಂ ದುರಿತಾತ್ಯಗ್ನಿಃ' ಕವಚಾಯ ಹುಮ್ । 'ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ । ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ' ಅಸ್ತ್ರಾಯ ಫಟ್ । ಇತಿ ಪಂಚಾಂಗನ್ಯಾಸಃ ।

೪ ದುರ್ಗಾಷಡಕ್ಷರದ ಅಂಗನ್ಯಾಸ—

'ದುಂ ಹೃದಯಾಯ ನಮಃ । ದುಂ ಶಿರಸೇ ಸ್ವಾಹಾ । ಗಾಂ ಶಿಖಾಯೈ ವಷಟ್ । ಯೈಂ ಕವಚಾಯ ಹುಮ್ । ನಂ ನೇತ್ರತ್ರಯಾಯ ವೌಷಟ್ । ಮಂ ಅಸ್ತ್ರಾಯ ಫಟ್ ।'

ಗಳಿಂದ ಆಚರಿಸಬೇಕು. ದುರ್ಗಾಷಡಕ್ಷರಮಂತ್ರಕ್ಕೆ ಮಂತ್ರದ ೬ ಅಕ್ಷರ ಗಳಿಂದಲೆ ಅಂಗನ್ಯಾಸವನ್ನಾಚರಿಸಬೇಕು.

**ರಮಾಯಾ ಏವ ರೂಪಾಣಿ ತ್ವೇತಾನಿ ಹಿ ವಿದೋ ವಿದುಃ[೧] ।**
**ಮುಖ್ಯತೋ ಜಾಮದಗ್ನ್ಯಸ್ತು ದೇವತಾಸ್ಯ ಮನೋಃ ಸ್ಮೃತಃ ॥**

ಶ್ರೀ, ಭೂ, ದುರ್ಗೆ ಇವೆಲ್ಲ ರಮೆಯ ರೂಪಗಳೇ ಆಗಿವೆಯೆಂದು ಶಾಸ್ತ್ರ ಬಲ್ಲವರು ಅನ್ನುತ್ತಾರೆ. 'ಜಾತವೇದಸೇ ಸುನವಾಮ ಸೋಮಂ' ಎಂಬ ದುರ್ಗಾ ಮಂತ್ರಕ್ಕೆ ಮುಖ್ಯ ಪ್ರತಿಪಾದ್ಯದೇವತೆ ಪರಶುರಾಮರೂಪಿಯಾದ ಶ್ರೀಹರಿಯೇ ಆಗಿದ್ದಾನೆ. ಅನಂತರ ದುರ್ಗೆಯೂ ಅದರ ದೇವತೆಯಾಗಿ ದ್ದಾಳೆ.

## ಬ್ರಾಹ್ಮಮಂತ್ರಗಳು

**ಹಿರಣ್ಯಗರ್ಭಸೂಕ್ತಂ ಚ ಭೃಗುದೃಷ್ಟಂ ಪ್ರಕೀರ್ತಿತಮ್ ।**
**ಬ್ರಹ್ಮಧಾತೃವಿರಿಂಚಾಜಪಾದ್ಮೈರಂಗಮುದಾಹೃತಮ್ ॥ ೭೫ ॥**

ಭೃಗುಮುನಿಯಿಂದ ದೃಷ್ಟವಾದ 'ಹಿರಣ್ಯಗರ್ಭಃ ಸಮವರ್ತತಾಗ್ರೇ' (ಋ. ೮-೭-೩) ಇತ್ಯಾದಿ ಸೂಕ್ತವು ಬ್ರಹ್ಮದೇವತಾಕವಾದ ಮಂತ್ರವಾಗಿದೆ. 'ಬ್ರಹ್ಮ', 'ಧಾತೃ', 'ವಿರಿಂಚ', 'ಅಜ', 'ಪಾದ್ಮ'—ಈ ೫ ಪದಗಳಿಂದ ಅಂಗ ನ್ಯಾಸ ವಿಹಿತವಾಗಿದೆ.[೨]

**ಧ್ಯಾಯೇನ್ನಿಷಣ್ಣಮಜಮಚ್ಯುತನಾಭಿಪದ್ಮೇ**
**ಪ್ರೋದ್ಯದ್ದಿವಾಕರಸಮೂಹನಿಕಾಶಮಗ್ರ್ಯಮ್ ।**
**ಮಾತೃಪ್ರಕಾರಕರ[೩]ಮುತ್ತಮಕಾಂತಿಮದ್ಭಿಃ**
**ವಕ್ತ್ರೈಃ ಸೃಜಂತಮಖಿಲೈಃ ಪರಮಾರ್ಥವಿದ್ಯಾಮ್ ॥ ೭೬ ॥**

ಶ್ರೀಹರಿಯ ನಾಭಿಕಮಲದಲ್ಲಿ ಕುಳಿತುಕೊಂಡಿರುವ, ಉದಿಸುತ್ತಿರುವ

---

೧ 'ದುರ್ಗಾಮಂತ್ರಸ್ಯ ಲಕ್ಷ್ಮೀಮಂತ್ರಮಧ್ಯೇ ಕಥನಮಯುಕ್ತಂ, ದುರ್ಗಾ-ಯಾ ಗೌರೀತ್ವಪ್ರಸಿದ್ಧೇರಿತ್ಯತ ಆಹ-'ರಮಾಯಾ ಏವೇ'ತಿ' । (ಛಲಾ.)

೨ ನ್ಯಾಸಕ್ರಮ—

'ಬ್ರಹ್ಮಣೇ ಹೃದಯಾಯ ನಮಃ । ಧಾತ್ರೇ ಶಿರಸೇ ಸ್ವಾಹಾ । ವಿರಿಂಚಾಯ ಶಿಖಾಯೈ ವಷಟ್ । ಅಜಾಯ ಕವಚಾಯ ಹುಮ್ । ಪಾದ್ಮಾಯ ಅಸ್ತ್ರಾಯ ಫಟ್ ।'

೩ 'ಮಾತುಃ=ಲಕ್ಷ್ಮ್ಯಾಃ ಪ್ರಕಾರಾಃ=ಕರಸದೃಶಾಃ ಕರಾಶ್ಚತ್ವಾರೋ ಯಸ್ಯ' (ಛಲಾ.)

ಸೂರ್ಯರ ಮೊತ್ತದಂತೆ ಉಜ್ಜ್ವಲವಾದ, ಸರ್ವಜೀವೋತ್ತಮನಾದ, ತನ್ನ ತಾಯಿಯಾದ ರಮಾದೇವಿಯಂತೆ ತಾನೂ ಕೈಗಳಲ್ಲಿ ಎರಡು ಕಮಲಗಳನ್ನೂ ವರಾಭಯಮುದ್ರೆಗಳನ್ನೂ ಧರಿಸಿರುವ, ಅತ್ಯಂತ ಸುಂದರಗಳಾದ ನಾಲ್ಕೂ ಮುಖಗಳಿಂದ ವರ್ಣಪದಮಯವನ್ನು ಬೋಧಿಸುವ ವೇದಾದಿಗಳನ್ನು ಉಚ್ಚರಿಸುತ್ತಿರುವ, ಅಕಾರವಾಚ್ಯನಾದ ಹರಿಯಿಂದ ಹುಟ್ಟಿ 'ಅಜ' ಎನ್ನಿಸಿಕೊಂಡ ಚತುರ್ಮುಖನನ್ನು ಧ್ಯಾನಿಸಬೇಕು.

### ಚತುರ್ಮುಖಪಂಚಾಕ್ಷರ–ಅಷ್ಟಾಕ್ಷರ

**ಸ್ವಯಮುದ್ದೇಶನತಿಮಾಂಸ್ತಸ್ಯ ಪಂಚಾಕ್ಷರೋ ಮನುಃ[1] ।**
**ಸ್ವಯಮೇವಾಪರೋಽಷ್ಟಾರ್ಣಸ್ತಾದೃಶಃ ಸಂಪ್ರಕೀರ್ತಿತಃ[2] ॥ ೩೭ ॥**

'ನಮಃ' ಶಬ್ದದಿಂದ ಕೂಡಿದ ಚತುರ್ಥ್ಯಂತವಾದ 'ಬ್ರಹ್ಮ' ಶಬ್ದವೇ ಬ್ರಹ್ಮಪಂಚಾಕ್ಷರ ಮಂತ್ರ. 'ಬ್ರಹ್ಮ'ಪದದ ಬದಲು ಮಂತ್ರದಲ್ಲಿ 'ಹಿರಣ್ಯಗರ್ಭ'ಪದವನ್ನು ಸೇರಿಸಿದಾಗ ಅದು ಅಷ್ಟಾಕ್ಷರ ಮಂತ್ರವಾಗುವುದು.

### ಮುಖ್ಯಪ್ರಾಣಮಂತ್ರ

**ಬಳಾದ್ಯಂ ಭೃಗುಣಾ ಸ್ಪೃಷ್ಟಂ ಪ್ರಾಣಾಗ್ನೇಃ[3] ಸೂಕ್ತಮುಚ್ಯತೇ ।**
**ಪ್ರಾಣಾದ್ಯೈಃ ಪಂಚಭಿಸ್ತಸ್ಯಾಪ್ಯಂಗಾನ್ಯುಕ್ತಾನಿ ಸೂರಿಭಿಃ ॥ ೩೮ ॥**

---

೧ ತಥಾಚ ಮಂತ್ರಃ— 'ब्रह्मणे नमः' ।

೨ ಮಂತ್ರಪ್ರಕಾರಸ್ತು— 'हिरण्यगर्भाय नमः' ।

'ಅತ್ರಾಪಿ ಪೂರ್ವವದೇವಾಂಗಾದೀನಿ' (ಛಲಾ.)

೩ 'ಪ್ರಾಣಾಗ್ನೇಃ, ಪ್ರಾಣಃ=ಸರ್ವಜೀವನಹೇತುಃ, ಅಗ್ನಿಃ=ಸ್ವತೋ ಗಮನಾಸಮರ್ಥತ್ವಾದಗಶಬ್ದವಾಚ್ಯಸ್ಯ ಜಗತೋ ನೇತಾ, ತಸ್ಯ ಪ್ರಾಣಾಗ್ನಿನಾಮ್ನೋ ಮುಖ್ಯಪ್ರಾಣಸ್ಯ ।' (ಛಲಾ )

ಇಲ್ಲಿ ವಾಯುಮಂತ್ರ ಎನ್ನುವ ಬದಲು ಪ್ರಾಣಾಗ್ನಿಮಂತ್ರ ಎಂದು ಆಚಾರ್ಯರು ಬರೆಯಲು ಒಂದು ಕಾರಣವಿದೆ. ಈ ಮಂತ್ರ ಅಗ್ನಿಮಂತ್ರವೆಂದೂ ಪ್ರಸಿದ್ಧಿಯಿದೆ. ಆಚಾರ್ಯರು ಇದು ವಾಯುಮಂತ್ರ ಎಂದಾಗ ಈ ಎರಡು ತೆರನಾದ ಪ್ರಮಾಣದಿಂದ ಸಾಮಾನ್ಯಜನ ವ್ಯಾಕುಲರಾಗುವ ಸಂಭವವುಂಟು ಎಂತಲೇ ಈ ಶಂಕೆಗೆ ಎಡೆಯೇ ಸಿಗದಂತೆ– ಇದು 'ಪ್ರಾಣಾಗ್ನಿಮಂತ್ರ' ಎಂದು ಆಚಾರ್ಯರು ನಿರ್ದೇಶಿಸಿದ್ದಾರೆ. ಆದರಿಂದ ಅಗ್ನಿಮಂತ್ರ ಎಂಬ ಪ್ರಸಿದ್ಧಿ ವಾಯುಮಂತ್ರ ಎನುವ ಪಕ್ಷಕ್ಕೆ ವಿರೋಧಿಯಲ್ಲ. ವಾಯುವಿಗೆ ಪ್ರಾಣಾಗ್ನಿ ಎಂಬ ಹೆಸರನ್ನು ಉಪನಿಷತ್ತುಗಳಲ್ಲಿ ಕಾಣಬಹುದು—

'ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ ।' (ಷಟ್ಪ್ರಶ್ನ.)

ಭೃಗುಋಷಿಯಿಂದ ದೃಷ್ಟವಾದ 'ಮಹಿತ್ವಾ ತದಸ್ಯ ಪ್ರೇಧಾಯ ಪರ್ವತಂ' (ಋ. ೩-೩-೮) ಇತ್ಯಾದಿ ಸೂಕ್ತದ ಸರ್ವಜಗತ್ತ್ರಾಣನೂ, ಸರ್ವಜಗನ್ನೇತಾರನೂ ಆಗಿದ್ದ ಪ್ರಾಣಾಗ್ನಿ ಎನ್ನಿಸಿಕೊಂಡ ಮುಖ್ಯಪ್ರಾಣನನ್ನು ಪ್ರತಿಪಾದಿಸುವ ಮಂತ್ರವಾಗಿದೆ. ಈ ಮಂತ್ರಕ್ಕೆ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಈ ಪಂಚಪದಗಳಿಂದ ಅಂಗನ್ಯಾಸವನ್ನು ಮಾಡಬೇಕೆಂದು ವಿದ್ವಾಂಸರ ನಿರ್ದೇಶವಿದೆ.[1]

**ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ**
**ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್[2] ।**
**ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ**
**ಪ್ರಾಣಂ ಯಥೇಷ್ಟತನುಮುನ್ನತಕಾರ್ಯಶಕ್ತಿಮ್ ॥ ೬೯ ॥**

ಉದಿಸುತ್ತಿರುವ ಸೂರ್ಯರ ಸಮೂಹದಂತೆ ಬೆಳಗುವ, ಶ್ರೀಹರಿಯ ತೊಡೆಯಲ್ಲಿ ಕುಳಿತುಕೊಂಡು ನಿರಂತರವೂ ಅವನ ಸ್ತುತಿಯನ್ನು ಗೈಯುತ್ತಿರುವ, ಎರಡು ಕೈಗಳಿಂದ ಗದೆಯನ್ನೂ ಅಭಯಮುದ್ರೆಯನ್ನೂ ಧರಿಸಿ ಇನ್ನೆರಡು ಕೈಗಳನ್ನು ಜೋಡಿಸಿಕೊಂಡು ಭಗವಂತನನ್ನು ನಮಿಸುತ್ತಿರುವ, ಅದ್ಭುತಕಾರ್ಯಸಮರ್ಥನಾದ, ಬಹುರೂಪನಾದ ಪ್ರಾಣದೇವನನ್ನು ಧ್ಯಾನಿಸಬೇಕು.

## ಪ್ರಾಣಾಪಾನಾದಿಪಂಚಮಂತ್ರಗಳು

**ಪ್ರಾಣಾದ್ಯಾಃ ಪಂಚ ಮಂತ್ರಾಶ್ಚ[3] ತಸ್ಯ ದೇವಸ್ಯ ವಾಚಕಾಃ ।**
**ಉಚ್ಯತೇ ಹರಿರಪ್ಯೇತೈಃ ಸಾಕ್ಷಾನ್ನಾರಾಯಣಾದಿಕಃ ॥ ೭೦ ॥**

ಪ್ರಾಣಾಪಾನಾದಿಪಂಚಪದಘಟಿತಗಳಾದ ಮಂತ್ರಗಳೂ ಕೂಡ ಮುಖ್ಯಪ್ರಾಣಮಂತ್ರಗಳೇ ಆಗಿವೆ. ಈ ಐ ಮಂತ್ರಗಳಿಂದ ನಾರಾಯಣವಾಸುದೇವ

---

೧ ಅಂಗನ್ಯಾಸದ ರೀತಿ—

'ಪ್ರಾಣಾಯ ಹೃದಯಾಯ ನಮಃ । ಅಪಾನಾಯ ಶಿರಸೇ ಸ್ವಾಹಾ । ವ್ಯಾನಾಯ ಶಿಖಾಯೈ ವಷಟ್ । ಉದಾನಾಯ ಕವಚಾಯ ಹುಮ್ । ಸಮಾನಾಯ ಅಸ್ತ್ರಾಯ ಫಟ್ ।'

೨ 'ನುತೌ=ಸ್ತುತೌ ವಿಷಯೇ ನಿತ್ಯಂ=ನಿರಂತರಂ ವಚಸಾಂ ಪ್ರವೃತ್ತಿರ್ಯಸ್ಯ' (ಛಲಾ.)

೩ ತಥಾಚ ಮಂತ್ರಾಃ— 'प्राणाय नमः' । 'अपानाय नमः' । 'व्यानाय नमः' । 'उदानाय नमः' । 'समानाय नमः' ।

ಸಂಕರ್ಷಣಪ್ರದ್ಯುಮ್ನಾನಿರುದ್ಧನಾಮಕನಾದ ಪಂಚರೂಪಿ ನಾರಾಯಣನೇ ಮುಖ್ಯ ಪ್ರತಿಪಾದ್ಯನಾಗಿದ್ದಾನೆ.

### ಸರಸ್ವತೀಮಂತ್ರ–ಭಾರತೀಮಂತ್ರ

**ಬ್ರಹ್ಮಾಣ್ಯಾ ಅಪಿ ಭಾರತ್ಯಾ 'ಗೌರೀ''ರ್ಯಸ್ತ' ಇತಿ ಶ್ರುತೌ[1] ।**
**ಮಂತ್ರೌ ದೀರ್ಘತಮೋದೃಷ್ಟೌ ಸರ್ವಾಭೀಷ್ಟಪ್ರದಾಯಕೌ ॥ ೨೧ ॥**

'ಗೌರೀರ್ಮಿಮಾಯ ಸಲಿಲಾನಿ ತಕ್ಷತಿ' (ಋ. ೨–೩–೨೧) ಮುಂತಾದ ಸೂಕ್ತವು ಸರಸ್ವತೀಪ್ರತಿಪಾದಕವಾಗಿದೆ. 'ಯಸ್ತೇ ಸ್ತನಃ ಶಶಯೋ ಯೋ ಮಯೋ ಭೂಃ' (ಋ. ೨–೩–೨೩) ಮುಂತಾದ ಸೂಕ್ತವು ಭಾರತೀಪ್ರತಿಪಾದಕವಾಗಿದೆ. ಈ ಎರಡು ಮಂತ್ರಗಳು 'ದೀರ್ಘತಮಸ್' ಎಂಬ ಋಷಿಯಿಂದ ದೃಷ್ಟವಾಗಿದ್ದು ಸಕಲಾಭೀಷ್ಟವನ್ನೂ ಕೊಡುವವುಗಳಾಗಿವೆ.

**ಉದ್ಯದ್ದಿವಾಕರಸಮೂಹನಿಭಾಂ ಸ್ವಭರ್ತುರ್-**
**ರಂಕಸ್ಥಿತಾಮಭಯಸದ್ವರಬಾಹುಯುಗ್ಮಾಮ್ ।**
**ಮುದ್ರಾಂ ಚ ತತ್ತ್ವದೃಶಯೋ[2] ವರಪುಸ್ತಕಂ ಚ**
**ದೋರ್ಯುಗ್ಮಕೇನ ದಧತೀಂ ಸ್ಮರತಾತ್ಮವಿದ್ಯಾಮ್[3] ॥ ೨೨ ॥**

ಉದಿಸುವ ಸೂರ್ಯರ ಸಮೂಹದಂತೆ ಪ್ರಕಾಶಿಸುವ, ತನ್ನ ಗಂಡನ ತೊಡೆಯಲ್ಲಿ ಕುಳಿತಿರುವ, ಅಭಯಮುದ್ರೆಯನ್ನೂ ವರಮುದ್ರೆಯನ್ನೂ ಎರಡು ಕೈಗಳಿಂದ ಧರಿಸಿ ಉಳಿದೆರಡು ಕೈಗಳಿಂದ ಜ್ಞಾನಮುದ್ರೆಯನ್ನೂ, ಸದ್ಗ್ರಂಥವನ್ನೂ ಹಿಡಿದುಕೊಂಡಿರುವ, ಪರಮಾತ್ಮವಿದ್ಯೆಯ ಅಭಿಮಾನಿನಿಯಾದ ಸರಸ್ವತಿಯನ್ನೂ ಭಾರತಿಯನ್ನೂ ಧ್ಯಾನಿಸಬೇಕು.

---

೧ ತಥಾಚ ಮಂತ್ರೌ—
'गौरीर्मिमाय सलिलानि तक्षत्येकपदी द्विपदी सा चतुष्पदी ।
अष्टापदी नवपदी बभूवुषी सहस्राक्षरा परमे व्योमन् ॥' ಇತಿ,
'यस्ते स्तनः शशयो यो मयोभूर्येन विश्वा पुष्यसि वार्याणि ।
यो रत्नधा वसुविद्यः सुदत्रः सरस्वति तमिह धातवे कः ॥' ಇತಿ ಚ

೨ ತತ್ತ್ವದೃಶಯೋ ಮುದ್ರಾಂ=ಜ್ಞಾನಮುದ್ರಾಮ್ ।

೩ 'ಆತ್ಮವಿದ್ಯಾಂ=ಪರಮಾತ್ಮಪ್ರತಿಪಾದಕವಿದ್ಯಾದೇವತಾಂ ಸರಸ್ವತೀಂ ಭಾರತೀಂ ಚ ।' (ಛಲಾ.)

'ವಂದೇಮಹಿ ಚ ತಾಂ ವಾಣೀಮಮೃತಾಮಾತ್ಮನಃ ಕಲಾಮ್ ।' (ಭವಭೂತಿ)

**ಪಾದೈರ್ವರ್ಣೈಸ್ತ್ರೈಃ ಸಮಸ್ತೈಶ್ಚ ತದಂಗಾನಿ ವಿದೋ ವಿದುಃ ।**

ಈ ಮಂತ್ರಗಳ ನಾಲ್ಕು ಪಾದಗಳಿಂದ ಮತ್ತು ಸಮಸ್ತಮಂತ್ರದಿಂದ ಪಂಚಾಂಗನ್ಯಾಸವನ್ನಾಚರಿಸಬೇಕು.[1]

**ಸ್ವಯಮುದ್ದೇಶಸತ್ಯಂತೌ ಮಂತ್ರೌ ಧ್ಯಾನಪರೌ ತಯೋಃ[2] ॥ ೭೩ ॥**

‘ನಮಃ’ಪದದಿಂದ ಕೂಡಿದ ಚತುರ್ಥ್ಯಂತವಾದ ‘ಬ್ರಹ್ಮಾಣೀ’ ಮತ್ತು ‘ಭಾರತೀ’ ಪದಗಳೇ ಸರಸ್ವತೀಪಂಚಾಕ್ಷರ ಮತ್ತು ಭಾರತೀಪಂಚಾಕ್ಷರಗಳು.[3]

**ಮಂತ್ರೌ ಏತೌ ಹರಿಪ್ರೀತಿದಾಯಕೌ ಸರ್ವಕಾಮದೌ[4] ।**
**ಇಷ್ಟಂ ದೈವಂ ಹರಿಃ ಸಾಕ್ಷಾಲ್ಲಕ್ಷ್ಮೀರ್ಭಾಗ್ಯಸ್ಯ ದೇವತಾ[5] ।**
**ಗುರುರ್ಬ್ರಹ್ಮಾಥ ವಾಯುರ್ವಾ[6] ವಿದ್ಯೇ[7] ದೇವ್ಯೌ ಪ್ರಕೀರ್ತಿತೇ ॥**

---

೧ ನ್ಯಾಸಕ್ರಮ—

‘ಗೌರೀರ್ಮಿಮಾಯ ಸಲಿಲಾನಿ ತಕ್ಷತಿ’ ಹೃದಯಾಯ ನಮಃ । ‘ಏಕಪದೀ ದ್ವಿಪದೀ ಸಾ ಚತುಷ್ಪದೀ’ ಶಿರಸೇ ಸ್ವಾಹಾ । ‘ಅಷ್ಟಾಪದೀ ನವಪದೀ ಬಭೂವುಷೀ’ ಶಿಖಾಯೈ ವಷಟ್ । ‘ಸಹಸ್ರಾಕ್ಷರಾ ಪರಮೇ ವ್ಯೋಮನ್’ ಕವಚಾಯ ಹುಮ್ । ‘ಗೌರೀರ್ಮಿಮಾಯ ಸಲಿಲಾನಿ ತಕ್ಷತ್ಯೇಕಪದೀ ದ್ವಿಪದೀ ಸಾ ಚತುಷ್ಪದೀ । ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್’ ಅಸ್ತ್ರಾಯ ಫಟ್ । ಇದರಂತೆಯೇ ಭಾರತೀ ಮಂತ್ರದ ಅಂಗನ್ಯಾಸವನ್ನೂ ಊಹಿಸಿಕೊಳ್ಳಬೇಕು.

೨ ತಥಾ ಚ ಮಂತ್ರೌ— ‘ब्रह्माण्यै नमः’ ಇತಿ ‘भारत्यै नमः’ ಇತಿ ಚ ।

೩ ‘ಅತ್ರ ವರ್ಣೈಃ ಪಂಚಾಂಗಾನಿ ಜ್ಞೇಯಾನಿ । ಧ್ಯಾನೇ ತು ಪೂರ್ವವತ್’ (ಛಲಾ.)

‘ಅತ್ರ ವರ್ಣೈರಂಗನ್ಯಾಸಃ ಕರ್ತವ್ಯ ಇತಿ ಭಾತಿ’ (ನಾರಾ.)

೪ ‘ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ ।’

೫ ಆಚಾರ್ಯರ ಈ ದಿವ್ಯವಚನವನ್ನೆ ಮನಸ್ಸಿನಲ್ಲಿಟ್ಟುಕೊಂಡು ವಾದಿರಾಜರು ಈ ಕೆಳಗಿನ ಪದ್ಯವನ್ನು ರಚಿಸಿದಂತಿದೆ—

‘ಆಚಾರ್ಯಃ ಪವನೋಽಸ್ಮಾಕಮಾಚಾರ್ಯಾಣೀ ಚ ಭಾರತೀ ।
ದೇವೋ ನಾರಾಯಣಃ ಶ್ರೀಮಾನ್ ದೇವೀ ಮಂಗಲದೇವತಾ ॥’

೬ ‘ವಾ=ಯಥಾ ಬ್ರಹ್ಮಾ ಗುರುಃ, ತಥಾ ವಾಯುರಪಿ ಗುರುಃ’ (ಛಲಾ.) ಸೋದೇ ಮಠದ ತುಳು ಪುಸ್ತಕದ ಪಾಠ ‘ಗುರೂ ಬ್ರಹ್ಮಾ ಚ ವಾಯುಶ್ಚ’ ಎಂದು.

೭ ವಿದ್ಯೇ=ವಿದ್ಯಾಭಿಮಾನಿನ್ಯೌ ।

ಈ ಲಕ್ಷ್ಮೀಬ್ರಹ್ಮಾದಿಮಂತ್ರಗಳೂ ಹರಿಪ್ರೀತಿಯನ್ನು ಸಂಪಾದಿಸಿಕೊಡ ಬಲ್ಲವು. ಶ್ರೀಹರಿ ಪ್ರಸನ್ನನಾದನೆಂದರೆ ಎಲ್ಲ ಕಾಮಗಳೂ ದೊರಕಿದಂತೆಯೇ. ಪ್ರತಿಯೊಂದು ಮಂತ್ರದಿಂದಲೂ ಪ್ರತಿಪಾದ್ಯನಾಗಿದ್ದುಕೊಂಡು ಭಕ್ತರ ಅಭೀಷ್ಟವನ್ನು ಪೂರಯಿಸುವ ನಮ್ಮ ಇಷ್ಟದೈವ ಶ್ರೀಹರಿಯೇ ಸರಿ. ಎಲ್ಲ ಸೌಭಾಗ್ಯಗಳಿಗೂ ಅಧಿದೇವತೆ ರಮೆಯೊಬ್ಬಳೇ. ಎಲ್ಲ ಜಗತ್ತಿಗೂ ಮೂಲಗುರುಗಳು ಬ್ರಹ್ಮದೇವರು ಮತ್ತು ವಾಯುದೇವರು. ಸರಸ್ವತಿಭಾರತಿಯರು ವಿದ್ಯಾಭಿಮಾನಿನಿಯರಾಗಿದ್ದುಕೊಂಡು ನಮ್ಮೆಲ್ಲರ 'ಆಚಾರ್ಯಾನೀ' ಎನಿಸಿಕೊಂಡಿದ್ದಾರೆ.

**ತಸ್ಮಾದೇತೇ ಪ್ರಿಯಾ ವಿಷ್ಣೋರಂತರಂಗತಯಾ ಸದಾ ।**
**ಜ್ಞೇಯಾಶ್ಚೈವ ಪ್ರಪೂಜ್ಯಾಶ್ಚ ವಿಷ್ಣೋಃ ಪ್ರೀತಿಮಭೀಪ್ಸತಾ ॥೭೫॥**

ಲಕ್ಷ್ಮಿ, ಬ್ರಹ್ಮ, ವಾಯು, ಸರಸ್ವತಿ, ಭಾರತಿ—ಈ ಪಂಚದೇವತೆಗಳು ಶ್ರೀಹರಿಗೆ ಇತರ ದೇವತೆಗಳಿಂದ ಹೆಚ್ಚಾಗಿ ಪ್ರಿಯರಾಗಿದ್ದಾರೆ ಎಂತಲೇ ವಿಷ್ಣುಪ್ರೀತಿಯನ್ನು ಅಪೇಕ್ಷಿಸುವ ಜನ ಈ ಪಂಚದೇವತೆಗಳನ್ನು ಹೆಚ್ಚು ಹೆಚ್ಚು ಅರಿತುಕೊಳ್ಳಬೇಕು, ಜಪಧ್ಯಾನಾದಿಗಳಿಂದ ಪೂಜಿಸಬೇಕು.

## ಶಿವಪಂಚಾಕ್ಷರ

**ಉದ್ದೇಶನತಿಯುಙ್ಮಂತ್ರಃ ಸ್ವಯಮೇವ ಶಿವಸ್ಯ ತು[1] ।**
**ವರ್ಣೈರೇತೈಸ್ತದಂಗಾನಿ ವಾಮದೇವೋ ಮುನಿಃ ಸ್ಮೃತಃ ॥ ೭೬ ॥**
**ಪಂಕ್ತಿಶಬ್ದಾರ್ಥವಿಜ್ಞಾನೇ ಸಹಿ ಛಂದಸಿ ಸಂಶಯಃ[2] ।**

'ನಮಃ'ಪದದಿಂದ ಕೂಡಿದ ಚತುರ್ಥ್ಯಂತವಾದ 'ಶಿವ' ಶಬ್ದವೇ ಶಿವಪಂಚಾಕ್ಷರಮಂತ್ರ. ಮಂತ್ರದ ಐದು ಅಕ್ಷರಗಳಿಂದ ಅಂಗನ್ಯಾಸವನ್ನಾಚರಿಸ

---

೧ ತಥಾಚ ಮಂತ್ರಃ— 'नमः शिवाय'

೨ 'ಹೃದಯಂ ವಪರಂ ನಾಕ್ಷಿ ಲಾಂತೋಽನಂತಾನ್ವಿತೋ ಮರುತ್ ।
ಪಂಚಾಕ್ಷರೋ ಮನುಃ ಪ್ರೋಕ್ತಸ್ತಾರಾದ್ಯೋಽಯಂ ಷಡಕ್ಷರಃ ॥
ವಾಮದೇವೋ ಮುನಿಶ್ಛಂದಃ ಪಂಕ್ತಿರೀಶೋಽಸ್ಯ ದೇವತಾ ।
ಷಡ್ಭಿರ್ವರ್ಣೈಃ ಷಡಂಗಾನಿ ಕುರ್ಯಾನ್ಮಂತ್ರಸ್ಯ ದೇಶಿಕಃ ॥' (ಶಾರದಾ.)
'ಋಷಿರುಕ್ತೋ ವಾಮದೇವಃ ಪಂಕ್ತಿಶ್ಛಂದ ಉದಾಹೃತಮ್ ।
ಸದಾಶಿವೋ ದೇವತಾಽಸ್ಯ ಮಂತ್ರಸ್ಯ ಪರಿಕೀರ್ತಿತಃ ।
ಷಡಂಗಾನಿ ಮನೋರ್ವರ್ಣೈರ್ಜಾತಿಯುಕ್ತಾನಿ ಕಲ್ಪಯೇತ್ ॥'(ಸಾರಸಂ.)

ಬೇಕು.[೧] ಈ ಮಂತ್ರದ ಋಷಿ ವಾಮದೇವ. 'ಪಂಚಾಕ್ಷರಾ ಪಂಕ್ತಿಃ' ಎಂದು ಶಾಸ್ತ್ರದಲ್ಲಿ ಪ್ರಸಿದ್ಧವಾದ ಪಂಕ್ತಿಪದದ ಅರ್ಥವನ್ನು ಅರಿತುಕೊಂಡ ಯಾವನೂ ಈ ಮಂತ್ರದ ಛಂದಸ್ಸು ಯಾವುದು ಎಂದು ಸಂಶಯಪಡುವ ಸಂಭವವಿಲ್ಲ.

**ಧ್ಯೇಯಃ ಪಂಚಮುಖೋ ರುದ್ರಃ ಸ್ಫಟಿಕಾಮಲಕಾಂತಿಮಾನ್ ॥೭೭॥**
**ವಿದ್ಯುಚ್ಛುಭ್ರಾಸಿತರಜಃಶ್ಯಾಮಾಸ್ಯಸ್ಯ ಮುಖಾನಿ ಚ[೨] ।**
**ಜಟಾವಬದ್ಧೇಂದುಕಲಃ ಪ್ರಿಯಯಾಯುಗ್ವಾಮಾಂಗಭೂಷಣಃ ॥ ೭೮ ॥**

ಸ್ಫಟಿಕದಂತೆ ಶುಭ್ರವರ್ಣನೂ, ಪಂಚಮುಖನೂ ಆದ ರುದ್ರನನ್ನು ಧ್ಯಾನಿಸಬೇಕು. ಆ ಐದು ಮೋರೆಗಳು ಹೊಂಗೆಂಪು, ಬಿಳಿ, ಕಪ್ಪು, ಕೆಂಪು, ನೀಲ—ಈ ಐದು ಬಣ್ಣದವುಗಳೆಂದೂ ಧ್ಯಾನಿಸಬೇಕು. ಆತನ ಜಡೆಯಲ್ಲಿ ಚಂದ್ರನ ಕಲೆಯು ರಾಜಿಸುತ್ತಿದೆ, ಸರ್ಪರಾಜನೇ ಆಭರಣವಾಗಿದ್ದಾನೆ, ಜತೆಯಲ್ಲಿ ಪಾರ್ವತೀದೇವಿ ಕುಳಿತಿದ್ದಾಳೆ ಎಂದೂ ಧ್ಯಾನಿಸಬೇಕು.

---

೧ ನ್ಯಾಸಕ್ರಮ—

'ನಂ ಹೃದಯಾಯ ನಮಃ । ಮಂ ಶಿರಸೇ ಸ್ವಾಹಾ । ಶಿಂ ಶಿಖಾಯೈ ವಷಟ್ । ವಾಂ ಕವಚಾಯ ಹುಮ್ । ಯಂ ಅಸ್ತ್ರಾಯ ಫಟ್ ।'

೨ 'ಮುಕ್ತಾಪೀತಪಯೋದಮೌಕ್ತಿಕಜವಾವರ್ಣೈರ್ಮುಖೈಃ ಪಂಚಭಿಃ ।' (ಶಾರದಾ.)

ಶಿವಪುರಾಣದಲ್ಲಿ ರುದ್ರನ ಮುಖದ ಬಣ್ಣಗಳ ವಿವರವಿದೆ—

'ಅಸ್ಯ ಪೂರ್ವಮುಖಂ ಸೌಮ್ಯಂ ಬಾಲಾರ್ಕಸದೃಶಪ್ರಭಮ್ ।
ತ್ರಿಲೋಚನಾರವಿಂದಾಢ್ಯಂ ಬಾಲೇಂದುಕೃತಶೇಖರಮ್ ॥
ದಕ್ಷಿಣಂ ನೀಲಜೀಮೂತಸಮಾಭಂ ಚಂದ್ರಭೂಷಿತಮ್ ।
ವಕ್ರಭ್ರುಕುಟಿಲಂ ಘೋರಂ ರಕ್ತವೃತ್ತತ್ರಿಲೋಚನಮ್ ॥
ಉತ್ತರಂ ವಿದ್ರುಮಪ್ರಖ್ಯಂ ನೀಲಾಲಕವಿಭೂಷಿತಮ್ ।
ಸವಿಲಾಸಂ ತ್ರಿನಯನಂ ಚಂದ್ರಾಭರಣಶೇಖರಮ್ ॥
ಪಶ್ಚಿಮಂ ಪೂರ್ಣಚಂದ್ರಾಭಂ ಲೋಚನತ್ರಿತಯೋಜ್ಜ್ವಲಮ್ ।
ಚಂದ್ರಲೇಖಾಧರಂ ಸೌಮ್ಯಂ ಮಂದಸ್ಮಿತಮನೋಹರಮ್ ॥
ಪಂಚಮಂ ಸ್ಫಟಿಕಪ್ರಖ್ಯಂ ಚಂದ್ರರೇಖಾಸಮುಜ್ಜ್ವಲಮ್ ।
ಅತೀವ ಸೌಮ್ಯಮುತ್ಫುಲ್ಲಲೋಚನತ್ರಿತಯೋಜ್ಜ್ವಲಮ್ ॥'
(ವಾಯವೀಯಸಂ.)

ಇನ್ನೊಂದು ಪುರಾಣದಲ್ಲಿಯೂ ಈ ರೂಪದ ಉಲ್ಲೇಖವಿದೆ—

'ಪಶ್ಚಿಮೇ ತು ಮುಖೇ ಸದ್ಯೋ ವಾಮದೇವಸ್ತಥೋತ್ತರೇ ।
ಪೂರ್ವೇ ತತ್ಪುರುಷಂ ವಿದ್ಯಾದಘೋರಂ ಚಾಪಿ ದಕ್ಷಿಣೇ ॥

ಈಶಾನಃ ಪಂಚಮೋ ಮಧ್ಯೇ ಸರ್ವೇಷಾಮುಪರಿ ಸ್ಥಿತಃ ।
ಏತೇ ಪಂಚಮುಖಾ ವತ್ಸ ಪಾಪಘ್ನಾ ಗ್ರಹನಾಶನಾಃ ॥
ಸದ್ಯೋಜಾತೋ ಭವೇಚ್ಛುಕ್ಲೋ ವಾಮದೇವಸ್ತು ಪೀತಕಃ ।
ರಕ್ತಸ್ತತ್ಪುರುಷೋ ಜ್ಞೇಯೋಽಘೋರಃ ಕೃಷ್ಣಃ ಸ ಏವ ಚ ॥
ಈಶಾನಃ ಪಶ್ಚಿಮಸ್ತೇಷಾಂ ಸರ್ವವರ್ಣಸಮನ್ವಿತಃ ।
ಕಾಮದಃ ಕಾಮರೂಪೀ ಸ್ಯಾಜ್ಜ್ಞಾನಾಧಾರಃ ಶಿವಾತ್ಮಕಃ ॥' (ದೇವೀಪು.)

ಈ ಗ್ರಂಥಗಳಲ್ಲಿ ಹೇಳಿರುವ ವರ್ಣಗಳ ಪಟ್ಟಿಯನ್ನು ಕೆಳಗಿನಂತೆ ನಿರೂಪಿಸಬಹುದು—

| | ಪೂರ್ವ | ಪಶ್ಚಿಮ | ದಕ್ಷಿಣ | ಉತ್ತರ | ಮಧ್ಯ |
|---|---|---|---|---|---|
| ತಂತ್ರಸಾರ | ವಿದ್ಯುತ್ | ಶುಭ್ರ | ಅಸಿತ | ರಜಃ | ಶ್ಯಾಮ |
| ಶಿವಪು. | ಬಾಲಾರ್ಕ | ಪೂರ್ಣಚಂ. | ನೀಲ | ವಿದ್ರುಮ | ಸ್ಫಟಿಕ |
| ದೇವೀಪು. | ರಕ್ತ | ಶುಕ್ಲ | ಕೃಷ್ಣ | ಪೀತಕ | ಸರ್ವವರ್ಣ |

ಪೂರ್ವಮುಖವಾದ ತತ್ಪುರುಷದ ವರ್ಣ ಆರಕ್ತವಾಗಿದೆ ಎಂಬಲ್ಲಿ ಮೂರು ಗ್ರಂಥಗಳೂ ಸಂವಾದಿಗಳಾಗಿವೆ. ಪಶ್ಚಿಮದ ಮುಖವಾದ ಸದ್ಯೋಜಾತವು ಶುಭ್ರವಾಗಿದೆ ಎಂಬಲ್ಲಿಯೂ ವಿರೋಧವಿಲ್ಲ; ಪೂರ್ಣಚಂದ್ರನು ಶುಭ್ರವರ್ಣನೇ ತಾನೆ! ದಕ್ಷಿಣದ ಮುಖವಾದ ಅಘೋರವು ಕಪ್ಪು ಎನ್ನುವುದರಲ್ಲಿಯೂ ವಿರೋಧವಿಲ್ಲ. ಉತ್ತರದ ಮುಖವಾದ ವಾಮದೇವದ ವರ್ಣಮಾತ್ರ ಸ್ವಲ್ಪ ಸಂದಿಗ್ಧವಾಗಿದೆ. ಆಚಾರ್ಯರು ರಜೋವರ್ಣ(ರಕ್ತ) ಎಂದು ಬರೆದಿದ್ದಾರೆ. ಶಿವಪುರಾಣವೂ ಇದಕ್ಕೆ ಸಂವಾದಿಯಾಗಿಯೇ ಇದೆ. ಆದರೆ ದೇವೀಪುರಾಣದಲ್ಲಿ 'ಪೀತಕ' ಎಂದಿದೆಯಲ್ಲ! ಅದರ ಪ್ರಕಾರ ವಾಮದೇವದ ವರ್ಣ ಹಳದಿಯಾಗಬೇಕಲ್ಲ! ವಸ್ತುತಃ ಇಂಥ ವಿರೋಧಗಳಿಗೆ ಉತ್ತರಿಸುವ ಆವಶ್ಯಕತೆಯಿಲ್ಲ. ಇವೆಲ್ಲ ಉಪಾಸಕರು ತಮ್ಮ ಪ್ರಜ್ಞಾಶಕ್ತಿಗೆ ಅನುಗುಣವಾಗಿ ಕಲ್ಪಿಸುವ ರೂಪಗಳಾದುದರಿಂದ ಉಪಾಸನಾಭೇದದಿಂದ ಈ ಎರಡು ಬಣ್ಣಗಳೂ ಕೂಡಬಹುದು. ಹೀಗೆಯೇ ಐದನೆಯ ಮುಖವಾದ ಈಶಾನದ ವರ್ಣವಿರೋಧವೂ ವಿಶೇಷತಃ ಗಣನೀಯವಲ್ಲ. ಒಬ್ಬ ಉಪಾಸಕನಿಗೆ ಅದು ಶ್ಯಾಮವಾಗಿರಬಹುದು, ಇನ್ನೊಬ್ಬನಿಗೆ ಸ್ಫಟಿಕದಂತಿರಬಹುದು. ಮತ್ತೊಬ್ಬನಿಗೆ ಎಲ್ಲ ಬಣ್ಣಗಳೂ ಅದರಲ್ಲೊಂದರಲ್ಲಿ ಕಂಡು

ಮಂತ್ರೇಷ್ವೇತೇಷು ಸರ್ವೇಷು ವಾಚ್ಯಸ್ತಾರೇಣ ಕೇಶವಃ ।
ಅಂತರ್ಯಾಮಿತಯಾ ಧ್ಯೇಯಃ ಸರ್ವದೇವೇಷು ಸರ್ವದಾ ॥೪೯॥

ಈ ಎಲ್ಲ ಮಂತ್ರಗಳ ಆದಿಯಲ್ಲಿ ಉಚ್ಚರಿಸುವ ಓಂಕಾರದಿಂದ ಶ್ರೀಹರಿಯೊಬ್ಬನೆ ವಾಚ್ಯನಾಗಿದ್ದಾನೆ. ಪ್ರತಿಯೊಂದು ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಶ್ರೀಹರಿಯೇ ಎಲ್ಲ ಮಂತ್ರಗಳಿಂದಲೂ ಮುಖ್ಯಪ್ರತಿಪಾದ್ಯನಾಗಿದ್ದಾನೆ ಎಂದೇ ಧ್ಯಾನಿಸಬೇಕು.

## ಪಾರ್ವತೀಪಂಚಾಕ್ಷರ

ಸ ಏವ ವನಿತಾಲಿಂಗಃ ಪಾರ್ವತ್ಯಾ ಮನುರುಚ್ಯತೇ ।
ಗೌರೀ ವರಾಭಯಕರಾ ಧ್ಯೇಯಾ ಪೀತಾಂಬರಾ ಚ ಸಾ ॥ ೫೦ ॥

ಹಿಂದಿನ ಮಂತ್ರದಲ್ಲಿನ 'ಶಿವ' ಶಬ್ದವನ್ನು ಸ್ತ್ರೀಲಿಂಗದಲ್ಲಿ ಉಪಯೋಗಿಸಿದರೆ ಅದೇ ಪಾರ್ವತೀಪಂಚಾಕ್ಷರಮಂತ್ರವಾಗುವುದು. ಈ ಮಂತ್ರದಲ್ಲಿ

---

ಬರಲೂಬಹುದು. ಆದರೆ ಈ ವಿರೋಧಗಳನ್ನು ಬೇಕಿದ್ದರೆ ಪರಿಹರಿಸುವುದೂ ಶಕ್ಯವುಂಟು. 'ಪೀತಕ' ಎಂಬ ಶಬ್ದಕ್ಕೆ ವ್ಯಾಕರಣಬದ್ಧವಾಗಿ 'ಕೆಂಪು' ಎಂದು ಅರ್ಥವಿದೆ. 'ಪೀತಾತ್ಕನ್' ಎಂಬ ವಾರ್ತಿಕವು ಹರಿತಾಲದಿಂದ ಕೆಂಪಾದ ವಸ್ತುವನ್ನು 'ಪೀತಕ' ಎಂದು ಕರೆಯಬೇಕು ಎಂದು ವಿಧಿಸುತ್ತದೆ. 'ಪೀತೇನ ಹರಿತಾಲೇನ ರಕ್ತಂ= ಪೀತಕಮ್' । ಇಲ್ಲಿ ಅದರ 'ಕೆಂಪು' ಎಂಬ ಅಂಶವನ್ನು ಮಾತ್ರ ಇಟ್ಟುಕೊಂಡು ಅರ್ಥ ಕೊಡಬಹುದೇನೊ! ಹೀಗಿದ್ದರೆ ವಿರೋಧದ ಪ್ರಸಂಗವೇ ಇಲ್ಲವಲ್ಲ! ಇನ್ನು ಪಂಚಮುಖದಲ್ಲೂ ಹೀಗೆಯೇ ವಿರೋಧವನ್ನು ಪರಿಹರಿಸಬಹುದು. ಬೇರೆ ಬಣ್ಣಗಳನ್ನು ತನ್ನಲ್ಲಿ ಪ್ರತಿಫಲಿಸಿಕೊಳ್ಳಬಲ್ಲ ಸ್ಫಟಿಕವನ್ನೆ ಶಿವಪುರಾಣದಲ್ಲಿ ಉಪಮಾನವಾಗಿ ಕೊಟ್ಟಿದ್ದರ ತಾತ್ಪರ್ಯವಾಗಿಲ್ಲವೆ? ಆಚಾರ್ಯರು ಬಹು ಬಣ್ಣಗಳನ್ನು ಹೇಳುವ 'ಶ್ಯಾಮ' ಎಂಬ ಪದವನ್ನೆ ಬಳಸಿದ್ದಾರೆ. 'ಶ್ಯಾಮ' ಎನ್ನುವುದಕ್ಕೆ ಸಂಸ್ಕೃತದಲ್ಲಿ ಕಪ್ಪು, ನೀಲ, ಹಸುರು, ಸಾಮಾನ್ಯತಃ ಹಳದಿ ಕೂಡ— ಹೀಗೆ ಬಹು ವಿಧವಾದ ಅರ್ಥಗಳಿವೆ. ಎಂದ ಮೇಲೆ ಶ್ಯಾಮಶಬ್ದ ಬಹುವರ್ಣಕತ್ವವನ್ನು ಹೇಳಬಾರದೆಂದೇನೂ ರಾಜಾಜ್ಞೆಯಿಲ್ಲ.

೧ ಇದರಿಂದ ಎಲ್ಲ ಮಂತ್ರಗಳ ಮೊದಲೂ ಓಂಕಾರವನ್ನುಚ್ಚರಿಸಬೇಕು ಎಂದು ತಿಳಿದುಬರುವುದು—

'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ ।'
'ಮಂತ್ರಾಣಾಂ ತಾರಮೂಲತ್ವಮನಿರ್ದೇಶೇಽಪಿ ನಿಶ್ಚಿತಮ್ ।'(ಯೋಗದೀ.)

೨ ತಥಾಚ ಮಂತ್ರಃ— 'नमः शिवायै'
'ವಾಮದೇವೋ ಮುನಿಃ । ಅಕ್ಷರೈರಂಗಾನಿ । ಪಂಕ್ತಿಶ್ಛಂದಃ ।' (ನಾರಾ.)

ವರಾಭಯಮುದ್ರೆಗಳನ್ನು ಧರಿಸಿರುವ, ಸೀತಾಂಬರಧಾರಿಣಿಯಾದ ಪಾರ್ವತಿಯನ್ನು ಧ್ಯಾನಿಸಬೇಕು.

### ಶೇಷಮಂತ್ರ

**ಸ್ವಯಮುದ್ದೇಶಸತ್ಯಾಂತಃ ಪೂರ್ವಪೂರ್ವಃ ಷಡಕ್ಷರಃ[1] ।**
**ಸನತ್ಕುಮಾರದೃಷ್ಟೋ(s)ಯಂ ಮನುಃ ಶೇಷಸ್ಯ ಕಾಮದಃ ॥ ೮೧ ॥**

ಚತುರ್ಥ್ಯಂತವಾದ 'ಶೇಷ'ಶಬ್ದವು ತನ್ನ ಆದಿಹೊಂದಲುಗಳಲ್ಲಿ 'ನಮಃ' ಶಬ್ದ ಮತ್ತು ತನ್ನ ಹಿಂದಿನ ಅಕ್ಷರವಾದ 'ಶಂ'ಕಾರದಿಂದ ಕೂಡಿದಾಗ ಅದು ಶೇಷಷಡಕ್ಷರಮಂತ್ರವಾಗುವುದು. ಅಭೀಷ್ಟಪ್ರದವಾದ ಈ ಮಂತ್ರದ ದ್ರಷ್ಟೃ ಸನತ್ಕುಮಾರ ಋಷಿ.

**ದಧಾನೋ ಹಲಸೌನಂದೌ[2] ಶ್ವೇತವರ್ಣಃ ಕೃತಾಂಜಲಿಃ ।**
**ಸಹಸ್ರಮೂರ್ಧಾ(s)ದ್ವಿತೀಯಕರ್ಣಭೂಷಃ[3] ಪ್ರಿಯಾಯುತಃ ।**
**ವನಮಾಲೀ[4] ನೀಲವಾಸಾ[5] ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥೮೨॥**

---

೧ ತಥಾಚ ಮಂತ್ರಃ— 'शं शेषाय नमः ।'
'ಗಾಯತ್ರೀ ಛಂದಃ । ವರ್ಣೈರಂಗಾನಿ ।' (ನಾರಾ.)

೨ 'ಸೌನಂದಶಬ್ದೇನ ಮುಸಲಮುಚ್ಯತೇ ।' (ನಾರಾ., ಬಲಾ.)
'ಸೌನಂದಂ=The club of Balarama.' (V. S. Apte)

೩ ನ ವಿದ್ಯತೇ ದ್ವಿತೀಯಾ ಕರ್ಣಭೂಷಾ ಯಸ್ಯ, ಏಕಕುಂಡಲ ಇತಿ ಯಾವತ್ ।
ಪರಾಕ್ರಮಸೂಚಕವಾಗಿ ಒಂದೇ ಕಿವಿಗೆ ಒಂದು ಪ್ರತ್ಯೇಕ ಬಿರುದಿನ ಕುಂಡಲವನ್ನು ಧರಿಸುವ ವಾಡಿಕೆ ಹಿಂದೆ ಬಳಕೆಯಲ್ಲಿತ್ತು. ಅಂಥದೇ ಕುಂಡಲವನ್ನು ಪರಾಕ್ರಮಶಾಲಿಯಾದ ಶೇಷಧ್ಯಾನದಲ್ಲಿ ಪ್ರಾಚೀನರು ಬಳಸಿಕೊಳ್ಳುತ್ತಿದ್ದರು ಎನ್ನಬಹುದು.

೪ 'ಆಜಾನುಲಂಬಿನೀ ಮಾಲಾ ಸರ್ವರ್ತುಕುಸುಮೋಜ್ಜ್ವಲಾ ।
ಮಧ್ಯೇ ಸ್ಥೂಲಕದಂಬಾಢ್ಯಾ ವನಮಾಲೇತಿ ಕೀರ್ತಿತಾ ॥'
'ಆಪಾದಪದ್ಮಂ ಯಾ ಮಾಲಾ ವನಮಾಲೇತಿ ಸಾ ಮತಾ ।'

೫ ಶೇಷನು ಸಹಸ್ರಫಣನಾಗಿದ್ದಾನೆ, ವನಮಾಲೆಯನ್ನು ಧರಿಸಿಕೊಂಡಿದ್ದಾನೆ, ನೀಲವಸ್ತ್ರವನ್ನುಟ್ಟಿದ್ದಾನೆ, ಏಕಕುಂಡಲನಾಗಿದ್ದಾನೆ ಎಂದು ಭಾಗವತದ ಪಂಚಮಸ್ಕಂಧದಲ್ಲಿಯೂ ಉಲ್ಲೇಖವಿದೆ—

'ಯಸ್ಯೇದಂ ಕ್ಷಿತಿಮಂಡಲಂ ಭಗವತೋ(s)ನಂತಮೂರ್ತೇಃ ಸಹಸ್ರಶಿರಸ ಏಕಸ್ಮಿನ್ನೇವ ಶೀರ್ಷಣಿ ಧ್ರಿಯಮಾಣಂ ಸಿದ್ಧಾರ್ಥ ಇವ ಲಕ್ಷ್ಯತೇ ।'

'ಧ್ಯಾಯಮಾನಃ ಸುರಾಸುರೋರಗಸಿದ್ಧಗಂಧರ್ವವಿದ್ಯಾಧರಮುನಿಗಣೈರನವರತಮದಮುದಿತವಿಕೃತವಿಹ್ವಲಲೋಚನಃ ಸುಲಲಿತಮುಖರಿಕಾಮೃತೇನಾ-

ಹಲವನ್ನೂ ಮುಸಲವನ್ನೂ ಧರಿಸಿಕೊಂಡಿರುವ, ಸಾವಿರ ಹೆಡೆಗಳುಳ್ಳ, ಏಕಕುಂಡಲನಾಗಿ ತನ್ನ ಪತ್ನಿಯೊಡನೆ ಶ್ರೀಹರಿಗೆ ಶಯ್ಯೆಯಾಗಿದ್ದುಕೊಂಡು ವನಮಾಲೆಯನ್ನು ಕಂಠದಲ್ಲಿ ಧರಿಸಿಕೊಂಡು ಸುವರ್ಣದ ಪಟ್ಟಿಯನ್ನುಟ್ಟುಕೊಂಡು ಶ್ರೀಹರಿಯ ಹಿಂಬದಿಯಲ್ಲಿ ನಿಂತಿರುವ ಶೇಷನನ್ನು ಧ್ಯಾನಿಸಬೇಕು.

## ಗರುಡಮಂತ್ರ

**ವ್ಯತ್ಯಸ್ತಪಕ್ಷಿತಾರೌ ಚ ಸ್ವಾಹಾಂತೋ ಗಾರುಡೋ ಮನುಃ[1] ।**
**ಕಾಶ್ಯಪೋಽ[2]ಸ್ಯ ಮುನಿರ್ಧ್ಯೇಯಃ ಸುಧಾಪೂರ್ಣಂ ಹಿರಣ್ಮಯಮ್ ॥**

---

ಧ್ಯಾಯಮಾನಃ ಸ್ವಪಾರ್ಷದವಿಬುಧಯೂಥಪತೀನಪರಿಮ್ಲಾನರಾಗನವತುಲಸಿಕಾಮೋದಮಧ್ವಾಸವೇನ ಮಾದ್ಯನ್ಮಧುಕರವ್ರಾತಮಧುರಗೀತಶ್ರಿಯಂ ವೈಜಯಂತೀಂ ಸ್ವಾಂ ವನಮಾಲಾಂ ನೀಲವಾಸಾ ಏಕಕುಂಡಲೋ ಹಲಕಕುದಿ ಕೃತಸುಭಗಸುಂದರಭುಜೋ ಭಗವಾನ್ಮಹೇಂದ್ರೋ ವಾರಣೇಂದ್ರ ಇವ ಕಾಂಚನೀಂ ಕಕ್ಷ್ಯಾಮುದಾರಲೀಲೋ ಬಿಭರ್ತಿ ।'

['ಸಿದ್ಧಾರ್ಥಃ=ಸರ್ಷಪಃ । ಹಲಸ್ಯ=ನಿಜಾಯುಧಸ್ಯ, ಕಕುದಿ=ಅಗ್ರೇ । ಕಕ್ಷ್ಯಾಂ=ಉದರಬಂಧನಮ್' (ವಿಜಯಧ್ವ.)]

೧ ತಥಾಚ ಮಂತ್ರಃ— 'ॐ क्षिप स्वाहा'

'ಸಂವರ್ತಕೋ ನೇತ್ರಯುತಃ ಪಾರ್ಶ್ವಸ್ತಾರೋಽಗ್ನಿಸುಂದರೀ ।
ಗಾರುಡೋ ಮನುರಾಖ್ಯಾತೋ ವಿಷದ್ವಯವಿನಾಶನಃ ॥' (ಶಾರದಾ)

['ಸಂವರ್ತಕಃ=ಕ್ಷಃ, ನೇತ್ರಂ=ಇಕಾರಃ, ತದ್ಯುತಃ, ತೇನ ಕ್ಷಿ, ಪಾರ್ಶ್ವಃ=ಪಕಾರಃ, ತಾರಃ=ಪ್ರಣವಃ, ಅಗ್ನಿಸುಂದರೀ=ಸ್ವಾಹಾ । ವಿಷದ್ವಯಂ=ಸ್ಥಾವರಜಂಗಮಮ್ ।' (ಪದಾರ್ಥಾ)]

'ವರ್ಣೈರಂಗಾನಿ, ಪಂಕ್ತಿಶ್ಛಂದಃ ।' (ನಾರಾ.)

೨ 'ಕಶ್ಯಪ ಏವ ಕಾಶ್ಯಪಃ' (ನಾರಾ.)

ಗರುಡಮಂತ್ರದ್ರಷ್ಟೃಗಳು ಕಶ್ಯಪರೇ ಎಂದು ನಾರಾಯಣೀಯ ಟೀಕೆಯುಗಳ ಅಭಿಪ್ರಾಯ. ಈ ವಿಷಯ ಇನ್ನೂ ವಿಚಾರಣೀಯವಾಗಿದೆ. ಪರೀಕ್ಷಿದ್ರಾಜನನ್ನು ಕೊಲ್ಲ ಹೊರಟ ತಕ್ಷಕನ ವಿಷಶಕ್ತಿಯನ್ನೂ ದಮನಮಾಡಬಲ್ಲ ವಿಷಹರ ಮಂತ್ರವನ್ನು ಬಲ್ಲ ಒಬ್ಬ ಕಾಶ್ಯಪಋಷಿಯ ಉಲ್ಲೇಖ ಭಾರತದಲ್ಲಿದೆ—

'ಕಾಶ್ಯಪೋಽಭ್ಯಾಗಮದ್ವಿದ್ವಾಂಸ್ತಂ ರಾಜಾನಂ ಚಿಕಿತ್ಸಿತುಮ್ ।'
ಕಾಶ್ಯಪ ಉವಾಚ—
'ಅಹಂ ತಂ ನೃಪತಿಂ ಗತ್ವಾ ತ್ವಯಾ ದಷ್ಟಮಪಜ್ವರಮ್ ।
ಕರಿಷ್ಯಾಮೀತಿ ಮೇ ಬುದ್ಧಿರ್ವಿದ್ಯಾಬಲಸಮನ್ವಿತಃ ॥'

**ದಧಾನಃ ಕುಂಭಮಭಯಂ ಪೀತಶುಕ್ಲಾರುಣೋ ಹರಿಃ[1] ।**
**ಕೃಷ್ಣಶ್ಚಾಽಜಾನುತೋ ನಾಭೇಃ ಕಂಠಾತ್ಕಾ[2]ದಂತ ಏವ ಚ[3] ॥೮೪॥**
**ಪ್ರಿಯಾಯುಕ್ ಪುರತೋ ವಿಷ್ಣೋಃ ಪಕ್ಷತುಂಡಸಮನ್ವಿತಃ ।**
**ಜಂಗಮಸ್ಥಾವರವಿಷಹೃದಯಂ[4] ಸರ್ವಕಾಮದಃ ॥ ೮೫ ॥**

‘ಓಂ’ಕಾರದ ನಂತರ ಚತುರ್ಥ್ಯಂತವಾದ ‘ಪಕ್ಷಿ’ಶಬ್ದ. ಅನಂತರ ‘ಸ್ವಾಹಾ’ ಶಬ್ದ ಇದು ಗಾರುಡಮಂತ್ರ. ಈ ಮಂತ್ರದ್ರಷ್ಟೃ ಕಾಶ್ಯಪಋಷಿ. ಅಮೃತಪೂರ್ಣವಾದ ಬಂಗಾರದ ಕಲಶವನ್ನೂ ಅಭಯಮುದ್ರೆಯನ್ನೂ ಕೈಗಳಲ್ಲಿ ಧರಿಸಿಕೊಂಡು, ರೆಕ್ಕೆಕೊಕ್ಕುಗಳಿಂದ ಭೂಷಿತನಾಗಿ, ತನ್ನ ಪತ್ನಿಯಾದ ಸೌವರ್ಣಿಯೊಡನೆ ಶ್ರೀಹರಿಯ ಎದುರು ನಿಂತಿರುವ, ಪಾದದಿಂದ ಮೊಣಗಂಟಿನವರೆಗೆ ಹಳದಿಯಾಗಿರುವ, ಅಲ್ಲಿಂದ ಹೊಕ್ಕುಳಿನವರೆಗೆ ಬಿಳಿಯದಾಗಿರುವ, ಅಲ್ಲಿಂದ ಕುತ್ತಿಗೆಯ ತನಕ ಕೆಂಪಗಿರುವ, ಅಲ್ಲಿಂದ ತಲೆಯ ತನಕ ಹಸುರಾಗಿರುವ, ತಲೆಯಲ್ಲಿ ಕಪ್ಪಗಿರುವ ಗರುಡಮೂರ್ತಿಯನ್ನು ಧ್ಯಾನಿಸಬೇಕು. ಈ ಮಂತ್ರವು ಸರ್ಪಮೊದಲಾದ ಜಂಗಮಪ್ರಾಣಿಯ ವಿಷಗಳನ್ನೂ ಸ್ಥಾವರ ವಿಷಗಳನ್ನೂ ಪರಿಹರಿಸಬಲ್ಲುದು; ಸಕಲ ಅಭೀಷ್ಟಗಳನ್ನು ಕೊಡಬಲ್ಲುದು.

## ದಿಕ್ಪಾಲಮಂತ್ರಗಳು

**ಮಂತ್ರಾಶ್ಚ ಲೋಕಪಾಲಾನಾಂ ನಮೋಽಂತಾಃ[5] ಸರ್ವಕಾಮದಾಃ ।**

---

ಈ ಕಾಶ್ಯಪನೇ ಗರುಡಮಂತ್ರದ ದ್ರಷ್ಟೃ ಆಗಿರಬಹುದೆ? ತಂತ್ರಾಂತರದಲ್ಲಿ ಈ ಮಂತ್ರದೇವತೆ ರುದ್ರ ಎಂದಿದೆ.

೧ ಹರಿಃ=ಹರಿದ್ವರ್ಣಃ ।

೨ ಕಾತ್=ಶಿರಸಃ ।

೩ ಈ ಬಣ್ಣಗಳ ವಿಷಯ ಗ್ರಂಥಾಂತರದಲ್ಲೂ ಬಂದಿದೆ—

‘ಆ ಜಾನುತಃ ಸುವರ್ಣಾಭಮಾ ನಾಭೇಸ್ತು ಹಿಮಪ್ರಭಮ್ ।
ಕುಂಕುಮಾರುಣಮಾ ಕಂಠಾದಾ ಕೇಶಾಂತಾತ್ಸಿತೇತರಮ್ ॥’ (ನಾರಾ. ತಂತ್ರ)

೪ ಅಯಂ=ಮಂತ್ರಃ ಸರ್ವಕಾಮದಃ ।

೫ ತಥಾಚ ಮಂತ್ರಾಃ— ‘इन्द्राय नमः ।’ ‘अग्नये नमः ।’ ‘यमाय नमः ।’ ‘निर्ऋतये नमः ।’ ‘वरुणाय नमः ।’ ‘वायवे नमः ।’ ‘सोमाय नमः ।’ ‘कुबेराय नमः ।’ ‘ईशानाय नमः ।’

‘ಅತ್ರ ಸರ್ವತ್ರ ಬ್ರಹ್ಮಾ ಋಷಿಃ । ವರ್ಣೈರಂಗನ್ಯಾಸಃ । ಅಕ್ಷರಸಂಖ್ಯಾನು-

**ನೀಲರಕ್ತಾಸಿತಶ್ವೇತರಕ್ತಶುಕ್ಲಾಶ್ಚ ವರ್ಣತಃ ||೮೬||**
**ಸಪ್ರಿಯಾಃ ಸಾಭಯಾ ವಜ್ರಶಕ್ತಿದಂಡಾಸಿಪಾಶಿನಃ |**

---

ನಾರೇಣ ಛಂದೋ ಜ್ಞೇಯಮ್ | ಮಂತ್ರಪಂಚಕಸ್ಯ ಪಂಕ್ತಿಃ | ಚತುರ್ಣಾಂ ಗಾಯತ್ರೀ |' (ನಾರಾ.)

ಇಲ್ಲಿರುವ ವಾಯುಮಂತ್ರವು ಪ್ರಧಾನ ವಾಯುಮಂತ್ರದಿಂದ ಭಿನ್ನವಾಗಿದೆ. ದಿಕ್ಪಾಲಕನಾದ ವಾಯು ಪ್ರಧಾನವಾಯುಪುತ್ರನಾದ ಅಮುಖ್ಯವಾಯು ಎಂದು ತಾತ್ಪರ್ಯನಿರ್ಣಯದಲ್ಲಿ ಆಚಾರ್ಯರೇ ನುಡಿದಿದ್ದಾರೆ—

'ಪ್ರಧಾನವಾಯೋಸ್ತನಯಂ ಚ ವಾಯುಂ
ಕೋಣಾಧಿಪಂ ವಹ್ನಿಯಮಾದಿಕಾನಪಿ |'

೧ 'ಇಂದ್ರೋ ನೀಲವರ್ಣಃ | ಅಗ್ನೀ ರಕ್ತವರ್ಣಃ | ಯಮನಿರ್ಋತೀ ಅಸಿತೌ | ವರುಣಃ ಶ್ವೇತವರ್ಣಃ | ವಾಯುಕುಬೇರೌ ರಕ್ತವರ್ಣೌ | ಚಂದ್ರೇಶಾನೌ ಶುಕ್ಲಾವಿತಿ ವಿವೇಕಃ |' (ನಾರಾ.)

ದೇವತೆಗಳ ವರ್ಣಗಳ ವಿಷಯದಲ್ಲಿ ತಂತ್ರಗಳಲ್ಲಿ ಸ್ವಲ್ಪಮಟ್ಟಿಗೆ ಮತಭೇದವಿದೆ. ಇಂದ್ರನ ಬಣ್ಣ ಹಳದಿ ಎಂದೂ ವಾಯುವಿನ ಬಣ್ಣ ಕಪ್ಪೆಂದೂ ಕೆಲವೆಡೆ ಉಲ್ಲೇಖವಿದೆ. ಆಯುಧಗಳ ವಿಷಯದಲ್ಲೂ ಸ್ವಲ್ಪ ಭೇದವಿದೆ. ಕೆಲವು ತಂತ್ರಗಳ ರೀತ್ಯಾ ವಾಯುವಿನ ಆಯುಧ ಅಂಕುಶ. ಚಂದ್ರನ ಆಯುಧ ಗದೆ. ಇನ್ನು ಕೆಲವು ತಂತ್ರಗಳ ರೀತ್ಯಾ—ವಾಯುವಿನ ಆಯುಧ ಧ್ವಜ. ಚಂದ್ರನದು ಶಿಶಿರಾಸ್ತ್ರ ಅಥವಾ ಗದೆ.

'ವಜ್ರಂ ಶಕ್ತಿಂ ಚ ದಂಡಂ ಚ ಖಡ್ಗಂ ಪಾಶಂ ಧ್ವಜಂ ತಥಾ |
ಗದಾಂ ತ್ರಿಶೂಲಂ ಚ ಬಹಿಸ್ತೇಷಾಮಸ್ತ್ರಾಣಿ ಕಲ್ಪಯೇತ್ ||' (ವಿಷ್ಣುಸಂ.)
'ಇಂದ್ರಮಗ್ನಿಂ ಯಮಂ ರಕ್ಷೋ ವರುಣಂ ಪವನಂ ವಿಧುಮ್ |
ಈಶಾನಂ ಪನ್ನಗಾಧೀಶಮಥ ಊರ್ಧ್ವಂ ಪಿತಾಮಹಮ್ ||
ಪೀತೋ ರಕ್ತೋಽಸಿತೋ ಧೂಮ್ರಃ ಶುಕ್ಲೋ ಧೂಮ್ರಃ ಸಿತಾವುಭೌ |
ಗೌರೋಽರುಣಃ ಕ್ರಮಾದೇತೇ ವರ್ಣತಃ ಪರಿಕೀರ್ತಿತಾಃ ||
ವಜ್ರಂ ಶಕ್ತಿಂ ದಂಡಮಸಿಂ ಪಾಶಮಂಕುಶಕಂ ಗದಾಮ್ |
ಶೂಲಂ ಚಕ್ರಂ ಪದ್ಮಮೇಷಾಮಾಯುಧಾನಿ ಕ್ರಮಾದ್ವಿದುಃ ||' (ಶಾರದಾ.)
'ಶತಧಾಮನಿಭಂ ಧ್ಯಾಯೇಚ್ಚತುರ್ಬಾಹುಂ ಪುರಂದರಮ್ |
ಸುಸಿತದ್ವಿಪಸಂಸ್ಥಂ ತು ಸುತೀಕ್ಷ್ಣಕುಲಿಶೋದ್ಯತಮ್ ||
ಅಜಾರೂಢಂ ಸ್ಮರೇದ್ರಕ್ತಂ ಶಕ್ತಿಪಾಣಿಂ ಹುತಾಶನಮ್ |
ಸಹಸ್ರಾರ್ಚಿರ್ಭಿರಾಕೀರ್ಣಂ ಸಹಸ್ರಾದಿತ್ಯಭಾಸುರಮ್ ||
ಮಹಾಮಹಿಷಸಂಸ್ಥಂ ತು ಅಂಜನಾದ್ರಿಸಮಪ್ರಭಮ್ |
ಸುಭೀಮದಂಡಹಸ್ತಂ ತು ಸ್ಮರೇದ್ದೇವಂ ಪಿತ್ರೀಶ್ವರಮ್ ||

**ಗದಾಕುಮುದಶೂಲೇಷ್ಟಖಡ್ಗಿನೋ[1] ಭೂಷಣೋಜ್ಜ್ವಲಾಃ ॥೮೭॥**

‘ನಮಃ’ ಪದದಿಂದ ಕೂಡಿದ ದಿಕ್ಪಾಲಕರ ನಾಮಧೇಯಗಳು ಸರ್ವಾಭೀಷ್ಟಪ್ರದಗಳಾದ ಮಂತ್ರಗಳಾಗಿವೆ. ತಮ್ಮ ಪತ್ನಿಯರಿಂದ ಕೂಡಿಕೊಂಡು ಅಲಂಕೃತರಾಗಿ ದಿವ್ಯರೂಪರಾಗಿರುವ ದೇವತೆಗಳನ್ನು ಧ್ಯಾನಿಸಬೇಕು. ಎಲ್ಲ ದೇವತೆಗಳೂ ಒಂದು ಕೈಯಲ್ಲಿ ಅಭಯಮುದ್ರೆಯನ್ನೂ ಇನ್ನೊಂದು ಕೈಯಲ್ಲಿ ತಮ್ಮ ಆಯುಧಗಳನ್ನೂ ಧರಿಸಿಕೊಂಡಿದ್ದಾರೆ. ಅವರ ರೂಪ ಮತ್ತು ಆಯುಧಗಳು ಈ ತೆರವಾಗಿವೆ—

---

ದಂಷ್ಟ್ರಾಕರಾಲವದನಂ ಕೃಷ್ಣಮೇಘಸಮಪ್ರಭಮ್ ।
ಘೋರಂ ಪ್ರೇತಾಸನಂ ಧ್ಯಾಯೇತ್ ಖಡ್ಗಧೃಗ್ರಾಕ್ಷಸೇಶ್ವರಮ್ ॥
ಮುಕ್ತಾಫಲದ್ಯುತಿಸಮಂ ಭೀಮಂ ಪಾಶಕರೋದ್ಯತಮ್ ।
ನಾಗಕನ್ಯಾಸಹಸ್ರಾಢ್ಯಂ ಮಕರಸ್ಥಮಪಾಂಪತಿಮ್ ॥
ನೀಲತೋಯದಸಂಕಾಶಂ ಮಹಾಧ್ವಜಪಟಾಂಕಿತಮ್ ।
ಧ್ಯಾಯೇತ್ಸಮೀರಣಂ ದೇವಂ ಸಂಸ್ಥಿತಂ ಹರಿಣೋಪರಿ ॥
ಸೋಮಂ ತಾರಾಗಣೋಪೇತಂ ಶಂಖಗೋಕ್ಷೀರಪಾಂಡುರಮ್ ।
ಬೃಹಚ್ಛಶಕಪೃಷ್ಠಸ್ಥಂ ಶಿಶಿರಾಸ್ತ್ರಕರಂ ಸ್ಮರೇತ್ ॥
ಸಿತಭೂತಿವಿಲಿಪ್ತಾಂಗಂ ತ್ರಿಣೇತ್ರಂ ವೃಷವಾಹನಮ್ ।
ತ್ರಿಶೂಲಾಯುಧಹಸ್ತಂ ಚ ತ್ವೀಶಾನಂ ಸಗಣಂ ಸ್ಮರೇತ್ ॥’ (ಮಾಹೇಶ್ವರಸ.)

ಶಾರದಾತಿಲಕದಲ್ಲೂ ಚಂದ್ರಮಂತ್ರಧ್ಯಾನದಲ್ಲಿ ‘ಹಸ್ತಾಭ್ಯಾಂ ಕುಮುದಂ ವರಂ ಚ ದಧತಂ’ ಎಂದು ಕುಮುದಾಯುಧತ್ವವನ್ನು ಉಲ್ಲೇಖಿಸಿದ್ದುಂಟು.

೧ ಇಲ್ಲಿ ಎರಡು ಮೂರು ತೆರನಾದ ಪಾಠವಿದೆ. ‘ಶೂಲಷ್ಟ್ಯರ್ಖಡ್ಗಿನಃ’ ಎಂದು ಫಲಾರೀಯದ ಪಾಠ. ಅವರ ಪಕ್ಷದಲ್ಲಿ ‘ಋಷ್ಟಿ’ (ಕತ್ತಿ) ಅನಂತನ ಆಯುಧ. ಖಡ್ಗ ಬ್ರಹ್ಮನ ಆಯುಧ. ಹೀಗೆ ೧೦ ಲೋಕಪಾಲಕರೂ ಇಲ್ಲಿ ಪ್ರತಿಪಾದ್ಯರು. ಆದರೆ ತುಳು ಪುಸ್ತಕದಲ್ಲಿ ‘ಶೂಲೇಷ್ಟಖಡ್ಗಿನಃ’ ಎಂದೇ ಪಾಠವಿದೆ. ನಾರಾಯಣೀಯದ ‘ಶೂಲೇಷ್ಟಿಖಡ್ಗಿನಃ’ ಎಂಬ ಪಾಠವೂ ಅಷ್ಟು ಚೆನ್ನಲ್ಲ. ಅವರ ಪಕ್ಷದಲ್ಲಿ ‘ಇಷ್ಟಿ’ ಎಂದರೆ ‘ಯಷ್ಟಿ’ ಎಂದರ್ಥ! ಬ್ರಹ್ಮ ಮತ್ತು ಶೇಷರ ಮಂತ್ರಗಳು ಹಿಂದೆಯೇ ಉಕ್ತಗಳಾಗಿವೆ ಎಂತಲೇ ಇಲ್ಲಿಯೂ ಅವುಗಳನ್ನು ಆಚಾರ್ಯರು ಹೇಳಿರಲಾರರು ಎನ್ನುವ ಕಾರಣದಿಂದ ಫಲಾರೀಯದ ಅರ್ಥವನ್ನು ನಾನು ಬಳಸಿಕೊಂಡಿಲ್ಲ. ಮಾತ್ರವಲ್ಲ— ‘ಶೂಲೇಷ್ಟಖಡ್ಗಿನಃ’ ಎಂಬ ಪಾಠದಲ್ಲಿ ಫಲಾರೀಯದಂತೆ ಹತ್ತು ಆಯುಧಗಳನ್ನು ನಿರೂಪಿಸಬರುವಂತೆಯೂ ಇಲ್ಲ. ತುಳುಪಾಠದ ಅರ್ಥ ಕೆಳಗಿನಂತಿದೆ—

**ಗದಾಕುಮುದಶೂಲಾನಿ ಚ ಆಯುಧತ್ವೇನೇಷ್ಟಾನಿ ಯೇಷಾಂ ಪ್ರಾತಿಸ್ವಿಕತಯಾ ತಾದೃಶಾಶ್ಚ, ಖಡ್ಗಿನಶ್ಚ ಸರ್ವೇ ।**

| | | |
|---|---|---|
| ಇಂದ್ರ | ಹಳದಿ | ವಜ್ರ |
| ಅಗ್ನಿ | ಕೆಂಪು | ಶಕ್ತಿ |
| ಯಮ | ಕಪ್ಪು | ದಂಡ |
| ನಿರ್ಋತಿ | ,, | ಖಡ್ಗ |
| ವರುಣ | ಬಿಳಿ | ಪಾಶ |
| ವಾಯು | ಕಪ್ಪು | ಗದೆ |
| ಸೋಮ | ಕೆಂಪು | ಕುಮುದ |
| ಕುಬೇರ | ,, | ,, |
| ಈಶಾನ | ಬಿಳಿ | ಶೂಲ |

ಇವರೆಲ್ಲರಿಗೂ ಖಡ್ಗವು ಸಮಾನವಾದ ಆಯುಧವಾಗಿದೆ.

## ಸ್ಕಂದಮಂತ್ರ

**ಅಗ್ನಿಶ್ಚ ಸ್ವಯಮುದ್ದೇಶೀ ಸನಮಃ ಸ್ಕಂದವಾಚಕಃ[1] ।**
**ಕೌಶಿಕೋಽಸ್ಯ ಮುನಿರ್ವಹ್ನಿವರ್ಣಃ ಷಣ್ಮುಖ ಉಜ್ಜ್ವಲಃ ।**
**ಧನುಃಶಕ್ತಿಧರೋ ಧ್ಯೇಯಃ ಕಾಮದೋ ಭಯನಾಶನಃ ॥ ೮೮ ॥**

ಅಗ್ನಿಯ ಬೀಜಾಕ್ಷರ, ಚತುರ್ಥ್ಯಂತವಾದ 'ಸ್ಕಂದ'ಶಬ್ದ ಮತ್ತು 'ನಮಃ' ಶಬ್ದ–ಇದು ಸ್ಕಂದಮಂತ್ರ. ಈ ಮಂತ್ರದ ದ್ರಷ್ಟೃ ವಿಶ್ವಾಮಿತ್ರಋಷಿ. ಬೆಂಕಿಯಂತೆ ರಕ್ತವರ್ಣನೂ ತೇಜಸ್ವಿಯೂ ಆದ, ಧನುಸ್ಸು-ಶಕ್ತ್ಯಾಯುಧಗಳನ್ನು ಧರಿಸಿರುವ, ಆರು ಮೋರೆಗಳುಳ್ಳ ಸ್ಕಂದನನ್ನು ಧ್ಯಾನಿಸಬೇಕು. ಈ ಮಂತ್ರವು ಅಭೀಷ್ಟಪ್ರದವೂ ಭಯನಿವಾರಕವೂ ಆಗಿದೆ.

## ಸೂರ್ಯಮಂತ್ರ

**ಹ್ರಸ್ವಃ ಕೃಪಾಲುಃ ಸೇಂತಶ್ಚ ಸ್ವಯಮನ್ಯಃ ಸ್ವಯಂ ತಥಾ ।**
**ಸತಾರೋಽಷ್ಟಾಕ್ಷರಃ ಸೌರಃ[2] ಕ್ರಮಾವೃತ್ತ್ಯಾ ಮತಃ ಪದೈಃ ॥ ೮೯ ॥**

---

೧ ತಥಾಚ ಮಂತ್ರಃ— 'र स्कन्दाय नमः ।'
'ಅಸ್ಯ ಮಂತ್ರಸ್ಯ ಕೌಶಿಕಃ=ವಿಶ್ವಾಮಿತ್ರ ಋಷಿಃ । ವರ್ಣೈರಂಗಾನಿ' (ಛಲಾ.)

೨ ತಥಾಚ ಮಂತ್ರಃ— 'ಓಂ घृणिः सूर्य आदित्यः ।'
'ತಾರೋ ಘೃಣಿರ್ಭೃಗುಃ ಪಶ್ಚಾದ್ವಾಮಕರ್ಣಾವಿಭೂಷಿತಃ ।
ವಹ್ನ್ಯಾಸನೋ ಮರುಚ್ಛೇಷಃ ಸನೇತ್ರೋಽತ್ರಿಸ್ತ್ಯಪಶ್ಚಿಮಃ ॥

**ಅಂಗಾನಿ[1] ಪದ್ಮಯುಗಲಧರೋ ಧ್ಯೇಯೋಽರುಣೋ ರವಿಃ[2] ।**
**ಸರ್ವವ್ಯಾಧಿಹರಃ ಶ್ರೀದೋ ವೃಷ್ಟಿದೋಽಯಂ ಮನುಃ ಸ್ಮೃತಃ ॥**

ಕೃಪಾಲು ಎಂಬ ಅರ್ಥದ, ಹ್ರಸ್ವಾಂತವಾದ ಮತ್ತು ವಿಸರ್ಗಯುಕ್ತವಾದ 'ಘೃಣಿ' ಶಬ್ದ, ಆದಿತ್ಯವಾಚಕಗಳಾದ 'ಸೂರ್ಯ' ಮತ್ತು 'ಆದಿತ್ಯ' ಶಬ್ದಗಳು, ಪ್ರಾರಂಭದಲ್ಲಿ 'ಓಂ'ಕಾರ–ಇದು ಸೂರ್ಯಾಷ್ಟಾಕ್ಷರಮಂತ್ರ, ಓಂಕಾರವನ್ನು ಬಿಟ್ಟು ಉಳಿದ ಮೂರು ಪದಗಳಿಂದ ಕ್ರಮವಾಗಿ ಮತ್ತು ವ್ಯುತ್ಕ್ರಮವಾಗಿ ಅಂಗನ್ಯಾಸವನ್ನಾಚರಿಸಬೇಕು. ಎರಡು ತಾವರೆಗಳನ್ನು ಕೈಯಲ್ಲಿ ಹಿಡಿದಿರುವ ಕೆಂಬಣ್ಣದ ಸೂರ್ಯನನ್ನು ಧ್ಯಾನಿಸಬೇಕು. ಈ ಮಂತ್ರವು ಸರ್ವವ್ಯಾಧಿವಿನಾಶಕವಾಗಿದೆ, ಸಂಪತ್ಪ್ರದವಾಗಿದೆ, ಮಳೆ ಬೆಳೆಯನ್ನು ಕೊಡುವುದರಲ್ಲೂ ಸಮರ್ಥವಾಗಿದೆ.

---

ಅಷ್ಟಾಕ್ಷರೋ ಮನುಃ ಪ್ರೋಕ್ತೋ ಭಾನೋರಭಿಮತಪ್ರದಃ ।
ದೇವಭಾಗೋ ಮುನಿಃ ಪ್ರೋಕ್ತೋ ಗಾಯತ್ರೀ ಛಂದ ಈರಿತಮ್ ।
ಆದಿತ್ಯೋ ದೇವತಾ ಪ್ರೋಕ್ತೋ ದೃಷ್ಟಾದೃಷ್ಟಫಲಪ್ರದಃ ॥' (ಶಾರದಾ.)

['ಘೃಣಿರಿತಿ ಸ್ವರೂಪಮ್ । ಭೃಗುಃ=ಸಃ । ವಾಮಕರ್ಣಃ=ಊ, ತೇನ ವಿಭೂಷಿತಸ್ತೇನ ಸೂ । ಮರುತ್=ಯಕಾರಃ, ವಹ್ನೇಃ=ರೇಫಸ್ಯಾಸನಃ, ತೇನ ರ್ಯಃ । ಶೇಷಃ=ಅನಂತಃ=ಆ । ಅತ್ರಿಃ=ದಃ । ಸನೇತ್ರಃ=ಇಕಾರಯುಕ್ತಃ ತೇನ ದಿ । ತ್ಯಪಶ್ಚಿಮ ಇತಿ ಮಂತ್ರವಿಶೇಷಣಮ್ ।' (ಪದಾರ್ಥಾ.)]

ಈ ಮಂತ್ರಕ್ಕೆ 'ಓಂ'ಕಾರವನ್ನು ಬಿಟ್ಟೂ ಅಷ್ಟಾಕ್ಷರತ್ವವಿದೆಯೆಂದು ಉಪನಿಷತ್ತಿನಿಂದ ತಿಳಿದುಬರುವುದು—

'ಘೃಣಿರಿತಿ ದ್ವೇ ಅಕ್ಷರೇ, ಸೂರ್ಯ ಇತಿ ತ್ರೀಣಿ, ಆದಿತ್ಯ ಇತಿ ತ್ರೀಣಿ । ಏತದ್ವೈ ಸಾವಿತ್ರಸ್ಯಾಷ್ಟಾಕ್ಷರಂ ಪದಂ ಶ್ರಿಯಾಭಿಷಿಕ್ತಂ ಯ ಏವಂ ವೇದ ಶ್ರಿಯಾ ಹೈವಾಭಿಷಿಚ್ಯತೇ ।' (ನಾರಾಯಣೋಪ.)

೧ ಅಂಗನ್ಯಾಸ—

'ಘೃಣಿಃ ಹೃದಯಾಯ ನಮಃ । ಸೂರ್ಯಃ ಶಿರಸೇ ಸ್ವಾಹಾ । ಆದಿತ್ಯಃ ಶಿಖಾಯೈ ವಷಟ್ । ಆದಿತ್ಯಃ ಕವಚಾಯ ಹುಮ್ । ಸೂರ್ಯಃ ನೇತ್ರಾಭ್ಯಾಂ ವೌಷಟ್ । ಘೃಣಿಃ ಅಸ್ತ್ರಾಯ ಫಟ್ ।'

೨ 'ರಕ್ತಾಬ್ಜಯುಗ್ಮಾಭಯದಾನಹಸ್ತಂ
ಕೇಯೂರಹಾರಾಂಗದಭೂಷಣಾಢ್ಯಮ್ ।'
'ಪದ್ಮದ್ವಯಾಭಯವರಾನ್ ದಧತಂ ಕರಾಬ್ಜೈಃ
ಮಾಣಿಕ್ಯಮೌಲಿಮರುಣಾಂಗರುಚಿಂ ತ್ರಿನೇತ್ರಮ್ ।' (ಶಾರದಾ.)

## ಕ್ಷಿಪ್ರಪ್ರಸಾದಮಂತ್ರ

**'ನೋಽನೆಯದಾಸಾಪ್ರಪ್ರಕ್ಷಿ' ವ್ಯತ್ಯಸ್ತೋ ವಿಘ್ನರಾಣ್ಮನುಃ[1] ।**
**ರಕ್ತಾಂಬರೋ ರಕ್ತತನೂ ರಕ್ತಮಾಲ್ಯಾನುಲೇಪನಃ ॥ ೯೧ ॥**
**ಲಂಬೋದರೋ ಗಜಮುಖಃ ಪಾಶದಂತಾಂಕುಶಾಭಯೋ[2] ।**
**ಬಿಭ್ರದ್ಧ್ಯೇಯೋ ವಿಘ್ನಹರಃ ಕಾಮದಸ್ತ್ವರಯಾ ಹ್ಯಯಮ್॥ ೯೨ ॥**

'ಮೋಽನಯದಾಸಾಪ್ರಪ್ರಕ್ಷಿ' ಎಂಬ ಅಕ್ಷರಗಳನ್ನು ಹಿಂದು ಮುಂದಾಗಿ ಪಠಿಸಿದಾಗ ಗಣಪತಿಮಂತ್ರವು ಸಿದ್ಧಸ್ವವಾಗುವುದು. ಈ ಮಂತ್ರದ ಧ್ಯೇಯ ಮೂರ್ತಿಯಾದ ಗಣಪತಿಯ ಮೈ ಕೆಂಪು, ಬಟ್ಟೆ ಕೆಂಪು, ಹೂಮಾಲೆ ಕೆಂಪು, ಬಳಿದುಕೊಂಡ ಚಂದನ ಕೆಂಪು; ಜೋತುಬಿದ್ದ ಹೊಟ್ಟೆ, ಆನೆಯ ಮೋರೆ-ಇದು ಅವನ ಆಕಾರ; ಅವನು ಕೈಗಳಲ್ಲಿ ಪಾಶ-ದಂತ-ಅಂಕುಶ-ಅಭಯ ಮುದ್ರೆಗಳನ್ನು ಧರಿಸಿಕೊಂಡಿದ್ದಾನೆ. ಈ ಮಂತ್ರವು ವಿಘ್ನಪರಿಹಾರಕ ವಾಗಿದೆ, ಶೀಘ್ರಫಲಪ್ರದವಾಗಿದೆ.

**ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋಧಯನ್ ।**
**ಏಕ ಏವ ಮಹಾಶಕ್ತಿಃ ಕುರುತೇ ಸರ್ವಮಂಜಸಾ ॥ ೯೩ ॥**

ಆಯಾಮಂತ್ರಪ್ರತಿಪಾದ್ಯರಾದ ಎಲ್ಲ ದೇವತೆಗಳಲ್ಲೂ ಸನ್ನಿಹಿತನಾಗಿದ್ದು ಕೊಂಡು, ಆ ಎಲ್ಲ ದೇವತೆಗಳಿಗೂ ಫಲಪ್ರದಾನಶಕ್ತಿಯನ್ನು ಕರುಣಿಸಿ, ಎಲ್ಲ ಕಾರ್ಯವನ್ನೂ ಸುವ್ಯವಸ್ಥಿತವಾಗಿ ನೆರವೇರಿಸುತ್ತ 'ಮಹಾಶಕ್ತಿ' ಎನ್ನಿಸಿ ಕೊಂಡವನು ಶ್ರೀಹರಿಯೊಬ್ಬನೆ ಸರಿ.

## ಧನ್ವಂತರಿಮಹಾಮಂತ್ರ

**ಸ್ವಯಮುದ್ದೇಶವಾನ್ ಪೂರ್ವವರ್ಣಪೂರ್ವೋ ನಮೋಯುತಃ[3] ।**

---

೧ ತಥಾಚ ಮಂತ್ರಃ— 'ಕ್ಷಿಪ್ರಪ್ರಸಾದಾಯ ನಮಃ ।'
'ಮಂತ್ರಗತಪದಯೋಸ್ತ್ರಿರಾವೃತ್ತ್ಯಾಂಗಾನಿ ।' (ನಾರಾ.)

೨ ಪಾಶದಂತಸಹಿತೇ ಅಂಕುಶಾಭಯೋ ದಧತ್ ।

೩ ಇಲ್ಲಿ ಒಂದು ತುಳು ಪುಸ್ತಕದಲ್ಲಿ 'ಪೂರ್ವವರ್ಣೋ ಹೃದಯಸಂಯುತಃ' ಎಂಬೂ ಪಾಠವಿದೆ. ಆದರೆ ಸೋದೆಮಠದ ಪುಸ್ತಕದಲ್ಲಿ ಕಂಡುಬರುವ ಈ ಪಾಠವು ಅರ್ಥತಃ ಸ್ವರಸವಿರುವುದರಿಂದ ಈ ಪಾಠವನ್ನೆ ಮೇಲೆ ಬಳಸಿಕೊಂಡಿದ್ದೇನೆ. 'ಪೂರ್ವ-ಪೂರ್ವೋ ಹೃದಯಸಂಯುತಃ' ಎಂಬ ಪಾಠ ಛಲಾರಿಯವರಿಗೆ ಸಮ್ಮತವಾದುದು.

**ಧಾನ್ವಂತರೋ ಮಹಾಮಂತ್ರಃ[1] ಸಂಸೃತಿವ್ಯಾಧಿನಾಶನಃ[2] ॥ ೬೪ ॥**

ಚತುರ್ಥ್ಯಂತವಾದ ಧನ್ವಂತರಿಶಬ್ದದ ಪೂರ್ವೋತ್ತರಗಳಲ್ಲಿ ಹೆಸರಿನ ಪ್ರಥಮಾಕ್ಷರವಾದ ಧಕಾರ ಮತ್ತು 'ನಮಃ'ಶಬ್ದಗಳು ಸೇರಿದಾಗ ಧನ್ವಂತರಿ ಮಹಾಮಂತ್ರವು ನಿಷ್ಪನ್ನವಾಗುವುದು. ಈ ಮಂತ್ರವು ಸಂಸಾರಿಗಳಾದ ಜನರನ್ನು ನಾನಾವಿಧವ್ಯಾಧಿಗಳ ಪೀಡೆಯಿಂದ ಬಿಡುಗಡೆಗೊಳಿಸಿ ಕೊನೆಗೆ ಸಂಸಾರದಿಂದಲೇ ಬಿಡುಗಡೆಗೊಳಿಸಬಲ್ಲುದು.[3]

**ಚಂದ್ರೌಘಕಾಂತಿಮಮೃತೋರುಕರೈರ್ಜಗಂತಿ**
**ಸಂಜೀವಯಂತಮಮಿತಾತ್ಮಸುಖಂ ಪರೇಶಮ್ ।**
**ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ**
**ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ॥ ೬೫ ॥**

ಅನಂತಚಂದ್ರರ ಕಾಂತಿಯಿಂದ ಬೆಳಗುವ, ಅಮೃತಸ್ರಾವಿಗಳಾದ ತನ್ನ ದಿವ್ಯಕಿರಣಗಳಿಂದ ಜಗತ್ತಿಗೆಲ್ಲ ಜೀವಕಳೆಯನ್ನು ತುಂಬುತ್ತಿರುವ, ಅಸೀಮಸುಖಸ್ವರೂಪನಾದ, ರಮಾಬ್ರಹ್ಮಾದಿಗಳಿಗೂ ಒಡೆಯನಾದ, ಒಂದು

---

೧ ತಥಾಚ ಮಂತ್ರಃ— 'धं धन्वन्तरये नमः ।'

೨ ಈ ಶ್ಲೋಕದ ನಂತರ 'ಅತ್ರೋಕ್ತಸರ್ವಮಂತ್ರಾಣಾಂ ನಾಯಕೋ ವಲಸನ್ನಿಭಃ' ಎಂಬ ಅರ್ಧ ಶ್ಲೋಕ ಈಗ ಮುದ್ರಿತವಾದ ಪುಸ್ತಕಗಳಲ್ಲಿ ಕಂಡುಬರುತ್ತಿದೆ. ಛಲಾರಿಯವರು ಅದಕ್ಕೆ ವ್ಯಾಖ್ಯಾನವನ್ನೂ ಬರೆದಿದ್ದಾರೆ. ಆದರೆ ಮೂಲಪ್ರತಿಯಲ್ಲಿ ಈ ಪಾಠ ಇದ್ದಂತಿಲ್ಲ. ಸೋದೆಮಠದ ಪುಸ್ತಕದಲ್ಲಿ ಮಾತ್ರ ಟಿಪ್ಪಣಿಯಂತೆ— ಅದನ್ನು ಕೆಳಬದಿಯಲ್ಲಿ ಯಾರೋ ಮತ್ತೆ ಬರೆದು ಸೇರಿಸಿದ್ದಾರೆ. ಹೊರತು ಮೂಲದ ಜತೆಗೆ ಬರೆದಿಲ್ಲ. ನಾರಾಯಣಾಚಾರ್ಯರು ಈ ವಾಕ್ಯಕ್ಕೆ ವ್ಯಾಖ್ಯಾನ ಬರೆಯದಿರುವುದೂ ಗಮನಿಸಬೇಕಾದ ವಿಷಯ. ಆದರಿಂದ ಈ ಅರ್ಧಶ್ಲೋಕ ಮೂಲದಲ್ಲಿದ್ದುದಲ್ಲ, ಪ್ರಕ್ಷಿಪ್ತವೇ ಇರಬೇಕು ಎಂದು ಊಹಿಸಲು ಶಕ್ಯವಿದೆ. ಯಾರೋ ಭಕ್ತಿವಂತರು ಈ ಮಂತ್ರದ ಮೇಲಿನ ಅತ್ಯಾದರದಿಂದ ಈ ಭಾಗವನ್ನು ಸೇರಿಸಿಬಿಟ್ಟಿರಬಹುದೇನೋ! ಈ ವಿಷಯದಲ್ಲಿ ನಿರ್ಣಯ ಮಾಡುವುದು ಸ್ವಲ್ಪ ದುಸ್ತರವೇ ಆಗಿದೆ.

೩ ಇತರ ದೇವತೆಗಳ ಮಂತ್ರಗಳನ್ನೆ ನಿರೂಪಿಸಿ ಕೊನೆಗೊಳಿಸಬಾರದು ಎಂಬ ಆಶಯದಿಂದ ಆಚಾರ್ಯರು ಕೊನೆಯಲ್ಲಿ ಧನ್ವಂತರಿಮಂತ್ರವನ್ನು ನಿರೂಪಿಸಿದ್ದಾರೆ ಎಂದು ಸಂಪ್ರದಾಯಜ್ಞರು ಅಭಿಪ್ರಾಯಪಡುತ್ತಾರೆ.

**'ಅನ್ಯದೇವತಾಮಂತ್ರೇ ಮಂತ್ರಸಮಾಪ್ತಿಮರೋಚಯಮಾನೋಽಷ್ಟಾಕ್ಷರ-ಧನ್ವಂತರಿಮಂತ್ರಮಾಹ-'ಸ್ವಯಮಿ'ತಿ ।'** (ನಾರಾ.)

ಕೈಯಲ್ಲಿ ಜ್ಞಾನಮುದ್ರೆಯನ್ನು ಇನ್ನೊಂದರಲ್ಲಿ ಅಮೃತಪೂರ್ಣವಾದ ಕಲಶವನ್ನು ಧರಿಸಿಕೊಂಡು ಚಂದ್ರಮಂಡಲದಲ್ಲಿ ಕುಳಿತಿರುವ ಧನ್ವಂತರಿ ಮೂರ್ತಿಯು ತನ್ನಲ್ಲಿ ಸನ್ನಿಹಿತನಾದಂತೆ ಧ್ಯಾನಿಸಬೇಕು.

ಮೂರ್ಧ್ನಿ ಸ್ಥಿತಾದಮೃತ ಏವ ಸುಧಾಂ ಸ್ರವಂತೀಂ
ಭ್ರೂಮಧ್ಯಗಾಚ್ಚ ತತ ಏವ ಚ ತಾಲುಸಂಸ್ಥಾತ್ ।
ಹಾರ್ದಾಚ್ಚ ನಾಭಿಸದನಾದಧರಸ್ಥಿತಾಚ್ಚ
ಧ್ಯಾತ್ವಾಽಪ್ಲಾವಿತತನುರ್ದುರಿತಂ ನಿಹನ್ಯಾತ್ ॥ ೯೬ ॥

ತನ್ನ ಶಿರಸ್ಸಿನಲ್ಲಿ, ಹುಬ್ಬುಗಳ ನಡುವಿನಲ್ಲಿ, ಕಿರುನಾಲಿಗೆಯಲ್ಲಿ, ಹೃದಯದಲ್ಲಿ, ಹೊಕ್ಕುಳಿನಲ್ಲಿ ಮತ್ತು ಕೆಳಭಾಗದಲ್ಲಿ ಹೀಗೆ ಸರ್ವಾಂಗಗಳಲ್ಲಿ ಸನ್ನಿಹಿತವಾದ ಧನ್ವಂತರಿಮೂರ್ತಿಯಿಂದ ಸುರಿಯುತ್ತಿರುವ ಅಮೃತಧಾರೆಯನ್ನು ನೆನೆದು ಆ ಅಮೃತಧಾರೆಯಲ್ಲಿ ತನ್ನ ಶರೀರವೆಲ್ಲ ತೊಯ್ದು ಪವಿತ್ರವಾದಂತೆ ಅನುಸಂಧಾನ ಮಾಡಬಲ್ಲ ಸಿದ್ಧಿಪಡೆದ ಮಂತ್ರಜಾಪಕನು ಎಲ್ಲ ದುರಿತವನ್ನು ದೂರೀಕರಿಸಬಲ್ಲನು.

ಅಜ್ಞಾನದುಃಖಭಯರೋಗಮಹಾವಿಷಾಣಿ
ಯೋಗೋಽಯಮಾಶು ವಿನಿಹಂತಿ ಸುಖಂ ಚ ದದ್ಯಾತ್ ।
ಉನ್ಮಾದವಿಭ್ರಮಹರಃ ಪರತಶ್ಚ ಸಾಂದ್ರ-
ಮಾನಂದಮೇವ ಪದಮಾಪಯತಿ ಸ್ಮ ನಿತ್ಯಮ್ ॥ ೯೭ ॥

ಈ ಮಂತ್ರವು ಅಜ್ಞಾನ, ದುಃಖ, ಹೆದರಿಕೆ, ನಾನಾವಿಧವ ರೋಗಗಳು, ಮಾರಕಗಳಾದ ವಿಷಗಳು—ಇವನ್ನೆಲ್ಲ ಪರಿಹರಿಸಿ ಸುಖವನ್ನೀಯುವುದು; ಮಾನಸಿಕ ರೋಗಗಳ ಪೀಡೆಯನ್ನು ಪರಿಹರಿಸಿ, ಪರದಲ್ಲಿ ಪರಮಸುಖವನ್ನು ನಿತ್ಯವೂ ಜಾಪಕರಿಗೆ ಕರುಣಿಸುವುದು.

ಧ್ಯಾತ್ವೈವ ಹಸ್ತತಲಗಂ ಸ್ವಮೃತಂ ಸ್ರವಂತಂ
ದೇವಂ ಸ ಯಸ್ಯ ಶಿರಸಿ ಸ್ವಕರಂ ನಿಧಾಯ ।
ಆವರ್ತಯೇನ್ಮನುಮಿಮಂ ಸ ಚ ವೀತರೋಗಃ
ಪಾಪಾದಪೈತಿ ಮನಸಾ ಯದಿ ಭಕ್ತಿನಮ್ರಃ ॥ ೯೮ ॥

ಮಂತ್ರಜಾಪಕನು ತನ್ನ ಅಂಗೈಯಲ್ಲಿ ಸನ್ನಿಹಿತನಾಗಿ ಅಮೃತವನ್ನು ಸುರಿಸುತ್ತಿರುವ ಧನ್ವಂತರಿಯನ್ನು ಮನಸ್ಸಿನಲ್ಲಿ ನೆನೆದುಕೊಂಡು ಯಾವನಾದರೂ ಒಬ್ಬನ ತಲೆಯಮೇಲೆ ಆ ಕೈಯನ್ನಿಟ್ಟು ಈ ಮಹಾಮಂತ್ರವನ್ನು

ಆವೃತ್ತಿಯಿಂದ ಪಠಿಸಿದರೆ ಆತನು ಪಾಪದಿಂದ ವಿಮುಕ್ತನಾಗಿ ನೀರೋಗಿಯಾಗುವನು. ಆದರೆ ಇದು ಆತನು ಭಗವದ್ಭಕ್ತನಾಗಿದ್ದು ಶ್ರದ್ಧೆಯಿಂದ ಕೂಡಿದ್ದರೆ ಮಾತ್ರ ಸಾಧ್ಯ ಎಂಬುದನ್ನು ಮರೆಯಬಾರದು.

**ಶತಂ ಸಹಸ್ರಮಯುತಂ ಲಕ್ಷಂ[1] ವಾಽಽರೋಗಸಂಕ್ಷಯಾತ್ ।**
**ಇಮಮೇವ ಜಪೇನ್ಮಂತ್ರಂ ಸಾಧೂನಾಂ[2] ದುಃಖಶಾಂತಯೇ ॥೯೯॥**

ಸಜ್ಜನರ ರೋಗಾದಿ ದುಃಖ ನಿವೃತ್ತಿಗಾಗಿ ಈ ಮಂತ್ರವನ್ನೇ ರೋಗದ ತಾರತಮ್ಯಕ್ಕನುಗುಣವಾಗಿ ನೂರು, ಸಾವಿರ, ಹತ್ತುಸಾವಿರ, ಒಂದು ಲಕ್ಷದವರೆಗೆ ಜಪಿಸಬೇಕು. ಇಷ್ಟೇ ಸಂಖ್ಯೆಯ ಜಪವೆಂದೇನೂ ನಿಯಮವಿಲ್ಲ. ರೋಗ ಹೆಚ್ಚು ಉಲ್ಬಣವಾಗಿದ್ದರೆ–ಅದಕ್ಕನುಗುಣವಾಗಿ ಮಂತ್ರ ಜಪದ ಆವೃತ್ತಿಯನ್ನು ಹೆಚ್ಚಿಸಬೇಕು.

**ಜ್ವರದಾಹಾದಿಶಾಂತ್ಯರ್ಥಂ ತರ್ಪಯೇನ್ಮನುನಾಽಮುನಾ ।**
**ಧ್ಯಾತ್ವಾ ಹರಿಂ ಜಲೇ ಸಪ್ತರಾತ್ರಾಜ್ಜೂರ್ತಿರ್ವಿನಶ್ಯತಿ[3] ॥ ೧೦೦ ॥**

ಜ್ವರದ ತಾಪ ಮೊದಲಾದುವನ್ನು ಪರಿಹರಿಸುವುದಕ್ಕಾಗಿ ಜಲದಲ್ಲಿ ಧನ್ವಂತರಿರೂಪಿಯಾದ ಹರಿಯನ್ನು ಧ್ಯಾನಿಸಿ ಏಳು ದಿನಗಳ ತನಕ ಈ ಮಂತ್ರದಿಂದ ತರ್ಪಣವನ್ನಿತ್ತರೆ ರೋಗವು ಹೇಳಹೆಸರಿಲ್ಲದಂತಾಗುವುದು.

**ಅಯುತಾಮೃತಸಮಿದ್ಧೋಮಾದ್ಗೋಘೃತಕ್ಷೀರಸಂಯುತಾತ್ ।**
**ಸರ್ವರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ ॥ ೧೦೧ ॥**

ದನದ ತುಪ್ಪ–ಹಾಲುಗಳಿಂದ ಬೆರಸಿದ ಅಮೃತಬಳ್ಳಿಯ ಸಮಿತ್ತುಗಳಿಂದ ಹತ್ತುಸಾವಿರಬಾರಿ ಈ ಮಂತ್ರದಿಂದಲೆ ಹೋಮಿಸಿದರೆ–ರೋಗಿಯು ಭಗವದ್ವಿಮುಖನಾದ ಪಾಪಚೇತನನಲ್ಲದಿದ್ದರೆ–ಎಲ್ಲ ರೋಗಗಳೂ ನಾಶವಾಗುವವು.

**ಭೂತಾಭಿಚಾರಶಾಂತ್ಯರ್ಥಮಪಾಮಾರ್ಗಾಹುತಿಕ್ರಿಯಾ ।**
**ದ್ವಿಗುಣಾಽಮೃತಯಾ ಪಶ್ಚಾತ್ಕೇವಲೇನ ಘೃತೇನ ವಾ ॥ ೧೦೨ ॥**

---

೧ ಸಂಖ್ಯಾನಾಮ ಚ ಶ್ರುತಾವಪ್ಯಭಿಹಿತಮ್—
'ದಶ ಚ ಶತಂ ಚ ಸಹಸ್ರಂ ಚಾಯುತಂ ಚ ನಿಯುತಂ ಚ ಪ್ರಯುತಂ ಚಾರ್ಬುದಂ ಚ ನ್ಯರ್ಬುದಂ ಚ ಸಮುದ್ರಶ್ಚ ಮಧ್ಯಶ್ಚಾಂತಶ್ಚ ಪರಾರ್ಧಶ್ಚ' ಇತಿ ।

೨ 'ಸಾಧೂನಾಮಿತ್ಯುಕ್ತ್ಯಾಽಸಾಧೂನಾಮುಕ್ತಫಲಂ ನೇತಿ ಸೂಚಯತಿ' (ನಾರಾ.)

೩ ಜೂರ್ತಿಃ=ಜ್ವರೋ ವಿನಶ್ಯತಿ । 'ಜ್ವರೇ ಜೂರ್ತಿಃ' (ಅಮರ)

ಭೂತಗ್ರಹಗಳ ಪೀಡೆ, ಮಾರಣಹೋಮ ಮೊದಲಾದ ಕ್ರೂರೋಪದ್ರವ ಶಾಂತಿಗಾಗಿ ಉತ್ತರಣೆಯ ಗಿಡದ ಸಮಿತ್ತುಗಳಿಂದ ಮೊದಲು ಹೋಮಿಸಿ ಅನಂತರ ಅಮೃತಬಳ್ಳಿಯ ಸಮಿತ್ತಿನಿಂದ ಅಥವಾ ಕೇವಲ ದನದ ತುಪ್ಪ ದಿಂದ ಅದರ ಎರಡರಷ್ಟು ಆಹುತಿಯನ್ನೀಯಬೇಕು.

**ಆಯುರ್ನಿರ್ವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥ ೧೦೩ ॥**

ಆಯುರ್ವೃದ್ಧಿಗಾಗಿ, ದನದ ಹಾಲು ತುಪ್ಪಗಳಿಂದ ತೊಯ್ದು ಕವಿರಿಸ ನಾಲ್ಕು ನಾಲ್ಕೇ ಕುಡಿಗಳಿಂದ ಇದೇ ಮಂತ್ರದಿಂದ ದಿನವೂ ಹೋಮಿಸ ಬಹುದು; ಅಥವಾ ಜನ್ಮನಕ್ಷತ್ರದ ದಿನದಂದು ಮಾತ್ರವಾದರೂ ಹೋಮಿಸ ಬೇಕು.

**ಸರ್ವಕ್ರಿಯಾ ಹರೌ ಭಕ್ತೈಃ ಹರಿಭಕ್ತೈಃ ಸ್ವನುಷ್ಠಿತಾಃ ।**
**ಗುರುಭಕ್ತೈಃ ಸದಾಚಾರೈಃ ಫಲಂತ್ಯದ್ಧಾ ನಚಾನ್ಯಥಾ ॥ ೧೦೪ ॥**

ಜಪಹೋಮ ಮುಂತಾದ ಯಾವುದೇ ಕ್ರಿಯೆಯಾದರೂ, ಹರಿಭಕ್ತನಿ ಗಾಗಿ ಹರಿಗುರುಭಕ್ತರಿಂದ ಆಚಾರಸಂಪನ್ನರಿಂದ ಆಚರಿಸಲ್ಪಟ್ಟರೆ ಮಾತ್ರವೇ ಚೆನ್ನಾಗಿ ಫಲಿಸಬಲ್ಲುದು ಹೊರತು ಅಭಕ್ತರಿಗಲ್ಲ.

**ಬ್ರಹ್ಮಾಂತಾ ಗುರವಶ್ಚೈವ ಸಂಪ್ರದಾಯಪ್ರವರ್ತಕಾಃ ।**
**ತತ್ತದ್ಗುಣಾನುಸಾರೇಣ ಪೂಜ್ಯಾ ಧ್ಯೇಯಾಶ್ಚ ಕೃತ್ಸ್ನಶಃ ॥ ೧೦೫ ॥**

ನಮ್ಮ ಗುರುಗಳಿಂದ ಚತುರ್ಮುಖನ ವರೆಗೆ ಶಾಸ್ತ್ರಸಂಪ್ರದಾಯಪ್ರವ ರ್ತಕರಾದ ಎಲ್ಲರೂ ಗುರುಗಳೆನಿಸಿದ್ದಾರೆ. ಅವರವರ ಗುಣಗಳನುಸಾರ ವಾಗಿ ಅವರೆಲ್ಲರನ್ನೂ ಸ್ಮರಿಸಬೇಕು, ಗೌರವಿಸಬೇಕು.

**ಸರ್ವೇಭ್ಯೋಽಭ್ಯಧಿಕಾ ಭಕ್ತಿರ್ವಿಷ್ಣೌ ಸ್ಯಾದತಿನಿಶ್ಚಲಾ ।**
**ಲಕ್ಷ್ಮೀಬ್ರಹ್ಮಾದಿಷು ತತಃ ಕ್ರಮೇಣ ಸ್ಯಾತ್ಸ್ವಭಾವಿತಾ ।**
**ಏವಂ ವಿದ್ಯಾಃ ಫಲಿಷ್ಯಂತಿ ನಾನ್ಯಥಾ ತು ಕಥಂಚನ ॥ ೧೦೬ ॥**

ಎಲ್ಲ ದೇವತೆಗಳಿಗಿಂತಲೂ ಮಿಗಿಲಾಗಿ ನಿರತಿಶಯವೂ ನಿಶ್ಚಲವೂ ಆದ ಭಕ್ತಿ ಶ್ರೀಹರಿಯೊಬ್ಬನಲ್ಲೆ ಇರಬೇಕು. ರಮಾಬ್ರಹ್ಮಾದಿಗಳಲ್ಲಿ ಅವರವರ ತಾರ ತಮ್ಯಕ್ಕನುಗುಣವಾಗಿ ತಾರತಮ್ಯೋಪೇತವಾದ ಭಕ್ತಿಯನ್ನಿಡಬೇಕು. ಹೀಗಿದ್ದರೆ ಮಾತ್ರವೆ ವಿದ್ಯೆಗಳು ಫಲಿಸುವವು; ಇಲ್ಲದಿದ್ದರೆ ಎಲ್ಲ ವಿದ್ಯೆಗಳೂ ಬರಡು.

ಗುರುಗಳ ಮತ್ತು ದೇವತೆಗಳ ತಾರತಮ್ಯಕ್ರಮವನ್ನರಿತುಕೊಂಡು ಆ ತರತಮಕ್ಕನುಗುಣವಾಗಿ ಗುರುಗಳಲ್ಲಿ, ದೇವತೆಗಳಲ್ಲಿ ಭಕ್ತಿ ತೋರುವವನು, ಹರಿಗುರುಭಕ್ತರಲ್ಲಿಯೂ ಗೌರವವನ್ನು ತೋರುವವನು ಸಿದ್ಧಿಯನ್ನು ಪಡೆಯುವನು.

**ಗುರುದೇವಪ್ರತೀಪಾನಾಂ ವಿಮುಖಸ್ತತ್ಪ್ರಿಯೇ[೧] ರತಃ ।**
**ಅಕಾಮಕ್ರೋಧಲೋಭಶ್ಚ[೨] ನಚಿರಾತ್ಸಿದ್ಧಿಮಾಪ್ನುಯಾತ್ ॥ ೧೧೩ ॥**

ಹರಿ ಗುರುದ್ವೇಷಿಗಳ ವಿಷಯದಲ್ಲಿ ವಿಮುಖನಾಗಿ, ಹರಿಗುರುಭಕ್ತರಲ್ಲಿ ಆಸಕ್ತಿಯನ್ನಿಟ್ಟು, ಕಾಮಕ್ರೋಧಲೋಭಗಳನ್ನು ದಮಿಸಬಲ್ಲವನು ಶೀಘ್ರದಲ್ಲಿಯೇ ಸಿದ್ಧಿಯನ್ನು ಹೊಂದಬಲ್ಲನು.

---

ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ಪ್ರಕಾಶಂತೇ ಮಹಾತ್ಮನ ಇತಿ ।'. (ಶ್ವೇತಾಶ್ವತರ.)

'ಯಸ್ಯ ವಿಷ್ಣೌ ಪರಾ ಭಕ್ತಿರ್ಯಥಾ ವಿಷ್ಣೌ ತಥಾ ಗುರೌ ।' (ಹಯಶೀರ್ಷವಂ.)

೧ 'ತತ್ಪ್ರಿಯೇ=ಗುರುದೇವಪ್ರಿಯೇ' (ನಾರಾ.)

೨ ಇಲ್ಲಿ 'ಧರ್ಮಾವಿರುದ್ಧಃ ಕಾಮೋಽಸ್ಮಿ' ಎಂಬ ಗೀತೆಯ ವಚನಕ್ಕನುಸಾರವಾಗಿ ಧರ್ಮವಿರುದ್ಧವಾದ ಕಾಮವನ್ನು ಮಾತ್ರ ತ್ಯಜಿಸಬೇಕು ಎಂಬ ಅಭಿಪ್ರಾಯವನ್ನು ಛಲಾರೀಯದಲ್ಲಿ ಉಲ್ಲೇಖಿಸಿದ್ದಾರೆ—

'ಕಾಮಃ ನಿಷಿದ್ಧಃ, ಕ್ರೋಧಲೋಭೌ ಸರ್ವಾತ್ಮನಾ ।'

'ಶಿಷ್ಯಃ ಕುಲೀನಃ ಶುದ್ಧಾತ್ಮಾ ಪುರುಷಾರ್ಥಪರಾಯಣಃ ।
ಅಧೀತವೇದಃ ಕುಶಲೋ ದೂರಮುಕ್ತಮನೋಭವಃ ॥' (ಶಾರದಾ.)

ಇಲ್ಲಿ 'ಕುಲೀನ' ಮತ್ತು 'ಶುದ್ಧಾತ್ಮ' ಎಂಬ ಪದಗಳು ವಂಶಶುದ್ಧಿ–ಆತ್ಮಶುದ್ಧಿಯನ್ನು ಹೇಳುತ್ತವೆ. ಅದನ್ನು ತಿಳಿಯುವ ಬಗೆಯನ್ನು ಶಾಸ್ತ್ರಕಾರರು ಬಹಳ ಚಮತ್ಕಾರವಾಗಿ ನಿರೂಪಿಸಿದ್ದಾರೆ—

'ಯದಕಾರಿ ಕರ್ಮ ಗುಪ್ತಂ ಯೌವನಸಮಯೇ ಮದಾಂಧಯಾ ಮಾತ್ರಾ ।
ತತ್ಪ್ರಕಟಯಂತಿ ತನಯಾ ವಿಗತನಯಾಃ ಸ್ವಧರ್ಮಮುತ್ಸೃಜ್ಯ ॥'
'ಕಾರ್ಯಾನುಗತಂ ಶೀಲಂ ಶೀಲಾನುಗತಂ ನೃಣಾಂ ಭವತಿ ಚಿತ್ತಮ್ ।
ಚಿತ್ತಾನುಗತಂ ರೂಪಂ ರೂಪಾನುಗತಾ ಗುಣಾಃ ಪ್ರಾಯಃ ॥'

ಅಯುಕ್ತರಲ್ಲಿ ಉಪದೇಶಿಸಿದ ವಿದ್ಯೆ ಮರುಭೂಮಿಯಲ್ಲಿ ಬಿತ್ತಿದ ಬೆಳೆ ಎಂತಲೇ ಅಂಧವರಿಗೆ ಶಾಸ್ತ್ರರಹಸ್ಯವನ್ನು ಅರುಹಬಾರದು ಎಂದು ವ್ಯಾಸರೇ 'ಅನಾವಿಷ್ಕುರ್ವನ್ನನ್ವಯಾತ್' ಎಂಬ ಸೂತ್ರದಲ್ಲಿ ನುಡಿದಿದ್ದಾರೆ. ಶ್ರುತಿಗಳೂ ಇದೇ ಮಾತನ್ನು ಸಮರ್ಥಿಸುತ್ತಿವೆ—

**ಸಕಾಮೇಭ್ಯೋಽಮಿತಗುಣಾ ಯಾಽಕಾಮೈಸ್ತು ಕೃತಾ ಕ್ರಿಯಾ ।**
**ತಸ್ಮಾದಕಾಮ[1] ಏವಾಲಂ ಭಜೇದ್ವಿಷ್ಣುಂ ಸನಾತನಮ್[2] । ೧೧೪ ॥**

ಫಲಾಪೇಕ್ಷೆಯಿಂದ ಮಾಡಿದ ಕರ್ಮಗಳಿಗಿಂತ ಫಲಾಪೇಕ್ಷೆಯನ್ನು ತೊರೆದು ಹರಿಪ್ರೀತಿಗಾಗಿ ಮಾಡಿದ ಕರ್ಮವು ಅನಂತ ಫಲವನ್ನು ಕೊಡಬಲ್ಲದಾದುದರಿಂದ ಕಾಮನೆಯನ್ನು ತೊರೆದು ಶುದ್ಧ ಮನಸ್ಸಿನಿಂದ ಸನಾತನನಾದ ಶ್ರೀಹರಿಯನ್ನು ಭಜಿಸಬೇಕು.

### ವೇದೋಕ್ತಧನ್ವಂತರಿಮಂತ್ರ

**'ಅಯಂ ಮೇ ಹಸ್ತ' ಇತಿ ಯೋ ಮಂತ್ರಃ[3] ಪ್ರೋಕ್ತೋಽಕ್ತವತ್ಸ್ಮೃತಃ ।**
**ಅತ್ರೋಕ್ತಾಸ್ತು ಕ್ರಿಯಾಃ ಪೂರ್ವಮಂತ್ರೇಷ್ವಪ್ಯುಪಲಕ್ಷಣಮ್ ॥**

---

'ಅಥೋ ಶಮೇನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ ।'
'ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಂ ಶೇವಧಿಸ್ತೇಽಹಮಸ್ಮಿ ।
ಅನಾರ್ಯಕಾಯಾನೃಜವೇ ಶಠಾಯ ಮಾಸ್ಮ ಬ್ರೂಯಾ ವೀರ್ಯವತೀ ಯಥಾ ಸ್ಯಾಮ್ ॥'
'ಧರ್ಮಾರ್ಥೌ ಯತ್ರ ನ ಸ್ಯಾತಾಂ ಶುಶ್ರೂಷಾ ಚಾಪಿ ತದ್ವಿಧಾ ।
ನ ತತ್ರ ವಿದ್ಯಾ ವಕ್ತವ್ಯಾ ಶುಭಂ ಬೀಜಮಿವೋಷರೇ ॥
ವಿದ್ಯಯೈವ ಸಮಂ ಕಾಮಂ ಮರ್ತವ್ಯಂ ಬ್ರಹ್ಮವಾದಿನಾ ।
ಆಪದ್ಯಪಿ ಹಿ ಘೋರಾಯಾಂ ನ ತ್ವೇನಾಮೀರಿಣೇ ವಪೇತ್ ॥
ವಿದ್ಯಾ ಬ್ರಾಹ್ಮಣಮಿತ್ಯಾಹ ಶೇವಧಿಸ್ತೇಽಸ್ಮಿ ರಕ್ಷ ಮಾಮ್ ।
ಅಸೂಯಕಾಯ ಮಾ ಪ್ರಾದಾಸ್ತಥಾ ಸ್ಯಾಂ ವೀರ್ಯವತ್ತಮಾ ॥
ಶೇವಂ ಸುಖಮುಶಂತೀಹ ಕೇಚಿಜ್ಜ್ಞಾನಂ ಪ್ರಚಕ್ಷತೇ ।
ತೌ ಧಾರಯತಿ ವೈ ಯಸ್ಮಾಚ್ಛೇವಧಿಸ್ತೇನ ಸೋಚ್ಯತೇ ॥
ಯಮೇವ ತು ಶುಚಿಂ ವಿದ್ಯಾನ್ನಿಯತಂ ಬ್ರಹ್ಮಚಾರಿಣಮ್ ।
ತಸ್ಮೈ ಮಾಂ ಬ್ರೂಹಿ ವಿಪ್ರಾಯ ನಿಧಿಪಾಯಾಪ್ರಮಾದಿನೇ ॥' (ಭವಿಷ್ಯತ್ಪು.)

೧ 'ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ।' (ಗೀತಾ.)

೨ 'ಸರ್ವಕಾಲೇ 'ಸನಾ' ಪ್ರೋಕ್ತಾ ವಿದ್ಯಮಾನೇ 'ತನೇ'ತಿ ಚ ।
ಸರ್ವತ್ರ ಸರ್ವಕಾಲೇಷು ವಿದ್ಯಮಾನಾ ಸನಾತನೀ ॥' (ಬ್ರಹ್ಮವೈ.)

೩ 'अयं मे हस्तो भगवानयं मे भगवत्तरः ।
अयं मे विश्वभेषजोऽयं शिवाभिमर्शनः ॥' ಇತಿ ಮಂತ್ರಾಕಾರಃ ।

'ಅಯಂ ಮೇ ಹಸ್ತಃ' (ಋ. ೮-೧-೨೨) ಇತ್ಯಾದಿ ವೈದಿಕಮಂತ್ರವೂ ಹಿಂದಿನ ಮಂತ್ರದಂತೆಯೇ ಧನ್ವಂತರಿಪ್ರತಿಪಾದಕವೇ ಆಗಿದೆ. ಇಲ್ಲಿ ಹೇಳಿರತಕ್ಕ ಹೋಮವಿಧಾನಾದಿಗಳನ್ನು ಹಿಂದೆ ಹೇಳಿದ ಎಲ್ಲ ಮಂತ್ರಗಳಲ್ಲೂ ಅನ್ವಯಿಸಿಕೊಳ್ಳಬೇಕು.

**ವಿಜಯಸ್ತಂಭನಾದೀನಿ ನಾರಸಿಂಹೈರ್ವಿಶೇಷತಃ ।**
**ಜಾಮದಗ್ನ್ಯೈಶ್ಚ ಕಾರ್ಯಾಣಿ ರಾಘವೈರ್ಯಾದವೈರಪಿ ।**
**ವಾರಾಹೈಃ ಸ್ತಂಭನಂ ಕ್ಷಿಪ್ರಂ[1] ಶ್ರೀಕರಾಃ ಕಥಿತಾಃ ಪುರಾ[2] ॥೧೧೬॥**

ವಿಜಯ, ಅಗ್ನ್ಯಾದಿಸ್ತಂಭನ ಮೊದಲಾದುವುಗಳನ್ನು ಸಾಧಿಸುವುದಕ್ಕೆ ನಾರಸಿಂಹಮಂತ್ರಗಳು, ಪರಶುರಾಮಮಂತ್ರಗಳು, ರಾಮಮಂತ್ರಗಳು

---

'ಪದೈಃ ಸಮಸ್ತೇನ ಚಾಂಗಾನಿ । ಅನುಷ್ಟುಪ್ ಛಂದಃ । ಬ್ರಹ್ಮಾ ಋಷಿಃ ।' (ನಾರಾ.)

'ಅಜ್ಞಾತಷ್ಯಾರ್ದಿಕೋ ಮಂತ್ರೋ ದೋಷಾವಹ ಇತಿ ಶ್ರುತಿಃ ।
'ಋಷ್ಯಾದೀನಾಮವಿಜ್ಞಾನೇ ವಾಮದೇವಾದಿಕಾನೃಷೀನ್ ।
ಗಾಯತ್ರ್ಯಾದೀನಿ ಛಂದಾಂಸಿ ವಿಷ್ಣುಂ ದೇವಂ ಚ ಸಂಸ್ಮರೇತ್ ॥' (ಕಲ್ಪಸಾರ)

ಈ ಮಂತ್ರದ ನ್ಯಾಸಕ್ರಮ—

'ಅಯಂ ಮೇ ಹಸ್ತೋ ಭಗವಾನ್' ಹೃದಯಾಯ ನಮಃ । 'ಅಯಂ ಮೇ ಭಗವತ್ತರಃ' ಶಿರಸೇ ಸ್ವಾಹಾ । 'ಅಯಂ ಮೇ ವಿಶ್ವಭೇಷಜಃ' ಶಿಖಾಯೈ ವಷಟ್ । 'ಅಯಂ ಶಿವಾಭಿಮರ್ಶನಃ' ಕವಚಾಯ ಹುಮ್ । 'ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ' ಅಸ್ತ್ರಾಯ ಫಟ್ ।

೧ 'ವಿಜಯಸ್ತಂಭನಾದೀನಿ ಕಾರ್ಯಾಣಿ=ಫಲಾನಿ ಸರ್ವೈರ್ಮಂತ್ರೈರಪಿ ಭವಂತಿ । ನಾರಸಿಂಹೈರ್ಜಾಮದಗ್ನ್ಯೈ ರಾಘವೈರ್ಯಾದವೈರಪಿ ಮಂತ್ರವಿಶೇಷೈರ್ವಿಶೇಷತೋ ಭವಂತಿ । ತತ್ರಾಪಿ ವಾರಾಹೈರ್ಮಂತ್ರೈಃ ಸ್ತಂಭನಂ ಕ್ಷಿಪ್ರಂ ಭವತಿ । ವಿಜಯಃ ಪ್ರಸಿದ್ಧಃ । ಸ್ತಂಭನಶಬ್ದೇನಾಗ್ನಿಸ್ತಂಭನಂ ಜಲಸ್ತಂಭನಂ ಪ್ರತಿವಾದಿಸ್ತಂಭನಂ ವಿಷಸ್ತಂಭನಂ ಶತ್ರುಸ್ತಂಭನಂ ಚೇತ್ಯಾದಿಸ್ತಂಭನಾನಿ ಗ್ರಾಹ್ಯಾಣಿ । ಸ್ತಂಭನಶಬ್ದಾರ್ಥಸ್ತು ಅಗ್ನ್ಯಾದೇಃ ಸ್ವಕಾರ್ಯಕರಣಾಕ್ಷಮತ್ವಮ್ । ಆದಿಶಬ್ದೇನ ಶತ್ರೂಚ್ಚಾಟನೋನ್ಮಾದಸಂಪಾದನಾದಿಕಂ ಗ್ರಾಹ್ಯಮ್ ।' (ಛಲಾ.)

೨ 'ಶ್ರೀಕರಾ' ಇತಿ ಬಹುವಚನಮಾದ್ಯರ್ಥೇ । 'ಕ್ಷಿಪ್ರಮಿ'ತ್ಯುಭಯತ್ರ ಸಂಬಂಧಃ । ಶ್ರೀಕರಾಃ=ಶ್ರೀಕರಾಷ್ಟಾಕ್ಷರಹಂಸಮಂತ್ರಾದಯಃ ಪುರಾ ಕಥಿತಾಃ ಸರ್ವೇ ಮಂತ್ರಾಃ ಕ್ಷಿಪ್ರಂ ಶ್ರೀಕರಾ ಇತಿ ಶ್ರೀಕರಶಬ್ದಸ್ಯಾವೃತ್ತಿಃ ।' (ನಾರಾ.)

ಮತ್ತು ಕೃಷ್ಣಮಂತ್ರಗಳು ವಿಶೇಷವಾಗಿ ಉಪಯೋಗಕಾರಿಯಾಗಿವೆ; ಸ್ತಂಭನದ ವಿಷಯದಲ್ಲಿ ವರಾಹಮಂತ್ರವು ಶೀಘ್ರಫಲಪ್ರದವಾಗಿದೆ; ಇಲ್ಲಿ ಹಿಂದೆ ಹೇಳಿದ ಶ್ರೀಕರಮಂತ್ರ, ಹಂಸಮಂತ್ರ—ಇವೆಲ್ಲ ಸರ್ವಸಂಪತ್ಪ್ರದಗಳಾಗಿವೆ.

**ಬಹುಬಾಹುಂ ಮಹಾಕಾಯಮುದ್ಯುಕ್ತಂ ಚೋದ್ಯತಾಯುಧಮ್ ।**
**ಸ್ಮರನ್ ವಿಜಯಮಾಪ್ನೋತಿ ಸ್ತಂಭನಾದೀಂಶ್ಚ ಕಾರಯೇತ್[1] ॥**

ಅನೇಕ ತೋಳುಗಳು, ಬೃಹದಾಕಾರದ ಮೈಕಟ್ಟು, ಶತ್ರುಗಳನ್ನು ದಮಿಸಲು ಸನ್ನದ್ಧವಾದ ಭಂಗಿ, ಕೈಯಲ್ಲಿ ಎತ್ತಿ ಹಿಡಿದ ಆಯುಧಗಳು—ಇಂಥ ರೂಪವನ್ನು ಧ್ಯಾನಿಸಿದರೆ ವಿಜಯವನ್ನು ಪಡೆಯುವನು. ಸ್ತಂಭನವನ್ನಪೇಕ್ಷಿಸುವವನು ಸ್ತಂಭನಾದಿಶಕ್ತಿಯುಳ್ಳ ಭಗವಂತನನ್ನು ಮನದಲ್ಲಿ ನೆನೆಯಬೇಕು.

**ವಸುಪೂರ್ಣಕರಂ ರತ್ನಪರ್ವತಸ್ಥಂ ವಿಭಾವಯನ್ ।**
**ವಸುಸಿದ್ಧಿಮವಾಪ್ನೋತಿ ಸೇವ್ಯಮಾನಮಜಾದಿಭಿಃ ।**
**ಶ್ರಿಯಾ ವಿಭೂತಿಭಿರ್ಯುಕ್ತಂ ಭಾವಯನ್ ಭೂತಿಮಾಪ್ನುಯಾತ್ ॥**

ಕೈಯಲ್ಲೆಲ್ಲ ಧನಧಾನ್ಯಗಳನ್ನು ತುಂಬಿಕೊಂಡು ರತ್ನದರಾಶಿಯಲ್ಲಿ ಆಸೀನನಾಗಿ ಬ್ರಹ್ಮಾದಿಗಳಿಂದ ಸೇವಿಸಲ್ಪಡುವ ಶ್ರೀಹರಿಯನ್ನು ಧ್ಯಾನಿಸಿದರೆ ಧನಧಾನ್ಯಸಮೃದ್ಧನಾಗುವನು. ಐಶ್ವರ್ಯದೇವತೆಯಾದ ರಮೆಯಿಂದಲೂ ವಿವಿಧವೈಭವಗಳಿಂದಲೂ ಕೂಡಿದ ಭಗವಂತನನ್ನು ಧ್ಯಾನಿಸಿದರೆ ಬೇಕಾದಂಥ ಐಸಿರಿ ಲಭಿಸುವುದು; ದಿವ್ಯವೈಭವ ದೊರೆವುದು.

**ಯದ್ಯನ್ಮನೋಗತಂ ತಸ್ಯ ತತ್ತದಾಪ್ನೋತ್ಯಸಂಶಯಮ್ ।**
**ತಥಾ ತಥಾ ಹರಿಂ ಧ್ಯಾಯನ್[2] ಕ್ರಿಯಾಸ್ತತ್ರತ್ಯಾಶ್ಚ ಸಾಧಯನ್ ॥**

ಎಂಥ ಫಲದ ಮೇಲೆ ನಮಗೆ ಬಯಕೆಯೋ ಅಂಥ ಫಲವನ್ನು ಕೊಡುವ ಭಗವದ್ರೂಪವನ್ನೇ ಧ್ಯಾನಿಸಬೇಕು, ಅದಕ್ಕೆ ಸಾಧಕವಾದ ಹೋಮಾದಿ ಕ್ರಿಯೆಗಳನ್ನೇ ಎಸಗಬೇಕು. ಆಗ ಅಂಥ ಫಲ ದೊರೆತೇ ದೊರಕುವುದು. ಈ ವಿಷಯದಲ್ಲಿ ಸಂದೇಹಪಡುವ ಕಾರಣವಿಲ್ಲ.

---

೧ ವಿಷ್ಣೋಃ ಸ್ತಂಭನಾದೀನ್ ಗುಣಾನ್ ಮನಸಿ ಕಾರಯೇತ್=ಕುರ್ಯಾತ್ । ತಾದೃಶಾನುಸಂಧಾನಸ್ಯ ಯತ್ನಸಾಧ್ಯತ್ವಾತ್ ಕಾರಯೇದಿತ್ಯುಕ್ತಿಃ ।

೨ ‘ತಂ ಯಥಾ ಯಥೋಪಾಸತೇ ತದೇವ ಭವತಿ’
[ಉಪಾಸತೇ=ಉಪಾಸ್ತೇ । ಭವತಿ=ಪ್ರಾಪ್ನೋತಿ]

**ಶ್ರಿಯೋ ಪದ್ಮಾನಿ[1] ಜುಹುಯಾತ್ಸಂಪ್ರೀತ್ಯಾ ಉತ್ಪಲಾನಿ ಚ ।**
**ಶರಾನ್[2] ಜಯಾಯ ಜುಹುಯಾದಭಿಮಂತ್ರ್ಯ ಪ್ರಯೋಜಯೇತ್॥**

ಸಂಪತ್ತಿಗಾಗಿಯಾದರೆ ತಾವರೆಗಳಿಂದಲೂ, ಪ್ರೀತಿಸಂಪಾದನೆಗಾದರೆ ನೆಯ್ದಿಲೆಗಳಿಂದಲೂ ಹೋಮಿಸಬೇಕು. ವಿಜಯಾಪೇಕ್ಷೆಯಾದರೆ ಮೊದಲು ಹೋಮಿಸಿ, ಆ ಮೇಲೆ ನರಸಿಂಹಾದಿಮಂತ್ರಗಳಿಂದ ಅಭಿಮಂತ್ರಿತವಾದ ಬಾಣವನ್ನು ಶತ್ರುವಿನ ಮೇಲೆ ಎಸೆಯಬೇಕು.

**ವಿದ್ಯಾಯೈ ಮಂತ್ರಿತಂ ವಾರಿ ವಚಾಂ[3] ವಾ ತುಲಸೀಮಪಿ ।**
**ಬ್ರಾಹ್ಮೀಂ ಘೃಷ್ಟಂ ಸುವರ್ಣಂ ವಾ ಶತಾವೃತ್ತ್ಯಾ ತು ನಿತ್ಯಶಃ[4] ॥೧೨೧॥**

ವಿದ್ಯಾಸಿದ್ಧಿಯನ್ನಪೇಕ್ಷಿಸುವವರು ಪ್ರತಿದಿನವೂ ವೇದವ್ಯಾಸಾದಿ ಮಂತ್ರಗಳಿಂದ ನೂರುಬಾರಿ ಅಭಿಮಂತ್ರಿತವಾದ ನೀರನ್ನು ಕುಡಿಯಬೇಕು, ಅಥವಾ ಅದೇ ತೆರನಾದ ಅಭಿಮಂತ್ರಿತವಾದ ವಚೆ(ಬಜೆ)ಯನ್ನೋ, ತುಲಸಿಯನ್ನೋ, ಒಂದೆಲಗ(ತಿಮರೆ)ವನ್ನೋ, ತೇದ ಬಂಗಾರವನ್ನೋ ತಿನ್ನಬೇಕು.

**ಅಕುರ್ವಂಶ್ಚ ಕ್ರಿಯಾ ಭಕ್ತ್ಯಾ ನಿರಪೇಕ್ಷೋ ಭಜನ್ ಹರಿಮ್ ।**
**ಸರ್ವಮೇತದವಾಪ್ನೋತಿ ವಿಶೇಷೇಣ ನ ಸಂಶಯಃ ॥ ೧೨೨ ॥**

ಈ ಯಾವ ಕರ್ಮಗಳನ್ನೂ ಆಚರಿಸದಿದ್ದರೂ, ಫಲಾಪೇಕ್ಷೆಯಿಲ್ಲದೆ ನಿರ್ಮಲ ಭಕ್ತಿಯಿಂದ ಶ್ರೀಹರಿಯನ್ನು ಭಜಿಸುತ್ತಿದ್ದರೆ–ಅಂಥ ಮಹಾನುಭಾವನು ಇದಕ್ಕಿಂತಲೂ ಮಿಗಿಲಾದ ಫಲಗಳನ್ನೂ ನಿರಾಯಾಸವಾಗಿ ಪಡೆಯಬಲ್ಲನು ಎಂಬಲ್ಲಿ ಸಂಶಯಕ್ಕೆಡೆಯಿಲ್ಲ.

---

೧ 'ಶ್ರೀಕಾಮೋ ಜುಹುಯಾತ್ಪದ್ಮೈಃ' (ಶಾರದಾ.)

೨ 'ವಿಚಿಂತ್ಯ ದೇವಂ ನೃಹರಿಂ ಸಂಪೂಜ್ಯ ಕುಸುಮಾದಿಭಿಃ ।
ಸಮೂಲತೂಲೈರ್ಜುಹುಯಾಚ್ಛರೈರ್ದಶಶತಂ ಪೃಥಕ್ ।
ರಿಪುಂ ಖಾದನ್ನಿವ ಜಪೇನ್ನಿರ್ಭಿಂದನ್ನಿವ ತಾನ್ ಕ್ಷಿಪೇತ್ ॥' (ಶಾರದಾ.)

೩ 'ಮಂತ್ರ ಜಪ್ತಾಂ ವಚಾಂ ಶ್ವೇತಾಂ ಭಕ್ಷಯೇತ್ಪ್ರಾತರನ್ವಹಮ್ ।
ವಾಕ್ಸಿದ್ಧಿಂ ಲಭತೇ ಮಂತ್ರೀ ವಾಚಸ್ಪತಿರಿವಾಪರಃ ॥
'ವಚಾಮನೇನ ಸಂಜಪ್ತಾಂ ಭಕ್ಷಯೇತ್ಪ್ರಾತರನ್ವಹಮ್ ।
ಸರ್ವವೇದಾಗಮಾದೀನಾಂ ವ್ಯಾಖ್ಯಾತಾ ಜಾಯತೇಽಚಿರಾತ್ ॥'(ಶಾರದಾ.)

೪ 'ಮನುನಾಽನೇನ ಸಂಜಪ್ತಂ ಘೃತಂ ಬ್ರಾಹ್ಮೀರಸೈಃ ಸ್ರುತಮ್ ।
ಕವಿತಾಮಾವಹೇತ್ಪುಂಸಾಮನರ್ಗಲವಿಜೃಂಭಣಾಮ್ ॥' (ಶಾರದಾ.)

**ಸೃಷ್ಟಿಸ್ಥಿತಿಲಯನ್ಯಾಸಾಃ ಪ್ರತಿಲೋಮಾನುಲೋಮತಃ[1] ।**
**ಸ್ಥಿತ್ಯಂತಾ ಏವ ವರ್ಣಾನಾಂ ಶ್ರೇಷ್ಠಾ[2] ಏವ ಚತುರ್ದಶ[3] ।**
**ಸಂಹೃತ್ಯಂತಾ ಮೋಕ್ಷಿಣಾಂ[4] ತು ಏಕವಿಂಶತಿರೇವ ವಾ[5] ॥ ೧೨೩ ॥**

ಮೊದಲಿಂದ ಕ್ರಮವಾಗಿ ನ್ಯಾಸವನ್ನಾಚರಿಸಿದರೆ ಸೃಷ್ಟಿನ್ಯಾಸವೆನಿಸುವುದು; ತಿರುವು ಮುರುವಾಗಿ ತುದಿಯಿಂದ ಮೊದಲವರೆಗೆ ನ್ಯಾಸವನ್ನಾಚರಿಸಿದರೆ ಲಯನ್ಯಾಸವಾಗುವುದು; ಅರ್ಧಭಾಗ ಕ್ರಮವಾಗಿ ಅರ್ಧಭಾಗ ವ್ಯುತ್ಕ್ರಮವಾಗಿ ನ್ಯಾಸವನ್ನೆಸಗಿದರೆ ಸ್ಥಿತಿನ್ಯಾಸವೆನಿಸುವುದು.[6] ಗೃಹಸ್ಥರಿಗೆ ಸ್ಥಿತಿನ್ಯಾಸವು ಕೊನೆಯಲ್ಲಿ ಬರುವಂತೆ ೧೪ ಸಾರಿ ವರ್ಣನ್ಯಾಸವನ್ನಾಚರಿಸುವ ಪಕ್ಷವು ಉತ್ತಮವಾಗಿದೆ. ಸನ್ಯಾಸಿಗಳಿಗೆ ಲಯನ್ಯಾಸ ಕೊನೆಯಲ್ಲಿ ಬರುವಂತೆ ೨೧ ಸಾರೆ ನ್ಯಾಸಮಾಡುವುದು ಪ್ರಶಸ್ತವಾಗಿದೆ.[7]

---

೧ ಪ್ರಾತಿಲೋಮ್ಯೇನ ಲಯಃ । ಆನುಲೋಮ್ಯೇನ ಸೃಷ್ಟಿಃ । ಪ್ರಾತಿಲೋಮ್ಯಾನುಲೋಮ್ಯಾಭ್ಯಾಂ ಸ್ಥಿತಿರಿತ್ಯಾವೃತ್ತ್ಯಾ ಭಾವಪ್ರಧಾನತಯಾ ಚೋಪಪತ್ತಿಃ ।

೨ ಶ್ರೇಷ್ಠಾ ಗೃಹಸ್ಥಾನಾಮಿತ್ಯಾಹ್ಯಮ್ ।

೩ ಕ್ರಮದಿಂದ ಸೃಷ್ಟಿಸ್ಥಿತಿಲಯನ್ಯಾಸಗಳನ್ನು ನಾಲ್ಕು ಬಾರಿ ಮಾಡಿ ಮತ್ತೆ ಪುನಃ ಸೃಷ್ಟಿನ್ಯಾಸವನ್ನೂ ಸ್ಥಿತಿನ್ಯಾಸವನ್ನೂ ಆಚರಿಸಿದರೆ—ಸ್ಥಿತ್ಯಂತವಾಗಿ ೧೪ ಸಾರೆ ನ್ಯಾಸವೆಸಗಿದಂತಾಯಿತು

೪ ಮೋಕ್ಷಿಣಾಮಿತಿ ಸನ್ಯಾಸಿನಾಮ್ ।

೫ ಸೃಷ್ಟ್ಯಾದಿನ್ಯಾಸಗಳನ್ನು ಕ್ರಮವಾಗಿ ಏಳು ಬಾರಿ ಆಚರಿಸಿದರೆ ಸಂಹೃತ್ಯಂತವಾಗಿ ೨೧ ಸಾರೆ ನ್ಯಾಸವನ್ನಾಚರಿಸಿದಂತಾಗುವುದು.

೬ ಉದಾಹರಣೆಗೆ ಅಷ್ಟಾಕ್ಷರದ ಸೃಷ್ಟಿನ್ಯಾಸಕ್ರಮದಂತೆ—ಶಿರಸ್ಸು, ಅಕ್ಷಿ, ನಾಸಾ. ವಾಕ್, ಹೃದಯ, ನಾಭಿ, ಜಾನು—ಪಾದಗಳಲ್ಲಿ ನ್ಯಾಸ ಸ್ಥಿತಿನ್ಯಾಸದ ಕ್ರಮದಂತೆ—ಮೊದಲು ಕ್ರಮವಾಗಿ ಶಿರಸ್ಸು, ಅಕ್ಷಿ, ನಾಸಾ. ವಾಕ್—ಈ ೪ ಸ್ಥಾನಗಳಲ್ಲಿ ನ್ಯಾಸ, ಅನಂತರ ವ್ಯುತ್ಕ್ರಮವಾಗಿ ಪಾದ, ಜಾನು, ನಾಭಿ, ಹೃದಯ—ಈ ೪ ಸ್ಥಾನಗಳಲ್ಲಿ ನ್ಯಾಸ.

'ಆದೌ ಮೂರ್ಧಾನಮಾರಭ್ಯ ವದನಾವಧಿಕಶ್ಚ ಯಃ ।
ಪಾದಾದಿಹೃದಯಾಂತಶ್ಚ ಸ್ಥಿತಿರೇವಂ ಪ್ರಕೀರ್ತಿತಾ ॥' (ಹಯ. ಪಂ.)

೭ ಸನ್ಯಾಸಿಗಳಿಗೆ ಮಾತ್ರವಲ್ಲ—ವಾನಪ್ರಸ್ಥರಿಗೂ ಇದೇ ರೀತಿ ಸಂಹಾರಾಂತವಾದ ನ್ಯಾಸವೇ ವಿಹಿತವಾಗಿದೆ. ಆದರಿಂದಲೇ ಆಚಾರ್ಯರು— ಉಭಯ ಸಾವಕಾಶವಾದ 'ಮೋಕ್ಷಿಣಾಂ' ಎಂಬ ಪದವನ್ನು ಬಳಸಿದ್ದಾರೆ ಪರಿಶೇಷಾತ್ ಬ್ರಹ್ಮಚಾರಿಗಳಿಗೆ ಸೃಷ್ಟ್ಯಂತನ್ಯಾಸ ಎಂದೂ ತಿಳಿದುಬರುವುದು. ಬ್ರಹ್ಮಚಾರಿಗಳು ಸೃಷ್ಟ್ಯಾದಿನ್ಯಾಸತ್ರಯವನ್ನು ೩ ಬಾರಿ ಆಚರಿಸಿ ಪುನಃ ಸೃಷ್ಟಿನ್ಯಾಸವನ್ನೆಸಗಿ ಕೊನೆಗೊಳಿಸಬೇಕು.

**ಪಾದಹೃ[1]ತ್ಕ್ರೋಡೇಷು ನಾಭ್ಯಾಸ್ಯಯುತಂ[2] ಚ ಸಲಲಾಟಿಕಮ್ ।**
**ಸನಾಸಿಕಾಕ್ಷ[3] ದೃಗ್ಘ್ರಾಣಶ್ರೋತ್ರಂ ಸೋರುಕಂ ತಥಾ ॥**
**ಸೋರಸ್ಕಂ ಚ ಸಕಂಠಂ ಚ ಸಭುಜದ್ವಯಮೇವ[4] ಚ ।**

---

'ನ್ಯಾಸಃ ಸಂಹಾರಾಂತೋ ಮಸ್ಕರಿವೈಖಾನಸೇಷು ವಿಹಿತೋಽಯಮ್ ।
ಸ್ಥಿತ್ಯಂತೋ ಗೃಹಮೇಧಿಷು ಸೃಷ್ಟ್ಯಂತೋ ವರ್ಣಿನಾಮಿತಿ ಪ್ರಾಹುಃ ॥'
(ಕ್ರಮದೀಪಿಕಾ)

ಈ ನ್ಯಾಸಸಂಖ್ಯೆಗಳು ವಿಶೇಷಕಾಮನೆಯಿಂದ ಜಪಾದಿಗಳನ್ನು ಮಾಡುವುದಿದ್ದರೆ ಮಾತ್ರವೇ ಹೊರತು ನಿತ್ಯಜಪದಲ್ಲಿ ಅಲ್ಲ. ನಿತ್ಯಜಪಗಳಲ್ಲಿ ಈ ನ್ಯಾಸಪ್ರವೃತ್ತಿಯು ಸಂಪ್ರದಾಯವಿಲ್ಲದಿರುವುದೂ ಇದಕ್ಕೆ ಜ್ಞಾಪಕವಾಗಿದೆಯೆಂದು ಕೆಲವರ ಅಭಿಪ್ರಾಯ. ಅನುಕೂಲವಿದ್ದರೆ ನಿತ್ಯವೂ ಮಾಡುವುದೂ ಸೂಕ್ತವಿರಬಹುದು ಆಚಾರ್ಯರು ಇದನ್ನೇನೂ ನೈಮಿತ್ತಿಕನ್ಯಾಸವೆಂದು ಬರೆದಿಲ್ಲ. ಆದರೆ ಸಂಪ್ರದಾಯವನ್ನು ಮೀರಿ ಯಾವುದನ್ನೂ ನಿರ್ಣಯಿಸಬರುವಂತಿಲ್ಲ.

೧ ಇಲ್ಲಿ 'ಹೃತ್' ಎಂಬ ಪದವು ಇಂಗ್ಲಿಷಿನ 'heart' ಎಂಬ ಪದದ ಸಮಾನಾರ್ಥಕವಾಗಿದೆ. ಮೇಲೆ ಬರುವ 'ಉರಃ'ಪದವು 'chest' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಈ ಅರ್ಥಭೇದವನ್ನು ಗಮನಿಸಿದರೆ ಇಲ್ಲಿ ಪುನರುಕ್ತಿಯ ಶಂಕೆಯೇಳುವಂತಿಲ್ಲ. ಅದೇ ರೀತಿ 'ಕ್ರೋಡ' ಎನ್ನುವ ಪದವೂ 'ಎದೆ' ಎಂಬ ಅರ್ಥವನ್ನೆ ಕೊಡುವಂಥದಾದರೂ ಇಲ್ಲಿ ದೇಹದ ಮಧ್ಯಭಾಗ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದಿಟ್ಟುಕೊಳ್ಳಬಹುದು ಎಂದನ್ನಿಸುತ್ತದೆ—

'ಕ್ರೋಡಃ=The middle part of anything' (V. S. Apte)

ವ್ಯಾಖ್ಯಾನಕಾರರು ಮಾತ್ರ 'ಭುಜಾಂತರ' ಎಂಬ ಅರ್ಥವನ್ನು ಬರೆದಿದ್ದಾರೆ. 'ಭುಜಾಂತರ' ಅಂದರೆ 'ಎದೆ'ಯೆಂದೇ ಅರ್ಥ, ಎಂದಮೇಲೆ ಅವರು ಪೌನರುಕ್ತ್ಯವನ್ನು ಬಗೆಹರಿಸುವ ರೀತಿ ಎಂಥದೋ! 'ಕ್ರೋಡ' ಎನ್ನುವುದಕ್ಕೆ 'ಉಡಿ' ಎನ್ನುವ ಅರ್ಥವೂ ಇದೆ. ಆದರೆ ಅದರ ನ್ಯಾಸಕ್ರಮವನ್ನು ಕಂಡಾಗ ಎದೆಯನಂತರ ಕ್ರೋಡದಲ್ಲಿ ನ್ಯಾಸ ಮಾಡುವ ವಿಧಾನವಿರುವುದರಿಂದ ಇಲ್ಲಿ 'ಕ್ರೋಡ'ವೆಂದರೆ ಉಡಿಯಲ್ಲವೆಂದು ತಿಳಿದುಕೊಳ್ಳಬಹುದು.

೨ 'ನಾಭ್ಯಾಸ್ಯಯುತಮಿತ್ಯಾದಿ ಕ್ರಿಯಾವಿಶೇಷಣಮ್ ।' (ನಾರಾ.)

೩ ಇಲ್ಲೂ 'ಸನಾಸಿಕಂ ಚ' ಎಂಬ ಪಾಠವಿದ್ದರೆ ಚೆನ್ನು. ಆದರೆ ಮೂಲದಲ್ಲಿ ಹಾಗಿದ್ದಂತಿಲ್ಲ. ಆದರಿಂದ 'ಸನಾಸಿಕಾಃ ಪೂರ್ವೋಕ್ತಾವಯವಾಃ ಸಪ್ತಾಕ್ಷರಮಂತ್ರೇಷು ನ್ಯಾಸಸ್ಥಾನಂ' ಎಂದು ಅನ್ವಯವನ್ನು ಕೂಡಿಸಿಕೊಳ್ಳಬೇಕು.

೪ ಇಲ್ಲಿ 'ಭುಜ' ಶಬ್ದದಿಂದ 'ಹಿಂದೋಳು' ಮಾತ್ರವೇ ವಿವಕ್ಷಿತವೆಂದು ಕಾಣುತ್ತದೆ. ಮುಂದೋಳನ್ನು 'ಪದೋರ್ದ್ವಯಂ' ಎಂದು ಆಚಾರ್ಯರು ಪ್ರತ್ಯೇಕವಾಗಿ ನಿರ್ದೇಶಿಸಿದ್ದಾರೆ.

**ಸಗಂಡಯುಗ್ಮಂ ಸಾಲೀಕಂ[1] ಸತುಂದಕ್ರೋಡಕಂ ತಥಾ ॥ ೧೨೫ ॥**
**ಸತಲಂ[2] ಚ ಸಗುಹ್ಯಂ ಚ ಸಪಾರ್ಶ್ವದ್ವಯಮೇವ ಚ ।**
**ಸದೋರ್ದ್ವಯಂ[3] ವ್ಯಾಪಕಂ[4] ಚ ಗಲಪಾರ್ಶ್ವದ್ವಯೋರ್ನ[5] ಚ ॥**
**ಕಕುತ್[6]ಸ್ತನದ್ವಯೋರ್ನಾಪಿ ಪೃಷ್ಠಮೂಲೇನ ಸರ್ವಶಃ ।**
**ನ್ಯಾಸೋ ಯಥಾಕ್ರಮಂ ಪ್ರೋಕ್ತೋ ಮಂತ್ರೇಷ್ವೇತೇಷು ಕೃತ್ಸ್ನಶಃ ।**
**ಪ್ರತಿಮಾಯಾಮಾತ್ಮನಿ ಚ ನ್ಯಾಸೋಽಯಂ ಸನ್ನಿಧಾನಕೃತ್ ॥೧೨೭॥**

ಮುಂದೆ ಉಲ್ಲಿಖಿತಗಳಾದ ೩೩ ಸ್ಥಾನಗಳಲ್ಲಿ ಕ್ರಮವಾಗಿ–ಮಂತ್ರಗಳ ಅಕ್ಷರಸಂಖ್ಯೆಗನುಗುಣವಾಗಿ– ನ್ಯಾಸವನ್ನಾಚರಿಸಬೇಕು.[7]

---

೧ 'ಅಲೀಕ'ವೆಂದರೂ 'ಲಲಾಟ'ವೆಂದೇ ಅರ್ಥ. ಆದರೆ 'ಲಲಾಟ'ವನ್ನು 'ಸಲಲಾಟಕಂ' ಎಂದು ಮೊದಲೇ ನಿರ್ದೇಶಿಸಿದ್ದಾಗಿದೆ. ಆದ್ದರಿಂದ ಹಣೆ ಮತ್ತು ಶಿರಸ್ಸುಗಳ ಸಂಧಿ ಸ್ಥಲವನ್ನು ಅಲೀಕ ಪದವು ಬೋಧಿಸುತ್ತದೆ ಎಂದು ನಿರ್ಣಯಿಸಬಹುದು

'ಅಲೀಕಂ=The forehead, ದಿಶಾಮಲೀಕಾಲಕಭಂಗತಾಂ ಗತಃ'
(V. S. Apte)

'ಅಲಿಕಂ ಹ್ರಸ್ವದೀರ್ಘಮಧ್ಯಮ್ ।' (ರಾಜದೇವ)

'ಅಲೀಕಮಹಿತೇಽಪಿ' (ಕಾತ್ಯ) ಅಪಿನಾಲಿಕೇಽಪಿ ।

'ಭಾಲೇ ಗೋಧ್ಯಲಿಕಾಲೀಕಲಲಾಟಾನಿ' (ಹೈಮ)

ಆದರೆ ನಾರಾಯಣೀಯದಲ್ಲಿ 'ನಾಲೀಕಂ=ಸಾಲಕಂ' ಎಂದು ವ್ಯಾಖ್ಯಾನಿಸಿದ್ದಾರೆ. ಈ ಅರ್ಥಕ್ಕೆ ಕೋಶದ ಪುರಸ್ಕಾರ ದೊರೆವುದು ಸಾಧ್ಯವಿಲ್ಲ ಎಂಬುದು ಸ್ಪಷ್ಟವಿದೆ.

೨ ನಿಜವಾಗಿ 'ತಲ' ಶಬ್ದಕ್ಕೆ 'ಅಂಗೈ' ಎಂದೇ ಅರ್ಥ. ನ್ಯಾಸವಿಧಾನದಲ್ಲಿ 'ವೃಷಣ'ವನ್ನು ಪ್ರಾಚೀನರು ಸೇರಿಸಿದ್ದರಿಂದ ಇಲ್ಲಿಯೂ 'ತಲ'ಶಬ್ದಕ್ಕೆ 'ವೃಷಣ' ಎಂಬರ್ಥವನ್ನು ಬರೆದಿದ್ದೇನೆ ಇಲ್ಲಿ ಪ್ರಚಲಿತವಾದ ಪಾಠ 'ಸಮೂಲಂ' ಎಂದು 'ಮೂಲ' ಮತ್ತು 'ತಲ' ಶಬ್ದಗಳು ಸಾಮಾನ್ಯತಃ 'ವೃಷಣ' ಎಂಬ ಅರ್ಥವನ್ನು ಬೋಧಿಸುವ ಸಂಭವವುಂಟು.

೩ 'ದೋಸ್=The forearm' (V. S. Apte)

೪ 'ವ್ಯಾಪಕಂ=ಸರ್ವದೇಹಃ' (ಛಲಾ.)

೫ ಗಲಪಾರ್ಶ್ವದ್ವಯೋರ್ನೋಪಲಕ್ಷಿತೇಷು ಪಾದಹೃತ್ಕೇಷು । ಏವಂ ಸ್ತನದ್ವಯೋರ್ನೇತ್ಯಾದಿಷ್ವಪಿ ।

೬ 'ಕಕುತ್=ಗಲಪಶ್ಚಾದ್ಭಾಗಃ' (ಛಲಾ.)

೭ ಒಂದಕ್ಷರದ ಮಂತ್ರವಾದರೆ ಅದರ ವ್ಯಂಜನದಿಂದ, ಸ್ವರದಿಂದ, ಅನುಸ್ವಾರದಿಂದ– ಹೀಗೆ ಮೂರು ವರ್ಣಗಳಿಂದ ಮೂರು ಕಡೆ ನ್ಯಾಸಮಾಡಬೇಕು.

೧ ಕಾಲು
೨ ಹೃದಯ
೩ ತಲೆ
೪ ಹೊಕ್ಕುಳು
೫ ಮೋರೆ
೬ ಮುಂದಲೆ
೭ ಮೂಗು
೮ ಕಣ್ಣು
೯ ಮೊಣಗಾಲು
೧೦ ಕಿವಿ
೧೧ ತೊಡೆ
೧೨ ಎದೆ
೧೩ ಕತ್ತು
೧೪ ಎಡತೋಳು
೧೫ ಬಲತೋಳು
೧೬ ಎಡಕೆನ್ನೆ
೧೭ ಬಲಕೆನ್ನೆ
೧೮ ಹಣೆ
೧೯ ಹೊಟ್ಟೆ
೨೦ ದೇಹದ ನಡುಭಾಗ
೨೧ ವೃಷಣ
೨೨ ಲಿಂಗ
೨೩ ಹೊಟ್ಟೆಯ ಎಡಬದಿ
೨೪ ,, ಬಲಬದಿ
೨೫ ಎಡ ಮುಂದೋಳು
೨೬ ಬಲ ಮುಂದೋಳು

---

'ನ್ಯಾಸ ಏಕಾಕ್ಷರೇ ಮಂತ್ರೇ ವ್ಯಂಜನಸ್ವರಬಿಂದುಭಿಃ ।
ಪಾದಹೃತ್ಕೇಷು ವಿಲಯೇ ಹ್ಯುತ್ಪತ್ತೌ ವ್ಯುತ್ಕ್ರಮಾದ್ಭವೇತ್ ।
ಸ್ಥಿತಿರಪ್ಯತ್ರ ವಿಜ್ಞೇಯಾ ಶಿರಆದಿಹೃದಂತಕಾ ॥'

ಎರಡಕ್ಷರದ ಮಂತ್ರವಾದರೆ ಪ್ರತ್ಯೇಕ ವರ್ಣಗಳಿಂದ ಮತ್ತು ಒಟ್ಟು ವರ್ಣಗಳಿಂದ ಮೇಲಿನಂತೆಯೇ ಮೂರೆಡೆಗಳಲ್ಲಿ ನ್ಯಾಸವನ್ನೆಸಗಬೇಕು. ಮೂರಕ್ಷರದ ಮಂತ್ರವಾದರೆ ಕ್ರಮವಾಗಿ ಮಂತ್ರವರ್ಣಗಳಿಂದಲೇ ನ್ಯಾಸ. ೪ ಅಕ್ಷರದ ಮಂತ್ರವಾದರೆ ನಾಭಿಯನ್ನು ಸೇರಿಸಿಕೊಂಡು– ೫ ಅಕ್ಷರದ ಮಂತ್ರವಾದರೆ ಆಸ್ಯವನ್ನೂ ಸೇರಿಸಿಕೊಂಡು– ಹೀಗೆ ಒಂದೊಂದು ಅಕ್ಷರ ಹೆಚ್ಚಿದಂತೆ ಒಂದೊಂದು ಸ್ಥಾನವನ್ನು ಮೇಲಿನ ಶ್ಲೋಕದಲ್ಲಿ ನಿರ್ದೇಶಿಸಿದ ಕ್ರಮದಲ್ಲಿಯೇ ಸೇರಿಸಿಕೊಂಡು ಆ ಅಂಗಗಳ ಪೂರ್ವಾಪರ ಭಾವಕ್ಕನುಗುಣವಾಗಿ ಅಂಗನ್ಯಾಸವನ್ನಾಚರಿಸಬೇಕು. ೩೩ ಅಕ್ಷರಗಳ ವರಾಹಮಂತ್ರಕ್ಕಾಗುವಾಗ ಈ ೩೩ ಸ್ಥಾನಗಳಲ್ಲಿಯೂ ನ್ಯಾಸವನ್ನಾಚರಿಸಬೇಕು ವ್ಯಾಪಕ(ಸರ್ವಾಂಗ) ನ್ಯಾಸವನ್ನು ಎಲ್ಲಕ್ಕಿಂತ ಕೊನೆಯಲ್ಲಿ ಮಾಡಬೇಕು. ೩೨ ಅಕ್ಷರಗಳನ್ನುಳ್ಳ ಅನುಷ್ಟುಪ್ ವೃತ್ತದ ಮಂತ್ರವಾಗಿದ್ದರೆ– ವ್ಯಾಪಕವೊಂದನ್ನು ಬಿಟ್ಟು ಉಳಿದ ೩೨ ಸ್ಥಾನಗಳಲ್ಲಿ ನ್ಯಾಸವನ್ನೆಸಗಬೇಕು ಇನ್ನೂ ಹೆಚ್ಚಿನ ಅಕ್ಷರಗಳುಳ್ಳ ಮಂತ್ರವಾಗಿದ್ದರೆ– ಈ ಸ್ಥಾನಗಳಲ್ಲಿಯೇ ಆವೃತ್ತಿಯಿಂದ ನ್ಯಾಸಮಾಡಿದರೆ ಸರಿ—

'ಇತೋಽಧಿಕಾಕ್ಷರೋಪೇತಸೂಕ್ತೇಷು [ಮಂತ್ರೇಷು] ಸ್ಥಾನಾವೃತ್ತಿಃ ಕಾರ್ಯೇತಿ ಜ್ಞೇಯಮ್ ।' (ನಾರಾ.)

೨೭ ಇಡಿಯ ದೇಹ ೩೦ ಶಕ್ತಿಯ ಹಿಂಬದಿ
೨೮ ಶಕ್ತಿಯ ಎಡಬದಿ ೩೧ ಎಡತೊಡೆ
೨೯ ,, ಬಲಬದಿ ೩೨ ಬಲತೊಡೆ
೩೩ ಬೆನ್ನಿನ ಬುಡ

ಪ್ರತಿಮೆಯಲ್ಲಾಗಲಿ, ತನ್ನಲ್ಲಾಗಲಿ ಆಚರಿಸಲ್ಪಟ್ಟ ಈ ನ್ಯಾಸವು ಭಗವತ್ಸನ್ನಿಧಾನಪ್ರದವಾಗಿದೆ.

**ಬೀಜಾಂತಃಸಾಧ್ಯಮಧ್ಯಂ ಚ ವಿಭಕ್ತದಲಮಂತ್ರಯುಕ್ |**
**ವರ್ಣಾನುಪ್ರತಿಲೋಮೇಶಂ ವೃತ್ತಂ ಭೂಪುರಸಂಯುತಮ್ |**
**ಬೀಜಸಂದೃಬ್ಧಕೋಣಂ ಚ ಯಂತ್ರಂ ರಕ್ಷಾದಿಸಾಧಕಮ್ || ೧೨೮ ||**

ಮೊದಲು ಚಿಕ್ಕದಾದ ಒಂದು ವೃತ್ತವನ್ನು ಬಿಡಿಸಿ ಅದರ ಮಧ್ಯದಲ್ಲಿ ಮಂತ್ರದ ಬೀಜಾಕ್ಷರವನ್ನೂ ಅದರ ಸುತ್ತಲೂ 'ತತ್ವಜ್ಞಾನಂ ಮೇ ಭೂಯಾತ್', 'ಇಷ್ಟಸಿದ್ಧಿರ್ಮೇ ಭೂಯಾತ್', 'ಇಷ್ಟಸಿದ್ಧಿಂ ಕುರು ಕುರು'– ಇತ್ಯಾದಿ ಅಭಿಲಷಿತಾರ್ಥಗಳನ್ನೂ ಬರೆದು, ಆ ವೃತ್ತಕ್ಕೆ ಮಂತ್ರದ ವರ್ಣಗಳ ಸಮಸಂಖ್ಯೆಯಲ್ಲಿ ದಳಗಳನ್ನು ಬಿಡಿಸಿ. ಅವುಗಳಲ್ಲಿ ಮಂತ್ರಾಕ್ಷರಗಳನ್ನು ಬರೆದು, ಅದರ ಸುತ್ತಲೂ ಒಂದು ದೊಡ್ಡ ವೃತ್ತವನ್ನು ಬಿಡಿಸಿ, ಆ ವೃತ್ತದ ಎರಡು ರೇಖೆಗಳ ಮಧ್ಯದಲ್ಲಿ ಅಕಾರಾದಿ ಕ್ಷಕಾರಾಂತ ವರ್ಣಗಳನ್ನು ಕ್ರಮವಾಗಿ ಮತ್ತು ವ್ಯುತ್ಕ್ರಮವಾಗಿ ಬರೆದು, ಅದರ ಹೊರಮೈಯಲ್ಲಿ ದ್ವಾರಗಳಿಂದ ಕೂಡಿದ ಚತುಷ್ಕೋಣವಾದ ಎರಡು ರೇಖೆ (ಭೂಪುರ)ಗಳನ್ನೆಳೆದು, ಅದರ ಮೂಲೆಗಳಲ್ಲಿ ಮಂತ್ರಬೀಜಾಕ್ಷರವನ್ನೂ ದಿಕ್ಪಾಲಕರ ಬೀಜಾಕ್ಷರಗಳನ್ನೂ ಬರೆದು ಎಲ್ಲ ಮಂತ್ರಗಳಿಗೂ ಯಂತ್ರವನ್ನು ರಚಿಸಬೇಕು. ಈ ಯಂತ್ರವು ರಕ್ಷಾಕರ, ಜ್ಞಾನಪ್ರದ, ಇನ್ನೂ ಅನೇಕಫಲದಾಯಿಯಾಗಿದೆ.[1]

**ಸಮಂ ತತ್ಸರ್ವಮಂತ್ರೇಷು ಜಪ್ತಂ[2] ಧಾರ್ಯಂ ತು ವಾ ಭುವಿ |**
**ವಿಲಿಖ್ಯ ಮಂಡಲೇ ವಾ ತತ್ಪೂಜಯೇದ್ಧರಿಮಂಜಸಾ || ೧೨೯ ||**

---

೧ ಈ ಯಂತ್ರದ ವಿನ್ಯಾಸಕ್ರಮವನ್ನು ಬಲ್ಲವರಿಂದ ತಿಳಿದುಕೊಳ್ಳಬಹುದು ಸಾಮಾನ್ಯ ಯಂತ್ರದ ರೂಪರೇಖೆಯನ್ನು ತಿಳಿಯಲಪೇಕ್ಷಿಸುವವರು Sir John Woodroffe ಅವರು ಬರೆದ 'INTRODUCTION TO TANTRA SHASTRA' ಎಂಬ ಪುಸ್ತಕದಲ್ಲಿ ಅಚ್ಚಾದ ಗಾಯತ್ರೀಯಂತ್ರವನ್ನು ಪರಿಶೀಲಿಸಬಹುದು

೨ 'ಯಂತ್ರಗಾಯತ್ರೀಮಂತ್ರೇಣ ಜಪ್ತಂ=ಅಭಿಮಂತ್ರಿತಮ್ |

ಈ ಯಂತ್ರನಿರ್ಮಾಣವಿಧಿಯು ಎಲ್ಲ ಮಂತ್ರಗಳಲ್ಲಿಯೂ ಸಮಾನವಾಗಿದೆ. ವಿಧಿವತ್ತಾಗಿ ನಿರ್ಮಿಸಿದ ಇಂಥ ಯಂತ್ರಗಳನ್ನು ಯಂತ್ರಗಾಯತ್ರಿಯಿಂದ ಅಭಿಮಂತ್ರಿಸಿ ಕೈಯಲ್ಲೋ ಕತ್ತಿನಲ್ಲೋ ಧರಿಸಿಕೊಳ್ಳಬಹುದು; ಅಥವಾ ಭೂಮಿಯಲ್ಲಿ ಮಂಡಲ ಬರೆದು ಅದರಲ್ಲಿ ಈ ಯಂತ್ರವನ್ನು ಬರೆದು– ಆಯಾ ಮಂತ್ರಪ್ರತಿಪಾದ್ಯನಾದ ಶ್ರೀಹರಿಯನ್ನು ವಿಧಿವತ್ತಾಗಿ ಪೂಜಿಸಬಹುದು.

## ಆಚಾರ್ಯಲಕ್ಷಣ

**ಪ್ರತಿಮೋಕ್ತಲಕ್ಷಣೈರ್ಯುಕ್ತಃ[೧] ಆಚಾರ್ಯ ಉತ್ತಮಃ ।**
**ಸರ್ವವಿತ್ತಪಸಾ ಯುಕ್ತ ಆಜ್ಞಾಶಕ್ತಿಯುತೋ ಹರೇಃ[೨] ॥ ೧೩೦ ॥**

ಪ್ರತಿಮಾನಿರ್ಮಾಣ ವಿಧಿಯಲ್ಲಿ ಹೇಳಿರುವ ಎಲ್ಲ ಲಕ್ಷಣಗಳಿಂದಲೂ ಕೂಡಿರುವ, ಸರ್ವಜ್ಞನೂ ತಪಃಶಕ್ತಿಯುಳ್ಳವನೂ ಆದ, ಶ್ರೀಹರಿಯ ಆಜ್ಞಾರೂಪ

---

ಯಂತ್ರಗಾಯತ್ರೀ ತು–

'ಯಂತ್ರರಾಜಾಯ ವಿದ್ಮಹೇ ದೇವಗ್ರಹಾಯ ಧೀಮಹಿ । ತನ್ನೋ ಯಂತ್ರಃ ಪ್ರಚೋದಯಾತ್'' ಇತಿ । (ಛಲಾ.)

೧ 'ದ್ವಾತ್ರಿಂಶಲ್ಲಕ್ಷಣೈರ್ಯುಕ್ತೋ ಗುರುರುತ್ತಮ ಉಚ್ಯತೇ ।
ಬ್ರಹ್ಮೈವ ತಾದೃಶಸ್ತಸ್ಯ ಸಮೋ ನಾನ್ಯೋಽಸ್ತಿ ಕಶ್ಚನ ।' (ಸನ್ನ್ಯಾಸಪ.)

ದ್ವಾತ್ರಿಂಶಲ್ಲಕ್ಷಣಗಳ ಕುರಿತು ತೃತೀಯಾಧ್ಯಾಯದ ಟಿಪ್ಪಣಿಯಲ್ಲಿ ವಿವರವಾದ ವಿವೇಚನೆಯನ್ನು ಕಾಣಬಹುದು.

೨ '"ಶ್ರುತಿಸ್ಮೃತೀ ಮಮೈವಾಜ್ಞೇ" ಇತ್ಯುಕ್ತೇರಾಜ್ಞಾಶಬ್ದೇನ ಶ್ರುತಿಸ್ಮೃತೀ ಉಚ್ಯೇತೇ' (ಸಾರಾ.)

ಈ ಮಾತನ್ನು ಬರೆಯುವಾಗ ಆಚಾರ್ಯರು ತಮ್ಮನ್ನೇ ಗಮನದಲ್ಲಿಟ್ಟುಕೊಂಡು ಬರೆದಂತಿದೆ. ಅವರ ಕುರಿತು ತ್ರಿವಿಕ್ರಮಪಂಡಿತರು ಬರೆದ ಮಾತುಗಳನ್ನು ನೋಡಿದಾಗ ಈ ವಿಷಯ ಇನ್ನಷ್ಟು ಸ್ಫುಟವಾಗುವುದು–

'ಯಸ್ಯಾಸ್ಖಲಿತಾನವರತವೇದಶಾಸ್ತ್ರವ್ಯಾಖ್ಯಾನಶ್ರವಣಕೌತುಕಸಮುತ್ಪ್ಲುತ-ದುಃಖಸಂಘಾತೋ ನಿಖಿಲಪಂಡಿತವರ್ಗೋ ಮಹಾಮೃತಸಮುದ್ರಾವಗಾಹೀವ ಬಹುಲಮಾಹ್ಲಾದಮಾಪ್ನೋತಿ ।'

'"ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ ।
ವಿಶ್ರುತಾ ನೃಷು ಜಾತಂ ಚ ತಂ ವಿದ್ಯಾದ್ದೇವಸತ್ತಮಮ್ ॥'' ಇತಿ ನಾರಾಯಣಶ್ರುತಿಃ । ಪ್ರತ್ಯಕ್ಷಮೇವ ಚೈತಲ್ಲಕ್ಷಣಂ ದೃಶ್ಯತೇ ಭಗವತಿ ಭಾಷ್ಯಕಾರೇ ।'
(ತತ್ವದೀ)

ಗಳಾದ ಶ್ರುತಿಸ್ಮೃತಿಗಳ ನಿರರ್ಗಳ ಪ್ರವಚನಗಳಲ್ಲಿ ಸಮರ್ಥನಾದ ಗುರುವೇ ಉತ್ತಮ ಗುರು.

**ಯಾವದ್ಭಕ್ತೋ ಯಥಾಲಬ್ಧೈರ್ಗುಣೈರ್ಯುಕ್ತೋ ಹಿ ವೈಷ್ಣವಃ ।**
**ಗುರುಃ ಸತ್ಸಂಪ್ರದಾಯಜ್ಞಸ್ತಾರತಮ್ಯೇನ ಸಿದ್ಧಿದಃ ॥ ೧೩೧ ॥**

ಯೋಗ್ಯತಾನುಸಾರವಾಗಿ ಹರಿಭಕ್ತರಾದ, ಯಥಾಶಕ್ತಿ ಶಾಸ್ತ್ರಪಾಂಡಿತ್ಯಾದಿ ಗುಣಗಳನ್ನುಳ್ಳ, ವೈಷ್ಣವದೀಕ್ಷೆಯನ್ನು ಪಡೆದ, ಸತ್ಸಂಪ್ರದಾಯವನ್ನು ಬಲ್ಲ ಎಲ್ಲ ಶ್ರೋತ್ರಿಯರೂ ತಾರತಮ್ಯಾನುಸಾರವಾಗಿ ಗುರುಗಳೇ ಆಗಿದ್ದಾರೆ. ಅವರಿಂದ ದೊರೆವ ಸಿದ್ಧಿಯೂ ತಾರತಮ್ಯೋಪೇತವೇ ಆಗಿದೆ.

**ಉತ್ತಮಾದುತ್ತಮಾ ಸಿದ್ಧಿರ್ಧರ್ಮಮೋಕ್ಷಾದಿಷು ಸ್ಫುಟಾ ।**
**ತಸ್ಮಾದುತ್ತಮ ಆಚಾರ್ಯೇ ಲಬ್ಧೇ ನಾತೋಽವರಂ ವ್ರಜೇತ್[1] ॥**

ಉತ್ತಮ ಗುರುಗಳಿಂದ ಪಡೆದ ಸಿದ್ಧಿಯೂ ಉತ್ತಮವೇ ಆಗಿರುತ್ತದೆ. ಧರ್ಮ ಜ್ಞಾನ ವೈರಾಗ್ಯ ಮೋಕ್ಷಾದಿಗಳಲ್ಲಿ ಹೆಚ್ಚಿನ ಸಿದ್ಧಿಯನ್ನು ಉತ್ತಮ ಗುರುಗಳು ಮಾತ್ರವೇ ಕರುಣಿಸಬಲ್ಲರು. ಆದರಿಂದ ಉತ್ತಮ ಗುರುಗಳು ದೊರೆತಾಗ ಅಂಥವರನ್ನು ಬಿಟ್ಟು ಅಧಮಗುರುಗಳನ್ನಾಶ್ರಯಿಸುವ ಗಾಂಪತನವನ್ನು ಮಾಡಬಾರದು.

**ಏಕಸ್ಯ ಶಿಷ್ಯತಾಂ ಪ್ರಾಪ್ಯ ತದಾಜ್ಞಾಂ ನ ವಿನಾ ಸಮಮ್ ।**
**ಅವರಂ ವಾ ವ್ರಜೇದುಚ್ಚಗುಣಶ್ಚೇನ್ನೈವ ದುಷ್ಯತಿ[2] ॥ ೧೩೩ ॥**

ಒಬ್ಬ ಗುರುವಿನ ಶಿಷ್ಯತ್ವವನ್ನು ಪಡೆದು ಅವರ ಒಪ್ಪಿಗೆಯಿಲ್ಲದೆ ಅವರ ಸಮಾನಸ್ಕಂಧನಾದ ಅಥವಾ ಅವರಿಂದ ಅಧಮನಾದ ಗುರುವನ್ನು ಆಶ್ರಯಿಸ

---

೧ 'ಗುಣಾಧಿಕಂ ಗುರುಂ ಪ್ರಾಪ್ಯ ತದ್ಧೀನಂ ನಾಽಪ್ನುಯಾತ್ಕ್ವಚಿತ್ ।
ವಿಪರ್ಯಯಸ್ತು ಕರ್ತವ್ಯಃ ಸರ್ವಥಾ ಶುಭಮಿಚ್ಛತಾ ॥' (ಅನುವ್ಯಾ.)

೨ 'ಸಮೇ ವಿಕಲ್ಪ ಏವ ಸ್ಯಾತ್ಪೂರ್ವಾನುಜ್ಞಾ ಚ ಸರ್ವಥಾ ।
ತದುತ್ತಮಗುರುಪ್ರಾಪ್ತೌ ಪೂರ್ವಾನುಜ್ಞಾ ನ ಮೃಗ್ಯತೇ ॥' (ಅನುವ್ಯಾ.)
'ಪೂರ್ವಸ್ಮಾದುತ್ತರೋ ಲಬ್ಧಃ ಸ್ವಯಮೇವ ಗುರುರ್ಯದಿ ।
ಗೃಹ್ಣೀಯಾದವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ॥' (ಬ್ರಹ್ಮಸೂ ಭಾ.)
'ಅನುಜ್ಞಯೈವ ಪೂರ್ವಸ್ಯ ಪ್ರಾಪ್ನುಯಾದ್ಗುರುಮುತ್ತಮಮ್ ।'
(ಸನ್ನ್ಯಾಸಪ.)

ಬಾರದು. ಉತ್ತಮ ಗುರು ದೊರೆತರೆ– ಪೂರ್ವಗುರುವನ್ನು ಬಿಟ್ಟು ಅವರನ್ನು ಆಶ್ರಯಿಸಿದರೆ ದೋಷವಿಲ್ಲ.

**ವಿಶೇಷತೋ ಗುಣಶ್ಚ ಸ್ಯಾದ್ದೇವೇಷ್ವಪ್ಯೇವಮೇವ ಹಿ ।**
**ತಸ್ಮಾದುತ್ತಮಮಾಚಾರ್ಯಂ ದೇವೇಶಂ ಚಾಽಽಶ್ರಯೇದ್ಧರಿಮ್[1] ॥**

ಉತ್ತಮ ಗುರುಗಳನ್ನರಸುವುದರಿಂದ ವಿಶೇಷ ಜ್ಞಾನಾದಿಗಳನ್ನು ಸಂಪಾದಿಸುವುದೂ ಶಕ್ಯವಿದೆ. ಈ ಗುರುತಾರತಮ್ಯಕ್ರಮ ಮನುಷ್ಯರಿಗೆ ಮಾತ್ರವೇ ಅನ್ವಯಿಸುವಂಥದಲ್ಲ. ದೇವತೆಗಳ ಕ್ರಮವೂ ಇದೇ ತೆರನಾಗಿದೆ. ಅದರಿಂದ ಉತ್ತಮರಾದ ಗುರುಗಳನ್ನೂ ದೇವೋತ್ತಮನಾದ ಶ್ರೀಹರಿಯನ್ನೂ ಆಶ್ರಯಿಸಿ ಕೃತಾರ್ಥರಾಗಬೇಕು.

**ಅಪರೋಕ್ಷದೃಶೇರೇವ ಯಸ್ಮಾನ್ಮೋಕ್ಷೋ ನ ಚಾನ್ಯಥಾ ।**
**ಅಪರೋಕ್ಷದೃಶಿಶ್ಚೈವ ಶ್ರವಣಾನ್ಮನನಾದನು ।**
**ಸಮ್ಯಙ್ನಿಶ್ಚಿತತತ್ತ್ವಸ್ಯ[2] ನಿದಿಧ್ಯಾಸನಯಾ[3] ಭವೇತ್ ॥ ೧೩೫ ॥**

ಭಗವತ್ಸಾಕ್ಷಾತ್ಕಾರವಿಲ್ಲದೆ ಈ ಸಂಸಾರದಿಂದ ಬಿಡುಗಡೆ ದೊರಕುವುದಿಲ್ಲ. ಶ್ರವಣ ಮನನಗಳಿಂದ ಭಗವತ್ತತ್ತ್ವವನ್ನು 'ಇದಮಿತ್ಥಂ' ಎಂದು ನಿರ್ಣಯಿಸಿಕೊಂಡು ಧ್ಯಾನನಿರತನಾಗದೆ ಅಪರೋಕ್ಷವಾಗುವಂತಿಲ್ಲ. ಅದರಿಂದ ಸಚ್ಛಾಸ್ತ್ರಶ್ರವಣಕ್ಕಾಗಿ ಸದ್ಗುರುಗಳನ್ನಾಶ್ರಯಿಸಬೇಕು.

**ದ್ವಿವಿಧಾ ಸಾ ಚ ಸಂಪ್ರೋಕ್ತಾ ವಿಷ್ಣುಶಾಸ್ತ್ರಾವಮರ್ಶನಮ್ ।**
**ಏಕಂ ಧ್ಯಾನಂ ಹರೇರನ್ಯಚ್ಚತ್ವಾರ್ಯಂಗಾನಿ ತಸ್ಯ ಚ[4] ।**
**ಯಮಶ್ಚ ನಿಯಮಶ್ಚಾಽಸಾ[5] ಪ್ರಾಣಾಯಾಮ ಇತೀರಿತಃ ॥ ೧೩೬ ॥**

ಆ ಉಪಾಸನೆಯು– ಶಾಸ್ತ್ರಶ್ರವಣಮನನರೂಪವಾದುದೊಂದು, ಧ್ಯಾನರೂಪವಾದುದೊಂದು, ಹೀಗೆ ಎರಡು ವಿಧ. ಧ್ಯಾನರೂಪವಾದ ಉಪಾ

---

೧ 'ಗುರುರ್ಬ್ರಹ್ಮಾಖಿಲಾನಾಂ ಚ ವಿದ್ಯಾ ಚೈವ ಸರಸ್ವತೀ ।
ದೇವತಾ ಭಗವಾನ್ವಿಷ್ಣುಃ ಸರ್ವೇಷಾಮವಿಶೇಷತಃ ॥' (ಅನುವ್ಯಾ.)

೨ 'ಅಸಂಶಯೇನ ತತ್ತ್ವಸ್ಯ ನಿರ್ಣಯೋ ಬ್ರಹ್ಮದರ್ಶನಮ್ ।' (ಅನುವ್ಯಾ.)

೩ ನಿದಿಧ್ಯಾಸನಾ=ಉಪಾಸನಾ ।

೪ 'ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ ।
ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಮ್ ॥' (ಅನುವ್ಯಾ.)

೫ ಆಸಾ=ಆಸನಮ್ ।

ನನೆಗೆ. ಯಮ, ನಿಯಮ, ಆಸನ, ಪ್ರಾಣಾಯಾಮ ಎಂಬ ನಾಲ್ಕು ವಿಧವಾದ ಅಂಗಗಳಿವೆ.

**ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।**
**ಯಮಾಃ ಶೌಚಂ ತಪಸ್ತುಷ್ಟಿಃ ಸ್ವಾಧ್ಯಾಯೋ ಹರಿಪೂಜನಮ್[1] ।**

---

[1] 'ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಾಪರಿಗ್ರಹೌ ।
ಯಮಾಃ ಪಂಚ ಸ್ಮೃತಾ ವಿಪ್ರ ನಿಯಮಾ ಭುಕ್ತಿಮುಕ್ತಿದಾಃ ।
ಶೌಚಂ ಸಂತೋಷತಪಸೀ ಸ್ವಾಧ್ಯಾಯೇಶ್ವರಪೂಜನೇ ॥' (ಅಗ್ನಿಪು)

ಶಂಕರಾಚಾರ್ಯರು ತಮ್ಮ 'ಪ್ರಪಂಚಸಾರ'ದಲ್ಲಿ ೮ ಯಮಗಳನ್ನೂ ೬ ನಿಯಮಗಳನ್ನೂ ಉಲ್ಲೇಖಿಸಿದ್ದಾರೆ—

'ಸತ್ಯಮಹಿಂಸಾ ಸಮತಾ ಧೃತಿರಸ್ತೇಯಂ ಕ್ಷಮಾಽಽರ್ಜವಂ ಚ ತಥಾ ।
ವೈರಾಗ್ಯಮಿತಿ ಯಮಃ ಸ್ಯಾತ್ ಸ್ವಾಧ್ಯಾಯತಪೋಽರ್ಚನಾವ್ರತಾನಿ ತಥಾ ।
ಸಂತೋಷಶ್ಚ ಸಶೌಚೋ ನಿಯಮಃ ಸ್ಯಾತ್'

ಶಾರದಾತಿಲಕದಲ್ಲಿ ಯಮನಿಯಮಗಳೆರಡೂ ಹತ್ತುವಿಧವೆಂದು ಉಕ್ತವಾಗಿದೆ—

**'ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ಕೃಪಾಽಽರ್ಜವಮ್ ।**
**ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚೇತಿ ಯಮಾ ದಶ ॥**
**ತಪಃ ಸಂತೋಷ ಆಸ್ತಿಕ್ಯಂ ದಾನಂ ದೇವಸ್ಯ ಪೂಜನಮ್ ।**
**ಸಿದ್ಧಾಂತಶ್ರವಣಂ ಚೈವ ಹ್ರೀರ್ಮತಿಶ್ಚ ಜಪೋ ಹುತಮ್ ।**
**ದಶೈತೇ ನಿಯಮಾಃ ಪ್ರೋಕ್ತಾ ಯೋಗಶಾಸ್ತ್ರವಿಶಾರದೈಃ ॥'** (ಶಾರದಾ.)

ಈ ವಿಭಾಗಗಳೆಲ್ಲ ಒಂದಕ್ಕೊಂದು ಸೇರಿಕೊಳ್ಳುವಂಥವು. ಉದಾಹರಣೆಗೆ— ಶಾರದಾತಿಲಕದ ೧೦ ಯಮಗಳಲ್ಲಿ ಕೃಪಾ ಮತ್ತು ಆರ್ಜವಗಳು ಅಹಿಂಸೆ ಮತ್ತು ಸತ್ಯಗಳಲ್ಲಿ ಸೇರಿಕೊಳ್ಳುತ್ತವೆ. ಕ್ಷಮೆ, ಧೃತಿ, ಮಿತಾಹಾರ, ಇವೆಲ್ಲವೂ ಅಪರಿಗ್ರಹದ ಪ್ರಭೇದಗಳು. ಶೌಚ ನಿಯಮದಲ್ಲಿ ಸೇರಿದ್ದು ಹೊರತು ಯಮದಲ್ಲಿಲ್ಲ. ಅಂದ ಮೇಲೆ ಐದೇ ವಿಭಾಗ ಸಾಧುವಾಗಿವೆ. ಹೀಗೆಯೇ ನಿಯಮದ ಪ್ರಭೇದಗಳಲ್ಲಿಯೂ ಆಸ್ತಿಕ್ಯ, ದಾನ, ಹುತಗಳು ತಪಸ್ಸಿನಲ್ಲಿ ಸೇರಿಕೊಳ್ಳುವವು. ಜಪ, ಮತಿಗಳು, ಸ್ವಾಧ್ಯಾಯದಲ್ಲಿ ಸೇರಿಕೊಳ್ಳುವವು. ಕುತ್ಸಿತಾಚಾರದಿಂದ ಲಜ್ಜೆ (ಹ್ರೀ) ಆಚಾರವನ್ನು ನಿರೂಪಿಸಿದ ಮೇಲೆ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದರಿಂದ ಪರಸ್ಪರ ಅನಂತರ್ಗತಗಳಾದ ಪಂಚವಿಭಾಗಗಳೇ ಸಾಧುವೆಂದು ಆಚಾರ್ಯರು ಆ ಪಕ್ಷವನ್ನೇ ಉಲ್ಲೇಖಿಸಿದ್ದಾರೆ. ಅಗ್ನಿಪುರಾಣವೂ ಆಚಾರ್ಯರ ವಚನಕ್ಕೆ ಬೆಂಗಾವಲಾಗಿದೆ.

ಈ ಯಮನಿಯಮಗಳ ವಿಭಾಗಗಳ ಲಕ್ಷಣವನ್ನು ಅಗ್ನಿಪುರಾಣದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ—

'ಭೂತಾಪೀಡಾ ಹ್ಯಹಿಂಸಾ ಸ್ಯಾದಹಿಂಸಾ ಧರ್ಮ ಉತ್ತಮಃ ।

**ನಿಯಮಾ ವೀರಪದ್ಮೇ ಚ ಸ್ವಸ್ತಿಕಾದ್ಯಾನಿ ಚಾಽಽಸನಮ್[1] ॥ ೧೩೭ ॥**

---

ಯಥಾ ಗಜಪದೇಽನ್ಯಾನಿ ಪದಾನಿ ಪಥಗಾಮಿನಾಮ್ ।
ಏವಂ ಸರ್ವಮಹಿಂಸಾಯಾಂ ಧರ್ಮಾರ್ಥಮಭಿಧೀಯತೇ ॥
'ಯದ್ಭೂತಹಿತಮತ್ಯಂತಂ ವಚಃ ಸತ್ಯಸ್ಯ ಲಕ್ಷಣಮ್ ।
ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಮ್ ॥
ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ ।
ಮೈಥುನಸ್ಯ ಪರಿತ್ಯಾಗೋ ಬ್ರಹ್ಮಚರ್ಯಂ ತದಷ್ಟಧಾ ॥
'ಬ್ರಹ್ಮಚರ್ಯಂ ಕ್ರಿಯಾಮೂಲಮನ್ಯಥಾ ವಿಫಲಾ ಕ್ರಿಯಾ ।
ವಶಿಷ್ಠಶ್ಚಂದ್ರಮಾಃ ಶುಕ್ರೋ ದೇವಾಚಾರ್ಯಃ ಪಿತಾಮಹಃ ।
ತಪೋವೃದ್ಧಾ ವಯೋವೃದ್ಧಾಸ್ತೇಽಪಿ ಸ್ತ್ರೀಭಿರ್ವಿಮೋಹಿತಾಃ ॥
'ಮಾದ್ಯತಿ ಪ್ರಮದಾಂ ದೃಷ್ಟ್ವಾ ಸುರಾಂ ಪೀತ್ವಾ ತು ಮಾದ್ಯತಿ ।
ಯಸ್ಮಾದ್ದೃಷ್ಟಮದಾ ನಾರೀ ತಸ್ಮಾತ್ತಾಂ ನಾವಲೋಕಯೇತ್ ॥
ಯದ್ವಾ ತದ್ವಾ ಪರದ್ರವ್ಯಮಪಹೃತ್ಯ ಬಲಾನ್ನರಃ ।
ಅವಶ್ಯಂ ಯಾತಿ ತಿರ್ಯಕ್ತ್ವಂ ಜಗ್ಧ್ವಾ ಚೈವಾಹುತಂ ಹವಿಃ ॥
ಕೌಪೀನಾಚ್ಛಾದನಂ ವಾಸಃ ಕಂಥಾಂ ಶೀತನಿವಾರಿಣೀಮ್ ।
ಪಾದುಕೇ ಚಾಪಿ ಗೃಹ್ಣೀಯಾತ್ಕುರ್ಯಾನ್ನಾನ್ಯಸ್ಯ ಸಂಗ್ರಹಮ್ ॥
ದೇಹಸ್ಥಿತಿನಿಮಿತ್ತಸ್ಯ ವಸ್ತ್ರಾದೇಃ ಸ್ಯಾತ್ಪರಿಗ್ರಹಃ ।
ಶರೀರಂ ಧರ್ಮಸಂಯುಕ್ತಂ ರಕ್ಷಣೀಯಂ ಪ್ರಯತ್ನತಃ ॥
ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಾಭ್ಯಂತರಂ ತಥಾ ।
ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿರಥಾಂತರಮ್ ।
ಉಭಯೇನ ಶುಚಿರ್ಯಸ್ತು ಸ ಶುಚಿರ್ನೇತರಃ ಶುಚಿಃ ॥
ಯಥಾಕಥಂಚಿತ್ಪ್ರಾಪ್ತ್ಯಾ ಚ ಸಂತೋಷಸ್ತುಷ್ಟಿರುಚ್ಯತೇ ।
ಮನಸಶ್ಚೇಂದ್ರಿಯಾಣಾಂ ಚ ಐಕಾಗ್ರ್ಯಂ ತಪ ಉಚ್ಯತೇ ।
ತಜ್ಜಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ॥
'ವಾಙ್ಮಯಃ ಪ್ರಣವಃ ಸರ್ವಂ ತಸ್ಮಾತ್ಪ್ರಣವಮಭ್ಯಸೇತ್ ।
'ವೈದಿಕಸ್ತಾಂತ್ರಿಕೋ ಮಿಶ್ರೋ ವಿಷ್ಣೋರ್ವೈ ತ್ರಿವಿಧೋ ಮಖಃ ।
ತ್ರಯಾಣಾಮೀಪ್ಸಿತೇನೈಕವಿಧಿನಾ ಹರಿಮರ್ಚಯೇತ್ ॥' (ಅಗ್ನಿಪು)

೧ ಪ್ರಧಾನ ಆಸನಗಳೂ ಯಮನಿಯಮಗಳಂತೆಯೆ ಪಂಚವಿಧ—

'ಆಸನಂ ಚ ಪಂಚವಿಧಮ್ ।
ಪದ್ಮಸ್ವಸ್ತಿಕಭದ್ರಕವಜ್ರಕವೀರಾಹ್ವಯಂ ಕ್ರಮಾತ್ತದಪಿ ॥' (ಪ್ರಪಂಚಸಾ)
'ಪದ್ಮಾಸನಂ ಸ್ವಸ್ತಿಕಾಖ್ಯಂ ವಜ್ರಂ ಭದ್ರಾಸನಂ ತಥಾ ।
ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನಪಂಚಕಮ್ ॥' (ಶಾರದಾ)
ಈ ಆಸನಗಳ ಲಕ್ಷಣ ವಿಧಾನಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಭೂತದಯೆ, ಸತ್ಯ ನುಡಿಯುವುದು, ಕದಿಯದಿರುವುದು, ಬ್ರಹ್ಮಚರ್ಯರಕ್ಷಣೆ, ವೈರಾಗ್ಯ— ಇವಿಷ್ಟನ್ನು 'ಯಮ' ಎಂದು ಕರೆದರು. ದೇಹ ಮನಸ್ಸುಗಳನ್ನು ನಿರ್ಮಲಗೊಳಿಸುವುದು, ತಪಸ್ಸು, ಸಂತುಷ್ಟತೆ, ಶಾಸ್ತ್ರಾಧ್ಯಯನ, ಹರಿಪೂಜೆ— ಇವುಗಳಿಗೆ 'ನಿಯಮ'ವೆಂದು ಹೆಸರು. ವೀರಾಸನ, ಪದ್ಮಾಸನ, ಸ್ವಸ್ತಿಕಾಸನ—ಇವೆಲ್ಲ ಆಸನಪ್ರಭೇದಗಳು.

**ರೇಚಕಃ ಪೂರಕಶ್ಚೈವ ಕುಂಭಕಶ್ಚ ತ್ರಿಧಾ ಸ್ಮೃತಃ ।**
**ಪ್ರಾಣಾಯಾಮಃ[1] ಸ್ಮೃತಿಂ ವಿಷ್ಣೋರ್ವಿನಾ ನಿಯಮ ಉಚ್ಯತೇ ॥**
**ಅಧೀತಿಃ ಸ್ಮೃತಿಯುಕ್ತಾ ತು ನಿದಿಧ್ಯಾಸನಮೇವ ಹಿ ।**
**ಪ್ರಾಣಾಯಾಮೋಽಪಿ ವಿಷ್ಣೋರ್ಯತ್ಸ್ಮರಣಂ ಧ್ಯಾನಮೇವ ತತ್ ॥**

ಪ್ರಾಣಾಯಾಮವು ರೇಚಕ, ಪೂರಕ, ಕುಂಭಕ ಎಂದು ಮೂರು ವಿಧ. ಶಾಸ್ತ್ರವಾಕ್ಯಾರ್ಥರೂಪವಾದ ವಿಷ್ಣುವಿನ ಸ್ಮರಣಪೂರ್ವಕವಾದ ಶಾಸ್ತ್ರಾಧ್ಯಯನವು ಉಪಾಸನೆಯಲ್ಲಿ ಅಂತರ್ಗತವಾಗುವುದು. ವಿಷ್ಣುಸ್ಮರಣೆಯಿಲ್ಲದೆ ಕೇವಲ ಪಾರಾಯಣರೂಪವಾದ ಸ್ವಾಧ್ಯಾಯವು ನಿಯಮದಲ್ಲಿ ಅಂತರ್ಗತವಾಗಿದೆ. ಹೀಗೆಯೇ ಪ್ರಾಣಾಯಾಮವೂ ವಿಷ್ಣುಸ್ಮರಣಪೂರ್ವಕವಾಗಿದ್ದರೆ ಅದೂ ಧ್ಯಾನವೇ ಆಗುವುದು. ಕೇವಲ ಶ್ವಾಸನಿರೋಧರೂಪವಾಗಿದ್ದರೆ ಮಾತ್ರವೆ ಅದು ಧ್ಯಾನದ ಅಂಗವಾದ ನಿಯಮದಲ್ಲಿ ಸೇರುವುದು.

**ಆಸಾ ಶೌಚಂ ಪ್ರಾಣಾಯಾಮೋ ನಿಷ್ಪರಿಗ್ರಹಪೂರ್ವಕಾಃ ।**
**ತಪಆದ್ಯಾಃ ಕ್ರಮಾತ್ಸರ್ವ ಉತ್ತರೋತ್ತರತೋಽಧಿಕಾಃ[2] ॥ ೧೪೦ ॥**

ಆಸನ, ಶೌಚ, ಪ್ರಾಣಾಯಾಮ, ಅಪರಿಗ್ರಹ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ತಪಸ್ಸು, ತುಷ್ಟಿ, ಸ್ವಾಧ್ಯಾಯ, ಹರಿಪೂಜನ— ಇವುಗಳು ಕ್ರಮವಾಗಿ ಮೊದಲಿನವುಗಳಿಂದ ಮೇಲಿನವುಗಳು ಶ್ರೇಷ್ಠಗಳಾಗಿವೆ.

---

೧ ಪ್ರಾಣಾಯಾಮದ ಪ್ರಭೇದಗಳನ್ನು ಆಚಾರ್ಯರು ಮುಂದೆ ವಿವರಿಸುವರು. ಅಲ್ಲದೆ ೧ನೇ ಅಧ್ಯಾಯದ ಟಿಪ್ಪಣಿಯಲ್ಲಿ ಈ ವಿಷಯಗಳ ವಿವರವನ್ನು ಕೊಡಲಾಗಿದೆ

೨ 'ಆಸಾ ಶೌಚಂ ಚ ಧರ್ಮಾಂಗೇ ಪ್ರಾಣಾಯಾಮೋಽಪರಿಗ್ರಹಃ ।
ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಪಸ್ತಥಾ ॥
ತುಷ್ಟಿರ್ಯಜ್ಞಾದಯೋ ಧರ್ಮಾಃ ಸ್ವಾಧ್ಯಾಯೋಽಭ್ಯರ್ಚನಂ ಹರೇಃ ।
ಉತ್ತರೋತ್ತರಮೇತಾನಿ ಕರ್ತವ್ಯಾನಿ ವಿಶೇಷತಃ ॥' (ಯೋಗದೀ.)

**ಸರ್ವಸ್ಮಾಚ್ಛ್ರವಣಾದ್ಯಾಸ್ತು ಮುಖ್ಯಾ ಮುಕ್ತಿಪ್ರಸಾಧನೇ ।**
**ಅಜ್ಞಸ್ಯ ಶ್ರವಣಂ ಶ್ರೇಷ್ಠಮಯುಕ್ತೇರ್ಮನನಂ ತಥಾ ।**
**ಧ್ಯಾನಂ ನಿಶ್ಚಿತತತ್ತ್ವಸ್ಯ ತಸ್ಮಾಚ್ಛಾಸ್ತ್ರಾವಮರ್ಶನಮ್[1] ॥ ೧೪೧ ॥**
**ವರಂ ದಶಗುಣಂ ತಸ್ಮಾದ್ವ್ಯಾಖ್ಯೈಕಸ್ಯ ಶತೋತ್ತರಾ[2] ।**
**ಅಪರೋಕ್ಷದೃಶಾಽಪ್ಯೇಷಾ ಕರ್ತವ್ಯಾ ವಿಷ್ಣುತುಷ್ಟಿದಾ ॥ ೧೪೨ ॥**

ಮೋಕ್ಷಸಾಧನೆಯಲ್ಲಿ ಶ್ರವಣ, ಮನನ, ನಿದಿಧ್ಯಾಸನಗಳು ಎಲ್ಲಕ್ಕಿಂತ ಪ್ರಧಾನಗಳು. ಶಾಸ್ತ್ರಜ್ಞಾನವಿಲ್ಲದವನಿಗೆ ಗುರುಮುಖದಿಂದ ಶ್ರವಣ ಮುಖ್ಯ. ಶಾಸ್ತ್ರಶ್ರವಣವಿದ್ದು ಯುಕ್ತಿಬಲದಿಂದ ತತ್ತ್ವನಿರ್ಣಯವಿಲ್ಲದವನಿಗೆ ಮನನ ಮುಖ್ಯ. ಶ್ರವಣ ಮನನಗಳಿಂದ ತತ್ತ್ವನಿರ್ಣಯವುಳ್ಳವನಿಗೆ ಧ್ಯಾನ ಮತ್ತು ಶಾಸ್ತ್ರಾಭ್ಯಾಸರೂಪವಾದ ನಿದಿಧ್ಯಾಸನೆ ಮುಖ್ಯ. ಅವುಗಳಲ್ಲಿಯೂ ಧ್ಯಾನಕ್ಕಿಂತ ಶಾಸ್ತ್ರಾಭ್ಯಾಸವೇ ಹತ್ತುಪಟ್ಟು ಮಿಗಿಲು. ಶಾಸ್ತ್ರಾಭ್ಯಾಸಕ್ಕಿಂತಲೂ ಒಬ್ಬನೇ ವಿದ್ಯಾರ್ಥಿಗಾದರೂ ಶಾಸ್ತ್ರಪ್ರವಚನವನ್ನು ಮಾಡುವುದು ನೂರುಪಟ್ಟು ಮಿಗಿಲು. ಅಪರೋಕ್ಷಜ್ಞಾನಿಯೂ ಕೂಡ ವಿಷ್ಣುಪ್ರೀತಿಗಾಗಿ ಶಾಸ್ತ್ರಪ್ರವಚನವನ್ನು ನಡೆಸುತ್ತಿರಬೇಕು ಎಂದು ವಿಧಿಯಿದೆ.

**ಯ[4] ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೧೪೩ ॥**
**ನಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೧೪೪ ॥**

ಈ ಪರಮರಹಸ್ಯವಾದ ಶಾಸ್ತ್ರತತ್ತ್ವವನ್ನು ನನ್ನ ಭಕ್ತರಿಗೆ ವ್ಯಾಖ್ಯಾನಾದಿಗಳಿಂದ ಉಪದೇಶಿಸುವಂಥವನು ನನ್ನಲ್ಲಿ ಪರಮಭಕ್ತಿಯನ್ನಿಟ್ಟು ಕೊನೆಗೆ

---

೧ 'ಧ್ಯಾನಾಚ್ಛಾಸ್ತ್ರಾವಮರ್ಶನಮೇವ ದಶಗುಣಮುತ್ತಮಮ್ । ಧ್ಯಾನಕಾಲೇ ಬಹುಗುಣಾನಾಮಪ್ರತಿಭಾನಾತ್ । ಶಾಸ್ತ್ರಾವಮರ್ಶನೇ ತದನ್ಯಾನಾಮನೇಕೇಷಾಂ ಗುಣಾನಾಂ ಪ್ರತಿಭಾನಾದಿತಿ ಭಾವಃ ।' (ನಾರಾ.)

೨ 'ಶಾಸ್ತ್ರಾಲೋಡನರೂಪಶಾಸ್ತ್ರಾವಮರ್ಶಾಪೇಕ್ಷಯಾ ವ್ಯಾಖ್ಯಾನತೋ ವಿಶೇಷಗುಣಪ್ರತಿಪತ್ತೇಸ್ತದೇವ ವರಮ್ ।' (ನಾರಾ.)

೩ ಅಪರೋಕ್ಷದೃಶಾ=ಅಪರೋಕ್ಷಜ್ಞಾನಿನಾ ।

೪ 'ವ್ಯಾಖ್ಯಾಯಾ ವಿಷ್ಣುತುಷ್ಟಿದತ್ವೇ ಗೀತಾವಾಕ್ಯಂ ಪ್ರಮಾಣಯತಿ–'ಯ' ಇತಿ । ಅತ್ರ ಕೃಷ್ಣೇನ ವ್ಯಾಖ್ಯಾತುಃ ಸ್ವಪ್ರಾಪ್ತಿರೂಪಫಲಾಭಿಧಾನಾತ್ಸ್ವಸ್ಯಾತಿಪ್ರಿಯತ್ವೋಕ್ತೇಃ ಶ್ಲೋಕಾರ್ಥೋಽವಸೀಯತೇ ।' (ನ್ಯಾರಾ)

ನನ್ನನ್ನೇ ಹೊಂದುವನು. ಈ ವಿಷಯದಲ್ಲಿ ಸಂದೇಹಪಡಬೇಕಾಗಿಲ್ಲ. ಈ ರೀತಿ ನನ್ನ ತತ್ತ್ವಗಳನ್ನು ಉಪದೇಶಿಸುವ ಮಹಾನುಭಾವನಿಂದಲೂ ಹೆಚ್ಚು ಪ್ರಿಯನಾದ ಒಬ್ಬ ಮನುಷ್ಯ ಈ ವರೆಗೂ ಹುಟ್ಟಿಲ್ಲ; ಇನ್ನು ಮುಂದೆ ಹುಟ್ಟುವಂತೆಯೂ ಇಲ್ಲ.

**ಶೌಚಾಸನೇ ತ್ವಂಗಮಾತ್ರಂ ನ ಪೃಥಗ್ಧರ್ಮಕಾರಣಮ್ ।**
**ಪ್ರಾಣಾಯಾಮಾದಯಸ್ತುಷ್ಟಿಪರ್ಯಂತಾ ದ್ವಿಗುಣಾಧಿಕಾಃ ॥೧೪೫॥**
**ಸ್ವಾಧ್ಯಾಯೋಽತಃ ಕೋಟಿಗುಣಸ್ತತೋಽನಂತಗುಣಾ ಹರೇಃ ।**
**ಪೂಜಾಽತಸ್ತ್ರಿಗುಣಂ ಧ್ಯಾನಮಿತಿ ಧರ್ಮಕ್ರಮಃ ಸ್ಮೃತಃ ॥ ೧೪೬ ॥**

ಆಸನ ಮತ್ತು ಶೌಚ ಸರ್ವ ಕ್ರಿಯೆಗಳಿಗೂ ಅಂಗಭೂತಗಳಾಗಿವೆ ಹೊರತು ಸ್ವತಂತ್ರವಾಗಿ ಧರ್ಮಸಾಧನಗಳಲ್ಲ. ಉಳಿದವುಗಳಲ್ಲಿ ಪ್ರಾಣಾಯಾಮ, ಅಪರಿಗ್ರಹ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ತಪಸ್ಸು, ತುಷ್ಟಿ—ಇವುಗಳು ಒಂದರಿಂದ ಒಂದು ಕ್ರಮವಾಗಿ ಎರಡು ಪಟ್ಟು ಮಿಗಿಲಾಗಿವೆ. ತುಷ್ಟಿಯಿಂದ ಶಾಸ್ತ್ರಾಧ್ಯಯನವು ಕೋಟಿ ಪಾಲು ಮಿಗಿಲಾಗಿದೆ. ಅದಕ್ಕಿಂತಲೂ ಶ್ರೀಹರಿಪೂಜೆಯು ಅನಂತಾನಂತ ಗುಣಗಳಿಂದ ಶ್ರೇಷ್ಠವಾಗಿದೆ. ಧ್ಯಾನವು ಅಂಥ ಹರಿಪೂಜೆಗಿಂತಲೂ ಮೂರು ಪಾಲು ಮಿಗಿಲಾಗಿದೆ. ಧರ್ಮಸಾಧನಗಳಾದ ಪ್ರಾಣಾಯಾಮಾದಿಗಳ ತಾರತಮ್ಯ ಈ ತೆರನಾಗಿದೆ.

**ಊರ್ವೋರಧಃ ಪದೋರೂರ್ಧ್ವಂ ವಿಭಾಗೇನೇತಿ ಚ ತ್ರಿಧಾ ।**
**ಆಸನತ್ರಯಮುದ್ದಿಷ್ಟಂ ಮಂತ್ರಸ್ಮರಣಪೂರ್ವಕಮ್ ॥ ೧೪೭ ॥**

ಎರಡು ಕಾಲುಗಳನ್ನೂ ತೊಡೆಯ ಕೆಳಗಡೆ ಇರಿಸಿಕೊಳ್ಳುವುದು ಸ್ವಸ್ತಿಕಾಸನ; ಮೇಲುಗಡೆ ಇಟ್ಟುಕೊಂಡರೆ ಪದ್ಮಾಸನ; ವಿಭಾಗದಿಂದ ಒಂದನ್ನು ಮೇಲೆಯೂ ಇನ್ನೊಂದನ್ನು ಕೆಳಗೂ ಇರಿಸಿಕೊಂಡರೆ ವೀರಾಸನ; ಹೀಗೆ ಪ್ರಸಿದ್ಧವಾದ ಆಸನಗಳು ಮೂರು ತೆರನಾಗಿವೆ. ಈ ಆಸನಗಳನ್ನು 'ಪೃಥ್ವಿ ತ್ವಯಾ ಧೃತಾ ಲೋಕಾಃ' ಇತ್ಯಾದಿ ಮಂತ್ರಸ್ಮರಣಪೂರ್ವಕವಾಗಿ ರಚಿಸಬೇಕು.

**ದ್ವಿಗುಣೋತ್ತರಂ ರೇಚಕಾದಿ[1] ಷೋಡಶಾದಿಕ್ರಮೇಣ ತು ।**
**ಮಾತ್ರಾಣಾಂ ಹ್ರಸ್ವವರ್ಣಸ್ಯ ಕಾಲೋ ಮಾತ್ರೇತಿ ಶಬ್ದ್ಯತೇ ॥**

---

೧ 'ರೇಚಯೇದ್ದಕ್ಷಿಣೇ ವಿದ್ವಾನ್ ಮಾತ್ರಾಷೋಡಶಕೇನ ಚ ।

೧೬ ಮಾತ್ರೆಗಳಷ್ಟು ಕಾಲ ರೇಚಕ, ೩೨ ಮಾತ್ರೆಗಳಷ್ಟು ಕಾಲ ಪೂರಕ, ೬೪ ಮಾತ್ರೆಗಳಷ್ಟುಕಾಲ ಕುಂಭಕ– ಹೀಗೆ ಎರಡೆರಡು ಪಾಲು ರೇಚಕಾದಿಗಳನ್ನು ಹೆಚ್ಚಿಸುತ್ತಾ ಬರಬೇಕು. ಒಂದು ಹ್ರಸ್ವವರ್ಣವನ್ನು ಉಚ್ಚರಿಸಲು ಬೇಕಾಗುವ ಕಾಲಕ್ಕೆ ಮಾತ್ರೆಯೆಂದು ಹೆಸರು.

**ಕ್ರಮೇಣೈವಾಭ್ಯಸೇನ್ಮಾತ್ರಾವೃದ್ಧಿಮೇಕಾಗ್ರಧೀಃ ಪುನಃ ।**
**ರೇಚಯಿತ್ವಾ ದಕ್ಷಿಣತಃ ಪೂರಯಿತ್ವಾ ತು ವಾಮತಃ ।**
**ಕುಂಭಕಂ ಚ ಸುಷುಮ್ನಾಯಾಂ[1] ವಿಷ್ಣುಂ ವಾಯುಂ ಚ ಸಂಸ್ಮರೇತ್[2] ॥ ೧೪೯ ॥**

ಏಕಾಗ್ರಮನಸ್ಕನಾಗಿ, ಅಭ್ಯಾಸಬಲದಿಂದ ಇನ್ನೂ ಹೆಚ್ಚುಕಾಲ ಪ್ರಾಣಾಯಾಮವನ್ನು ಮಾಡಲು ಅಭ್ಯಸಿಸಬೇಕು. ಬಲಭಾಗದಲ್ಲಿರುವ ಪಿಂಗಲಾನಾಡಿಯಿಂದ ವಾಯುವನ್ನು ಹೊರಚೆಲ್ಲಿ ಎಡಭಾಗದಲ್ಲಿರುವ ಇಡಾನಾಡಿಯಿಂದ ಒಳಗೆಳೆದುಕೊಂಡು ಮಧ್ಯದಲ್ಲಿರುವ ಸುಷುಮ್ನಾನಾಡಿಯಲ್ಲಿ ವಾಯುವನ್ನು ಸ್ಥಗಿತಗೊಳಿಸಿ ಶ್ರೀಹರಿವಾಯುಗಳನ್ನು ಸ್ಮರಿಸಬೇಕು.

**ಮೂಲಾಧಾರಂ[3] ಸಮಾರಭ್ಯ ತ್ವಾಮೂರ್ಧಾನಮೃಜುಸ್ಥಿತಾ ।**

---

ದ್ವಾತ್ರಿಂಶನ್ಮಾತ್ರಯಾಽಽಪೂರ್ಯ ಚತುಃಷಷ್ಟ್ಯಾ ಚ ಧಾರಯೇತ್ ॥' (ಗೌತಮೀತಂ.)

ಶಾರದಾತಿಲಕದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಾಗಿದೆ—

'ಇಡಯಾಽಽಕರ್ಷಯೇದ್ವಾಯುಂ ಬಾಹ್ಯಂ ಷೋಡಶಮಾತ್ರಯಾ ।
ಧಾರಯೇತ್ಪೂರಿತಂ ಯೋಗೀ ಚತುಃಷಷ್ಟ್ಯಾ ತು ಮಾತ್ರಯಾ ।
ಸುಷುಮ್ನಾಮಧ್ಯಗಂ ಸಮ್ಯಗ್ದ್ವಾತ್ರಿಂಶನ್ಮಾತ್ರಯಾ ಶನೈಃ ।
ನಾಡ್ಯಾ ಪಿಂಗಲಯಾ ಚೈನಂ ರೇಚಯೇದ್ಯೋಗವಿತ್ತಮಃ ॥' (ಶಾರದಾ.)

೧ ಮೂಲ ಪುಸ್ತಕದಲ್ಲಿ 'ಸುಷುಮ್ನಾ' ಎಂದೇ ಪಾಠವಿದೆ. ಪಾಣಿನೀಯ ವ್ಯಾಕರಣದಂತೆ ಈ ಶಬ್ದದ ರೂಪ 'ಸುಷುಮ್ಣಾ' ಎಂದಾಗಬೇಕು.

೨ 'ನಾಸಿಕಾಪುಟಮಂಗುಲ್ಯಾಽಽಪೀಡ್ಯೈಕಮ ಚ ಪರೇಣ ಚ ।
ಔದರಂ ರೇಚಯೇದ್ವಾಯುಂ ರೇಚನಾದ್ರೇಚಕಃ ಸ್ಮೃತಃ ॥
ಬಾಹ್ಯೇನ ವಾಯುನಾ ದೇಹಂ ದೃತಿವತ್ಪೂರಯೇದ್ಯಥಾ ।
ತಥಾ ಪೂರ್ಣಶ್ಚ ಸಂತಿಷ್ಠೇತ್ಪೂರಣಾತ್ಪೂರಕಃ ಸ್ಮೃತಃ ॥
ನ ಮುಂಚತಿ ನ ಗೃಹ್ಣಾತಿ ವಾಯುಮಂತರ್ಬಹಿಃಸ್ಥಿತಮ್ ।
ಸಂಪೂರ್ಣಕುಂಭವತ್ತಿಷ್ಠೇದಚಲಃ ಸ ತು ಕುಂಭಕಃ ॥' (ಅಗ್ನಿಪು.)

೩ 'ಮೂಲಸ್ಯ=ವೃಷಣಸ್ಯ, ಆಧಾರಂ=ಅಧೋಭಾಗಮ್ ।' (ಛಲಾ.)

**ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಿಕಾಽಽರ್ಯಾಽವಭಾಸಿನೀ ।**
**ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚಪ್ರಭೇದಿನೀ[1] ॥ ೧೫೦ ॥**

ವೃಷಣಮೂಲದಿಂದ ನಡುನೆತ್ತಿಯ ವರೆಗೆ ಋಜುವೂ ದೀರ್ಘವೂ ಆಗಿ ಮಧ್ಯದಲ್ಲಿರುವ ನಾಡಿಗೆ 'ಸುಷುಮ್ನಾ' ಎಂದು ಹೆಸರು. ಈ ನಾಡಿಗೆ ವಜ್ರಿಕಾ, ಆರ್ಯಾ, ಅವಭಾಸಿನೀ, ವೈದ್ಯುತಾ, ಬ್ರಹ್ಮನಾಡಿ–ಎಂದು ಐದು ಭೇದಗಳುಂಟು.

**ಪೃಷ್ಠವಾಮಾಗ್ರದಕ್ಷಾಂತರ್ಭೇದಾಸ್ತೇ ಚ ಕ್ರಮೇಣ ತು ।**
**ಹರಿನ್ನೀಲಃ ಸಿತಃ ಪಿಂಗೋ ಲೋಹಿತಶ್ಚಾತ್ರ ಕೇಶವಃ ।**
**ಪ್ರದ್ಯುಮ್ನಾದಿಸ್ವರೂಪೇಣ ಧ್ಯೇಯಃ ಸಿದ್ಧಿಮಭೀಪ್ಸತಾ ॥ ೧೫೧ ॥**

ಹಿಂಬದಿ, ಎಡಬದಿ, ಇದಿರು, ಬಲಬದಿ, ನಡು– ಹೀಗೆ ಐದು ಸ್ಥಾನಗಳಲ್ಲಿ ಒಂದೇ ನಾಡಿ ಐದು ಹೆಸರುಗಳನ್ನು ಪಡೆಯುತ್ತದೆ. ಇವುಗಳಲ್ಲಿ ಹಿಂಬದಿಯಲ್ಲಿರುವ 'ವಜ್ರಿಕಾ' ಎಂಬ ನಾಡಿಯಲ್ಲಿ ಹಳದಿ ಬಣ್ಣದ ಪ್ರದ್ಯುಮ್ನರೂಪವನ್ನು ಧ್ಯಾನಿಸಬೇಕು. ಎಡಬದಿಯಲ್ಲಿರುವ 'ಆರ್ಯಾ' ಎಂಬ ನಾಡಿಯಲ್ಲಿ ನೀಲವರ್ಣನಾದ ಅನಿರುದ್ಧನನ್ನು ಧ್ಯಾನಿಸಬೇಕು. ಅಗ್ರಭಾಗದಲ್ಲಿರುವ 'ಅವಭಾಸಿನೀ' ಎಂಬ ನಾಡಿಯಲ್ಲಿ ಬಿಳಿಯಬಣ್ಣದ ವಾಸುದೇವರೂಪವನ್ನು ಧ್ಯಾನಿಸಬೇಕು. ಬಲಬದಿಯಲ್ಲಿರುವ 'ವೈದ್ಯುತಾ'ನಾಡಿಯಲ್ಲಿ ಪಿಂಗಳವರ್ಣನಾದ ಸಂಕರ್ಷಣನನ್ನು ಧ್ಯಾನಿಸಬೇಕು. ಮಧ್ಯದಲ್ಲಿರುವ ಬ್ರಹ್ಮನಾಡಿಯಲ್ಲಿ ಕೆಂಪುಬಣ್ಣದ ನಾರಾಯಣರೂಪವನ್ನು ಧ್ಯಾನಿಸಬೇಕು. ಹೀಗೆ ಧ್ಯಾನಿಸುವವರು ಸಿದ್ಧಿಯನ್ನು ಪಡೆಯುವರು.

**ಮೂಲೇ ಚ ನಾಭೌ ಹೃದಯೇಂದ್ರಯೋನಿ[2]-**
**ಭ್ರೂಮಧ್ಯಮೂರ್ಧದ್ವಿಷಡಂತಕೇಷು ।**

---

೧ 'ನಾಡ್ಯೋಽನಂತಾಃ ಸಮುತ್ಪನ್ನಾಃ ಸುಷುಮ್ನಾ ಪಂಚಪರ್ವಸು ।
ಮೂಲಾಧಾರೋದ್ಗತಪ್ರಾಣಸ್ತಾಭಿರ್ವ್ಯಾಪ್ನೋತಿ ತತ್ತನುಮ್ ॥' (ಶಾರದಾ.)

೨ ಇಲ್ಲಿ 'ಹೃದಯ' ಶಬ್ದದಿಂದ ಪದ್ಮಾಕಾರವಾದ ಹೃದಯಕೋಶದ ಮಾಂಸಪಿಂಡವು ವಿವಕ್ಷಿತವಾಗಿದೆ. ಯಾಗಕ್ಕಾಗಿ ಪಶುಗಳನ್ನು ಕೊಂದಾಗ– ಕೆಳಮೊಗವಾದ ತಾವರೆಯಂತಿರುವ ಈ ಮಾಂಸಪಿಂಡವನ್ನು ಪ್ರತ್ಯಕ್ಷವಾಗಿ ಕಾಣಬಹುದು ಎಂದು ಶಂಕರಾಚಾರ್ಯರು ಹೇಳಿದ್ದುಂಟು—

'ಹೃದಯಮಿತಿ ಪುಂಡರೀಕಾಕಾರೋ ಮಾಂಸಪಿಂಡಃ ಪ್ರಾಣಾಯತನೋಽನೇಕನಾಡೀಸುಷಿರ ಊರ್ಧ್ವನಾಲೋಽಧೋಮುಖೋ ವಿಶಸ್ಯಮಾನೇ ಪಶೌ ಪ್ರಸಿದ್ಧ ಉಪಲಭ್ಯತೇ ।' (ತೈತ್ತಿರೀಯ. ಶಾಂ. ಭಾ.)

**ಚತುಃಷಡಷ್ಟದ್ವಿಚತುರ್ದ್ವಿಷಟ್ಕ-**
**ದಲೇಷು¹ ಪದ್ಮೇಷು ಸಿತಾರುಣೇಷು ।**
**ಪಂಚಾತ್ಮಕೋಽಸೌ ಭಗವಾನ್ ಸದೈವ**
**ಧ್ಯೇಯೋ² ಹೃದಂತಾನ್ಯರುಣಾನಿ ತಾನಿ ॥ ೧೫೨ ॥**

---

'ಇಂದ್ರಯೋನಿ' ಎಂದರೆ– ಕುತ್ತಿಗೆಯಲ್ಲಿ[ ತಾಲುಗಳ ಮಧ್ಯದಲ್ಲಿರುವ–ಇಂದ್ರ ನಾಮಕನಾದ ಪ್ರದ್ಯುಮ್ನನ ಸ್ಥಾನವಾದ ಒಂದು ನಾಡಿ—

**'ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರ-ಯೋನಿಃ ।'** (ತೈತ್ತಿರೀಯ)

**'ಪ್ರದ್ಯುಮ್ನಸ್ತಾಲುಮಧ್ಯಸ್ಥೋ ಲಂಬಿನ್ಯಾಮಿಂದ್ರನಾಮಕಃ'** (ತೆ. ಭಾಷ್ಯ)

**'ತಾಲುಕೇ=ತಾಲುಕಯೋಃ, ಅಂತರೇಣ=ಮಧ್ಯೇ, ಯ ಏಷ ಸ್ತನ ಇವಾವ-ಲಂಬತೇ ಸಾ ಇಂದ್ರಯೋನಿಃ । ಇಂದ್ರಸ್ಯ=ಪರಮೇಶ್ವರಸ್ಯ ಪ್ರದ್ಯುಮ್ನಸ್ಯ ಯೋನಿಃ=ಸ್ಥಾನಮ್ ॥'** (ತೈ. ಖಂಡಾರ್ಥ)

**'ಮೂರ್ಧಾನಮಾರಭ್ಯ ದ್ವಾದಶಾಂಗುಲೋಪರಿಸ್ಥಿತಮಿತ್ಯರ್ಥಃ ।'** (ಛಲಾ.)

ಈ ಪ್ರದೇಶವನ್ನೆ 'ತೈತ್ತಿರೀಯ'ದಲ್ಲಿ **ವ್ಯಪೋಹ್ಯ ಶೀರ್ಷಕಪಾಲೇ'** ಎಂದು **'ಆಶೀರ್ಷಕಪಾಲ'** ಪದದಿಂದ ವ್ಯವಹರಿಸಿದ್ದಾರೆ ಎಂದು ಭಾಸವಾಗುವುದು.

೧ ದಲಪದಸ್ಯ ಪ್ರತ್ಯೇಕಮಭಿಸಂಬಂಧಃ । ಚತುರ್ದಲೇ ಷಡ್ದಲೇಽಷ್ಟದಲೇ ದ್ವಿದಲೇ ಚತುರ್ದಲೇ ದ್ವಾದಶದಲೇ ಚ ಕ್ರಮೇಣೇತ್ಯರ್ಥಃ ।

೨ ಇಲ್ಲಿ ಪಂಚಮೂರ್ತಿ ಶ್ರೀಹರಿಯನ್ನು ಆರು ಸ್ಥಾನಗಳಲ್ಲಿ ಧ್ಯಾನಮಾಡುವ ಬಗೆ ಹೇಗೆ? ಮತ್ತು ಯಾವ ರೂಪವನ್ನು ಎಲ್ಲಿ ಧ್ಯಾನಿಸಬೇಕು? ಈ ಪ್ರಶ್ನೆಗಳಿಗೆ ವ್ಯಾಖ್ಯಾನ ಕಾರರು ಸ್ಪಷ್ಟವಾಗಿ ಉತ್ತರಿಸಲಿಲ್ಲ. ಎಲ್ಲ ರೂಪಗಳನ್ನೂ ಎಲ್ಲ ಸ್ಥಲಗಳಲ್ಲಿಯೂ ಧ್ಯಾನಿಸಬೇಕು ಎಂದು ಛಲಾರೀಯದಲ್ಲಿ ಬರೆದಿದ್ದಾರೆ; ಆದರೆ ತೈತ್ತಿರೀಯದ ಸಂವಾದ ದಿಂದ ಇಲ್ಲಿ ಇನ್ನೊಂದು ಅರ್ಥವೂ ಕೂಡುವ ಸಂಭವವಿದೆ. ವೃಷಣಮೂಲ ನಾಭಿ ಗಳನ್ನು ಬಿಟ್ಟು ಉಳಿದ ನಾಲ್ಕು ಸ್ಥಲಗಳಲ್ಲಿ ವಾಸುದೇವಾದಿಗಳನ್ನು ಧ್ಯಾನಿಸಬೇಕು ಎಂದು ಉಪನಿಷತ್ತಿನಿಂದ ತಿಳಿದುಬರುವುದು—

**'ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿ ವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ ।'** (ತೈ. ಉಪ.)

ಇಲ್ಲಿ ಆಚಾರ್ಯರ ಭಾಷ್ಯ ಕೆಳಗಿನಂತಿದೆ—

'ಯ ಏಷ ಹೃದಯಾಕಾಶಸ್ತ್ವನಿರುದ್ಧಸ್ತು ತದ್ಗತಃ ।
ಪ್ರದ್ಯುಮ್ನಸ್ತಾಲುಮಧ್ಯಸ್ಥೋ ಲಂಬಿನ್ಯಾಮಿಂದ್ರನಾಮಕಃ ॥

ವೃಷಣಮೂಲದಲ್ಲಿ ನಾಲ್ಕು ದಲದ ಪದ್ಮ, ನಾಭಿಯಲ್ಲಿ ಆರು ದಲದ ಪದ್ಮ, ಹೃದಯದಲ್ಲಿ ಎಂಟು ದಲದ ಪದ್ಮ, ಕಂಠದ ನಾಡಿಯಲ್ಲಿ ಎರಡು ದಲದ ಪದ್ಮ, ಹುಬ್ಬುಗಳ ನಡುವಿನಲ್ಲಿ ನಾಲ್ಕುದಲದ ಪದ್ಮ, ಶಿರಸ್ಸಿನಿಂದ ಹನ್ನೆರಡು ಅಂಗುಲ ಊರ್ಧ್ವಪ್ರದೇಶದಲ್ಲಿ ಹನ್ನೆರಡು ದಲದ ಪದ್ಮ– ಹೀಗೆ ಆರು ಪದ್ಮಗಳಲ್ಲಿ ಆಸೀನನಾಗಿರುವ ವಾಸುದೇವಾದಿರೂಪಿಯಾದ ಪಂಚಮೂರ್ತಿ ಶ್ರೀಹರಿಯನ್ನು ಧ್ಯಾನಿಸಬೇಕು. ಈ ಆರು ಪದ್ಮಗಳಲ್ಲಿ ಹೃದಯದ ವರೆಗಿನ ಮೊದಲಿನ ಮೂರು ಪದ್ಮಗಳು ಕೆಂಪಾಗಿವೆ; ಉಳಿದವು ಬಿಳಿಯಾಗಿವೆ.

**ತ್ರಿಕೋಣವಹ್ನೌ ಚ ಷಡಸ್ರವಾಯೌ**
**ದ್ವಿಸ್ತ್ರಾವದತ್ರರವಿವೃತ್ತಶಶಿತ್ರಿವಹ್ನೌ¹ ।**

---

ವ್ಯಾಖ್ಯಃ ಸುಪರ್ಣರೂಪತ್ವಾತ್ಕೇಶಾಂತೇ ವರ್ತತೇ ತು ಯಃ ।
ಸಂಕರ್ಷಣಃ ಸುಪರ್ಣಾತ್ಮಾ ವಾಸುದೇವೋ ವ್ಯಹಃ ಸ್ಮೃತಃ ॥
ಯಸ್ಮಾದ್ವ್ಯಹಗತೇ ಸ್ಥಾತಾ ಜಗತಿ ಪ್ರಲಯೇ ವಿಭುಃ ।
ಆಶೀರ್ಷಕಕಪಾಲೋಽಸೌ ಕಪಾಲಾದುಪರಿ ಸ್ಥಿತಃ ॥'

ಇದರಿಂದ ಹೃದಯಕಮಲದಲ್ಲಿ ಅನಿರುದ್ಧ, ಇಂದ್ರಯೋನಿಯಲ್ಲಿ ಪ್ರದ್ಯುಮ್ನ, ಕೇಶಾಂತದಲ್ಲಿ ಅಥವಾ ಭ್ರೂಮಧ್ಯದಲ್ಲಿ ಸಂಕರ್ಷಣ ಮತ್ತು ಅಶೀರ್ಷಕಪಾಲದಲ್ಲಿ ಅಥವಾ ಶಿರಸ್ಸಿನಿಂದ ೧೨ ಅಂಗುಲ ಮೇಲುಬದಿಯಲ್ಲಿ ವಾಸುದೇವ– ಹೀಗೆ ಚತುರ್ಮೂರ್ತಿಗಳ ಸಂಸ್ಥಾನವು ನಿರೂಪಿತವಾದಂತಾಯಿತು. ಇನ್ನುಳಿದ ವೃಷಣಮೂಲ ಮತ್ತು ನಾಭಿಗಳಲ್ಲಿ– ನಾರಾಯಣರೂಪವನ್ನು ಧ್ಯಾನಿಸಬೇಕೆಂದು ಆಚಾರ್ಯರ ಆಶಯವಿರಬಹುದೇನೊ! ಈ ಅಭಿಪ್ರಾಯವನ್ನೆ ಪ್ರತಿಬಿಂಬಿಸುವ ಒಂದು ಮಾತು ಛಲಾರೀಯದಲ್ಲಿ ಬಂದಿದೆ—

'ತತ್ರೈಕಂ ರೂಪಂ ಸ್ಥಾನದ್ವಯೇ ಧ್ಯೇಯಮಿತ್ಯಾಹುಃ ।'

ಅಥವಾ ವೃಷಣಮೂಲದಲ್ಲಿ ಪಂಚಮೂರ್ತಿಗಳನ್ನು ಧ್ಯಾನಿಸಿ ಉಳಿದ ಐದು ಸ್ಥಾನಗಳಲ್ಲಿ ಕ್ರಮವಾಗಿ ನಾರಾಯಣಾದಿಗಳನ್ನು ಧ್ಯಾನಿಸಬೇಕು ಎನ್ನುವ ಪಕ್ಷವೂ ಸಾಧುವಾಗಬಹುದು.

೧ ದ್ವಿರಾವೃತ್ತಷಡಸ್ರಃ ಅತ್ರ=ಅಂತರ್ಹೃದಯೇ ವಿದ್ಯಮಾನೋ ರವಿಃ ದ್ವಿಸ್ತ್ರಾವದತ್ರರವಿಃ । ತತ್ರ ಯೋ ವೃತ್ತಾಕಾರಃ ಶಶೀ ತಸ್ಮಿನ್ನಪಿ ಯೋ ತ್ರಿಕೋಣೋ ವಹ್ನಿಸ್ತತ್ರ ದಶಾರ್ಧರೂಪಂ ಭಗವತೋ ವಿಚಿಂತ್ಯಮ್ ।'ಶಶಿಸ್ಥವಹ್ನೌ' ಇತ್ಯಪಿ ಪಾಠಃ । ಸ ತು ಸ್ವರಸ ಏವ । ಅತ್ರೇತ್ಯನೇನ 'ಯ ಏಷೋಽಂತರ್ಹೃದಯ ಆಕಾಶ' ಇತ್ಯೇತಚ್ಛಬ್ದೇನೋದಿತ ಆಕಾಶ ಉಚ್ಯತೇ । ಹೃತ್ಪುಂಡರೀಕಮಿತಿ ಯಾವತ್ । ಅತ್ರ=ಏತಸ್ಮಿನ್ನಿತ್ಯರ್ಥಃ । ಏತದೋಽಶಿ ಕೃತೇಽತ್ರೇತಿ ರೂಪಮ್ । 'ದ್ವಿಸ್ತ್ರಾವದಸ್ರೇ'ತಿ ಸುಗಮಃ ಪಾಠಃ ।

**ವೃತ್ತೇ ವಿಧಾವಪಿ ವಿಚಿಂತ್ಯಮಿದಂ ದಶಾರ್ಧ-**
**ರೂಪಂ ಸಿತಂ ತದಖಿಲಂ ಹೃದಯಾತ್ಪರಸ್ಥಮ್ ॥ ೧೫೩ ॥**

ವೃಷಣಮೂಲದಲ್ಲಿ ತ್ರಿಕೋಣವಹ್ನಿಯಲ್ಲಿ ಭಗವಂತನನ್ನು ಧ್ಯಾನಿಸಬೇಕು. ನಾಭಿಯಲ್ಲಿ ಷಟ್ಕೋಣ ವಾಯುಮಂಡಲದಲ್ಲಿ ಧ್ಯಾನಿಸಬೇಕು. ಹೃದಯದಲ್ಲಿ ದ್ವಾದಶಕೋಣ ಸೂರ್ಯಮಂಡಲದಲ್ಲಿ ಉರುಟಾದ ಚಂದ್ರಮಂಡಲ, ಅದರ ಮೇಲೆ ತ್ರಿಕೋಣ ವಹ್ನಿ, ಅದರಲ್ಲಿ ಭಗವದ್ರೂಪವನ್ನು ಧ್ಯಾನಿಸಬೇಕು. ಕಂಠ ಭ್ರೂಮಧ್ಯ ಶಿರಸ್ಸುಗಳಲ್ಲಿ ಉರುಟಾದ ಚಂದ್ರಮಂಡಲದಲ್ಲಿರುವ ಭಗವದ್ರೂಪವನ್ನು ಧ್ಯಾನಿಸಬೇಕು. ಈ ಆರು ಮಂಡಲಗಳಲ್ಲಿಯೂ ಧ್ಯಾನಿಸಲ್ಪಡುವ ಶ್ರೀಹರಿಯ ಪಂಚರೂಪಗಳಲ್ಲಿ ಹೃದಯದ ವರೆಗಿನ ಮೂರು ರೂಪಗಳು ಆಧಾರಭೂತವಾದ ಕಮಲದಂತೆಯೇ ಕೆಂಪಾಗಿದ್ದು ಮೇಲಿನವು ಶುಭ್ರವರ್ಣವುಳ್ಳವುಗಳಾಗಿವೆ.

**ಇಡಾ ಚ ಪಿಂಗಲಾ ಚೈವ ವಜ್ರಿಕಾ ಧಾರಿಣೀ ತಥಾ ।**
**ಸುಷುಮ್ನಾಯಾಶ್ಚತುರ್ದಿಕ್ಷು ವಜ್ರಿಕಾದ್ಯಾಸು ತತ್ರ ಚ ।**
**ಚತುರ್ಮೂರ್ತಿಃ ಸ ಭಗವಾನ್ ಹೃದಯೇ ಸಂವ್ಯವಸ್ಥಿತಃ[1] ॥ ೧೫೪ ॥**

ಮಧ್ಯಭಾಗದಲ್ಲಿರುವ ಸುಷುಮ್ನಾನಾಡಿಯ ನಾಲ್ಕು ಬದಿಗಳಲ್ಲಿ ಸುತ್ತಲೂ

---

ಹೃದಯದಲ್ಲಿ ಸೂರ್ಯ ಚಂದ್ರ ವಹ್ನಿಮಂಡಲದಲ್ಲಿ ಭಗವದ್ರೂಪವನ್ನು ಚಿಂತಿಸುವುದು ಯೋಗಶಾಸ್ತ್ರದ ಸಂಪ್ರದಾಯ—

'ಬ್ರಹ್ಮಸ್ಥಾನಂ ಸಮಾಪನ್ನಾ ಸೋಮಸೂರ್ಯಾಗ್ನಿರೂಪಿಣೀ ।
ಇಡಾಯಾಂ ಸಂಚರೇಚ್ಚಂದ್ರಃ ಪಿಂಗಲಾಯಾಂ ದಿವಾಕರಃ ।
ಜ್ಞಾತೌ ಯೋಗನಿದಾನಜ್ಞೈಃ ಸುಷುಮ್ನಾಯಾಂ ಚ ತಾವುಭೌ ।
ಆಧಾರಕಂದಮಧ್ಯಸ್ಥಂ ತ್ರಿಕೋಣಮತಿಸುಂದರಮ್ ।
ಜ್ಯೋತಿಷಾಂ ನಿಲಯಂ ದಿವ್ಯಂ ಪ್ರಾಹುರಾಗಮವೇದಿನಃ ॥' (ಶಾರದಾ.)

ಆಚಾರ್ಯರೂ ಗ್ರಂಥಾಂತರದಲ್ಲಿ ಈ ಮಾತನ್ನು ಸ್ಫುಟಗೊಳಿಸಿದ್ದಾರೆ—

'ಅಷ್ಟಪತ್ರೇ ತು ಹೃತ್ಪದ್ಮಮಧ್ಯೇ ಸೂರ್ಯೇಂದುವಹ್ನಿಗಮ್ ।
ಪೀಠತನ್ಮಧ್ಯಪದ್ಮಸ್ಥಂ ನಾರಾಯಣಮನಾಮಯಮ್ ।
ಉದ್ಯದಾದಿತ್ಯಸಂಕಾಶಂ ತೇಜಸಾಽನುಪಮಂ ಸದಾ ॥' (ಪ್ರಣವಕಲ್ಪ)

೧ ಆಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ಸ್ಪಷ್ಟಪ್ರಮಾಣವನ್ನುದಾಹರಿಸಿದ್ದಾರೆ—

'ಸ ಏಷ ಹೃದಿ ನಾಡೀಷು ಪಂಚರೂಪಃ ಪ್ರತಿಷ್ಠಿತಃ ।
ವಿಷ್ಣೋರಣಿಮ್ನೋ ರೂಪಾಣಿ ಪಂಚನಾಡೀಸ್ಥಿತಾನಿ ತು ॥

ಇಡಾ, ಪಿಂಗಲಾ, ವಜ್ರಿಕಾ, ಧಾರಿಣೀ ಎಂಬ ನಾಲ್ಕು ನಾಡಿಗಳಿವೆ. ಈ ನಾಡಿಗಳಲ್ಲಿ ವಾಸುದೇವಾದಿಚತುರ್ಮೂರ್ತಿಗಳೂ ಹೃದಯಮಧ್ಯದಲ್ಲಿರುವ ಸುಷುಮ್ನಾನಾಡಿಯಲ್ಲಿ ನಾರಾಯಣರೂಪನಾದ ಶ್ರೀಹರಿಯೂ ನೆಲಸಿರುವರು.

**ದ್ವಾಸಪ್ತತಿಸಹಸ್ರಾಣಿ ನಾಡ್ಯೋಽನ್ಯಾಸ್ತು ಪ್ರಧಾನತಃ ।**
**ಬೃಹತೀಸಹಸ್ರಸ್ಪರ್ಶಾನಾಂ[1] ಮುಖ್ಯಾಂ ನಾಡ್ಯೋಽತ್ರ ಕೇಶವಃ[2] ॥**

---

ನಾರಾಯಣಾಖ್ಯಂ ಸೌಷುಮ್ನಂ ಮಧ್ಯಸ್ಥಂ ರಕ್ತವರ್ಣಕಮ್ ।
ಶುಕ್ಲಂ ತು ವಾಸುದೇವಾಖ್ಯಂ ನಂದಿನ್ಯಾಮಗ್ರತಃ ಸ್ಥಿತಮ್ ॥
ಪಿಂಗಲಾಯಾಂ ಪಿಂಗಲಂ ಚ ರೂಪಂ ಸಂಕರ್ಷಣಾಭಿಧಮ್ ।
ಪಶ್ಚಿಮೇ ವಜ್ರಿಕಾಯಾಂ ಚ ಪೀತಂ ಪ್ರದ್ಯುಮ್ನನಾಮಕಮ್ ।
ಇಡಾಯಾಮನಿರುದ್ಧಾಖ್ಯಂ ನೀಲರೂಪಂ ವ್ಯವಸ್ಥಿತಮ್ ॥' (ಪರ್ಯಂಕೋಪಾ.)

ಈ ಪ್ರಮಾಣದಂತೆ– ಪೂರ್ವದಲ್ಲಿ ನಂದಿನೀ ಅಥವಾ ಧಾರಿಣೀ ಎಂಬ ನಾಡಿ, ಅದರಲ್ಲಿ ವಾಸುದೇವನು ಸನ್ನಿಹಿತನಾಗಿದ್ದಾನೆ. ದಕ್ಷಿಣದಲ್ಲಿ ಪಿಂಗಲಾನಾಡಿ, ಅದರಲ್ಲಿ ಸಂಕರ್ಷಣನಿದ್ದಾನೆ. ಪಶ್ಚಿಮದಲ್ಲಿ ವಜ್ರಿಕಾನಾಡಿ, ಅದರಲ್ಲಿ ಪ್ರದ್ಯುಮ್ನನಿದ್ದಾನೆ. ಉತ್ತರದಲ್ಲಿ ಇಡಾನಾಡಿ, ಅದರಲ್ಲಿ ಅನಿರುದ್ಧನಿದ್ದಾನೆ. ಮಧ್ಯದ ಸುಷುಮ್ನಾನಾಡಿಯಲ್ಲಿ ನಾರಾಯಣನೆ ಸನ್ನಿಹಿತನಾಗಿದ್ದಾನೆ.

'ಇಡಾ ಚ ಶಂಖಕುಂದಾಭಾ ತಸ್ಯಾಃ ಸವ್ಯೇ ವ್ಯವಸ್ಥಿತಾ ।
ಪಿಂಗಲಾ ಸಿತರಕ್ತಾಭಾ ದಕ್ಷಿಣಂ ಪಾರ್ಶ್ವಮಾಶ್ರಿತಾ ॥' (ಯೋಗಾರ್ಣವ)

ಕೆಲವು ತಂತ್ರಗಳಲ್ಲಿ ಸಪ್ತನಾಡಿಗಳನ್ನು ಪರಿಗಣನೆಮಾಡಿದ್ದಾರೆ—

'ಗಾಂಧಾರೀ ಹಸ್ತಿಜಿಹ್ವಾ ಚ ಸುಪೂಷಾಽಲಂಬುಷಾ ಮತಾ ।
ಯಶಸ್ವಿನೀ ಶಂಖಿನೀ ಚ ಕುಹೂಃ ಸ್ಯುಃ ಸಪ್ತ ನಾಡಯಃ ॥' (ಶಾರದಾ.)

ಇನ್ನು ಕೆಲವು ತಂತ್ರಗಳಲ್ಲಿ– ವಾರಣಾ, ಸರಸ್ವತೀ, ವಿಶ್ವೋದರಾ, ಪಯಸ್ವಿನೀ ಎಂಬ ನಾಡಿಗಳನ್ನೂ ಪ್ರಧಾನತಯಾ ಉಲ್ಲೇಖಿಸಿದ್ದಾರೆ.

೧ ಬೃಹತೀಸಹಸ್ರಸ್ಪರ್ಶಾನಾಂ=ಬೃಹತೀಸಹಸ್ರಸಂಬಂಧಿನೀನಾಮ್ ।

೨ ಈ ೭೨ ಸಾವಿರ ನಾಡಿಗಳಲ್ಲಿ– ಸುಷುಮ್ನಾದ ಎಡಬದಿಯಲ್ಲಿ ೩೬ ಸಾವಿರ ನಾಡಿಗಳು, ಬಲಬದಿಯಲ್ಲಿ ೩೬ ಸಾವಿರ ನಾಡಿಗಳು– ಹೀಗೆ ವಿಭಾಗವಾಗಿವೆ. ಬೃಹತೀ ಛಂದಸ್ಸಿನ ಅಕ್ಷರ ಸಂಖ್ಯೆ ೩೬. ಸಾವಿರ ಬೃಹತಿಗಳ ಒಟ್ಟು ಅಕ್ಷರ ಸಂಖ್ಯೆ ೩೬ ಸಾವಿರ. ಈ ೩೬ ಸಾವಿರ ಅಕ್ಷರಗಳು ಸ್ವರಾತ್ಮಕ ವ್ಯಂಜನಾತ್ಮಕ ಎಂದು ಪ್ರತ್ಯೇಕವಾಗಿ ಎರಡು ತೆರನಾಗಿವೆ. ತಥಾಚ ೩೬ ಸಾವಿರ ವ್ಯಂಜನಪ್ರತಿಪಾದ್ಯನಾದ ಸ್ತ್ರೀರೂಪನಾದ ಹರಿ ಎಡಬದಿಯ ೩೬೦೦೦ ನಾಡಿಗಳಲ್ಲಿ ಧ್ಯೇಯನಾಗಿದ್ದಾನೆ. ಸ್ವರ ಪ್ರತಿಪಾದ್ಯನಾದ

ಇವುಗಳಲ್ಲದೆ ಇನ್ನೂ ೭೨ ಸಾವಿರ ಪ್ರಧಾನ ನಾಡಿಗಳು ಈ ದೇಹದಲ್ಲಿವೆ. ಬೃಹತೀಸಹಸ್ರಸಂಬಂಧಿ ಋಕ್ಕುಗಳಿಂದ ಪ್ರತಿಪಾದ್ಯನಾದ ಶ್ರೀಹರಿಯನ್ನು ಈ ನಾಡಿಗಳಲ್ಲಿ ಧ್ಯಾನಿಸಬೇಕು.

---

ಪುರುಷರೂಪನಾದ ಹರಿ ಬಲಬದಿಯ ೩೬ ಸಾವಿರ ನಾಡಿಗಳಲ್ಲಿ ಚಿಂತ್ಯನಾಗಿದ್ದಾನೆ. ಇದು ಶಾಸ್ತ್ರರಹಸ್ಯ. ಈ ೭೨ ಸಹಸ್ರರೂಪಗಳೇ– ಪುರುಷಾಯುಷ್ಯವಾದ ೧೦೦ ವರ್ಷಗಳ ೭೨ ಸಾವಿರ ಅಹೋರಾತ್ರಿಗಳ ನಿಯಾಮಕಗಳೂ ಕೂಡ. ಅದರಲ್ಲಿ– ಸ್ತ್ರೀರೂಪಗಳು ರಾತ್ರಿಯ ನಿಯಾಮಕಗಳು. ಪುರುಷರೂಪಗಳು ಹಗಲಿನ ನಿಯಾಮಕಗಳು.

ಈ ವಿಷಯಗಳನ್ನು ಆಚಾರ್ಯರು ಐತರೇಯಭಾಷ್ಯದಲ್ಲಿ ವಿಸ್ತಾರವಾಗಿ ಬರೆದಿದ್ದಾರೆ—

'ಯಾವತೀಭಿರ್ಋಗ್ಭಿಃ ಶಂಸಿತಾಭಿಃ ಷಟ್ತ್ರಿಂಶತಿಸಹಸ್ರಾಣ್ಯಕ್ಷರಾಣಿ ಭವಂತಿ ಯಸ್ಮಾತ್ಕಸ್ಮಾದಪಿ ಛಂದಸಸ್ತಾವತ್ಯಃ ಶಂಸನೀಯಾಃ ।'

'ಷಟ್ತ್ರಿಂಶದ್ರೂಪವಾನ್ವಿಷ್ಣುರ್ವ್ಯಂಜನೇಷು ಚ ಸಂಸ್ಥಿತಃ ।
ತಾನ್ಯೇವ ವಿಷ್ಣುರೂಪಾಣಿ ರಾತ್ರೀಣಾಮಪಿ ದೇವತಾಃ ॥
ಏಕೈಕಂ ಚ ಸಹಸ್ರಂ ತದ್ವ್ಯಂಜನೇಷು ಚ ರಾತ್ರಿಷು ।
ರೂಪಂ ವಿಷ್ಣೋಃ ಸ್ಥಿತಂ ವ್ಯೂಹ್ಯ ಷಟ್ತ್ರಿಂಶತಿಸಹಸ್ರಧಾ ॥
ಷಟ್ತ್ರಿಂಶತಿಸಹಸ್ರಾಣಿ ಸ್ವರಗಾಣಿ ಹರೇರಪಿ ।
ತಾನ್ಯೇವಾಹ್ನಾಂ ದೈವತಾನಿ ರೂಪಾಣಿ ಪರಮಾತ್ಮನಃ ।
ದ್ವಾಸಪ್ತತಿಸಹಸ್ರಾಣಿ ರೂಪಾಣ್ಯೇವಂ ರಮಾಪತೇಃ ॥'
'ದ್ವಾಸಪ್ತತಿಸಹಸ್ರಾಣಿ ರೂಪಾಣಿ ಹಿ ರಮಾಪತೇಃ ।
ಬೃಹತೀಸಹಸ್ರಸಂಸ್ಥಾನಿ ಸ್ವರವ್ಯಂಜನಭೇದತಃ ॥
ತಾನ್ಯೇವ ಪುರುಷಸ್ಥಾನಿ ಯಸ್ಮಾತ್ಪುರುಷಸಂಸ್ಥಿತಮ್ ।
ಬೃಹತೀಸಹಸ್ರಂ ತಚ್ಛಂಸ್ಯಂ ವ್ಯಜ್ಯತೇ ನಹ್ಯೃತೇ ನರಮ್ ॥' (ಐತರೇಯಸಂ.)

ದೇಹಾವಯವವಿಭಾಗವನ್ನು ತಂತ್ರಶಾಸ್ತ್ರಕಾರರು ಬಹುಸ್ಫುಟವಾಗಿ ನಿರೂಪಿಸಿದ್ದಾರೆ—

'ಅಸ್ಥ್ನಾಂ ಶರೀರೇ ಸಂಖ್ಯಾ ಸ್ಯಾತ್ ಷಷ್ಟಿಯುತಂ ಶತತ್ರಯಮ್ ।
ತ್ರೀಣ್ಯೇವಾಸ್ಥಿಶತಾನ್ಯತ್ರ ಧನ್ವಂತರಿರಭಾಷತ ।
ದ್ವೇ ಶತೇ ತ್ವಸ್ಥಿಸಂಧೀನಾಂ ಸ್ಯಾತಾಮತ್ರ ದಶೋತ್ತರೇ ।
ಪೇಶೀಸ್ನಾಯುಶಿರಾಸಂಧಿಸಹಸ್ರದ್ವಿತಯಂ ಮತಮ್ ।
ನವ ಸ್ನಾಯುಶತಾನಿ ಸ್ಯುಃ ಪಂಚಪೇಶೀಶತಾನ್ಯಪಿ ।
ಅಧಿಕಾ ವಿಂಶತಿಃ ಸ್ತ್ರೀಣಾಂ ಸ್ತನಯೋರ್ದಿಗ್ಭಗೇ ದಶ ।
ಶಿರಾಧಮನಿಕಾನಾಂ ತು ಲಕ್ಷಾಣಿ ನವವಿಂಶತಿಃ ।
ಸಾರ್ಧಾನಿ ಸ್ಯುರ್ನವಶತೀ ಷಟ್ಪಂಚಾಶದ್ಯುತಾ ತಥಾ ॥' (ಅಧ್ಯಾತ್ಮವಿವೇಕ)

**ರೂಪಾಣಾಂ ಲಕ್ಷಣಂ ತೇಷಾಂ ರಹಸ್ಯತ್ವಾನ್ನ ಕಥ್ಯತೇ ।**
**ವಿಷ್ಣುನಾ ಬ್ರಹ್ಮಣೇ ಪ್ರೋಕ್ತಂ ಗ್ರಂಥಸಂಕೋಚತಸ್ತಥಾ ॥ ೧೫೬ ॥**

ಈ ನಾಡಿಗಳಲ್ಲಿ ಸನ್ನಿಹಿತವಾಗಿರುವ ೭೨ ಸಾವಿರ ಭಗವದ್ರೂಪಗಳ ಗುಣಧರ್ಮಗಳೆಲ್ಲ ಬ್ರಹ್ಮನಿಗೆ ವಿಷ್ಣುವಿನಿಂದ ಉಪದಿಷ್ಟಗಳಾಗಿದ್ದರೂ– ಈ ಚಿಕ್ಕ ಕೃತಿಯಲ್ಲಿ ಅಷ್ಟು ರೂಪಗಳ ಲಕ್ಷಣವನ್ನು ಬರೆವುದು ಅಶಕ್ಯವಾದುದ ರಿಂದಲೂ, ಅತ್ಯಂತ ರಹಸ್ಯಗಳಾದುದುರಿಂದಲೂ ಇಲ್ಲಿ ಆ ರೂಪಗಳ ಲಕ್ಷಣ ಗಳನ್ನು ಬರೆದಿಲ್ಲ.

**ಖಂಡಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ ।**
**ಅಪ್ರಯತ್ನಾತ್ಸಮಾಧಿಃ ಸ್ಯಾದ್ದರ್ಶನಂ ಚಿರಯಾ ತಯಾ[1] ॥ ೧೫೭ ॥**

---

'ನಾಡ್ಯೋಽರ್ಧಲಕ್ಷಸಂಖ್ಯಾತಾಃ ಪ್ರಧಾನಾಃ ಪರಿಕೀರ್ತಿತಾಃ ।
ತಾಸು ಸರ್ವಾಸು ಬಲವಾನ್ ಪ್ರಾಣೋ ವಾಯುಃ ಸಮಂತತಃ ।
ಸಂಸ್ಥಿತಃ ಸರ್ವದಾ ವ್ಯಾಪ್ತಃ'

ಈ ಎಲ್ಲ ನಾಡಿಗಳಲ್ಲಿ ಒಟ್ಟು ಹತ್ತು ವಿಧದ ವಾಯು ಚರಿಸುತ್ತಿದೆ ಎಂದು ಶಾಸ್ತ್ರ ಕಾರರ ಮತ—

'ಪ್ರಾಣಾದ್ಯಾಃ ಮರುತಃ ಪಂಚ ನಾಗಃ ಕೂರ್ಮೋ ಧನಂಜಯಃ ।
ಕೃಕಲಃ ಸ್ಯಾದ್ದೇವದತ್ತ ಇತಿ ನಾಮಭಿರೀರಿತಾಃ ॥

ಈ ದಶವಿಧ ವಾಯುಗಳನ್ನು ಆಚಾರ್ಯರೂ 'ವ್ಯೋಮಸಂಹಿತಾ' ವಚನ ದಿಂದ ಸಾಧಿಸಿದ್ದಾರೆ—

'ಪ್ರಾಣಾದಿಪಂಚಕಂ ಚೈವ ತಥಾ ನಾಗಾದಿಪಂಚಕಮ್ ।
ತನ್ನಾಗಕೂರ್ಮಕೃಕಲದೇವದತ್ತಧನಂಜಯಾಃ ॥' (ಭಾಗವತತಾತ್ಪರ್ಯ)

[1] ಈ ಧ್ಯಾನಧಾರಣಾಸಮಾಧಿಗಳ ಲಕ್ಷಣವನ್ನು ಪುರಾಣಕಾರರೂ ಸೊಗಸಾಗಿ ನಿರೂ ಪಿಸಿದ್ದಾರೆ—

'ಕಾಲಾವಧಿಪರಿಚ್ಛಿನ್ನಂ ದೇಹೇ ಸಂಸ್ಥಾಪಿತಂ ಮನಃ ।
ನ ಪ್ರಚ್ಯವತಿ ಯಲ್ಲಕ್ಷ್ಯಾದ್ಧಾರಣಾ ಸಾಽಭಿಧೀಯತೇ ॥
'ಧ್ಯೈ ಚಿಂತಾಯಾಂ ಸ್ಮೃತೋ ಧಾತುರ್ವಿಷ್ಣುಚಿಂತಾ ಮುಹುರ್ಮುಹುಃ ।
ಅನಾಕ್ಷಿಪ್ತೇನ ಮನಸಾ ಧ್ಯಾನಮಿತ್ಯಾಭಿಧೀಯತೇ ।
ಧ್ಯೇಯಾಲಂಬನಸಂಸ್ಥಸ್ಯ ಸದೃಶಪ್ರತ್ಯಯಸ್ಯ ಚ ।
ಪ್ರತ್ಯಯಾಂತರನಿರ್ಮುಕ್ತಃ ಪ್ರತ್ಯಯೋ ಧ್ಯಾನಮುಚ್ಯತೇ ॥
'ನ ಶೃಣೋತಿ ನಚಾಽಘ್ರಾತಿ ನ ಪಶ್ಯತಿ ನ ರಸ್ಯತಿ ।
ನಚ ಸ್ಪರ್ಶಂ ವಿಜಾನಾತಿ ನ ಸಂಕಲ್ಪಯತೇ ಮನಃ ।

**ಅಥವಾ ಸತತಂ ಶಾಸ್ತ್ರವಿಮರ್ಶೇನ ಭವಿಷ್ಯತಿ ।**
**ಪರಮಸ್ನೇಹಸಂಯುಕ್ತಯಥಾರ್ಥಜ್ಞಾನತೋ ಭವೇತ್ ।**
**ಸಾ ಭಕ್ತಿರಿತಿ[1] ವಿಜ್ಞೇಯಾ ಸಾಧನಂ ಭೋಗಮೋಕ್ಷಯೋಃ ॥೧೫೮॥**

ಆಗೊಮ್ಮೆ ಈಗೊಮ್ಮೆ ವಿಶ್ರಾಂತಿಯಿಂದ ಭಗವಚ್ಚಿಂತನೆಯನ್ನೆಸಗುವುದಕ್ಕೆ 'ಧಾರಣಾ' ಎನ್ನುವರು. ಅದೇ ಚಿಂತನೆ ನಿರಂತರವಾಗಿ ಸಾಗಿದರೆ 'ಧ್ಯಾನ'ವೆಂದೆನಿಸುವುದು. ನಿರಾಯಾಸವಾಗಿ ಎಂದು ಬೇಕಾದರಂದು ಎಲ್ಲಿ ಬೇಕಾದರಲ್ಲಿ ಧ್ಯಾನಿಸಲು ಬೇಕಾಗುವ ಏಕಾಗ್ರತೆಯ ಸಿದ್ಧಿಗೆ 'ಸಮಾಧಿ' ಎಂದೆನ್ನುವರು. ಬಹುಕಾಲದಿಂದ ಅನುವೃತ್ತವಾದ ಇಂಥ ಸಮಾಧಿಯ ಪರಿಪಾಕದಿಂದ ಮಾತ್ರವೆ ಶ್ರೀಹರಿಯ ದಿವ್ಯದರ್ಶನವು ದೊರಕುವುದು. ಅಥವಾ ಅವಿಚ್ಛಿನ್ನವಾದ ಶಾಸ್ತ್ರಾಲೋಚನೆಯಿಂದಲೂ ಭಗವದ್ದರ್ಶನವಾಗುವುದು ಶಕ್ಯವಿದೆ. ಆದರೆ ಈ ಧ್ಯಾನವಾಗಲಿ, ಶಾಸ್ತ್ರಾಲೋಚನವಾಗಲಿ, ಏನೇ ಇದ್ದರೂ ಅದು— ಭಗವಂತನಲ್ಲಿ ಪರಮ ಸ್ನೇಹವನ್ನಿಟ್ಟು, ಭಗವಂತನ ಯಥಾರ್ಥವಾದ ಅರಿವನ್ನು ಸಂಪಾದಿಸಿಕೊಂಡು ಆದರ ಹಿನ್ನೆಲೆಯಿಂದ ಸಾಧಿತವಾಗಿರಬೇಕು. ಈ ಯಥಾರ್ಥಜ್ಞಾನಪೂರ್ವಕವಾದ ಸ್ನೇಹವನ್ನೆ ಭಕ್ತಿಯೆಂದು ಕರೆಯುವರು. ಈ ಭಕ್ತಿಯೊಂದೆ ಮೋಕ್ಷಕ್ಕೂ ಅಲ್ಲಿನ ಸುಖವಿಶೇಷ ಭೋಗಕ್ಕೂ ಉಪಾಯವಾಗಿದೆ.

**ಮುಖ್ಯೈಷೈವ ನಾನ್ಯತ್ಸ್ಯಾತ್ಸರ್ವಂ ವ್ಯರ್ಥಂ ತಯಾ ವಿನಾ[2] ।**
**ಸೈಕಾಽಪ್ಯಭೀಷ್ಟಫಲದಾ ಮೋಕ್ಷೇ ದರ್ಶನಯುಕ್ತಯಾ ॥ ೧೫೯ ॥**

---

ನಚಾಭಿಮನ್ಯತೇ ಕಿಂಚಿನ್ನ ಬುಧ್ಯತಿ ಚ ಕಾಷ್ಠವತ್ ।
ಏವಮೀಶ್ವರಸಂಲೀನಃ ಸಮಾಧಿಸ್ಥಃ ಸಗೀಯತೇ ।
ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಧ್ಯಾಯತೋ ವಿಷ್ಣುಮಾತ್ಮಾನಂ ಸಮಾಧಿಸ್ಥಸ್ಯ ಯೋಗಿನಃ ॥' (ಅಗ್ನಿಪು.)

೧ ಆಚಾರ್ಯರು ಬಹುಕಡೆಗಳಲ್ಲಿ ಭಕ್ತಿಗೆ ಈ ಲಕ್ಷಣವನ್ನು ಬರೆದಿದ್ದಾರೆ, ಮಾತ್ರವಲ್ಲ— ರಾಮಾನುಜಾಚಾರ್ಯರು ಕೂಡ ತನ್ನ ಗ್ರಂಥಗಳಲ್ಲಿ ಭಕ್ತಿಶಬ್ದಕ್ಕೆ ಇದೇ ಅರ್ಥವನ್ನು ನಿರೂಪಿಸಿದ್ದಾರೆ—

'ಭಕ್ತಿರಪಿ ನಿರತಿಶಯಪ್ರಿಯಾನನ್ಯಪ್ರಯೋಜನಸ್ವೇತರವೈತೃಷ್ಣ್ಯಾವಹಜ್ಞಾನವಿಶೇಷ ಏವ ।' (ವೇದಾರ್ಥಸಂಗ್ರಹ)

೨ 'ತೀರ್ಥದಾನಜಪಾದ್ಯಾಶ್ಚ ಸ್ವಾಧ್ಯಾಯೋ ಹರಿಕೀರ್ತನಮ್ ।
ದ್ವಾದಶ್ಯಾದಿವ್ರತಂ ಚೈವ ತುಲಸ್ಯಾದೇಸ್ತಥಾರ್ಚನಮ್ ।
ಸರ್ವಂ ಭಕ್ತ್ಯರ್ಥಮುದ್ದಿಷ್ಟಂ ನಿಷ್ಫಲಂ ತತ್ತಯಾ ವಿನಾ ॥' (ಬೃಹದಾ. ಭಾ.)

ಎಲ್ಲ ಸಾಧನಗಳಲ್ಲಿಯೂ ಈ ಭಕ್ತಿಯೇ ಮುಖ್ಯ ಸಾಧನ. ಭಕ್ತಿಯೊಂದಿಲ್ಲ ದಿದ್ದರೆ ಮಿಕ್ಕದ್ದು ಏನಿದ್ದರೇನು ಬಂತು? ಎಲ್ಲವೂ ನಿಷ್ಫಲ. ಏನಿಲ್ಲದಿದ್ದರೂ ಭಕ್ತಿಯೊಂದಿದ್ದರೆ ಅದರಿಂದ ನಮ್ಮ ಅಭೀಷ್ಟಸಿದ್ಧಿಯಾಗಬಲ್ಲುದು. ದರ್ಶನ ಸಹಕೃತವಾದ ಭಕ್ತಿಯಿಂದಲೇ ಮೋಕ್ಷ ಕೂಡ ಲಭ್ಯವಾಗಿದೆ.

**ದರ್ಶನಂ ಚ ತಯಾ ಹೀನಂ ವ್ಯರ್ಥಮನ್ಯತ್ಕಿಮುಚ್ಯತೇ ।**
**ಯೋಗ್ಯಂ ತು ದರ್ಶನಂ ನೈವ ತಯಾ ಹೀನಂ ಭವಿಷ್ಯತಿ ॥ ೧೬೦ ॥**

ಭಕ್ತಿಯಿಲ್ಲದೆ ಭಗವದ್ದರ್ಶನದಿಂದ ಕೂಡ ಮೋಕ್ಷ ದೊರಕುವಂತಿಲ್ಲ. ಮಿಕ್ಕುಳಿದವುಗಳ ಪಾಡೇನು? ಮೋಕ್ಷಸಾಧನವಾದ ಯೋಗ್ಯ ಭಗವತ್ಸಾಕ್ಷಾತ್ಕಾರವು ಎಂದೂ ಭಕ್ತಿಯಿಲ್ಲದೆ ಆಗುವಂತಿಲ್ಲ.

**ಆನಂದಚಿತ್ಸದಿತಿಪೂರ್ವಗುಣೈಃ ಸಮಸ್ತೈಃ**
**ಮರ್ತ್ಯಾದಿಭಿರ್ವಿಧಿಪರೈರ್ಭಗವಾನ್ ಕ್ರಮೇಣ ।**
**ಧ್ಯಾತೋಽಧಿಕೈರಧಿಗುಣೋಽಧಿಕಮೇವ ಸೌಖ್ಯಂ**
**ಮುಕ್ತೌ ದದಾತಿ ಸತತಂ ಪರಮಸ್ವರೂಪಃ ॥ ೧೬೧ ॥**

ಮನುಷ್ಯನಿಂದ ಹಿಡಿದು ಚತುರ್ಮುಖನ ವರೆಗೆ ಎಲ್ಲ ಜೀವರೂ ಸರ್ವೋತ್ತಮನಾದ ಗುಣಪೂರ್ಣನಾದ ಶ್ರೀಹರಿಯಲ್ಲಿ ಆನಂದ, ಜ್ಞಾನ, ನಿರ್ದುಷ್ಟತ್ವ, ಸ್ವಾಮಿತ್ವ ಮೊದಲಾದ ಗುಣಗಳನ್ನು ಅವರವರ ಯೋಗ್ಯತೆಗನುಗುಣವಾಗಿ ಧ್ಯಾನಿಸುತ್ತಾರೆ. ಶ್ರೀಹರಿಯೂ ಅವರ ಧ್ಯಾನಕ್ಕನುಗುಣವಾಗಿ ತಾರತಮ್ಯದಿಂದ ಕೂಡಿದ ಶಾಶ್ವತಸೌಖ್ಯವನ್ನು ಅಂಥ ಭಕ್ತರಿಗೆ ಕರುಣಿಸುತ್ತಾನೆ.

**ನಿರ್ದೋಷಾಖಿಲಸಂಪೂರ್ಣಗುಣೇನ ಹರಿಣಾ ಸ್ವಯಮ್ ।**
**ಬ್ರಹ್ಮಣೇ ಕಥಿತಾತ್ತಂತ್ರಸಾರಾದುದ್ಧೃತ್ಯ ಸಾದರಮ್ ।**
**ಆನಂದತೀರ್ಥಮುನಿನಾ ಕೃತೋ ಗ್ರಂಥೋಽಯಮಂಜಸಾ ॥ ೧೬೨ ॥**

ದೋಷದೂರನೂ ಸಕಲಗುಣಪೂರ್ಣನೂ ಆದ ಶ್ರೀಹರಿಯು ತಾನೇ ಬ್ರಹ್ಮನಿಗೆ ಉಪದೇಶಿಸಿದ ತಂತ್ರಸಾರದಿಂದ ಮುಖ್ಯ ಭಾಗಗಳನ್ನು ಸಂಗ್ರಹಿಸಿ ಆನಂದತೀರ್ಥಮುನಿಯು ಆದರಪೂರ್ವಕವಾಗಿ ಸುಂದರವಾಗಿ ಈ ಗ್ರಂಥವನ್ನು ರಚಿಸಿದನು.

**ಗ್ರಂಥೋಽಯಂ ಪಾಠಮಾತ್ರೇಣ ಸಕಲಾಭೀಷ್ಟಸಿದ್ಧಿದಃ ।**
**ಕಿಮು ಜ್ಞಾನಾದನುಷ್ಠಾನಾದುಭಯಸ್ಮಾತ್ಪುನಃ ಕಿಮು ॥ ೧೬೩ ॥**

ಈ ಗ್ರಂಥವು ಕೇವಲ ಪಠನದಿಂದಲೆ ಎಲ್ಲ ಅಭೀಷ್ಟಗಳನ್ನೂ ಕೊಡ ಬಲ್ಲದು ಎಂದ ಮೇಲೆ ಇದನ್ನು ಅರಿತುಕೊಳ್ಳುವವನ ಮಹತ್ತ್ವವೆಂಥದು? ಅನುಷ್ಠಾನಮಾಡುವವನ ಮಹತ್ತ್ವವೆಂಥದು? ತಿಳಿದು ಅನುಷ್ಠಾನಮಾಡುವ ಮಹಾನುಭಾವನ ಮಹತ್ತ್ವವನ್ನು ಬೇರೆ ಹೇಳಬೇಕೆ?

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ**
**ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ॥**

ಹನುಮಂತನಾಗಿ ರಾಮನ ವಾರ್ತೆಯನ್ನು ಸೀತೆಗೆ ಅರುಹಿದ, ಭೀಮನಾಗಿ ಕೌರವಸೇನೆಯನ್ನು ಸದೆಬಡಿದ, ಲೋಕಭರಿತನಾದ, ಜ್ಞಾನಬಲ ಸ್ವರೂಪನಾದ, ವೇದದಲ್ಲಿ ಮೂರು ಅವತಾರಗಳುಳ್ಳವನೆಂದು ಬಣ್ಣಿಸಲ್ಪಟ್ಟ ವಾಯುವಿನ ಮಧ್ವನೆಂಬ ಮೂರನೆಯ ರೂಪದಿಂದ ಈ ಗ್ರಂಥವು ಶ್ರೀಹರಿಯ ಸಂತುಷ್ಟಿಗಾಗಿ ಬರೆಯಲ್ಪಟ್ಟಿದೆ.

**ಅಶೇಷದೋಷೋಜ್ಝಿತಪೂರ್ಣಸದ್ಗುಣಂ**
**ಸದಾ ವಿಶೇಷಾಪಗತೋರುರೂಪಮ್ ।**
**ನಮಾಮಿ ನಾರಾಯಣಮಪ್ರತೀಪಂ**
**ಸದಾ ಪ್ರಿಯೇಭ್ಯಃ ಪ್ರಿಯಮಾದರೇಣ ॥ ೧೬೫ ॥**

ಅಶೇಷದೋಷದೂರನೂ ಸರ್ವಗುಣಪೂರ್ಣನೂ ಆದ, ಅನ್ಯೋನ್ಯ ವಿಶೇಷರಹಿತಗಳಾದ ಅನಂತರೂಪಗಳುಳ್ಳ, ಅಸದೃಶನಾದ, ನನಗೆ ಪ್ರಿಯರಲ್ಲಿ ಪ್ರಿಯನೆನಿಸಿದ ಶ್ರೀನಾರಾಯಣನನ್ನು ಸದಾಕಾಲವೂ ನುತಿಸುತ್ತಿದ್ದೇನೆ, ನಮಿಸುತ್ತಿದ್ದೇನೆ.

ಆಚಾರ್ಯಗೋವಿಂದಕೃತೇನುವಾದೇ
ನಿತಾಂತಭವ್ಯಂ ಯದಭೂಲ್ಲಿ ತತ್ತ್ವಮ್ ।
ಆನಂದತೀರ್ಥೀಯದಯಾರಸಾನಾಂ
ನಿರರ್ಗಲಸ್ತಾವದಯಂ ಪ್ರವಾಹಃ ॥ ೧ ॥

ಪರಿಭಾವ್ಯ ಬಹುವಿಭೇದಂ ಶಾಕ್ತಂ ಶೈವಂ ಚ ವೈಷ್ಣವಂ ತಂತ್ರಮ್ ।
ಸಾರಂ ಯತ್ಸರ್ವೇಷಾಂ ತದಿಹ ಸಮಗ್ರಾಹಿ ಯತ್ನತಃ ಸರ್ವಮ್ ॥ ೨ ॥

ಅಮಂದಬೋಧ ತ್ವದುದೀರಿತಾನಾ-
ಮಪಾರಪಾರೀಣಮುಪಹ್ವಯೇ ಕಮ್ |
ಏಕಾಂತತೋಽಬೋಧವಿಜೃಂಭಿತಾನಾಂ
ಲಭೇಯ ಯದ್ದುರ್ವಚಸಾಂ ವಿಲಾಸಾನ್ ॥ ೩ ॥

ತನೋತು ನಃ ಸಂಪ್ರತಿ ಸಂಪ್ರಸಾದಂ
ಧಿನೋತು ಚಿತ್ತಶ್ರವಸೀ ನಿಕಾಮಮ್ |
ನಿಗೂಢರಮ್ಯಾ ಭಣಿತಿಸ್ತ್ವದೀಯಾ
ನ ಚೇದ್ವಿಚಾರಸ್ಯ ವಯಂ ಕಿಮೀಶ್ಮಹೇ ॥ ೪ ॥

ದುರೂಹೇ ದೂಣಾಶೇ ಕುಹಕಿಧಿಷಣೇ ನಿಹ್ನುತಿಗುಣೇ
ನಮಸ್ತುಭ್ಯಂ ದೂರಾದಪಸರ ಯಥೇಚ್ಛಂ ಚ ವಿಹರ |
ಶುಭಾಸ್ತೇ ಪಂಥಾನಃ ಪ್ರಕೃತಿಪಿಶುನಾಸ್ತ್ವತ್ಸಹೃದಯಾ
ನಿರೀಕ್ಷ್ಯಾನಿರ್ವಿಣ್ಣಾನ್ ರಮಯ ಬಹುಲಾಸ್ತಾನಪಿ ಸಮಾಃ ॥ ೫ ॥

ಇತಿ ಚತುರ್ಥೋಽಧ್ಯಾಯಃ

ಇತಿ ಶ್ರೀಮದಾನಂದತೀರ್ಥಭಗವತ್ಪಾದಕೃತಸ್ತಂತ್ರಸಾರಸಂಗ್ರಹಃ ಸಂಪೂರ್ಣಃ

---

# ಪಾಠಶುದ್ಧಿ*

| ಪುಟ | ಶ್ಲೋಕ | ಅಚ್ಚಾದ ಪಾಠ | ತುಳು ಪಾಠ |
|---|---|---|---|
| ೨ | ೨ | ಪ್ರಾಹ ದೇವೋ | ಆಹ ದೇವೋ |
| ೩ | ೭ | ಓಜೋಭೃದೌರಸಃ | ಓಜಭೃದೌರಸಃ[೧] |
| ,, | ೮ | ತಲಕೋ | ತಕಲೋ |
| ೯ | ೧೭ | ಭಿಧೋಽಸ್ಮ್ಯಹವ್ | ಭಿದೋ ಹ್ಯಹವ್ |
| ,, | ೨೦ | ವಪಿ ಧ್ಯೇಯಾ | ವಭಿಧ್ಯೇಯಾಃ[೨] |
| ,, | ೨೧ | ದಂಡೀ ಚ ಧನ್ವೀ ಚ | ಧನ್ವೀ ಚ ದಂಡೀ ಚ[೩] |
| ೧೦ | ೨೪ | ದಕ್ಷೋರ್ಧ್ವಕರ | ದಕ್ಷೋಚ್ಚಕರ[೪] |
| ೧೩ | ೩೦ | ಪ್ರೋಚ್ಯಂತೇ | ಪ್ರೋಚ್ಯತೇ[೫] |
| ೧೮ | ೪೭ | ಚಲೇ ವಾ ಹೃದಯೇ | ಅಚಲೇ ಹೃದಯೇ |
| ,, | ,, | ಜಲೇ ವಾ | ಚಲೇ ವಾ[೬] |

* ಈ ಪುಸ್ತಕದಲ್ಲಿ ಸುಮಾರು ೧೦೦ ಶ್ಲೋಕಗಳಷ್ಟು ಅಚ್ಚಾದ ಮೇಲೆ—ಇನ್ನೊಂದು ಅತ್ಯಂತ ಪ್ರಾಮಾಣಿಕವಾದ ತುಳುಪುಸ್ತಕದ ಪಾಠ ನಮಗೆ ದೊರೆಯಿತು. ಅದರ ಅನುಸಾರವಾಗಿ ಕೆಲವು ಪಾಠಾಂತರಗಳನ್ನು ಇಲ್ಲಿ ಕೊಡಲಾಗಿದೆ.

೧ ಪ್ರಾಣಬಲ-ಆತ್ಮಶಕ್ತಿ ಎಂಬ ಅರ್ಥದಲ್ಲಿ ಸಕಾರಾಂತವಾದ 'ಓಜಸ್'ಪದದಂತೆ ಅಕಾರಾಂತವಾದ 'ಓಜ'ಪದವನ್ನೂ ಬಳಸುವುದುಂಟು. 'ಓಜಶಬ್ದೋಽಪ್ಯತ್ರ' ಎಂದು ವಾಚಸ್ಪತ್ಯದಲ್ಲಿಯೂ ಈ ಮಾತನ್ನು ಬರೆದಿದ್ದಾರೆ. ಆದರಿಂದ 'ಓಜಭೃತ್' ಎಂಬ ಶಬ್ದವೂ 'ಓಜೋಭೃತ್' ಎಂಬಂತೆಯೇ ಸಾಧುವಾಗಿದೆ.

೨ ಕೆಲವು ತುಳು ಪುಸ್ತಕಗಳಲ್ಲಿ ಅಚ್ಚಾದ ಪಾಠವೇ ಇದೆ.

೩ ಸೋದೆಮಠದ ತುಳುಪುಸ್ತಕದಲ್ಲೂ—ಉಳಿದ ಎಲ್ಲ ಪುಸ್ತಕಗಳಲ್ಲೂ ಅಚ್ಚಾದಂತೆಯೇ ಪಾಠವಿದೆ. ಅಕ್ಷರಗಣನೆಯಂತೆ ಆ ಪಾಠ ಪ್ರಾಮಾಣಿಕವೂ ಆಗಿದೆ. ಆದರೆ ಹೃಷೀಕೇಶದ ಪಾಠಾನುಸಾರಿಯಾದ ಒಂದು ಪುಸ್ತಕದಲ್ಲಿ ಹೀಗೆ ಪಾಠವಿದೆ.

೪ 'ದಕ್ಷೋರ್ಧ್ವಕರ' ಎಂಬ ಪಾಠವೂ ಪ್ರಾಚೀನ ಪಾಠಗಳಲ್ಲಿ ಕಂಡುಬಂದಿದೆ.

೫ ಇಲ್ಲಿ ಅನ್ವಯಸುಗಮತೆಗೆ 'ಪ್ರೋಚ್ಯಂತೇ' ಎಂದಿದ್ದರೆಯೇ ಚೆನ್ನು.

೬ ಈ ಶ್ಲೋಕದ ಅನುವಾದದಲ್ಲಿ- 'ಚಕ್ರ, ಅಬ್ಜ' ಎಂದು ಪ್ರತ್ಯೇಕವಾಗಿ ಎರಡು ಮಂಡಲವೆಂಬಂತೆ ಅಚ್ಚಾಗಿದೆ. ಅದನ್ನು—ಚಕ್ರಾಬ್ಜ ಎಂದು ಒಟ್ಟಾಗಿ ಓದಿಕೊಳ್ಳಬೇಕು. ಪಾಠಾಂತರದಂತೆ ಉತ್ತರಾರ್ಧದ ಅರ್ಥ ಈರೀತಿಯಾಗುವುದು—

| | | | |
|---|---|---|---|
| ೨೧ | ೫೪ | ಪರಮಜ್ಞಾನಾತ್ಮಾನಸ್ತು | ಪರಮಾತ್ಮಜ್ಞಾನಾತ್ಮಾನಶ್ಚ[೧] |
| ,, | ೫೭ | ವಾಸೋಃ ವಿಭೂಷಣಂ | ವಾಸೋಃವಿಭೂಷಣೇ[೨] |
| ೨೨ | ೫೯ | ಕೇಶವಾದೀಂಶ್ಚ ರಾಶಿಷು | ಕೇಶವಾದೀಂಸ್ತತಃ ಪರಮ್[೩] |
| ೩೦ | ೫ | ತಾರೈಸ್ತ್ರಿದ್ವಾದಶಾ- | ತಾರತ್ರಿದ್ವಾದಶಾ- |
| ೩೨ | ೭ | ಪಂಚಾಶದ್ವರ್ಣಾನಾಂ | ಪಂಚಾಶದರ್ಣಾನಾಂ |
| ,, | ,, | ಚತುರ್ವಿಂಶಚ್ಚ | ಚತುರ್ವಿಂಶತಿ-[೪] |

---

ಅಚಲ ಪ್ರತಿಮೆಯಲ್ಲಾಗಲಿ, ಹೃದಯದಲ್ಲಾಗಲಿ, ಚಲಪ್ರತಿಮೆಯಲ್ಲಾಗಲಿ, ಭೂಸ್ಥಂಡಿಲದಲ್ಲಾಗಲಿ ಹರಿಯನ್ನು ನಿತ್ಯವೂ ಪೂಜಿಸುತ್ತಿರಬೇಕು.

೧ ವೃತ್ತಭಂಗವಾಗುವಂತಿದ್ದರೂ— 'ನವಾ ಏಕೇನಾಕ್ಷರೇಣ' ಎಂಬ ನ್ಯಾಯದಿಂದ ಈ ಪಾಠವೇ ಸೊಗಸಾಗಿದೆ.

೨ 'ವಾಸೋಃ ವಿಭೂಷಣಂ' ಎಂದು ವ್ಯಸ್ತವಾಗಿಯೂ ಪ್ರಾಚೀನಪಾಠವಿದೆ.

೩ ಈ ಪಾಠದ ಕುರಿತು ಟಿಪ್ಪಣಿಯಲ್ಲಿ ವಿವರವನ್ನು ಕೊಡಲಾಗಿದೆ. ಅಚ್ಚಾದ ಪಾಠವೇ ಸೊಗಸಾದುದು ಎಂದು ನಮ್ಮ ಅಭಿಪ್ರಾಯ. ಸೋದೆಮಠದ ತುಳುಪುಸ್ತಕವೂ ಇದಕ್ಕೆ ಸಂವಾದಿಯಾಗಿದೆ. ನಾರಾಯಣಪಂಡಿತಾಚಾರ್ಯರ ಯೋಗದೀಪಿಕೆಯ ಪದ್ಯವನ್ನೂ ಇದಕ್ಕೆ ಸಂವಾದಿಯಾಗಿ ಉದಾಹರಿಸಬಹುದು—

'ವಾಸುದೇವಾದಿಕಾನ್ ದಿಕ್ಷು ಕೇಶವಾದೀಂಶ್ಚ ರಾಶಿಷು ।
ಮೇಷಾದಿಷ್ವಥ ಮತ್ಸ್ಯಾದೀನ್ ಬಹಿರಾವರಣಂ ತತಃ ॥'

೪ ಇಲ್ಲಿಯೂ ಅಚ್ಚಾದ ಪಾಠವೇ ಚೆನ್ನು. 'ಚತುರ್ವಿಂಶತಿಮೂರ್ತಯಃ' ಎಂದು ಸಮಸ್ತಪಾಠವನ್ನಿಟ್ಟುಕೊಂಡರೆ 'ಏಕಪಂಚಾಶದರ್ಣಾನಾಂ' ಎಂಬ ಪದದ ಷಷ್ಠೀ ವಿಭಕ್ತಿಗೆ ಅನ್ವಯವಿಲ್ಲದಂತಾಗುವುದು. ಅಚ್ಚಾದ ಪಾಠದಲ್ಲಾದರೆ— 'ಏಕಪಂಚಾಶದರ್ಣಾನಾಂ ಮೂರ್ತಯಃ, ಚತುರ್ವಿಂಶಚ್ಚ ಮೂರ್ತಯಃ' ಎಂದು ಸುಗಮವಾದ ಅನ್ವಯವಿದೆ. ಕೆಲ ತುಳುಪಾಠಗಳ ಸಂವಾದವೂ ಇದೆ.

# ಪರಿಶಿಷ್ಟ

## ಓಂಕಾರ ಮತ್ತು ವರ್ಣಮಾಲೆ

ಶಾಸ್ತ್ರಗ್ರಂಥಗಳಲ್ಲಿ ಓಂಕಾರಕ್ಕಿದ್ದಷ್ಟು ಪ್ರಾಧಾನ್ಯ ಇನ್ನಾವ ಅಕ್ಷರಕ್ಕೂ ಇರಲಾರದು. 'ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ | ಕಂಠಂ ಭಿತ್ವಾ ವಿನಿರ್ಯಾತೌ' ಎಂಬಂತೆ ವರ್ಣಸೃಷ್ಟಿಯು ಕಾಲದಲ್ಲಿ ಎಲ್ಲಕ್ಕಿಂತ ಮೊದಲು ಬ್ರಹ್ಮನ ಮುಖದಿಂದ ಹೊಮ್ಮಿದ ವರ್ಣ ಓಂಕಾರ; ಎಲ್ಲಕ್ಕಿಂತಲೂ ಮಾಂಗಲಿಕವಾದ ವರ್ಣ ಓಂಕಾರ. ಅದು ಎಲ್ಲ ವರ್ಣಗಳಿಂದ ಪ್ರಧಾನವಾಗಿದೆ; ಅದು ಎಲ್ಲ ವರ್ಣಗಳ ಅರ್ಥವನ್ನೂ ಮೂಲತಃ ಪ್ರತಿಪಾದಿಸುತ್ತದೆ ಎಂತಲೇ ಎಲ್ಲ ವರ್ಣಗಳಿಗೂ ಪ್ರಕೃತಿಭೂತವಾಗಿದೆ. ಉಳಿದ ವರ್ಣಗಳೆಲ್ಲ ಇದರ ವಿಕಾರಗಳು, ಇದರ ಅರ್ಥವನ್ನೇ ವಿವರಿಸಿ ಹೇಳುವ ಗತಾರ್ಥಗಳಾದ ವ್ಯಾಖ್ಯಾಪದಗಳು ಹೊರತು ಸ್ವತಂತ್ರಗಳಲ್ಲ. ಅದರಿಂದಲೇ ಓಂಕಾರವೇ ಪರಮಾತ್ಮನ ಮುಖ್ಯ ನಾಮಧೇಯವಾಗಿದೆ. ಓಂಕಾರವನ್ನು ಜಪಿಸಿ ಹರಿಯನ್ನು ನೆನೆವವನಿಗೆ ಪರಮಪದವನ್ನು ಕರುಣಿಸುವ ಸತ್ತ್ವ ಆ ಮಂತ್ರಕ್ಕಿದೆ—

'ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ |
ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ||' (ಭಗವದ್ಗೀ.)

ಓಂಕಾರವೇ ಬ್ರಹ್ಮ ಎನ್ನುವ ದೊಡ್ಡ ಗೌರವದ ಮಾತನ್ನು ಪ್ರಣವದ ಕುರಿತು ಬರೆದದ್ದೂ ಅದರ ಮಹತ್ತ್ವಕ್ಕೆ ಜ್ಞಾಪಕವಾಗಿದೆ.

'ಏಕಾಕ್ಷರವಾಚ್ಯತ್ವಾದೇಕಾಕ್ಷರಂ ಬ್ರಹ್ಮ |' (ಗೀತಾತಾತ್ಪರ್ಯ)

ಇನ್ನೊಂದು ಕಡೆಯಲ್ಲೂ ಗೀತೆಯಲ್ಲಿ ಇದೇ ಮಾತು ಬರುತ್ತದೆ—

'ವೇದ್ಯಂ ಪವಿತ್ರಮೋಂಕಾರಃ |'

ಇಲ್ಲಿ ವ್ಯಾಸರು 'ಓಂಕಾರ' ಎಂಬ ಪದದಿಂದ ಶ್ರೀಹರಿಯನ್ನೆ ನಿರ್ದೇಶಿಸಿದ್ದಾರೆ ಎಂಬ ವಿಷಯವನ್ನು ಆಚಾರ್ಯರ ಮಾತೂ ಸ್ಫುಟಗೊಳಿಸುತ್ತದೆ—

'ಓಮಿತ್ಯಾಕ್ರಿಯತೇ ಯಸ್ಮಾದೋಂಕಾರೋ ಭಗವಾನ್ ಪರಃ ||' (ಗೀತಾತಾ.)

ಇವೇ ಕಾರಣದಿಂದ ಶ್ರೀಹರಿಯನ್ನು 'ಪ್ರಣವ'ವೆಂದೂ ವ್ಯವಹರಿಸುತ್ತಾರೆ—

'ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ |
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ||' (ಭ. ಗೀ.)

'ವೇದಸ್ಥಃ ಪ್ರಣವಾಖ್ಯೋಽಸಾವಾತ್ಮಾನಂ ಯತ್ರ ಹೌತ್ಯತಃ ॥' (ಗೀತಾತಾ.)

ಅದರಿಂದಲೇ ಪತಂಜಲಿಮುನಿ ತನ್ನ ಯೋಗಸೂತ್ರಗಳಲ್ಲಿ ಈಶ್ವರಪ್ರಣಿಧಾನವನ್ನು ಸಂಪಾದಿಸಲಿಕ್ಕೆ ಪ್ರಣವಾರ್ಥದ ಅನುಸಂಧಾನವೇ ಕಾರಣವೆಂದು ಬರೆದಿದ್ದಾನೆ—

'ತಸ್ಯ ವಾಚಕಃ ಪ್ರಣವಃ । ತಜ್ಜಪಸ್ತದರ್ಥಭಾವನಮ್ ।' (ಯೋಗಸೂತ್ರ)

ಪ್ರಣವದ ಜಪದಿಂದ ಮಾತ್ರವೇ ನಾವು ಈಶ್ವರಪ್ರಣಿಧಾನವನ್ನು ಸಂಪಾದಿಸಿಕೊಳ್ಳಬಹುದು. ಏಕೆಂದರೆ ಆಚಾರ್ಯರು ಋಗ್ಭಾಷ್ಯದಲ್ಲಿ ನುಡಿದಂತೆ 'ಓಂನಾಮಾ ಭಗವಾನ್ ವಿಷ್ಣುಃ' ಓಂಕಾರವೇ ಆತನ ಪ್ರೀತಿಯ ನಾಮವಾಗಿದೆ; 'ವಾಗರ್ಥಾವಿವ ಸಂಪೃಕ್ತೌ' ಎಂಬಂತೆ ಪ್ರಣವ ಮತ್ತು ಶ್ರೀಹರಿಯ ಸಂಬಂಧ ನಿತ್ಯಸಂಬಂಧವಾಗಿದೆ.

ಗೀತೆಯಲ್ಲಿ ಪ್ರಣವದ ಕುರಿತು ಉಲ್ಲೇಖ–ಅನೇಕ ಬಾರಿ ಬಂದಿದೆ. ಸರ್ವಶಾಸ್ತ್ರೋತ್ತಮ ಎಂದು ಪ್ರಸಿದ್ಧವಾದ ಗೀತೆಯ ಉಲ್ಲೇಖಗಳು ಶಾಸ್ತ್ರನಿರ್ಣಯದಲ್ಲಿ ದಾರಿಗಂಬಗಳಂತಿವೆ. ಅವುಗಳಲ್ಲಿ ಬಾರಿಬಾರಿಗೆ ಓಂಕಾರದ ಕುರಿತು ಪ್ರಶಂಸೆ ಕಂಡುಬರುವುದೂ ಓಂಕಾರದ ಮಹತ್ತ್ವಕ್ಕೆ ಜ್ಞಾಪಕವೇ ಆಗಿದೆ—

'ಯದಕ್ಷರಂ ವೇದವಿದೋ ವದಂತಿ
ವಿಶಂತಿ ಯದ್ಯತಯೋ ವೀತರಾಗಾಃ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥'

'ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।'

ಮೇಲಿನ ಗೀತಾವಚನಕ್ಕೆ ಸಂವಾದಿಯಾಗಿ ಕಠೋಪನಿಷತ್ತಿನಲ್ಲಿ ಒಂದು ಉಲ್ಲೇಖವಿದೆ—

'ಸರ್ವೇ ವೇದಾ ಯತ್ಪದಮಾಮನಂತಿ
ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥

'ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।
ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥' (ಕಾಠಕ)

ದಶೋಪನಿಷತ್ತುಗಳಲ್ಲಿ ಪದೇ ಪದೇ ಓಂಕಾರದ ಉಲ್ಲೇಖ ಬಂದಿದೆ—

ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ'(ಪ್ರಶ್ನೋಪ.)

'ಓಮಿತಿ ಬ್ರಹ್ಮ । ಓಮಿತೀದಂ ಸರ್ವಮ್' (ತೈತ್ತಿರೀಯ.)

'ತದ್ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನ್ಯೇವಮೋಂಕಾರೇಣ ಸರ್ವಾ ವಾಕ್ ಸಂತೃಣ್ಣಾ । ಓಂಕಾರ ಏವೇದಂ ಸರ್ವಮ್ ।' (ಛಾಂದೋಗ್ಯ)

ಈ ಎಲ್ಲ ವರ್ಣಸಮುದಾಯಗಳಿಂದ 'ಓಂ'ಕಾರವೇ ಶ್ರೇಷ್ಠವಾದುದು ಎನ್ನುವುದಕ್ಕೆ ಛಾಂದೋಗ್ಯದಲ್ಲಿ ಕೊಟ್ಟ ಕಾರಣ ಸುಂದರವಾಗಿದೆ—

'ಪ್ರಜಾಪತಿರ್ಲೋಕಾನಭ್ಯತಪತ್ತೇಭ್ಯೋಽಭಿತಪ್ತೇಭ್ಯಸ್ತ್ರಯೀ ವಿದ್ಯಾ ಸಂಪ್ರಾಸ್ರವತ್ । ತಾಮಭ್ಯತಪತ್ತಸ್ಯಾ ಅಭಿತಪ್ತಾಯಾ ಏತಾನ್ಯಕ್ಷರಾಣಿ ಸಂಪ್ರಾಸ್ರವಂತ ಭೂರ್ಭುವಃಸ್ವರಿತಿ । ತಾನ್ಯಭ್ಯತಪತ್ತೇಭ್ಯೋಽಭಿತಪ್ತೇಭ್ಯ ಓಂಕಾರಃ ಸಂಪ್ರಾಸ್ರವತ್ ।'

ಬ್ರಹ್ಮನು ಮೂರು ಲೋಕಗಳಲ್ಲೂ ಸಾರವತ್ತಾದುದನ್ನು ಅರಸುತ್ತಾ ಅವುಗಳಲ್ಲಿ ಮೂರು ವೇದಗಳನ್ನಾಯ್ದನಂತೆ. ಅವುಗಳನ್ನೂ ಶೋಧಿಸಿ ಮೂರು ಅಕ್ಷರಗಳನ್ನು ಆರಿಸಿ ತೆಗೆದನಂತೆ. ಅವೇ ವ್ಯಾಹೃತಿಗಳು. ಅವುಗಳಿಂದಲೂ ಸಾರಾತ್ಸಾರತಮವಾದ ಮೂರು ಅಕ್ಷರಗಳನ್ನಾಯ್ದು ಓಂಕಾರವನ್ನು ಕಂಡುಹಿಡಿದನು. ಈ ಓಂಕಾರವೇ ಮೂರು ಲೋಕಗಳಲ್ಲೂ ಸಾರತಮವಾದ ಪದ. ಉಳಿದೆಲ್ಲ ಪದಗಳೂ ಇದರ ವ್ಯಾಖ್ಯಾನರೂಪಗಳಾಗಿವೆ. ಇದು ಛಾಂದೋಗ್ಯದ ಉಪಪಾದನೆ.

ಆಥರ್ವಣವಂತೂ— ಓಂಕಾರದ ವಿಶ್ಲೇಷಣೆಗಾಗಿಯೇ ಹೊರಟಿರುವ ಉಪನಿಷತ್ತು; ಅದರಲ್ಲಿ ತುಂಬ ಓಂಕಾರ ಮಾಹಾತ್ಮ್ಯವೇ ತುಂಬಿಕೊಂಡಿದೆ—

'ಓಮಿತ್ಯೇತದಕ್ಷರಮಿದಂ ಸರ್ವಮ್ ।'
'ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಃ ಸ್ಮೃತಃ ।'
'ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯ ಹೃದಯೇ ಸ್ಥಿತಮ್ ।
ಸರ್ವವ್ಯಾಪಿನಮೋಂಕಾರಂ ಮತ್ವಾ ಧೀರೋ ನ ಶೋಚತಿ ॥'
'ಓಂಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ।'

ಓಂಕಾರವು— ಮುಖ್ಯ ನಾಮಧೇಯವೆಂತಲೇ— ಸಹಸ್ರನಾಮದ ಆರಂಭದಲ್ಲಿ 'ಓಂ ವಿಶ್ವಂ ವಿಷ್ಣುರ್ವಷಟ್ಕಾರಃ' ಎಂದೂ ಕೊನೆಯಲ್ಲಿ 'ಸರ್ವಪ್ರಹರಣಾಯುಧ ಓಂ ನಮಃ' ಎಂದೂ ಓಂಕಾರದ ನಿರ್ದೇಶವನ್ನು ಮಾಡಿದ್ದಾರೆ ಎಂದು ರಾಘವೇಂದ್ರಸೂರಿಕೃತ ಸಹಸ್ರನಾಮಭಾಷ್ಯದಲ್ಲೂ ಉಲ್ಲೇಖವಿದೆ—

'ಶಬ್ದರಾಶಿಷು ಪ್ರಣವಸ್ಯ ಶ್ರೈಷ್ಠ್ಯಾತ್ ಸರ್ವವೇದಸಾರತ್ವಾಚ್ಚ ಪ್ರಥಮಮಂತೇ ಚ ನಿರ್ದೇಶಃ' ।

ಅಲ್ಲದೆ– ವಿಷ್ಣುನಾಮಗಳ ಬೃಹತ್ಕೋಶವಾದ ಸಹಸ್ರನಾಮದಲ್ಲಿ– 'ಊರ್ಧ್ವಗಃ ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ' ಎಂದು 'ಪ್ರಣವ' ಶಬ್ದವೂ ಸೇರಿಕೊಂಡಿದೆ.

'ಪ್ರಣವೋ ನಾಮ ಪರಮಾತ್ಮನೋ ವಾಚಕ ಓಂಕಾರಃ । ತದಭೇದೋಪ-ಚಾರೇಣಾಯಂ ಪ್ರಣವಃ ।' (ಸ. ಶಾಂ. ಭಾಷ್ಯ)

ಅದರಿಂದಲೇ ಗೀತೆಯಲ್ಲೂ 'ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ' ಎಂಬ ಮಾತನ್ನು ಬರೆದಿದ್ದಾರೆ. ಎಲ್ಲ ಸತ್ಕರ್ಮಗಳೂ ಎಲ್ಲ ವ್ಯಾಪಾರ ಗಳೂ–ಪರಮಾತ್ಮನಲ್ಲಿ ಹೆಣೆದು(ಓತ)ಕೊಂಡಿವೆ– ಅವನಿಂದ ನಾವು ಮಾಡು ತ್ತಿದ್ದೇವೆ– ಅವನಿಗಾಗಿ ಮಾಡುತ್ತಿದ್ದೇವೆ– ಎಂಬ ಅನುಸಂಧಾನ ನಮ್ಮಲ್ಲಿ ಜಾಗೃತವಾಗಿರಲಿ ಎಂಬುದರಿಂದ ಅಧ್ಯಯನಾದಿ ಕಾರ್ಯಾರಂಭದಲ್ಲಿ ಓಂಕಾರವನ್ನುಚ್ಚರಿಸಿ ಮುಂದುವರಿಯುವ ಸಂಪ್ರದಾಯ ಬಳಕೆಯಲ್ಲಿ ಬಂತು. ಈ ಮಾತು ಗೀತೆಯಲ್ಲೂ ಬಂದಿದೆ—

'ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ।
ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥' (ಗೀತಾ)

ಋಗ್ಭಾಷ್ಯದಲ್ಲಿ ಆಚಾರ್ಯರು ಉದಾಹರಿಸಿದ ಪ್ರಮಾಣವೂ ಈ ವಿಷಯ ವನ್ನೇ ಸಮರ್ಥಿಸುತ್ತದೆ—

'ಓಂಕಾರಪೂರ್ವಿಕಾ ವಿದ್ಯಾಃ'

ಮೇಲಿನ ಗೀತಾವಾಕ್ಯಕ್ಕೆ ಆಚಾರ್ಯರು ವ್ಯಾಖ್ಯಾನ ಬರೆವಾಗ ಈ ವಿಷಯವನ್ನು ಇನ್ನಷ್ಟು ಸ್ಫುಟವಾಗಿ ವಿವರಿಸಿದ್ದಾರೆ—

'"ಓತಂ ಜಗದ್ಯತ್ರ ಸ್ವಯಂ ಚ ಪೂರ್ಣೋ
ವೇದೋಕ್ತರೂಪೋಽನುಪಚಾರತಶ್ಚ ।
ಸರ್ವೈಃ ಶುಭೈಶ್ಚಾಭಿಯುತೋ ನಚಾನ್ಯೈಃ
ಓಂ ತತ್ಸದಿತ್ಯೇನಮಥೋ ವದಂತಿ ॥" ಇತಿ ಋಗ್ವೇದಖಿಲೇಷು ।'
(ಗೀ. ಭಾಷ್ಯ)

'ವಿಪ್ರಾ ವೇದಾಶ್ಚ ಯಜ್ಞಾಶ್ಚ ಯಸ್ಮಾದೋತಾಃ ಪರಸ್ಪರಮ್ ।
ವಿಹಿತಾ ವಿಷ್ಣುನಾ ತೇನ ವಿಷ್ಣುರೋಮಿತಿ ಕೀರ್ತಿತಃ ।
ಓತಂ ತಸ್ಮಿನ್ನಿದಂ ಸರ್ವಮಿತಿ ಚೋಕ್ತಃ ಸ ಓಮಿತಿ ॥' (ಗೀ. ತಾತ್ಪರ್ಯ)

ಇಷ್ಟೇ ಅಲ್ಲದೆ ಓಂಕಾರವು ಪರಮಾತ್ಮನನ್ನು ಗುಣಪೂರ್ಣ ಎಂದು ಕೊಂಡಾಡುತ್ತದೆ—

'ಓತತ್ತ್ವವಾಚೀ ಹ್ಯೋಂಕಾರಃ ವಕ್ತ್ಯಸೌ ತದ್ಗುಣೋತತಾಮ್ ।' (ಅನುವ್ಯಾ.)
'ಓಮಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ ।' (ಋಗ್ಭಾಷ್ಯ)

'ಬೃಹಂತೋ ಹ್ಯಸ್ಮಿನ್ ಗುಣಾಃ' ಎಂದು ಶ್ರುತಿಯಲ್ಲಿ ಹೊಗಳಿಸಿಕೊಂಡ ಪರಬ್ರಹ್ಮನ ಗುಣಪೂರ್ಣತ್ವವನ್ನು ನಿರುಪಚರಿತವಾಗಿ ಸಾಧಿಸುವ ಪದ ವಾದುದರಿಂದಲೂ ಇದು ಮಹತ್ತ್ವದ ಸ್ಥಾನವನ್ನು ಪಡೆಯುತ್ತದೆ. ಶ್ರೀ ಹರಿಯ ಗುಣಗಳನ್ನು ಒಂದೊಂದಾಗಿ– ನಿರ್ದೇಶಿಸಲು ಸಾಧ್ಯವೆ? ಭಾರತದ ಪುಣ್ಯವನ್ನೂ, ಸಮುದ್ರದ ನೀರನ್ನೂ, ಮೇರುವಿನ ಗುಹೆಗಳನ್ನೂ, ನಾರಾಯಣನ ಗುಣಗಳನ್ನೂ ಎಣಿಸುವುದು ಅಶಕ್ಯವೆಂದು ಶಾಸ್ತ್ರಕಾರರೇ ಸಾರಿಲ್ಲವೆ?

'ಭಾರತಸ್ಯ ಸಮುದ್ರಸ್ಯ ಮೇರೋರ್ನಾರಾಯಣಸ್ಯ ಚ ।
ಅಪ್ರಮೇಯಾಣಿ ಚತ್ವಾರಿ ಪುಣ್ಯಂ ತೋಯಂ ಗುಹಾ ಗುಣಾಃ ॥'

'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ' ಎಂಬ ಶ್ರುತಿಯೂ, ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ' ಎಂದು ಭಾಗವತವೂ ಸಾರುತ್ತಿರುವುದು ಇದನ್ನೇ ಅಲ್ಲವೆ? ಅದ ರಿಂದ ಶ್ರೀಹರಿಯ ಎಲ್ಲ ಗುಣಗಳನ್ನೂ ನಾವು ನಿರ್ದಿಷ್ಟವಾದ ಒಂದು ಶಬ್ದ ದಿಂದ ವ್ಯವಹರಿಸಬೇಕಾಗಿದೆ. ಆ ಶಬ್ದವೇ 'ಓಂಕಾರ'. ನಾರಾಯಣನ ನಿಖಿಲ ಗುಣಗಳನ್ನೂ ಮುಖ್ಯತಃ ಪ್ರತಿಪಾದಿಸುವ ಆ ಭಾಗ್ಯ ಇನ್ನಾವ ಪದ ಕ್ಕಿದೆ? ಎಂದಮೇಲೆ ಓಂಕಾರದ ಮಹತ್ತ್ವವೇನು ಸಾಮಾನ್ಯವೆ?

ಮೇಲಿನ ವಿವರಗಳಿಂದ–'ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ। ವಿಷ್ಣೋಃ ಸಹಸ್ರನಾಮಾಪಿ' ಎಂದು ಸರ್ವೋತ್ತಮವಾದ ಭಾರತದಲ್ಲೂ ಸಾರಭೂತಗಳಾದ ಗೀತೆ ಮತ್ತು ಸಹಸ್ರನಾಮಗಳು ಓಂಕಾರದ ಕುರಿತು ಏನನ್ನುತ್ತಾವೆ ಎಂಬುದನ್ನು ತಿಳಿದುಕೊಂಡಂತಾಯಿತು. ಇನ್ನುಳಿದ ಎಲ್ಲ ಗ್ರಂಥಗಳಲ್ಲೂ– ಎಲ್ಲ ಪುರಾಣಗಳಲ್ಲೂ ಇಂಥ ಹತ್ತಾರು ನಿರ್ದೇಶಗಳು– ಪ್ರಶಂಸೆಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಓಂಕಾರವೊಂದನ್ನು ಕೂಲಂ ಕಷವಾಗಿ ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಾಯಿತು ಎಂಬ ಭಾವವನ್ನು ಎಲ್ಲ ಗ್ರಂಥಗಳೂ ವ್ಯಕ್ತಪಡಿಸಿವೆ. ಅದಕ್ಕೆ ಪೂರಕವಾದ ಮಾತುಗಳನ್ನೆ ಎಲ್ಲ ಗ್ರಂಥಗಳಲ್ಲೂ ನಾವು ಧಾರಾಳವಾಗಿ ಕಾಣಬಹುದು—

'ಆದ್ಯಂ ಚ ತ್ರ್ಯಕ್ಷರಂ ಬ್ರಹ್ಮ ತ್ರಯೀ ಯಸ್ಮಿನ್ ಪ್ರತಿಷ್ಠಿತಾ ।'
'ಪ್ರಣವಾದ್ವ್ಯಸ್ತಯೋ ವೇದಾಃ ಪ್ರಣವೇ ಪರ್ಯವಸ್ಥಿತಾಃ ।
ವಾಙ್ಮಯಂ ಪ್ರಣವಃ ಸರ್ವಂ ತಸ್ಮಾತ್ಪ್ರಣವಮಭ್ಯಸೇತ್ ॥' (ಅತ್ರಿ.)

'ಧ್ರುವಮೇಕಾಕ್ಷರಂ ಬ್ರಹ್ಮ ಓಮಿತ್ಯೇವ ವ್ಯವಸ್ಥಿತಮ್ ।
'ಪ್ರಣವಾವಸ್ಥಿತಂ ನಿತ್ಯಂ ಭೂರ್ಭುವಃಸ್ವರಿತೀರ್ಯತೇ ।
ಋಗ್ಯಜುಃಸಾಮಾಥರ್ವಾಣೋ ಯತ್ತಸ್ಮೈ ಬ್ರಹ್ಮಣೇ ನಮಃ ॥
'ಓಂಕಾರಬ್ರಹ್ಮಸಂಯುಕ್ತಂ ಗಾಯತ್ರ್ಯಾ ಚಾಭಿಮಂತ್ರಿತಮ್ ।
'ಓಂಕಾರೋ ಭಗವಾನ್ವಿಷ್ಣುಸ್ತ್ರಿಧಾಮಾ ವಚಸಾಂಪತಿಃ ।
'ವೈಷ್ಣವೋಽಂಶಃ ಪರಃ ಸೂರ್ಯೋ ಯೋಽಂತರ್ಜ್ಯೋತಿರಸಂಪ್ಲವಮ್ ।
ಅಭಿಧಾಯಕ ಓಂಕಾರಸ್ತಸ್ಯ ತತ್ಪ್ರೇರಕಃ ಪರಃ ॥' (ವಿಷ್ಣುಪು.)

ಸಂಸಾರತಾರಕವಾದ ಮಹಾಮಂತ್ರವೆಂಬ ಕಾರಣದಿಂದ ಇದನ್ನು 'ತಾರ'ವೆಂದೇ ಪ್ರಾಚೀನರು ಕರೆದರು. ಪರಮಾತ್ಮನನ್ನು ನುತಿಸುವ ಕಾರಣ ದಿಂದ 'ಪ್ರಣವ'ವೆಂದೂ ಕರೆದರು—

'ಅಶೋಕಸ್ತಾರಣಸ್ತಾರಃ' (ಸಹಸ್ರನಾ.)

'ತತ್ರ ಹಿ ಜಂತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮ ವ್ಯಾಚಷ್ಟೇ ।' (ಜಾಬಾಲೋಪ.)

'ತಾರಯೇದ್ಯದ್ಭವಾಂಭೋಧೇಃ ಸ್ವಜಪಾಸಕ್ತಮಾನಸಾನ್ ।
ತತಸ್ತಾರ ಇತಿ ಖ್ಯಾತಃ' (ಸ್ಕಾಂದ. ಕಾಶೀಖಂಡ)

'ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ ।' (ಸ. ನಾ.)

'ಪ್ರಣೌತೀತಿ ಪ್ರಣವಃ । 'ತಸ್ಮಾದೋಮಿತಿ ಪ್ರಣೌತೀ'ತಿ ಶ್ರುತೇಃ ।'
(ಸ. ಶಾಂ. ಭಾ.)

ಹೀಗೆ ವಾಚ್ಯವಾಚಕಗಳನ್ನು— ಒಂದಾಗಿ ವ್ಯವಹರಿಸುವ ಪ್ರಾಚೀನರ ದೃಷ್ಟಿ ಓಂಕಾರಕ್ಕೆ ಮಹತ್ತ್ವವನ್ನು ತಂದುಕೊಡುತ್ತದೆ. ಅದೂ ಅಲ್ಲದೆ- ಶ್ರೀಹರಿಯು, ಮುಖ್ಯತಃ ಪ್ರಣವ-ತಾರ ಮುಂತಾದ ಪದಗಳಿಂದ ವಾಚ್ಯ ನಾಗಿದ್ದಾನೆ. ಅವನನ್ನು ಪ್ರತಿಪಾದಿಸುತ್ತದೆ ಎಂತಲೆ-ಓಂಕಾರವನ್ನೂ ಆ ಪದಗಳಿಂದ ವ್ಯವಹರಿಸುವುದು ರೂಢಿಗೆ ಬಂತು. ಇದು ಪ್ರಾಚೀನರ ಆಶಯ.

ಸರ್ವಪದಗಳಿಗೂ ಪ್ರಧಾನಭೂತವಾದ ಓಂಕಾರದಿಂದ ಉಳಿದೆಲ್ಲಾ ಅಕ್ಷರಗಳು ಹೇಗೆ ಹುಟ್ಟಿಕೊಂಡವು ಎಂಬುದನ್ನು ಆಚಾರ್ಯರೇ ಈ ಗ್ರಂಥ ದಲ್ಲಿ ವಿವರಿಸಿದ್ದಾರೆ. ಓಂಕಾರದ ಅಕ್ಷರಗಳಿಂದ ಎಂಟು ಗುಂಪಾಗಿ ವಿಭಕ್ತ ಗಳಾದ ೫೦ ಅಕ್ಷರಗಳು ಉತ್ಪನ್ನವಾದವು ಎಂಬುದನ್ನು ವಿವರಪೂರ್ವಕ ವಾಗಿ ಆಚಾರ್ಯರು ನಿರೂಪಿಸಿದ್ದಾರೆ. ಅದರಿಂದ ಓಂಕಾರವನ್ನರಿತವನು ಸಕಲ ಗುಣಪೂರ್ಣನಾದ ಶ್ರೀಹರಿಯನ್ನರಿತಂತೆಯೆ—

'ಓಂಕಾರಂ ಯೋ ವಿಜಾನಾತಿ ಸ ಯೋಗೀ ಸ ಹರಿಃ ಪುಮಾನ್ ।
'ಸರ್ವಮಂತ್ರಪ್ರಯೋಗೇಷು ಪ್ರಣವಃ ಪ್ರಥಮಃ ಸ್ಮೃತಃ ।
ತೇನ ಸಂಪರಿಪೂರ್ಣಂ ಯತ್ತತ್ಪೂರ್ಣಂ ಕರ್ಮ ನೇತರಮ್ ॥
ಓಂಕಾರಪೂರ್ವಿಕಾಸ್ತಿಸ್ರೋ ಮಹಾವ್ಯಾಹೃತಯೋಽವ್ಯಯಾಃ ।
ತ್ರಿಪದಾ ಚೈವ ಸಾವಿತ್ರೀ ವಿಜ್ಞೇಯಂ ಬ್ರಹ್ಮಣೋ ಮುಖಮ್ ॥
'ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಃ ಪರಂ ತಪಃ ।' (ಅಗ್ನಿಪು.)

ಹೀಗೆ ಎಲ್ಲ ಪದಗಳೂ ಪ್ರಕೃತಿಭೂತವಾದ ಓಂಕಾರಕ್ಕೂ ಮೂಲಭೂತವಾದ ಇನ್ನೊಂದು ಅಕ್ಷರವುಂಟು. ಅದರಲ್ಲಿ ಓಂಕಾರವೂ– ಲೋಕದ ಎಲ್ಲ ವರ್ಣಗಳೂ, ಪದಗಳೂ, ವಾಕ್ಯಗಳೂ ಸೇರಿಕೊಂಡಿವೆ; ಅದು ಎಲ್ಲ ಪದಗಳಿಗೂ ಪ್ರಕೃತಿಯಾಗಿದೆ; ಉಳಿದೆಲ್ಲ ಪದಗಳೂ ಅದರ ವಿಕಾರಗಳಾಗಿವೆ; ಅದೇ ಅಕಾರ. ಅದು ಪರಬ್ರಹ್ಮಪ್ರತಿಪಾದಕವಾದ ಮುಖ್ಯಾಕ್ಷರ.

**'ಅಕ್ಷರಾಣಾಮಕಾರೋಽಸ್ಮಿ'** (ಗೀತಾ)

ಅಕಾರದಿಂದ ಪ್ರತಿಪಾದಿತವಾಗದ ಹೊಸತಾದ ಒಂದು ಅರ್ಥವನ್ನು ಇನ್ನಾವ ಪದವೂ ಹೇಳಲಾರದು—

**'ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ।'**
**'ಅಕಾರೋ ವೈ ಸರ್ವಾ ವಾಕ್ ।'**

ಅಕಾರವು ಎಲ್ಲ ವರ್ಣಗಳಿಗೂ ಪ್ರಕೃತಿಭೂತವಾಗಿದೆ. ಪ್ರಕೃತಿಯು ಏನನ್ನು ಪ್ರತಿಪಾದಿಸುತ್ತದೆಯೋ– ಅದನ್ನೇ ಅದರ ವಿಕೃತಿಗಳಾದ ಇತರ ಪದಗಳೂ ಪ್ರತಿಪಾದಿಸಬಲ್ಲುವು. ಎಲ್ಲ ಅಕ್ಷರಗಳಿಗೂ ಮೂಲಾಕ್ಷರವಾದ ಅಕಾರವಾಚ್ಯನಾದವನು ಶ್ರೀಹರಿಯೆ ಸರಿ. **'ಅಃ ಇತಿ ಬ್ರಹ್ಮ'** ಎಂಬ ಶ್ರುತಿಯೂ ಈ ಮಾತನ್ನು ಪುರಸ್ಕರಿಸುತ್ತದೆ. ಅಕಾರವಾಚ್ಯ ಎಂದ ಮೇಲೆ ಅದರ ವಿಕಾರಗಳಾದ ಉಳಿದೆಲ್ಲ ವಾಕ್ಯವೃಂದಗಳಿಂದಲೂ ಪ್ರತಿಪಾದ್ಯನಾದವನೂ ಶ್ರೀಹರಿಯೆ ಎಂದು ಬೇರೆ ಹೇಳಬೇಕೆ?

ಈ ವಿಷಯವನ್ನು ಶ್ರೀರಾಮಾನುಜಾಚಾರ್ಯರು ತನ್ನ ಒಂದು ಗ್ರಂಥದಲ್ಲಿ ಉಪಪಾದಿಸಿದ್ದಾರೆ—

**'ಸರ್ವಸ್ಯ ವೇದಜಾತಸ್ಯ ಪ್ರಕೃತಿಃ ಪ್ರಣವಃ । ಪ್ರಣವಸ್ಯ ಚ ಪ್ರಕೃತಿರಕಾರಃ । ಪ್ರಣವವಿಕಾರೋ ವೇದಃ ಸ್ವಪ್ರಕೃತಿಭೂತೇ ವೇದೇ ಲೀನಃ । ಪ್ರಣವೋಽಪ್ಯಕಾರವಿಕಾರಭೂತಃ ಸ್ವಪ್ರಕೃತಾವಕಾರೇ ಲೀನಃ । ತಸ್ಯ ಚ ಪ್ರಣವಪ್ರಕೃತಿಭೂತಸ್ಯಾಕಾರಸ್ಯ ಯಃ ಪರೋ ವಾಚ್ಯಃ ಸ ಏವ ಮಹೇಶ್ವರ ಇತಿ ।'** (ವೇದಾರ್ಥಸಂಗ್ರಹ)

ಈ ರೀತಿಯಾಗಿ ಅಕಾರದಿಂದ ಓಂಕಾರವೂ– ಓಂಕಾರದ ಮೂರಕ್ಷರಗಳಿಂದ ಮೂರು ವ್ಯಾಹೃತಿಗಳೂ, ಅದರಿಂದ ಮೂರು ಪಾದದ ಗಾಯತ್ರಿಯೂ, ಗಾಯತ್ರಿಯಿಂದ ಮೂರು ವೇದಗಳೂ ಹುಟ್ಟಿಕೊಂಡವು. ನಿತ್ಯಕರ್ಮಗಳಿಗೆ ಅನ್ವಯಿಸುವ ಮತ್ತು ಯಜ್ಞಯಾಗಾದಿಗಳಿಗೆ ಸಂಬಂಧಪಟ್ಟ ವೇದಗಳನ್ನು ಮಾತ್ರ ಉದ್ದೇಶಿಸಿಕೊಂಡು ಮೂರು ವೇದಗಳು ಎಂಬ ಮಾತು ಬಂದಿದೆ. ಆದರಿಂದಲೇ ಸಂಸ್ಕೃತದಲ್ಲಿ 'ತ್ರಯೀ' ಎಂಬ ಪದ ಬಳಕೆಯಲ್ಲಿ ಬಂತು. ಹೊರತು ನಾಲ್ಕನೆಯದಾದ ಅಥರ್ವವೇದ ಪುರಾಣಕಾಲದಲ್ಲಿರಲಿಲ್ಲ– ಅದು ಇತ್ತೀಚಿನ ಕೃತಿ, ಅದರಿಂದಲೇ 'ತ್ರಯೀ' ಎಂದು ವೇದಗಳಿಗೆ ಹೆಸರು, ಅದರಿಂದಲೇ ಓಂಕಾರದಿಂದ ಮೂರೇ ವೇದಗಳ ಅಭಿವ್ಯಕ್ತಿಯನ್ನು ಪ್ರಾಚೀನರು ಬರೆದರು ಎಂಬ ಕುಕಲ್ಪನೆಯನ್ನು ಮಾಡಲು ಶಕ್ಯವಿಲ್ಲ. ಒಂದು ದೃಷ್ಟಿವಿಶೇಷದಿಂದ, ಈ ಮೂರು ವೇದಗಳ ವ್ಯವಹಾರ ಮತ್ತು 'ತ್ರಯೀ' ಪದ ಬಳಕೆಗೆ ಬಂತು. ಈ ವಿಷಯ ಹೊಸತೇನೂ ಅಲ್ಲ. ಅಹಿರ್ಬುಧ್ನ್ಯ ಸಂಹಿತಾ ಮೊದಲಾದ ಗ್ರಂಥಗಳಲ್ಲೂ ಇದೇ ತೆರನಾದ ಸಮಾಧಾನವನ್ನಿತ್ತಿದ್ದಾರೆ.

ಸಮಸ್ತ ವೇದಗಳು ಮತ್ತು ಗಾಯತ್ರಿ ವ್ಯಾಹೃತಿಗಳಿಗಿರುವ ವ್ಯಾಖ್ಯಾನ-ವ್ಯಾಖ್ಯೇಯಭಾವವನ್ನು ಆಚಾರ್ಯರು ಮೂಲದಲ್ಲೆ ನಿರೂಪಿಸಿದ್ದಾರೆ. ವ್ಯಾಹೃತಿಸಾರದ ವಚನವೂ ಇದಕ್ಕೆ ಸಂವಾದಿಯಾಗಿದೆ—

'ಪ್ರಣವಾರ್ಥಾ ವ್ಯಾಹೃತಯೋ ವ್ಯಾಹೃತ್ಯರ್ಥಾ ಋಗಾದಯಃ ।
ಇತಿಹಾಸಪುರಾಣಂ ಚ ಪಂಚರಾತ್ರಂ ಚ ಸರ್ವಶಃ ॥'
ಸಮ್ಯಗ್ವ್ಯಾಹರಣಾದ್ವಿಷ್ಣೋಃ ಶ್ರುತಾ ವ್ಯಾಹೃತಯಸ್ತ್ವಿತಿ ।
ಸರ್ವವೇದೋಕ್ತಸರ್ವಸ್ವವ್ಯಾಹೃತೇರ್ವ್ಯಾಹೃತಿತ್ವಮು ।
ವಿಶೇಷೇಣಾಽಹರಂತೀಮಂ ವಿಷ್ಣುಮಿತ್ಯಥವಾ ಸ್ಮೃತಾಃ ॥' (ವ್ಯಾಹೃತಿಸಾರ)
'ಅಕಾರಾದ್ಯಾಃ ಕ್ರಮೇಣೈವ ಭೂರಾದೇಃ ಸಾರರೂಪಿಣಃ ।' (ಛಾಂ. ಭಾ.)
'ಅಕಾರಂ ಚಾಪ್ಯುಕಾರಂ ಚ ಮಕಾರಂ ಚ ಪ್ರಜಾಪತಿಃ ।
ವೇದತ್ರಯಾನ್ನಿರದುಹತ್ ಭೂರ್ಭುವಃಸ್ವರಿತೀತಿ ಚ ॥' (ಮನು.)

ಇಲ್ಲಿ ಸಾಮಾನ್ಯವಾಗಿ ಕೆಲವು ಸಂದೇಹಗಳು ಬರುವುದು ಸಹಜ. ಒಂದು ಅಕ್ಷರದಿಂದ ಇನ್ನೊಂದು ಅಕ್ಷರ ಅಭಿವ್ಯಕ್ತವಾಗುವುದೆಂದರೇನು? ಅನಂತ ವೇದಗಳೂ ಅಕಾರ ಮತ್ತು ಓಂಕಾರದ ವ್ಯಾಖ್ಯಾನವೆಂದರೇನು? ಅವುಗಳ ವ್ಯಾಖ್ಯಾನವ್ಯಾಖ್ಯೇಯಭಾವವೆಂಥದು? ಜಗತ್ತಿನಲ್ಲಿರುವ ಎಲ್ಲ ಪದಗಳ ಅರ್ಥವನ್ನೂ ಗಾಯತ್ರಿಯೋ, ವ್ಯಾಹೃತಿಯೋ, ಓಂಕಾರವೋ, ಅಕಾರವೋ

ಪ್ರತಿಪಾದಿಸುವ ಬಗೆ ಹೇಗೆ? ಇವೆಲ್ಲ ಪ್ರಶ್ನೆಗಳಿಗೂ ಸಾಕಷ್ಟು ವಿಶದವಾದ ಸಮಾಧಾನವನ್ನು ಆಚಾರ್ಯರು ಗ್ರಂಥಾಂತರಗಳಲ್ಲಿ ಬರೆದಿದ್ದಾರೆ.

ಅಕಾರವು ಎಲ್ಲ ಪದಗಳ ಅರ್ಥವನ್ನೂ ಬೋಧಿಸುವುದರಿಂದ ಅದು ಎಲ್ಲ ಪದಗಳಿಗೂ ಪ್ರಕೃತಿಭೂತವಾಗಿದೆ ಎಂಬ ಅಂಶವನ್ನು ಮೊದಲು ಪರಿಶೀಲಿಸುವುದು ಆವಶ್ಯವಾಗಿದೆ. ಈ ವಿಷಯದಲ್ಲಿ ಆಚಾರ್ಯರು ಐತರೇಯಭಾಷ್ಯದಲ್ಲಿ ಕೊಟ್ಟ ವಿವರಣೆ ಸಾಕಷ್ಟು ತೃಪ್ತಿಕರವಾಗಿದೆ—

'ಅಕಾರಃ ಪ್ರಥಮಂ ನಾಮ ವಿಷ್ಣೋಃ ಸರ್ವಗುಣಾನ್ ಬ್ರುವನ್ ।
ಸರ್ವದೋಷವಿರುದ್ಧತ್ವಾದ್ಗುಣಾನಾಮನ್ಯತಾಮಪಿ ।
ವಿಷ್ಣೋರ್ವದತಿ ಜೀವೇಭ್ಯೋ ಜಡೇಭ್ಯಶ್ಚೈವ ಸರ್ವದಾ ।
ಅಭಾವಂ ಚೈವ ದೋಷಾಣಾಂ ಸರ್ವೇಷಾಂ ಕೇಶವೇ ವದೇತ್ ।
ಸಮ್ಯಗ್ವಕ್ತೃತ್ವತಸ್ತಸ್ಮಾದಕಾರೋ ಮುಖ್ಯನಾಮ ಹಿ ।
ತದರ್ಥಾನೇಕದೇಶೇನ ಶಬ್ದಾಃ ಸರ್ವೇಽಪಿ ಚೋಚಿರೇ ।
ವ್ಯಾಖ್ಯಾವ್ಯಾಖ್ಯೇಯರೂಪತ್ವಂ ವಿಕಾರತ್ವಮಿಹೋದಿತಮ್ ।
ವಿಕಾರಿತ್ವಂ ಚ ನಾನ್ಯತ್ಸ್ಯಾನ್ನಿತ್ಯಾ ವೇದಾ ಯತೋಽಖಿಲಾಃ ॥' (ಬ್ರಹ್ಮಸಾರ)

ಮೂಲಸಿದ್ಧಾಂತದ ನಿರ್ಣಯಗಳೇನಿವೆ ಅವೆಲ್ಲವನ್ನೂ ಈ ಒಂದು ಅಕ್ಷರ ಪ್ರತಿಪಾದಿಸುತ್ತದೆ. ಉಳಿದ ಅರ್ಥಗಳೆಲ್ಲ ಇದರಿಂದ ಗತಾರ್ಥಗಳಾಗಿರಬೇಕು ಎನ್ನುವುದು ಶಾಸ್ತ್ರಕಾರರ ತಾತ್ಪರ್ಯವೆಂದಾದಮೇಲೆ ಆ ಮೂಲತತ್ವವೇನು? ಎಂಬುದನ್ನು ತಿಳಿದುಕೊಳ್ಳಬೇಕು. ಆಚಾರ್ಯರೇ ಅನುವ್ಯಾಖ್ಯಾನದಲ್ಲಿ ನಿರ್ಣೀತತತ್ವಗಳನ್ನು ಉಲ್ಲೇಖಿಸಿದ್ದಾರೆ—

'ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರನ್ಯಚ್ಚ ತತ್ತಂತ್ರಮಿತಿ ಸಮ್ಯಗ್ವಿನಿರ್ಣಯಃ ।'

ಈ ಪ್ರಧಾನ ತತ್ವಗಳನ್ನು ಅಕಾರವು ಪ್ರತಿಪಾದಿಸಿದರೆ ಉಳಿದೆಲ್ಲವನ್ನೂ ಪ್ರತಿಪಾದಿಸಿದಂತೆ. 'ಏಕೇನ ವಿಜ್ಞಾತೇನ ಸರ್ವಂ ವಿಜ್ಞಾತಂ ಭವೇತ್।' ಕಾಳು ಕಡ್ಡಿಗಳ ಹೆಸರು– ಮರಮಟ್ಟುಗಳ ಹೆಸರೂ ಅಕಾರದಲ್ಲಿ ಅಡಕವಾಗಿರಬೇಕೆಂದೇನೂ ಶಾಸ್ತ್ರಕಾರರ ಅಭಿಪ್ರಾಯವಲ್ಲ. ಪರಮಾತ್ಮನ ಗುಣಗಾನದಲ್ಲಿ ಇದು ಅಗ್ರಸ್ಥಾನ ವಹಿಸುತ್ತದೆ ಎಂಬುದಷ್ಟೇ ತಾತ್ಪರ್ಯ. ಈ ವಿಷಯದಲ್ಲಿ ಅಕಾರವು ಎಷ್ಟು ವ್ಯಾಪಕವಾದ ಅರ್ಥವನ್ನು ಪ್ರತಿಪಾದಿಸುತ್ತದೆ ಎಂಬ ವಿಷಯವನ್ನು ಆಚಾರ್ಯರು ಐತರೇಯಭಾಷ್ಯದಲ್ಲಿ ಉದಾಹರಿಸಿದ 'ಬ್ರಹ್ಮಸಾರ'ದ ವಚನವು ಸ್ಫುಟಗೊಳಿಸುತ್ತದೆ.

'ಬ್ರಹ್ಮಸಾರ'ದ ವಚನವನ್ನು ವಿವರಿಸುವ ಮೊದಲು ಅಕಾರದ ಅರ್ಥದ ಕುರಿತು ನಿರ್ಣಯವನ್ನು ಮಾಡಿಕೊಳ್ಳಬೇಕಾಗುವುದು. ಅಕಾರ ಕೇವಲ ಅಭಾವವಾಚಕ ಎಂದು ವಾದಿಸುವವರುಂಟು. ಅಂಥವರಿಗೆ ಮೊದಲು ಪ್ರಮಾಣಾಂತರದಿಂದ ಅಕಾರದ ವಿಸ್ತಾರವನ್ನು ತೋರಿಕೊಡಬೇಕಾಗುವುದು. ಆಚಾರ್ಯರೇ ಬೇರೊಂದೆಡೆಯಲ್ಲಿ ಈ ವಿಷಯವನ್ನು ವಿವರಿಸಿದ್ದಾರೆ–

'ನಾಭಾವವಾಚ್ಯಕಾರಃ ಸ್ಯಾದರ್ಥತ್ರಯಯುತೋ ಯತಃ |
ಏಕಾರ್ಥಾತ್ಮಾ ಹ್ಯಭಾವಃ ಸ್ಯಾನ್ನಿಷೇಧ್ಯೈಕಸ್ವರೂಪತಃ ||' (ಐ. ಭಾಷ್ಯ)
'ಅನ್ಯತಾ ಚ ವಿರೋಧಶ್ಚ ನಿಷಿದ್ಧತ್ವಮಿತಿ ತ್ರಯಃ |
ಅಕಾರಾರ್ಥಾ ಹ್ಯಭಾವಸ್ತು ನಿಷೇಧ್ಯೈಕಸ್ವರೂಪಕಃ |
ಏಕದೇಶಸ್ವರೂಪತ್ವಾನ್ನಾಕಾರೇಣೈವ ಭಣ್ಯತೇ |
ಕಿಂತ್ವಭಾವ ಇತಿ ತ್ವೇವ ತೇನಾಕಾರೋದಿತೋ ಹರಿಃ ||' (ವಾಕ್ಯನಿರ್ಣಯ)
'ವಿರುದ್ಧತಾನಿಷೇಧಾನ್ಯಭಾವಯುಕ್ತೋ ಹಿ ಕೇವಲಃ |
ಅಕಾರೋ ವರ್ತತೇ ತೇಷ್ವಾವೇಕಾರ್ಥಾತ್ಮನ್ಯಭಾವಕೇ |
ವರ್ತತೇಽಭಾವ ಇತ್ಯೇವ ನ ತ್ವ ಇತ್ಯೇವ ಕೇವಲಃ ||' (ಶಬ್ದನಿರ್ಣಯ)

ಅಕಾರವು ಅನ್ಯತ್ವವನ್ನು ಅಥವಾ ಭೇದವನ್ನು ಪ್ರತಿಪಾದಿಸುತ್ತದೆ, ವಿರುದ್ಧತ್ವವನ್ನು ಪ್ರತಿಪಾದಿಸುತ್ತದೆ, ನಿಷೇಧವನ್ನು ಅಥವಾ ಅಭಾವವನ್ನು ಪ್ರತಿಪಾದಿಸುತ್ತದೆ, ಪೂರ್ವಭಾವಿಯಾಗಿ ಈ ಪ್ರಮಾಣಗಳಿಂದ ಇದಿಷ್ಟು ವಿಷಯಗಳನ್ನು ತಿಳಿದುಕೊಂಡರೆ ಬ್ರಹ್ಮಸಾರದ ವಚನ ಸುಲಭವಾಗಿ ಅರಿವಾಗುವುದು. ವಿರೋಧವಾಚಕವಾದ ಅಕಾರ, ಸರ್ವದೋಷವಿರೋಧಿಗಳಾದ ಸರ್ವಗುಣಗಳನ್ನೂ ಪ್ರತಿಪಾದಿಸುತ್ತದೆ. ಆ ಗುಣಗಳು ಭಗವತ್ಸ್ವರೂಪಗಳೇ ಎಂತಲೇ ಭಗವಂತನನ್ನೂ ಆ ಅಕಾರವು ಪ್ರತಿಪಾದಿಸುತ್ತದೆ. ಭಗವಂತನ ಸಕಲ ಗುಣಗಳನ್ನೂ–ಗುಣಗುಣಿಗಳಿಗೆ ಅಭೇದವನ್ನೂ ಏಕಕಾಲದಲ್ಲಿ ಪ್ರತಿಪಾದಿಸುವ ಈ ಅಕಾರಕ್ಕಿದ್ದ ಮಹತ್ತ್ವ ಇನ್ನಾವ ಪದಕ್ಕಿದ್ದೀತು? ಆನಂದಪೂರ್ಣ ಎನ್ನಿ, ಜ್ಞಾನಪೂರ್ಣ ಎನ್ನಿ, ಸರ್ವಶಕ್ತ ಎನ್ನಿ–ಏನೇ ಅಂದರೂ ಭಗವಂತನ ಮಹಾ ಗುಣಗಳ ಸಾಗರದಲ್ಲಿ ಒಂದು ಬಿಂದುವನ್ನು ನಿರ್ದೇಶಿಸಿದಂತಾಯಿತು. ಸಮಗ್ರ ಗುಣಗಳನ್ನೂ–ನಿರ್ದೇಶಿಸಬಲ್ಲ ಒಂದಕ್ಷರ ಅಕಾರವನ್ನುಳಿದರೆ ಶಬ್ದಪ್ರಪಂಚದಲ್ಲಿ ಇನ್ನೊಂದಿದೆಯೆ? ಇದು ಅಕಾರದ ಮಹತ್ವಕ್ಕೆ ಒಂದು ಕಾರಣ.

ಹೀಗೆಯೇ ಭೇದವಾಚಕವಾದ ಅಕಾರ ಪ್ರಪಂಚದಲ್ಲಿರುವ ಎಲ್ಲ ಜಡಚೇತನವರ್ಗಗಳಿಂದಲೂ, ಬ್ರಹ್ಮನಿಂದ ಸ್ತಂಬದ ವರೆಗೆ ಎಲ್ಲ ವಸ್ತುಜಾತ

ದಿಂದಲೂ ಪರಮಾತ್ಮನು ಸರ್ವೋತ್ತಮನಾಗಿದ್ದು ಅನ್ಯನಾಗಿದ್ದಾನೆ ಎಂಬ ಅರ್ಥವನ್ನು ಪ್ರತಿಪಾದಿಸುತ್ತದೆ. ಈ ತೆರನಾಗಿ ಸಮತೀತಕ್ಷರಾಕ್ಷರನಾದ ಶ್ರೀನಾರಾಯಣನನ್ನು ಸಕಲ ಜಗತ್ತಿನಿಂದಲೂ ವಿಲಕ್ಷಣನಾಗಿದ್ದಾನೆ ಎಂದು ಪ್ರತಿಪಾದಿಸುವ ಸಮಗ್ರಾರ್ಥವುಳ್ಳ ಒಂದೇ ಒಂದು ಪದವೆಂದರೆ ಅಕಾರ. ಉಳಿದೆಲ್ಲ ಭೇದವಾದಗಳೂ—ಇದರ ಎಂಜಲು. ಇದು ಹೇಳದ ಏನನ್ನೂ ಅವು ಹೇಳಲಾರವು. ಇದೂ ಅಕಾರದ ಮಹತ್ತ್ವಕ್ಕೆ ಕಾರಣ.

ಹೀಗೆಯೇ ನಿಷೇಧಾರ್ಥಕವಾದ ಅಕಾರ—ಸರ್ವದೋಷಗಳನ್ನೂ ಪರಮಾತ್ಮನಲ್ಲಿ ನಿಷೇಧಿಸುತ್ತದೆ. ನಿರ್ದೋಷಾಶೇಷಸದ್ಗುಣನೂ ಸಮತೀತಕ್ಷರಾಕ್ಷರನೂ ಆದ ನಾರಾಯಣನನ್ನು ಸದಾಗಮಗಳೆಲ್ಲ ಒಗ್ಗೊರಲಿನಿಂದ ಪ್ರತಿಪಾದಿಸಿಯೂ ಕೊನೆಮುಟ್ಟದಿದ್ದಾಗ—ಈ ಅಕಾರವೊಂದು ಭಗವಂತನ ಈ ದಿವ್ಯ ರೂಪವನ್ನು ತನ್ನ ಸಣ್ಣ ರೂಪದಲ್ಲಿ ತುಂಬಿಸಿಕೊಂಡು ವಿಶ್ವರೂಪ ತಾಳಿ ತ್ರಿವಿಕ್ರಮನಾಗಿ ಸೆಟೆದು ನಿಲ್ಲುತ್ತದೆ. ಎಲ್ಲ ಜಗತ್ತೂ ಭಗವಂತನ ಜಠರದಲ್ಲಿ ತುಂಬಿರುವಂತೆ ಅಕಾರದ ಜಠರವೂ ಬ್ರಹ್ಮಾಂಡವನ್ನೆ ಕಬಳಿಸಿ ಮಹಾಶಬ್ದವಾಗಿ ನಿಂತಿದೆ. ಹೀಗೆ '**ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ । ವಿಷ್ಣೋರನ್ಯಚ್ಚ ತತ್ತಂತ್ರಂ**' ಎಂಬ ಪ್ರಧಾನ ತತ್ವವನ್ನು ಸಮಗ್ರವಾಗಿ ಪ್ರತಿಪಾದಿಸಬಲ್ಲ ಒಂದೇ ಒಂದಕ್ಷರವಾದ ಅಕಾರಕ್ಕಿಂತಲೂ ಹೆಚ್ಚಿನ ಅರ್ಥವ್ಯಾಪ್ತಿಯುಳ್ಳ ಇನ್ನೊಂದು ಶಬ್ದವನ್ನು ವೇದಜಾಲಗಳಿಂದ ಆಯ್ದು ತೆಗೆಯುವುದು ಸಾಧ್ಯವೆ? ಅದರಿಂದ ಮೂರು ವೇದಗಳಿಂದ ಬ್ರಹ್ಮನು ಅಕಾರವನ್ನು ಆಯ್ದು ತೆಗೆದ ಎಂಬ ಮಾತು ತುಂಬ ಅರ್ಥವತ್ತಾಗಿದೆ.

ಹೀಗೆಯೇ ಉಳಿದೆಲ್ಲ ಪದಗಳೂ—ಅಕಾರದ ಅರ್ಥವನ್ನು ಹೇಗೆ ಪ್ರತಿಪಾದಿಸುತ್ತವೆ ಎಂಬುದನ್ನು ಸಾಮಾನ್ಯತಃ ತಿಳಿದಂತಾಯಿತು. ಪ್ರತ್ಯೇಕವಾಗಿ ಒಂದೊಂದು ಪದಕ್ಕೂ ಅಂಥ ಅರ್ಥವಿಶೇಷಗಳನ್ನು ಆಚಾರ್ಯರು ಅಲ್ಲಲ್ಲಿ ಬರೆದಿದ್ದಾರೆ—

'ವಿಶಿಷ್ಟಬಲಚೇಷ್ಟತ್ವಾದ್ವಿಷ್ಣುರಿತ್ಯಭಿಧೀಯತೇ ।
ಪ್ರಾಣಂ ಬಲಂ ಷಕಾರಂ ಚ ಣಕಾರಂ ಚಾಹ ಹಿ ಶ್ರುತಿಃ ॥' (ಋಗ್ಭಾಷ್ಯ)
'ವಿಷ್ಣುನಾಮ್ನಿ ಣಶಬ್ದೇನ ವಿಷ್ಣೋರ್ಬಲಮುದೀರ್ಯತೇ ।
ಣ ಇತ್ಯಾಕ್ರಿಯಮಾಣತ್ವಾಣ್ಣಕಾರೋಽಸ್ಯ ಬಲಂ ಮತಮ್ ॥
ವಿಷ್ಣುನಾಮ್ನಿ ಷಕಾರೇಣ ರಮಾಬ್ರಹ್ಮೇಶಪೂರ್ವಿಣಃ ।
ಪ್ರಣೇತೃತಾಽಖಿಲಸ್ಯೈವ ವಿಷ್ಣೋರುಕ್ತಾಽಽತ್ಮತಾ ತಥಾ ॥

ಆತತತ್ವಂ ಸರ್ವಗುಣೈರ್ದೇಶತಃ ಕಾಲತಸ್ತಥಾ ।
ಆತ್ಮಶಬ್ದೋದಿತಂ ತಚ್ಚ ಷಶಬ್ದೇನಾಭಿಧೀಯತೇ ॥
ಷ ಇತ್ಯಾಕ್ರಿಯಮಾಣತ್ವಂ ಪ್ರಣೇತೃತ್ವಂ ಚ ಪೂರ್ಣತಾ ।
ವಿಷ್ಣೋಃ ಷಕಾರ ಇತ್ಯುಕ್ತಾ ವೀತ್ಯುಕ್ತಸ್ಯ ವಿಶಿಷ್ಟತಾ ।
ಅಂತ್ಯಸ್ಥಿತ ಉಕಾರಸ್ತು ತಾಚ್ಛೀಲ್ಯಂ ಹಿ ಹರೇರ್ವದೇತ್ ॥
ಏವಂ ವಿಶಿಷ್ಟಪ್ರಾಣತ್ವಮಾತತತ್ವಂ ಚ ಸರ್ವತಃ ।
ವಿಶಿಷ್ಟಂ ಚ ಬಲಂ ವಿಷ್ಣೋಃ ಸರ್ವಸ್ಮಾಚ್ಛೀಲಮಿತ್ಯಪಿ ॥
ಉದಿತಂ ವಿಷ್ಣುಶಬ್ದೇನ ತಸ್ಮಾದೃಕ್ಸಂಹಿತಾಮನು ।
ವರ್ಣದ್ವಯಸಮಾಯೋಗೇ ಷ್ಣುಶಬ್ದಸ್ಯಾರ್ಥಮೇವತು ॥
ವಿಷ್ಣೋಃ ಪ್ರಾಣತ್ವಮಾತ್ಮತ್ವಂ ಬಲಂ ಚೈವಾತ್ರ ವೇತ್ತಿ ಯಃ ।
ಸ ಏವ ವಿಷ್ಣೋರ್ಬಲವಿತ್ತಥಾ ಪ್ರಾಣತ್ವವಿದ್ಭವೇತ್ ॥' (ಐ. ಭಾಷ್ಯ)
'ಆತ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ ।
ಗುಣಪೂರ್ತ್ಯಭಿಧಾಯೀ ಸ ನಾನ್ಯಸ್ಯ ಗುಣಪೂರ್ಣತಾ ॥' (ಬ್ರಹ್ಮಾಂಡಪು.)
'ಏಕಾರ್ಥತ್ವಾದಕಾರೋಽಸೌ ನಕಾರತ್ವಮುಪಾಗತಃ ।
ದೀರ್ಘೀಭೂತಃ ಪುನಸ್ತೇನೈವಾಕಾರೇಣ ಸಹ ಸ್ಥಿತಃ ॥
ಅಭಾವವಾಚ್ಯಕಾರಸ್ಯ ಹ್ಯರ್ಥೋ ರೇಫಃ ಕ್ಷಯಂ ವದನ್ ।
ಸೋಽಪ್ಯಕಾರೇಣ ಸಹಿತೋ ದೀರ್ಘತ್ವಂ ಸಮುಪಾಗತಃ ॥
ಅಭಾವವಾಚ್ಯಕಾರಃ ಸ ಏಕಾರ್ಥಾದ್ಗತ್ಯಭಾವಯೋಃ ।
ಯಕಾರತ್ವಂ ಗತಸ್ತಸ್ಮಾನ್ನೋ ರೇಫಸ್ಯೋತ್ತರತ್ವತಃ ॥
ಣತ್ವಂ ಗತೋ ಹ್ಯಕಾರೋಽಸೌ ನೋ ವಿರುದ್ಧಾರ್ಥವಾಚಕಃ ।
ಅನ್ಯತ್ವಾತ್ಸರ್ವಜೀವೇಭ್ಯೋ ಜಡೇಭ್ಯಶ್ಚ ಸದೈವ ಹಿ ॥
ಸರ್ವದೋಷೋಜ್ಝಿತತ್ವಾಚ್ಚ ಸರ್ವತೋಽಪ್ಯಧಿಕತ್ವತಃ ।
ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ ॥
ಸರ್ವದೋಷವಿರುದ್ಧೋರುಗುಣಪೂರ್ಣಸ್ವರೂಪತಃ ।
ನಾರಾಯಣ ಇತಿ ಪ್ರೋಕ್ತೋ ಹ್ಯಕಾರಾರ್ಥೋಽಯಮೇವ ಹಿ ॥'-(ಐ.-ಭಾಷ್ಯ)

ಹೀಗೆ ವಿವರಣೆ ಮಾಡುತ್ತ ನಡೆದರೆ–ಎಲ್ಲ ಶಬ್ದಗಳೂ ಅಕಾರದಿಂದ ಹೊರತಾಗಲಾರವು, ಯೋಚಿಸಿದಷ್ಟು ಅಕಾರದ ಅರ್ಥವ್ಯಾಪ್ತಿ ಗಹನವಾಗುತ್ತದೆ. ಇಷ್ಟೆಲ್ಲ ಹಿನ್ನೆಲೆಯಿಂದಲೇ ಪ್ರಾಚೀನರು ಅಕಾರವನ್ನು ಅಷ್ಟು ದೊಡ್ಡ ಸ್ಥಾನಕ್ಕೇರಿಸಿದರು. ರುದ್ರ-ಇಂದ್ರ ಮೊದಲಾದ ಪದಗಳು ಅಮುಖ್ಯವಾಗಿಯಾದರೂ ಇತರ ದೇವತೆಗಳನ್ನು ಪ್ರತಿಪಾದಿಸೀತು–ಮನುಷ್ಯಮಾತ್ರನೂ ಕೂಡ ನಾರಾಯಣ, ಗೋವಿಂದ, ಕೃಷ್ಣ ಎಂಬ ಭಗವನ್ನಾಮಗಳಿಂದ ತನ್ನನ್ನು ಕರೆದುಕೊಳ್ಳಬಹುದು–ಆದರೆ ಅಕಾರ ಯಾವ ದೇವತೆಯ ಹೆಸರೂ ಆಗ

ಲಾರದು. ಯಾರ ನಾಮಕರಣಕ್ಕೂ ಅದನ್ನು ಉಪಯೋಗಿಸುವಂತಿಲ್ಲ. ಅದು ಶ್ರೀಹರಿಯನ್ನು ಮಾತ್ರವೇ ಪ್ರತಿಪಾದಿಸುತ್ತದೆ. ಅಸ್ವತಂತ್ರದ ಸ್ಪರ್ಶವನ್ನು ಅದು ಸಹಿಸುವುದಿಲ್ಲ–ಎಂದೇ ಅದರ ಸ್ಥಾನ ಎತ್ತರದ್ದಾಗಿದೆ—

'ಅಕಾರನಾಮಾ ನಾನ್ಯೋಽಸ್ತಿ ತಸ್ಮಾತ್ ಪುರುಷೋತ್ತಮಾತ್ ।
ಬ್ರಹ್ಮರುದ್ರಾದಿನಾಮಾನಿ ಬ್ರಹ್ಮಾದಿಷ್ವಪ್ಯಮುಖ್ಯತಃ ।
ವರ್ತಂತೇ ನತ್ವಕಾರೋಽಯಂ ವರ್ತತೇ ಕೇಶವಂ ವಿನಾ ॥
ನಾರಾಯಣಾದಿನಾಮಾನಿ ನೃಣಾಂ ನಾಮಕ್ರಿಯಾಸ್ವಪಿ ।
ವಿಹಿತಾನ್ಯಕಾರೋ ನೈವಾಯಂ ವಿಹಿತಸ್ತಸ್ಮಾತ್ ಪ್ರಭುಮ್ ॥' (ಐ. ಭಾಷ್ಯ)

ಅಕಾರದ ಅರ್ಥವನ್ನು ತಿಳಿದುಕೊಂಡಮೇಲೆ–ಅದರ ಸಾಕ್ಷಾದ್ವಿಕಾರವಾದ ಓಂಕಾರದ ಅರ್ಥವನ್ನು ವಿವರಿಸುವುದು ಸುಕರ. ಮೊದಲಾಗಿ ಓಂಕಾರದ ಅಕ್ಷರಗಳು ಮೂರು ಎಂದಿಟ್ಟು ಅರ್ಥವನ್ನು ವಿವರಿಸುವುದು ಉಚಿತವಾಗಿದೆ. ಅಕಾರ ಪ್ರತಿಪಾದಿಸಿದ ಸರ್ವೋತ್ತಮತ್ವವನ್ನೇ ಓಂಕಾರವೂ ಪ್ರತಿಪಾದಿಸುತ್ತದೆ. ಅನುವ್ಯಾಖ್ಯಾನದ 'ಓತತ್ವವಾಚೀ ಹ್ಯೋಂಕಾರಃ' ಎಂಬ ನಿರುಕ್ತಿಯಂತೆ ಓಂಕಾರವು ಗುಣಪೂರ್ಣತ್ವವನ್ನು ಪ್ರತಿಪಾದಿಸುತ್ತದೆ. ಐತರೇಯ ಭಾಷ್ಯದ ನಿರುಕ್ತಿಯಂತೆ–ಶ್ರೀಹರಿಗೆ ಅಧಿಕ ಉಚ್ಚತ್ವವನ್ನು ಮಾತೃತ್ವ (ಜ್ಞಾತೃತ್ವ)ವನ್ನು ಪ್ರತಿಪಾದಿಸುತ್ತದೆ. ಈ ಅರ್ಥಗಳಾಗಲಿ ಇನ್ನಾವುದೇ ಅರ್ಥವಾಗಲಿ ಅದು ಅಕಾರದಿಂದ ಪ್ರತಿಪಾದಿತವಾದುದೇ ಹೊರತು ಹೊಸತೇನಲ್ಲ—

'ಅಕಾರಸ್ಯ ವಿಕಾರೋಽಯಮೋಂಕಾರ ಇತಿ ಕಥ್ಯತೇ ।
ಅಧಿಕೋಚ್ಚತ್ವಮಾನಂ ಹಿ ತಸ್ಯಾರ್ಥಃ ಸಮುದೀರಿತಃ ॥
ಅಕಾರೇಣೈವ ತತ್ಸರ್ವಮುಕ್ತಮಾಧಿಕ್ಯವಕ್ತೃತಃ ।
ಅಧಿಕೋಚ್ಚಸ್ವರೂಪೋಽಸೌ ಮಾತಾ ಚಾಧಿಕ ಏವ ಹಿ ॥' (ಐ. ಭಾಷ್ಯ)

ಈ ಕಾರಣದಿಂದ ಓಂಕಾರವು ಶ್ರೀಹರಿಯ ಮುಖ್ಯ ನಾಮವಾಗಿದೆ, ಶ್ರೀಹರಿಗೆ ಪ್ರೀತಿಪಾತ್ರವಾಗಿದೆ; ಈ ಕಾರಣದಿಂದಲೇ– ಕಾರ್ಯಾರಂಭದಲ್ಲಿ ಮಾಂಗಲಿಕವಾದ ಓಂಕಾರವನ್ನುಚ್ಚರಿಸಿ ಶ್ರೀಹರಿಯ ಪ್ರೀತಿಯನ್ನು ಸಂಪಾದಿಸಿಕೊಂಡು ಕಾರ್ಯವನ್ನು ಮಾಡಲು ತೊಡಗುವರು; ಈ ಕಾರಣದಿಂದಲೇ–ಅಕಾರದಂತೆಯೇ ಓಂಕಾರವೂ ಪ್ರಧಾನಸ್ಥಾನವನ್ನು ಪಡೆಯಿತು; ಪರ್ಣಗಳಿಗೆ ಶಂಕುವಿನಂತೆ ವರ್ಣಗಳಿಗೆ ಓಂಕಾರ ಎಂಬ ಪ್ರಥೆಯನ್ನು ಅಕಾರದಂತೆಯೇ ತಾನೂ ಪಡೆದುಕೊಂಡಿತು—

'ಯಥಾ ಪರ್ಣಂ ಪಲಾಶಸ್ಯ ಶಂಕುನ್ನೈಕೇನ ಧಾರ್ಯತೇ |
ತಥಾ ಜಗದಿದಂ ಸರ್ವಮೋಂಕಾರೇಣೈವ ಧಾರ್ಯತೇ ||' (ಯೋಗಿಯಾಜ್ಞವ.)

ಬ್ರಹ್ಮಾದಿಗಳೂ ಸಂತತ ಚಿಂತನೆ ಮಾಡುತ್ತಿರುವ ಅಕಾರದ, ಓಂಕಾರದ ಅರ್ಥವನ್ನು ಇಂತಿಷ್ಟೆಯೆಂದು ಮನುಷ್ಯಬುದ್ಧಿಯಿಂದ ಅಳೆವುದು ಸಾಧ್ಯವೆ? ಅಲ್ಲದೆ ಎಲ್ಲ ಮನುಷ್ಯರು ಅದನ್ನು ಅರಿತುಕೊಳ್ಳುವ ಅಧಿಕಾರವನ್ನು ಕೂಡ ಪಡೆದುಬಂದಿಲ್ಲ ಎನ್ನುತ್ತಾರೆ ಆಚಾರ್ಯರು—

'ನಾಯೋಗ್ಯಾನಾಂ ಸಮ್ಯಗ್ಬಾಚ್ಯ ಇತಿ ಸ್ವಲ್ಪ ಏವ ಪ್ರಕಾಶಿತೋಽಸ್ಮಾಭಿಃ |'
(ಐ. ಭಾಷ್ಯ)

ಓಂಕಾರದ ವರ್ಣತ್ರಯಗಳಿಂದ ಪ್ರತಿಪಾದ್ಯವಾದ ಅರ್ಥದ ಕುರಿತು ಒಂದು ಪುರಾಣವಚನ ಸ್ವಲ್ಪ ತೊಡಕಾದ ವಿವರಣೆಯನ್ನಿತ್ತಿದೆ. ಅದರ ಕುರಿತು ಸ್ವಲ್ಪ ವಿವೇಚಿಸುವುದು ಆವಶ್ಯಕ. ಆ ಪುರಾಣವಚನ ಕೆಳಗಿನಂತಿದೆ—

'ಅಕಾರೋ ವಿಷ್ಣುರುದ್ದಿಷ್ಟ ಉಕಾರಸ್ತು ಮಹೇಶ್ವರಃ |
ಮಕಾರಸ್ತು ಸ್ಮೃತೋ ಬ್ರಹ್ಮಾ ಪ್ರಣವಸ್ತು ತ್ರಯಾರ್ಥಕಃ ||'

ಅಕಾರದಿಂದ ವಿಷ್ಣು, ಉಕಾರದಿಂದ ಶಂಕರ, ಮಕಾರದಿಂದ ಬ್ರಹ್ಮ ಹೀಗೆ ತ್ರಿಮೂರ್ತಿಗಳನ್ನು– ಓಂಕಾರದ ತ್ರ್ಯಕ್ಷರಗಳು ಪ್ರತಿಪಾದಿಸುತ್ತಿವೆ ಎಂದು ಈ ಪುರಾಣವಚನದ ತಾತ್ಪರ್ಯ. ಈ ಅರ್ಥ ಶಾಸ್ತ್ರೀಯ ದೃಷ್ಟಿಯಿಂದ ಅನುಪಪನ್ನವಾಗಿದೆ. ಅದಕ್ಕೆ ಕೆಳಗಿನ ಕಾರಣಗಳನ್ನು ಕೊಡಬಹುದು—

೧ ಈ ರೀತಿ ಅರ್ಥವನ್ನು ವಿವರಿಸಿದರೆ ಓಂಕಾರದ ಏಕಾರ್ಥಕತ್ವ ಭಂಗವಾಗುವುದು.

೨ ಓಂಕಾರದ ಮೂರು ಅಕ್ಷರಗಳು ಮೂರು ವೇದಗಳಿಂದ ಆಯ್ದವುಗಳು ಎಂದಮೇಲೆ ಈ ಮೂರು ಅಕ್ಷರಗಳು ವೇದತ್ರಯದ ಸಾರಭೂತಗಳಾಗಿವೆ. ಈ ಮೂರು ಅಕ್ಷರಗಳು ಏನನ್ನು ಹೇಳುವವೋ ಅದನ್ನೇ ವೇದತ್ರಯವೂ ಸಾರುತ್ತದೆ. ಅದರಿಂದ ತ್ರಿಮೂರ್ತಿಗಳು ತ್ರ್ಯಕ್ಷರಪ್ರತಿಪಾದ್ಯರು ಎಂದಾದರೆ–ಋಗ್ವೇದದಿಂದ ವಿಷ್ಣು, ಯಜುರ್ವೇದದಿಂದ ಶಂಕರ, ಸಾಮವೇದದಿಂದ ಬ್ರಹ್ಮ–ಹೀಗೆ ಒಂದೊಂದು ವೇದದಿಂದ ಒಂದೊಂದು ದೇವತೆ ಪ್ರತಿಪಾದ್ಯ ಎಂದಂತಾಗುವುದು. ಹೀಗಿದ್ದರೆ–ವ್ಯಾಸರು 'ಗತಿಸಾಮಾನ್ಯಾತ್' ಎಂದು ಬ್ರಹ್ಮಸೂತ್ರದಲ್ಲಿ ಸಾಧಿಸಿದಂತೆ ಎಲ್ಲ ವೇದಗಳಿಗೂ ಒಂದೇ ತತ್ವದಲ್ಲಿ

ತಾತ್ಪರ್ಯ ಎನ್ನುವ ವಾದ ಹೇಗೆ ಕೂಡುವುದು? 'ಸರ್ವೇ ವೇದಾ ಯತ್ಪದ-ಮಾಮನಂತಿ........' ಎಂಬ ಶ್ರುತಿಯ ಗತಿಯೇನು?

೩. ಓಂಕಾರವು ಅಕಾರದ ವ್ಯಾಖ್ಯಾನವಾಗಿರುವುದರಿಂದ ಅಕಾರದ ಅರ್ಥವೇ ಓಂಕಾರದ ಅರ್ಥವೂ ಆಗಿದೆ. 'ಅಕಾರೋ ವೈ ಸರ್ವಾ ವಾಕ್' ಎಂಬಂತೆ ಅಕಾರದ ಅರ್ಥವೇ ಸರ್ವಪದದ ಅರ್ಥವೂ ಆಗಿದೆ. ಅದರಿಂದ 'ಅಕಾರನಾಮಾ ನಾನ್ಯೋಽಸ್ತಿ ತಮ್ಯತೇ ಪುರುಷೋತ್ತಮಮ್' ಎಂಬ ಪ್ರಮಾಣದಿಂದ ಅಕಾರವಾಚ್ಯನಾದ ಶ್ರೀಹರಿಯೇ ಓಂಕಾರದ ಅರ್ಥವೂ ಆಗಬೇಕಲ್ಲ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬಂತೆ ಅಕಾರವಿಕಾರಗಳಾದ ಸರ್ವಪದಗಳಿಂದಲೂ ವಾಚ್ಯನಾದ ಶ್ರೀಹರಿಯೇ ಓಂಕಾರದಿಂದಲೂ ವಾಚ್ಯನಾಗಬೇಕಲ್ಲ. 'ನತ್ವಕಾರೋಽಯಂ ವರ್ತತೇ ಕೇಶವಂ ವಿನಾ' ಎಂಬ ಪ್ರಮಾಣದಿಂದ ಅಕಾರವಾಚ್ಯತ್ವರಹಿತವಾದ ಬ್ರಹ್ಮರುದ್ರರಿಗೆ ಅಕಾರವಿಕಾರವಾದ ಓಂಕಾರದಿಂದ ವಾಚ್ಯತ್ವ ಹೇಗೆ ಕೂಡುತ್ತದೆ?

ಈ ಪೂರ್ವಪಕ್ಷಗಳಿಗೆ– ತ್ರಿಮೂರ್ತಿಗಳಿಗೆ ಅಭೇದವನ್ನೊಪ್ಪಿ ಪರಿಹಾರ ಹೇಳುವವರುಂಟು! ಅವರು ಈ ಪೂರ್ವಪಕ್ಷಗಳನ್ನೇನೋ ಪರಿಹರಿಸಬಲ್ಲರು. ಆದರೆ ತ್ರಿಮೂರ್ತಿಗಳಿಗೆ ಅಭೇದವನ್ನು ಸಾಧಿಸುವ ಮಹಾಪಾತಕವನ್ನು ಮಾತ್ರ ತೊಡೆದುಕೊಳ್ಳಲಾರರು.

ನಾರಾಯಣನ ಪಾದಕಮಲದಿಂದ ಹೊರಟ ಗಂಗಾಜಲವನ್ನು ಶಿರಸ್ಸಿನಲ್ಲಿ ಧರಿಸಿ ಶಿವನೆನಿಸಿಕೊಂಡ ಶಂಕರನು ನಾರಾಯಣನಲ್ಲ; ನಾರಾಯಣನ ನಾಭಿಕಮಲದಲ್ಲಿ ಜನಿಸಿ, ವೇದವಾಕ್ಯಗಳಿಂದ ಆತನನ್ನು ಪಾಡಿ ಪೊಗಳುತ್ತಿರುವ ಚತುರ್ಮುಖನೂ ನಾರಾಯಣನಲ್ಲ; ಇವರೆಲ್ಲರನ್ನೂ ನಿಯಮಿಸಿ, ಇವರೆಲ್ಲರ ಅಂತರ್ಯಾಮಿಯಾಗಿ, ಇವರೆಲ್ಲರಿಂದ ಸೃಷ್ಟಿಸಂಹಾರಾದಿಗಳನ್ನು ಮಾಡಿಸುತ್ತಾ, ಲೀಲಾವಿಹಾರಿಯಾಗಿ ಕ್ಷೀರಸಾಗರದಲ್ಲಿ ಪವಡಿಸಿರುವ ಮಹಾಶಕ್ತಿಯೇ ನಾರಾಯಣ ಎಂದಮೇಲೆ ಈ ವಾದ ಸಮರ್ಪಕವಾಗಿಲ್ಲ ಎಂದು ಆಚಾರ್ಯರು ವಾದಿಸಿದರು. ಹಾಗಿದ್ದರೆ ಈ ಪುರಾಣವಾಕ್ಯದ ತಾತ್ಪರ್ಯವೇನು?

ಎಲ್ಲ ಪುರಾಣಗಳ ಪೂರ್ವೋತ್ತರಗಳನ್ನು ಮನನಮಾಡುವವರಿಗೆ ಇಂಥ ಪೂರ್ವಪಕ್ಷಗಳೇ ಬರಲಾರವು. 'ಬ್ರಹ್ಮಣಿ ಬ್ರಹ್ಮರೂಪೋಽಸೌ ಶಿವರೂಪೀ ಶಿವೇ ಸ್ಥಿತಃ' ಎಂಬ ಪ್ರಮಾಣವನ್ನರಿತ ಯಾವನೂ ಈ ಪುರಾಣದ ಅರ್ಥವನ್ನು ತೊಡಕಾಗಿಸಲಾರ. ರುದ್ರನಲ್ಲಿ ಅಂತರ್ಯಾಮಿಯಾಗಿದ್ದು ರುದ್ರ

ನೆನ್ನಿಸಿಕೊಂಡ ಶ್ರೀಹರಿ ಉಕಾರವಾಚ್ಯನಾಗಿದ್ದಾನೆ; ಬ್ರಹ್ಮನಲ್ಲಿ ಅಂತರ್ಯಾಮಿಯಾಗಿದ್ದು ಬ್ರಹ್ಮನೆನ್ನಿಸಿಕೊಂಡ ಶ್ರೀಹರಿಯೇ ಮಕಾರವಾಚ್ಯನಾಗಿದ್ದಾನೆ. ಈ ಪಕ್ಷದಲ್ಲಿ ಎಂಥ ತೊಡಕೂ ಬರಲಾರದು. ಆದರೆ ಶಾಸ್ತ್ರನಿರ್ಣಯದಲ್ಲಿ ಇನ್ನಿಲ್ಲ ಎನ್ನುವಷ್ಟು ಅದ್ಭುತವಾದ ಪಾಂಡಿತ್ಯವನ್ನು ತೋರಿ ಸರ್ವಜ್ಞರೆನ್ನಿಸಿಕೊಂಡ ಆಚಾರ್ಯರ ಸಿದ್ಧಾಂತದ ಆಸರೆಯನ್ನು ಪಡೆದವನು ಮಾತ್ರವೇ ಈ ರೀತಿ ಉತ್ತರಿಸಬಲ್ಲ ಎಂಬುದನ್ನು ಮರೆಯಬಾರದು.

ಇನ್ನು ಕೆಲವೆಡೆ ಅಕಾರದಿಂದ ಬ್ರಹ್ಮ, ಉಕಾರದಿಂದ ವಿಷ್ಣು, ಮಕಾರದಿಂದ ರುದ್ರ ಪ್ರತಿಪಾದ್ಯರೆಂದು ಉಲ್ಲೇಖವಿದೆ. ಈ ವಿರೋಧಗಳನ್ನು ಪರಿಹರಿಸಲು ಸಾಧ್ಯವಿರುವ ಒಂದೇ ಒಂದು ಸರಣಿಯೆಂದರೆ– ಆಚಾರ್ಯರ ಸಿದ್ಧಾಂತದ ಸರಣಿಯೆ ಸರಿ. ಇಲ್ಲದಿದ್ದರೆ ತ್ರಿಮೂರ್ತಿಗಳಲ್ಲಿಯೂ ಒಂದೊಂದು ಕಡೆ ಒಂದೊಂದು ತೆರನಾಗಿ ಈ ವಿಶ್ಲಿಷ್ಟವಾದ ನಿರ್ದೇಶವೇಕೆ? ಒಂದೆಡೆ ಅಕಾರದಿಂದ ವಿಷ್ಣು ಪ್ರತಿಪಾದ್ಯನೆಂದಿದ್ದರೆ ಒಂದೆಡೆ ರುದ್ರ! ಈ ವಿರೋಧಗಳಿಗೆ ಪರಿಹಾರವೆಂತು? ಇಂಥ ಸಂದರ್ಭದಲ್ಲಿ ಆಚಾರ್ಯರ ಮಾರ್ಗದರ್ಶನ ಮರುಭೂಮಿಯಲ್ಲಿ ಮೂಡಿಬಂದ ಅರವಟಿಗೆಯಂತೆ ತತ್ವಜಿಜ್ಞಾಸುಗಳನ್ನು ತಣಿಸುತ್ತದೆ. ಈ ತ್ರಿಮೂರ್ತಿಗಳ ಸಮಸ್ಯೆಯನ್ನು ಆಚಾರ್ಯರು ಐತರೇಯಭಾಷ್ಯದಲ್ಲಿ ಸ್ಫುಟವಾಗಿ ಪ್ರಮಾಣದಿಂದ ಪರಿಹರಿಸಿದ್ದಾರೆ —

'ಯತೋಽಕಾರಃ ಸದಾ ವಿಷ್ಣೋರ್ವಾಚಕತ್ವೇನ ಸಂಸ್ಥಿತಃ ।
ತಸ್ಮಾದ್ವರ್ಣತ್ರಯಾತ್ಮಾಽಯಂ ಪ್ರಣವೋಽಪಿ ತ್ರಯಾತ್ಮಕಮ್ ।
ಹರಿಮೇವ ಸದಾ ವಕ್ತಿ ನೈವಾನ್ಯಂ ಕಂಚನ ಕ್ವಚಿತ್ ॥' (ತತ್ತ್ವಸಾರ)

ಈ ಎಲ್ಲ ಕಾರಣಗಳಿಂದಲೇ ಶ್ರುತಿಯು ನಾರಾಯಣನನ್ನು ಬ್ರಹ್ಮರುದ್ರಾದಿಜನಕ ಎಂದೂ ಕೊಂಡಾಡುತ್ತದೆ. ಬ್ರಹ್ಮರುದ್ರಾದಿ ಪದಗಳಿದಲೂ ವ್ಯಪದೇಶಿಸುತ್ತದೆ—

'ನಾರಾಯಣಾದ್ಬ್ರಹ್ಮಾ ಪ್ರಜಾಯತೇ, ನಾರಾಯಣಾತ್ಪ್ರಜಾಪತಿಃ ಪ್ರಜಾಯತೇ, ರುದ್ರಾ ವಸವಃ ಸರ್ವಾಣಿ ಛಂದಾಂಸಿ ಚ ನಾರಾಯಣಾದೇವ ಸಮುತ್ಪದ್ಯಂತೇ, ನಾರಾಯಣಾತ್ಪ್ರವರ್ತಂತೇ, ನಾರಾಯಣಾತ್ಪ್ರಲೀಯಂತೇ । ಅಥ ಪುರುಷೋ ಹವೈ ನಾರಾಯಣಃ । ಬ್ರಹ್ಮಾ ನಾರಾಯಣಃ । ಶಿವಶ್ಚ ನಾರಾಯಣಃ ॥' (ಅಥರ್ವಶಿರಃಶ್ರುತಿ)

## 'ಸೋಽಯಮಷ್ಟಾಕ್ಷರಃ'

ಈ ವರೆಗಿನ ವಿವರಣೆಯಿಂದ ಓಂಕಾರದ ಮೂರಕ್ಷರಗಳ ಅರ್ಥವ್ಯಾಪ್ತಿಯನ್ನು ತಿಳಿದುಕೊಂಡಂತಾದರೂ 'ಸೋಽಯಮಷ್ಟಾಕ್ಷರೋ ಮತಃ' ಎಂದು

ಆಚಾರ್ಯರು ನಿರ್ದೇಶಿಸಿರುವ ೮ ಅಕ್ಷರಗಳು ಯಾವುವು ಮತ್ತು ಅವುಗಳ ಅರ್ಥವೇನು ಎಂಬುದರ ಕುರಿತು ಇನ್ನು ವಿವರಿಸಬೇಕಾಗಿದೆ.

೮ ಅಕ್ಷರಗಳಿಂದ ಪ್ರತಿಪಾದ್ಯಗಳಾದ ೮ ಮೂರ್ತಿಗಳನ್ನು ಆಚಾರ್ಯರು ಇದೇ ಗ್ರಂಥದಲ್ಲಿಯೇ ಬರೆದಿದ್ದಾರೆ—

'ಸ ವಿಶ್ವತೈಜಸಪ್ರಾಜ್ಞತುರೀಯಾತ್ಮಾಂತರಾತ್ಮನಾಮ್ ।
ಪರಮಾತ್ಮಜ್ಞಾನಾತ್ಮಯುಜಾಂ ಮದ್ರೂಪಾಣಾಂ ಚ ವಾಚಕಃ ॥' (೧।೪)

ಅಕಾರ, ಉಕಾರ, ಮಕಾರ, ನಾದ, ಬಿಂದು, ಕಲಾ, ಶಾಂತ, ಅತಿ ಶಾಂತಗಳು ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತ-ರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ೮ ಭಗವದ್ರೂಪಗಳನ್ನು ಪ್ರತಿ ಪಾದಿಸುತ್ತವೆ ಎಂದು ಇಲ್ಲಿ ಬರೆದಿದ್ದಾರೆ. ಗ್ರಂಥಾಂತರದಲ್ಲಿ ಇನ್ನೊಂದು ತೆರನಾಗಿಯೂ ಉಲ್ಲೇಖವಿದೆ—

ವಿಶ್ವಶ್ಚ ತೈಜಸಃ ಪ್ರಾಜ್ಞಸ್ತುರ್ಯಶ್ಚಾಕ್ಷರದೇವತಾ ।
ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ ॥
ಪರಂಜ್ಯೋತಿಃ ಪರಂಬ್ರಹ್ಮ ವಾಸುದೇವ ಇತಿ ಕ್ರಮಾತ್ ।
ಅಕಾರಾದೇಸ್ತಥಾ ಶಾಂತಾತಿಶಾಂತಾಂತಸ್ಯ ದೇವತಾ ॥' (ಯತಿಪ್ರಣವಕಲ್ಪ)

ಮೊದಲಿನ ನಾಲ್ಕಕ್ಷರಗಳಿಗೆ ಕ್ರಮವಾಗಿ ಇಲ್ಲಿಯಂತೆಯೇ ದೇವತೆಗಳನ್ನು ಬರೆದು ಆ ಮೇಲೆ ಪುನಃ ೮ ಅಕ್ಷರಗಳಿಗೆ ಕೃಷ್ಣ, ರಾಮ, ನೃಸಿಂಹ, ವರಾಹ, ವಿಷ್ಣು, ಪರಂಜ್ಯೋತಿ, ಪರಬ್ರಹ್ಮ, ವಾಸುದೇವ ಎಂಬ ಎಂಟು ರೂಪಗಳನ್ನು ಪ್ರತಿಪಾದ್ಯಗಳನ್ನಾಗಿ ನಿರ್ದೇಶಿಸಿದ್ದಾರೆ.

ಈ ಎರಡು ತೆರನಾಗಿ ಅಲ್ಲದೆ ಆಚಾರ್ಯರೇ ಉದಾಹರಿಸಿದ ಪ್ರಮಾಣಾಂತರದಿಂದ ಇನ್ನೊಂದು ರೀತಿಯಿಂದಲೂ ದೇವತಾಧ್ಯಾನವು ವಿಹಿತ ವೆಂದು ತೋರುವುದು—

'ಸೃಷ್ಟಿಕರ್ತಾ ಬ್ರಹ್ಮನಾಮಾ ಯೋಽಸೃಜಚ್ಚತುರಾನನಮ್ ।
ಅಂತರ್ಯಾಮೀ ವಿರಿಂಚಸ್ಯ ಸೋಽಕಾರಾರ್ಥೋ ಜನಾರ್ದನಃ ॥
ವೈಕುಂಠಲೋಕ ಆಸ್ತೇ ಸ ದ್ವಿತೀಯವಪುಷಾ ಹರಿಃ ।
ಉಕಾರವಾಚ್ಯಃ ಸ ವಿಭುರ್ನೃಸಿಂಹೋ ರುದ್ರನಾಮಕಃ ॥
ರೌದ್ರತ್ವಾತ್ಸ ಶಿವಸ್ಯಾಪಿ ಸ್ರಷ್ಟಾ ಸಂಹಾರಕಾರಕಃ ।
ಅಂತರ್ಯಾಮೀ ಶಿವಸ್ಯಾಪಿ ಮಕಾರಾರ್ಥಃ ಪ್ರಕೀರ್ತಿತಃ ॥
ಏವಂ ತ್ರ್ಯಾತ್ಮಕಂ ವಿಷ್ಣುಂ ಪ್ರಣವೋಽಯಂ ತ್ರಿಯಾತ್ಮಕಃ ।
ಏಕಂ ಪೃಥಗಿವಾಽಚಷ್ಟೇ ಬಿಂದುರ್ವಕ್ತ್ಯನಿರುದ್ಧಕಮ್ ॥

ಪ್ರದ್ಯುಮ್ನಾದ್ಯಾನ್ನಾದಪೂರ್ವಾ: ಸರ್ವಾನ್ನಾರಾಯಣಾತ್ಮಕಾನ್ ।
ಪದ್ಮನಾಭಾದಿಕಾ ಏವ ಮೂರ್ತೀರ್ನಾರಾಯಣೋತ್ತರಾಃ ।
ಪ್ರಣವೋಽಯಂ ವದತ್ಯಷ್ಟೌ ತಸ್ಮಾನ್ನಾನ್ಯಾಭಿಧಾಯಕಃ ॥' (ತತ್ವಸಾರ)

ಈ ತತ್ವಸಾರದ ವಚನವನ್ನು ಪರಾಮರ್ಶಿಸುವವರಿಗೆ ಒಂದು ವಿಶೇಷ ಅರ್ಥವು ಹೊಳೆಯದಿರದು. ಓಂಕಾರದ ಮೂರು ಅಕ್ಷರಗಳು ಸೃಷ್ಟಿ ಸ್ಥಿತಿ ಸಂಹಾರಕಾರಣಗಳನ್ನು ಪ್ರತಿಪಾದಿಸುವಂತೆ– ಓಂಕಾರದ ೮ ಅಕ್ಷರಗಳು 'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ಆಚಾರ್ಯರು ಬರೆದಂತೆ ಸೃಷ್ಟ್ಯಾದ್ಯಷ್ಟಕ ಕರ್ತಾರನಾದ ನಾರಾಯಣನನ್ನು ಪ್ರತಿಪಾದಿಸುತ್ತವೆ ಎಂದು ಹೇಳಬಹುದು.

'ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್ ॥'

ಎಂದು ಸ್ಕಾಂದೋಕ್ತಗಳಾದ ಸೃಷ್ಟ್ಯಾದ್ಯಷ್ಟಕಗಳಿಗೂ ಈ ಅಷ್ಟಾಕ್ಷರ ಪ್ರತಿಪಾದ್ಯದೇವತೆಗಳಿಗೂ ಒಂದು ತೆರನಾದ ಸಂಬಂಧವಿದ್ದಂತಿದೆ. ಮೊದಲಿನ ಮೂರು ಅಕ್ಷರಗಳಿಂದ ಪ್ರತಿಪಾದ್ಯವಾದ ರೂಪಗಳು ಸೃಷ್ಟಿ ಸ್ಥಿತಿ ಸಂಹಾರಕಾರಕಗಳೆಂದು ತತ್ವಸಾರದಲ್ಲೇ ಸ್ಫುಟವಾಗಿದೆ. ಉಳಿದ ಐದು ರೂಪಗಳ ಕುರಿತು ಸ್ವಲ್ಪ ವಿವೇಚಿಸುವ.

ಜಗತ್ತಿನ ಯಾವ ಶಕ್ತಿಯಿಂದಲೂ ನಿರುದ್ಧನಾಗದೆ ಸ್ವಯಂ ಅನಿರುದ್ಧ ಎನ್ನಿಸಿಕೊಂಡು ಸಮಸ್ತವನ್ನೂ ನಿಯಮಿಸುತ್ತಿರುವ–ಶ್ರೀಹರಿಯೇ ಚತುರ್ಥಾಕ್ಷರವಾದ ನಾದದಿಂದ ವಾಚ್ಯನಾಗಿದ್ದಾನೆ.

ಜ್ಞಾನಪೂರ್ಣನಿದ್ದು ಪ್ರದ್ಯುಮ್ನನೆನಿಸಿಕೊಂಡು (ಪ್ರಕೃಷ್ಟಂ ದ್ಯುಮ್ನಂ=ಧನಂ ಜ್ಞಾನಾಖ್ಯಂ ಯಸ್ಯಾಸೌ ಪ್ರದ್ಯುಮ್ನಃ) ಚೇತನವರ್ಗಕ್ಕೆಲ್ಲ ಜ್ಞಾನಪ್ರದನಾದ ಶ್ರೀಹರಿಯೇ ಪಂಚಮಾಕ್ಷರವಾದ ಬಿಂದುವಾಚ್ಯನಾಗಿದ್ದಾನೆ.

ಪ್ರದ್ಯುಮ್ನಮೂರ್ತಿಯು ಸತ್ವೋದ್ರಿಕ್ತವೆಂದು ಶಾಸ್ತ್ರದಲ್ಲಿ ಉಲ್ಲೇಖವಿದೆ–

'ತೃತೀಯಾ ಕರ್ಮ ಕುರುತೇ ಪ್ರಜಾಪಾಲನತತ್ಪರಾ ।
ಸತ್ತ್ವೋದ್ರಿಕ್ತಾ ತು ಸಾ ಜ್ಞೇಯಾ ಧರ್ಮಸಂಸ್ಥಾನಕಾರಿಣೀ ॥'
(ಮಾರ್ಕಂಡೇಯ ಪು.)

'ಸತ್ತ್ವೋದ್ರಿಕ್ತಾ ತೃತೀಯಾಽನ್ಯಾ ಪ್ರದ್ಯುಮ್ನೇತಿ ಚ ಸಂಜ್ಞಿತಾ ।'(ಕೂರ್ಮಪು.)

ಪ್ರದ್ಯುಮ್ನರೂಪ ಸತ್ವೋದ್ರಿಕ್ತವಾದುದರಿಂದಲೂ– ಅದು ಜ್ಞಾನಪ್ರದ ಎನ್ನುವ ಮಾತಿನಲ್ಲಿ ಔಚಿತ್ಯವಿದೆ. 'ಸತ್ವಾತ್ಸಂಜಾಯತೇ ಜ್ಞಾನಮ್ ।'

ಉದ್ರಿಕ್ತತಮಸ್ಕವಾದ ಸಂಕರ್ಷಣರೂಪವು— ಪಾಮರರಿಗೆ ಅಜ್ಞಾನವ ನ್ನಿತ್ತು ಸಂಸಾರಪಥದೆಡೆಗೆ ಸೆಳೆಯುತ್ತಿದೆ ಎಂತಲೇ ಸಂಕರ್ಷಣ ಎನ್ನಿಸಿ ಕೊಂಡ ಶ್ರೀಹರಿ—ಷಷ್ಠಾಕ್ಷರವಾದ ಕಲೆಯಿಂದ ಪ್ರತಿಪಾದ್ಯನಾಗಿದ್ದಾನೆ.

ಸಂಕರ್ಷಣರೂಪವು ತಾಮಸವೆಂದು ಪುರಾಣದಿಂದಲೇ ತಿಳಿದುಬರುವುದು—

'ದ್ವಿತೀಯಾ ಕಾಲಸಂಖ್ಯಾ ಯಾ ತಾಮಸೀ ಶೇಷಸಂಜ್ಞಿತಾ ।
ನಿಹಂತಿ ಸಕಲಾಂಶ್ಚಾಂತೇ ವೈಷ್ಣವೀ ಪರಮಾ ತನುಃ ॥' (ಕೂರ್ಮಪು.)

ಸಂಕರ್ಷಣರೂಪ ತಾಮಸರೂಪವೆಂತಲೇ—ಅದು ಅಜ್ಞಾನಪ್ರದ ಎನ್ನುವ ಮಾತು ಸಂಗತವಾಗಿದೆ. 'ಪ್ರಮಾದಮೋಹೌ ತಮಸಃ........'

ಸತ್ತ್ವಗುಣವಾದ ಜ್ಞಾನವನ್ನು ಭಕ್ತರಿಗೆ ಕರುಣಿಸುವ ಶ್ರೀಹರಿಯ ರೂಪ ಸಾತ್ವಿಕ. ಅಭಕ್ತರಿಗೆ ತಮೋಗುಣವಾದ ಅಜ್ಞಾನವನ್ನು ತಂದೊಡ್ಡುವ ರೂಪ ತಾಮಸ ಇಷ್ಟೇ ಹೊರತು ಶುದ್ಧ ಚೇತನನಾದ ನಾರಾಯಣನಲ್ಲಿ ಈ ಪ್ರಾಕೃತ ಸಂಪರ್ಕವಿರಲು ಹೇಗೆ ಸಾಧ್ಯ? ಗುಣಾತೀತನೂ ನಿರ್ಗುಣನೂ ಆದ ನಾರಾಯಣನು ಭಕ್ತರಿಗಾಗಿ—ಸಾತ್ವಿಕ ರಾಜಸ ತಾಮಸ ವೇಷಗಳನ್ನು ಹಾಕಿ ಕೊಂಡು ತನ್ನ ಲೀಲಾನಾಟಕದ ಏಕಮಾತ್ರ ಪಾತ್ರಧಾರಿಯಾಗಿ ಜಗದ್ವ್ಯಾಪಾರಗಳನ್ನು ನಡೆಸುತ್ತಿರುತ್ತಾನೆ ಎನ್ನುವುದಷ್ಟೆ ತಾತ್ಪರ್ಯ. ಭಗವದ್ರೂಪ ಗಳಿಗೆ ಸಂಬಂಧಪಟ್ಟು ಬಂದ ಸಾತ್ವಿಕರಾಜಸಾದಿ ಪದಗಳನ್ನು ಎಲ್ಲೆಡೆಯಲ್ಲೂ ಇದೇ ತೆರನಾಗಿ ಅರ್ಥವಿಸಬೇಕು.

ಜಗತ್ತನ್ನೆಲ್ಲ ತನ್ನ ಮಾಯೆಯಿಂದ ಆಚ್ಛಾದಿಸಿ ಬಂಧಿತವನ್ನಾಗಿ ಮಾಡಿ ವಾಸುದೇವನೆನ್ನಿಸಿಕೊಂಡಿರುವ ('ವಾಸಯತಿ=ಆಚ್ಛಾದಯತಿ ಇತಿ ವಾಸುಃ) ಶ್ರೀಹರಿಯೇ ಸಪ್ತಮಾಕ್ಷರವಾದ ಶಾಂತದಿಂದ ಪ್ರತಿಪಾದ್ಯನಾಗಿದ್ದಾನೆ.

ಮುಕ್ತರಿಗೆ ಆಶ್ರಯನಾಗಿದ್ದು ನಾರಾಯಣನೆನ್ನಿಸಿದ (ನಾರಾಣಾಂ=ಮುಕ್ತಾನಾಂ ಆಶ್ರಯೋ ನಾರಾಯಣಃ) ಮೋಕ್ಷಪ್ರದನಾದ ಶ್ರೀಹರಿಯೇ ಚರಮಾಕ್ಷರವಾದ ಅತಿಶಾಂತದಿಂದ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಸೃಷ್ಟ್ಯಾದ್ಯಷ್ಟಕಗಳಿಗೆ ಕಾರಣನಾದ ಅಷ್ಟರೂಪಿಯಾದ ಶ್ರೀಹರಿಯು ಪ್ರಣವದ ಅಷ್ಟಾಕ್ಷರಗಳಿಂದ ಪ್ರತಿಪಾದ್ಯನಾಗಿದ್ದಾನೆ ಎನ್ನುವುದು ಸೊಗಸಾದ ಒಂದು ಶಾಸ್ತ್ರರಹಸ್ಯದಂತಿದೆ.

ಓಂಕಾರದಲ್ಲಿ ಇನ್ನೊಂದು ವೈಶಿಷ್ಟ್ಯವೂ ಅಡಕವಾಗಿದೆ. ಅದು 'ಅಜಪಾ' ಎನ್ನಿಸಿಕೊಂಡ ವ್ಯತ್ಯಸ್ತಹಂಸಮಂತ್ರವಾದ 'ಸೋಽಹಂ' ಎಂಬ ಮಹಾ

ಮಂತ್ರದ ವ್ಯಂಜನಾಕ್ಷರಗಳನ್ನು ತೆಗೆದಾಗ ಉಳಿವ ಅಕ್ಷರವಾಗಿದೆ. ಮಂತ್ರದ ಮೊದಲನೆಯ ಅಕ್ಷರವಾದ 'ಸೋ' ಎಂಬುದರಿಂದ ಸಕಾರವನ್ನು ಬೇರ್ಪಡಿಸಿದಾಗ 'ಓ' ಎಂಬ ಸ್ವರಮಾತ್ರವೇ ಉಳಿವುದು. ಎರಡನೆಯ ಅಕ್ಷರವಾದ 'ಹಮ್' ಎಂಬುದರಿಂದ ಹಕಾರವನ್ನು ಬೇರ್ಪಡಿಸಿದಾಗ 'ಅಮ್' ಎಂಬ ಸ್ವರವು ಉಳಿವುದು. 'ಓ+ಅಮ್' ಪೂರ್ವರೂಪಸಂಧಿ ಮಾಡಿದಾಗ ನಿಷ್ಪನ್ನವಾಗುವ ರೂಪ–'ಓಮ್'. ಈ ವಿಷಯವನ್ನು ಶಂಕರಾಚಾರ್ಯರೂ ಉಲ್ಲೇಖಿಸಿದ್ದಾರೆ—

'ಸಕಾರಂ ಚ ಹಕಾರಂ ಚ ಲೋಪಯಿತ್ವಾ ಪ್ರಯೋಜಯೇತ್ |
ಸಂಧಿಂ ವೈ ಪೂರ್ವರೂಪಾಖ್ಯಂ ತತೋಽಸೌ ಪ್ರಣವೋ ಭವೇತ್ ||'
(ಪ್ರಪಂಚಸಾರ)

ಆಚಾರ್ಯರ ಶಾಸ್ತ್ರಜಲಧಿಯಲ್ಲಿ ನಿಮಜ್ಜನಗೈದು ಪವಿತ್ರರಾದ ಮಹಾವಿದ್ವಾಂಸರು ಓಂಕಾರದ ಕುರಿತು ಇನ್ನಷ್ಟು ಬೆಳಕನ್ನು ಚೆಲ್ಲಬೇಕಾಗಿದೆ. ಆಗ ಓಂಕಾರಸದೃಶವಾದ ವರ್ಣ ಇನ್ನೊಂದಿಲ್ಲ ಎಂದು ಆಚಾರ್ಯರು ಉಲ್ಲೇಖಿಸಿದ ಮಾತು ಇನ್ನಷ್ಟು ಸ್ಫುಟವಾದೀತು—

'ನ ವಿಷ್ಣುಸದೃಶಂ ದೈವಂ ನ ಮೋಕ್ಷಸದೃಶಂ ಸುಖಮ್ |
ನ ವೇದಸದೃಶಂ ವಾಕ್ಯಂ ನ ವರ್ಣೋಽಂಕಾರಸಮ್ಮಿತಃ ||' (ಅನುವ್ಯಾ.)

ಓಂಕಾರದ ಅರ್ಥದ ಕುರಿತು ಚಿಂತಿಸಿದಂತೆಯೇ ಅದರ ಅಕ್ಷರಗಳ ಕುರಿತೂ ಸ್ವಲ್ಪ ವಿಮರ್ಶಿಸಬೇಕಾಗಿದೆ. ಓಂಕಾರದಲ್ಲಿ ನಮಗೆ ಕಾಣಬರುವ ಅಕ್ಷರಗಳು ಮೂರು ಮಾತ್ರ ಎಂದಮೇಲೆ ಈ ಎಂಟು ಅಕ್ಷರಗಳು ಯಾವುವು ಮತ್ತು ಇವುಗಳ ವಿಷಯದಲ್ಲಿ ಯಾವ ಪ್ರಮಾಣವನ್ನು ಉದಾಹರಿಸಬಹುದು? ಈ ಪ್ರಶ್ನೆಗಳಿಗೆ ನಾವು ಉತ್ತರವನ್ನು ಕಂಡುಹುಡುಕುವುದು ಅವಶ್ಯವಾಗಿದೆ.

ಓಂಕಾರದ ಅಕ್ಷರಗಳ ಕುರಿತು ಒಂದೊಂದು ಗ್ರಂಥ ಒಂದೊಂದು ತೆರನಾಗಿ ಉಲ್ಲೇಖಿಸುತ್ತದೆ. ಮೂರು ಅಕ್ಷರಗಳು ಎಂಬ ಪಕ್ಷ ಪ್ರಸಿದ್ಧವಾಗಿದೆ. ೩॥ ಅಕ್ಷರಗಳು ಎಂಬ ಪಕ್ಷವೂ ಇದೆ. ಇನ್ನು ಕೆಲವು ಗ್ರಂಥಗಳಂತೆ ನಾಲ್ಕು ಅಥವಾ ಐದು ಅಕ್ಷರಗಳು. ತಂತ್ರಸಮುಚ್ಚಯ ಮೊದಲಾದ ಗ್ರಂಥಗಳು ಈ ಪಕ್ಷಕ್ಕೆ ಸಂವಾದಿಗಳಾಗಿವೆ. ಏಳು ಅಕ್ಷರಗಳು ಎನ್ನುವ ಪಕ್ಷವೂ ಉಂಟು. ಶಾರದಾತಿಲಕದ ವ್ಯಾಖ್ಯಾನವಾದ ಪದಾರ್ಥಾದರ್ಶದಲ್ಲಿ ಈ ಪಕ್ಷವನ್ನು ಉಲ್ಲೇಖಿಸಿದ್ದಾನೆ. ಶಂಕರಾಚಾರ್ಯರೂ ಓಂಕಾರ ಸಪ್ತಾಕ್ಷರ ಎಂದೇ ಬರೆದಿದ್ದಾರೆ—

ಅಕಾರಶ್ಚಾಪ್ಯುಕಾರಶ್ಚ ಮಕಾರೋ ಬಿಂದುರೇವ ಚ ।
ನಾದಃ ಶಕ್ತಿಶ್ಚ ಶಾಂತಶ್ಚ ತಾರಭೇದಾಃ ಸಮೀರಿತಾಃ ॥' (ಪ್ರಪಂಚಸಾ.)

ಆದರೆ ಎಂಟು ಅಕ್ಷರಗಳು ಎಂಬ ಪಕ್ಷ ಪ್ರಾಯಃ ಎಲ್ಲೂ ಕಂಡುಬರುವುದಿಲ್ಲ ಎಂದಮೇಲೆ ಆಚಾರ್ಯರು ಈ ಪಕ್ಷವನ್ನು ಹೇಗೆ ಉಲ್ಲೇಖಿಸಿದರು? ಈ ಪ್ರಶ್ನೆಗೆ ಸುಲಭವಾಗಿ ಕೊಡಬಹುದಾದ ಉತ್ತರವೊಂದಿದೆ. ಇಲ್ಲಿ ಉದಾಹೃತವಾದ 'ಸೋಽಯಮಷ್ಟಾಕ್ಷರೋ ಮತಃ' ಎಂಬ ಶ್ಲೋಕವೇ-ಓಂಕಾರ ಅಷ್ಟಾಕ್ಷರ ಎನ್ನುವುದಕ್ಕೆ ಪ್ರಮಾಣ. ಅದು ಆಚಾರ್ಯರ ಸ್ವಂತ ಪದ್ಯವಲ್ಲ ತಾನೆ? ಅದು ಆಚಾರ್ಯರು ತಂತ್ರಸಾರದಿಂದ ಉದ್ಧರಿಸಿದ ಶ್ಲೋಕ. ಅದಕ್ಕೆ ಮತ್ತೊಂದು ಪ್ರಮಾಣವನ್ನೀಯುವ ಆವಶ್ಯಕತೆಯೇನು?

ಇಷ್ಟೇ ಅಲ್ಲದೆ– ಆಚಾರ್ಯರೇ ಬೃಹದಾರಣ್ಯಕಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣವಚನದಿಂದಲೂ ಇದು ಸಂವಾದಿಯಾಗಿದೆ—

'ಅಕಾರಾದ್ಯತಿಶಾಂತಾಂತಃ ಪ್ರಣವೋಽಷ್ಟಾಕ್ಷರೋ ಯತಃ ।' (ಗಾಯತ್ರೀಸ.)

ಅಷ್ಟಾಕ್ಷರತ್ವೋಪಾಸನೆ ಅತ್ಯಂತ ರಹಸ್ಯವಾದುದರಿಂದ 'ಬ್ರಹ್ಮಣೋಽನ್ಯೈರ್ನ ಗಮ್ಯತೇ' ಎಂದು ಆಚಾರ್ಯರೇ ನುಡಿದಂತೆ– ಬ್ರಹ್ಮದೇವರಿಗೆ ಮಾತ್ರ ಜ್ಞೇಯವಾದುದರಿಂದ, ಅದರ ಕುರಿತು ಹೆಚ್ಚು ವಿಸ್ತಾರವಾದ ಉಲ್ಲೇಖ ಎಲ್ಲೂ ಕಂಡುಬರುವುದಿಲ್ಲ. ಆದರೂ ಅಷ್ಟಾಕ್ಷರತ್ವದ ಉಲ್ಲೇಖ ಅಲ್ಲೊಂದು ಇಲ್ಲೊಂದು ಕಂಡು ಬರದಿಲ್ಲ.

ವಾಯುಪ್ರೋಕ್ತದಲ್ಲಿ– ಓಂಕಾರದ ಮೂರು ಮಾತ್ರೆಗಳನ್ನು ವಿವರಿಸಿ ಇದಕ್ಕೆ ಅಷ್ಟಮಾತ್ರೆಗಳೂ ಇವೆ, ಯೋಗ್ಯತಾನುಸಾರವಾಗಿ ಅವನ್ನು ಅನುಸಂಧಾನ ಮಾಡಬೇಕು ಎಂದು ಬರೆದಿದ್ದಾರೆ—

'ಅತ ಊರ್ಧ್ವಂ ಪ್ರವಕ್ಷ್ಯಾಮಿ ಓಂಕಾರಪ್ರಾಪ್ತಿಲಕ್ಷಣಮ್ ।
ಏಷ ತ್ರಿಮಾತ್ರೋ ವಿಜ್ಞೇಯೋ ವ್ಯಂಜನಂ ಚಾತ್ರ ಸಸ್ವರಮ್ ॥
'ಹ್ರಸ್ವಾ ತು ಪ್ರಥಮಾ ಮಾತ್ರಾ ತತೋ ದೀರ್ಘಾ ತ್ವನಂತರಮ್ ।
ತತಃ ಪ್ಲುತವತೀ ಚೈವ ತೃತೀಯಾ ಉಪದಿಶ್ಯತೇ ॥
ಏತಾಸ್ತು ಮಾತ್ರಾ ವಿಜ್ಞೇಯಾ ಯಥಾವದನುಪೂರ್ವಶಃ ।
ಯಾವಚ್ಚೈವ ತು ಶಕ್ಯಂತೇ ಧಾರ್ಯಂತೇ ತಾವದೇವ ಹಿ ॥
ಇಂದ್ರಿಯಾಣಿ ಮನೋ ಬುದ್ಧಿಂ ಧ್ಯಾಯನ್ನಾತ್ಮನಿ ಯಃ ಸದಾ ।
ಅತ್ರಾಷ್ಟಮಾತ್ರಮಪಿ ಚೇಚ್ಛೃಣುಯಾತ್ಫಲಮಾಪ್ನುಯಾತ್ ।'

ಅಷ್ಟಮಾತ್ರೆಗಳ ವಿಷಯಗಳನ್ನು ಕೇಳಿ ತಿಳಿದುಕೊಂಡು ಪುಣ್ಯಭಾಜನ

ರಾಗಬಹುದು ಎಂಬ ಮಾತಿನಿಂದಲೇ ಅದನ್ನು ಉಪಾಸನೆ ಮಾಡುವುದು ಎಲ್ಲರಿಗೂ ಅಸಾಧ್ಯ ಎಂದು ಸಿದ್ಧವಾಗುವುದು. ಇಲ್ಲದಿದ್ದರೆ ಕೇಳಿ ತಿಳಿದು ಕೊಳ್ಳಬಹುದು ಎಂದಿಷ್ಟೇ ಏಕೆ ಬರೆಯಬೇಕಿತ್ತು? ಉಪಾಸನೆಯ ವಿಧಿಗಳನ್ನೂ ಬರೆಯಬಹುದಿತ್ತಲ್ಲ. ಆದರೆ ಈ ಅಷ್ಟಮಾತ್ರೆಗಳು ಯಾವುವು ಎಂಬುದನ್ನು ವಾಯುಪ್ರೋಕ್ತವೂ ಸ್ಫುಟಗೊಳಿಸಿಲ್ಲ. ತನ್ನ ಅಷ್ಟಾಕ್ಷರಗಳಿಂದ ಶಬ್ದಪ್ರಪಂಚವನ್ನೆಲ್ಲ ವ್ಯಾಪಿಸಿ ನಿಂದಿರುವ ಓಂಕಾರದ ವಿಶ್ವರೂಪವನ್ನು ಚಿತ್ರಿಸಿದ ಒಂದು ಶ್ಲೋಕವನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬಹುದು–

'ಅಷ್ಟಾಕ್ಷರಾಂ ಷೋಡಶಪಾಣಿಪಾದಾಂ
ಚತುರ್ಮುಖೀಂ ತ್ರಿಶಿಖಾಮೇಕಶೃಂಗೀಮ್ ।
ಆದ್ಯಾಮಜಾಂ ವಿಶ್ವಸೃಜಾಂ ಸ್ವರೂಪಾಂ
ಜ್ಞಾತ್ವಾ ಬುಧಾಸ್ತ್ವಮೃತತ್ವಂ ವ್ರಜಂತಿ ॥' (ವಾಯುಪ್ರೋಕ್ತ)

ಮೂಲತಃ ೮ ಅಕ್ಷರಗಳನ್ನುಳ್ಳ ಓಂಕಾರವು ತನ್ನ ವಿಕಾರಗಳಾದ ೧೬ ಸ್ವರಗಳನ್ನು ವಕ್ತ್ರೀಕರಿಸಿ ಅವುಗಳನ್ನೆಲ್ಲ ವ್ಯಾಪಿಸಿ ನಿಂತಿತು. ಸ್ವರಗಳಿಂದ ವ್ಯಂಜನಗಳಾಗಿ ಕೊನೆಗೆ ಚತುರ್ವೇದಗಳನ್ನೂ ವ್ಯಾಪಿಸಿಕೊಂಡಿತು. ಓಂಕಾರದ ಉದ್ಗಾರವನ್ನೇ ಚತುರ್ವೇದಗಳು ಸಾರುತ್ತಿವೆ ಎಂತಲೇ– ಈ ನಾಲ್ಕು ವೇದಗಳು ಓಂಕಾರದ ನಾಲ್ಕು ಮುಖಗಳು. ಇಷ್ಟೆಲ್ಲ ವಿಶ್ವರೂಪವಾಗಿ ಹಬ್ಬಿರುವ ಈ ಓಂಕಾರಕ್ಕೆ ಮೂಲಭೂತವಾದ ಅಕ್ಷರಗಳು ಕೇವಲ ಮೂರು; ಅವೇ ಅಕಾರ ಉಕಾರ ಮತ್ತು ಮಕಾರ. ಹೆಚ್ಚೇಕೆ– ಈ ಮೂರು ಅಕ್ಷರಗಳನ್ನೂ ಶೋಧಿಸಿದಾಗ ಕೊನೆಯದಾಗಿ ಎಲ್ಲಕ್ಕೂ ಶೃಂಗದಂತೆ ತುತ್ತತುದಿಯಲ್ಲಿ ಸರ್ವಮೂಲವಾಗಿ ನಿಲ್ಲುವ ಅಕ್ಷರ ಒಂದೇ ಒಂದು; ಅದುವೆ ಅಕಾರ. ಹೀಗೆ ಅಕ್ಷರಗಳಲ್ಲಿ 'ಅಣೋರಣೀಯಾನ್' ಆಗಿದ್ದೂ ಅರ್ಥವ್ಯಾಪ್ತಿಯಲ್ಲಿ 'ಮಹತೋ ಮಹೀಯಾನ್' ಎನ್ನಿಸಿಕೊಂಡ ಈ ಓಂಕಾರವೇ ಸೃಷ್ಟಿಯ ಆದಿಕಾಲದಲ್ಲಿ ಬ್ರಹ್ಮನ ಮುಖದಿಂದ ಮೊದಲು ಹೊರಹೊಮ್ಮಿತು. ಆದರೂ ಅದು ಅನಾದಿನಿತ್ಯವಾಗಿದೆ. ಅದರಿಂದಲೆ ಜಗತ್ತಿನ ವ್ಯಾಪಾರವೆಲ್ಲ ನಡೆಯುತ್ತಿದೆ. ಅದು ಪರಮಾತ್ಮನ ಮುಖ್ಯನಾಮಧೇಯವಾಗಿದೆ. ಅದನ್ನು ಅರಿತವರು ಮೋಕ್ಷಮಾರ್ಗವನ್ನು ಸಂಪಾದಿಸಿಕೊಂಡಂತೆಯೆ. ಇದು ವಾಯುಪ್ರೋಕ್ತ ನಮಗೆ ಕೊಡುವ ವಿವರಣೆ. ಇಷ್ಟು ವಿವರಣೆಗಳನ್ನು ಮನನ ಮಾಡಿಯೂ ನಮಗೆ ಅಷ್ಟಾಕ್ಷರಗಳಾವುವು ಎಂದು ಸ್ಫುಟವಾಗಿಲ್ಲ.

ಬೃಹದಾರಣ್ಯಕಭಾಷ್ಯದ ವ್ಯಾಖ್ಯೆ ಭಾವಬೋಧದಲ್ಲೊಮ್ಮೆ ಈ ಅಷ್ಟಾಕ್ಷರದ ನಿರ್ದೇಶ ಬಂದಿದೆ—

**'ಪ್ರಣವ ಅಕಾರೋಕಾರಮಕಾರನಾದಬಿಂದುಕಲಾಶಾಂತಾತಿಶಾಂತರೂಪಾ-ಷ್ಟಾಕ್ಷರಾತ್ಮಕಃ।'**

ರಾಘವೇಂದ್ರಸ್ವಾಮಿಗಳು ಬರೆದ ಖಂಡಾರ್ಥದಲ್ಲಿ– 'ಕಲಾ' ಎಂಬುದರ ಬದಲು 'ಘೋಷ' ಎಂದು ಪದಾಂತರವಿದೆ—

**'ಪ್ರಣವಸ್ಯಾಕಾರೋಕಾರಮಕಾರನಾದಬಿಂದುಘೋಷಶಾಂತಾತಿಶಾಂತಭೇ-ದೇನಾಷ್ಟಾಕ್ಷರತ್ವಾತ್।'**

ಆದರೆ ಪ್ರಕೃತದಲ್ಲಿ ಬೇರೆ ತಂತ್ರಗಳ ಮತ್ತು ತಾರಸಾರೋಪನಿಷತ್ತಿನ ಸಂವಾದದಿಂದ 'ಕಲಾ' ಎಂಬ ಪಾಠವನ್ನೆ ಬಳಸಿಕೊಂಡಿದ್ದೇನೆ. ಕೊನೆಯ ಎರಡಕ್ಷರಗಳ ಹೆಸರಿನಲ್ಲಿ ಮಾತ್ರ ಆಚಾರ್ಯರ ವಚನಕ್ಕೂ ಉಪನಿಷತ್ತಿಗೂ ಸ್ವಲ್ಪ ವ್ಯತ್ಯಾಸವಿದೆ. ಉಪನಿಷತ್ತಿನ ಪ್ರಕಾರ ಏಳು ಮತ್ತು ಎಂಟನೆಯ ಅಕ್ಷರಗಳು ಶಾಂತಾತಿಶಾಂತಗಳಲ್ಲ–ಕಲಾತೀತ ತತ್ಪರಗಳು. ಈ ನಾಮ ಭೇದವನ್ನುಳಿದರೆ ಇನ್ನೆಲ್ಲವೂ ಸಂವಾದಿಯಾಗಿಯೇ ಇದೆ—

**'ಓಮಿತ್ಯೇತದಕ್ಷರಂ ಪರಂ ಬ್ರಹ್ಮ। ತದೇವೋಪಾಸಿತವ್ಯಮ್। ಏತದೇವ ಸೂಕ್ಷ್ಮಾಷ್ಟಾಕ್ಷರಂ ಭವತಿ। ತದೇತದಷ್ಟಾತ್ಮಕೋಽಷ್ಟಧಾ ಭವತಿ। ಅಕಾರಃ ಪ್ರಥಮಾಕ್ಷರೋ ಭವತಿ। ಉಕಾರೋ ದ್ವಿತೀಯಾಕ್ಷರೋ ಭವತಿ। ಮಕಾರ ಸ್ತೃತೀಯಾಕ್ಷರೋ ಭವತಿ। ಬಿಂದುಸ್ತುರೀಯಾಕ್ಷರೋ ಭವತಿ। ನಾದಃ ಪಂಚ-ಮಾಕ್ಷರೋ ಭವತಿ। ಕಲಾ ಷಷ್ಠಾಕ್ಷರೋ ಭವತಿ। ಕಲಾತೀತಾ ಸಪ್ತಮಾಕ್ಷರೋ ಭವತಿ। ತತ್ಪರಶ್ಚಾಷ್ಟಮಾಕ್ಷರೋ ಭವತಿ। ತಾರಕತ್ವಾತ್ತಾರಕೋ ಭವತಿ। ತದೇವ ತಾರಕಂ ಬ್ರಹ್ಮ ತ್ವಂ ವಿದ್ಧಿ। ತದೇವೋಪಾಸಿತವ್ಯಮ್।'**

(ತಾರಸಾರೋಪನಿಷತ್)

ಇಲ್ಲಿ ಗಮನಿಸಬೇಕಾದ ಅಂಶವೊಂದಿದೆ. ಉಪನಿಷತ್ತಿನಲ್ಲಿ ಬಿಂದುವಿನ ನಂತರ ನಾದ ಎಂದಿದೆ. ಶಂಕರಾಚಾರ್ಯರ ಪ್ರಪಂಚಸಾರದಲ್ಲಿಯೂ ಬಿಂದುವಿನ ನಂತರವೇ ನಾದವನ್ನು ನಿರ್ದೇಶಿಸಿದ್ದಾರೆ. ತಂತ್ರಶಾಸ್ತ್ರದ ಪ್ರಕ್ರಿಯೆಯ ಪ್ರಕಾರವೂ 'ಬಿಂದು' ಎನ್ನುವುದು ನಾದಜನ್ಯವಾದ ಸ್ಥೂಲ ಸ್ವರವಾದುದರಿಂದ ನಾದದ ಮೊದಲು ನಿರ್ದೇಶಿಸುವುದೇ ಉಚಿತವಾಗಿದೆ. ಆದರೆ ಮೇಲೆ ಉದಾಹರಿಸಿದ ಖಂಡಾರ್ಥ ಮತ್ತು ಭಾವಬೋಧಗಳಲ್ಲಿ ವ್ಯತ್ಯಾಸವಾಗಿ ನಿರ್ದೇಶವಿದೆ. ಆಚಾರ್ಯರು ಎಲ್ಲೂ ಅಕ್ಷರಗಳ ಆನುಪೂರ್ವಿ ಯನ್ನು ಸ್ಪಷ್ಟವಾಗಿ ಬರೆದಿಲ್ಲ. ಎಂದಮೇಲೆ ಈ ವ್ಯತ್ಯಾಸದ ಕಾರಣವನ್ನು ಕಂಡುಹುಡುಕುವುದು ಹೇಗೆ?

ಈ ಪ್ರಶ್ನೆಯನ್ನು ಉತ್ತರಿಸುವ ಮೊದಲು ನಾದಬಿಂದುಕಲೆಗಳೆಂದರೇನು ಎಂಬುದನ್ನು ತಿಳಿದುಕೊಳ್ಳಬೇಕು. ಕೆಲವು ತಂತ್ರಗಳಂತೆ- ಕಲೆ ಎಂಬುದು ಭಗವಚ್ಛಕ್ತಿ. ಶಕ್ತಿಗೂ ಭಗವಂತನಿಗೂ ಸಂಬಂಧವಾದಾಗ ಅವ್ಯಕ್ತವಾದ ನಾದವು ನಿಷ್ಪನ್ನವಾಗುತ್ತದೆ. ಅದರಿಂದ ವ್ಯಕ್ತಪ್ರಾಯವಾದ ಬಿಂದು ನಿಷ್ಪನ್ನವಾಗುತ್ತದೆ. ಇದು ಭಗವಚ್ಛಕ್ತಿಯ ಒಂದು ವ್ಯಕ್ತರೂಪ. ಈ ವಿಷಯದಲ್ಲಿ ಕೆಳಗಿನ ಪ್ರಮಾಣಗಳನ್ನು ಉದಾಹರಿಸಬಹುದು—

'ಸಾ ತತ್ತ್ವಸಂಜ್ಞಾ ಚಿನ್ಮಾತ್ರಜ್ಯೋತಿಷಃ ಸನ್ನಿಧೇಸ್ತದಾ ।
ವಿಚಿಕೀರ್ಷುರ್ಘನೀಭೂತಾ ಕ್ವಚಿದಭ್ಯೇತಿ ಬಿಂದುತಾಮ್' ॥ (ಪ್ರಪಂಚಸಾರ)
'ಸಚ್ಚಿದಾನಂದವಿಭವಾತ್ಸಕಲಾತ್ಪರಮೇಶ್ವರಾತ್ ।
ಆಸೀಚ್ಛಕ್ತಿಸ್ತತೋ ನಾದೋ ನಾದಾದ್ಬಿಂದುಸಮುದ್ಭವಃ ॥' (ಶಾರದಾ.)
ಶಿವೇಚ್ಛಯಾ ಪರಾ ಶಕ್ತಿಃ ಶಿವತತ್ತ್ವೈಕತಾಂ ಗತಾ ।
ತತಃ ಪರಿಸ್ಫುರತ್ಯಾದೌ ಸರ್ಗೇ ತೈಲಂ ತಿಲಾದಿವ ॥' (ವಾಯವೀಯಸಂ.)
'ಸಮಸ್ತತತ್ತ್ವಸಂಘಾತ್ಮಸ್ಫೂರ್ತ್ಯಧಿಷ್ಠಾನರೂಪಿಣೀಮ್ ।
ವ್ಯಕ್ತಾಂ ಕರೋತಿ ನಿತ್ಯಾಂ ತಾಂ ಪ್ರಕೃತಿಂ ಪರಮಃ ಪುಮಾನ್ ॥'(ಪಂಚರಾ.)

ಈ ಪದ್ಧತಿಯ ಆಧಾರದಿಂದ ಶಂಕರಾಚಾರ್ಯರು ಶಕ್ತಿ-ಬಿಂದು-ನಾದ ಎಂಬ ಆನುಪೂರ್ವಿಯನ್ನು ಉಲ್ಲೇಖಿಸಿದ್ದಾರೆ. ಉಪನಿಷತ್ತಿನ ಆನುಪೂರ್ವಿಯೂ ಇದಕ್ಕೆ ಸಂವಾದಿಯಾಗಿದೆ. ಆದರೆ ಬಿಂದು ನಾದದಿಂದ ಹುಟ್ಟುವುದೂ ನಾದಕ್ಕೆ ಕಾರಣವಾಗುವುದೂ ನಿಜ. ಭಗವಚ್ಛಕ್ತಿಯೋಗದಿಂದ ಉತ್ಪನ್ನವಾದ ಬಿಂದುವಿನಿಂದ ಪುನಃ ಮೊದಲಿನ ನಾದದಿಂದ ಭಿನ್ನವಾದ ನಾದವೂ, ಬೀಜಬಿಂದುಗಳೂ ಹುಟ್ಟುವವು. ಈ ನಾದವನ್ನೇ 'ಅವ್ಯಕ್ತರವ' ಎಂದೂ ಕರೆವರು.

'ಬಿಂದುರ್ನಾದೋ ಬೀಜಮಿತಿ ತಸ್ಯ ಭೇದಾಃ ಸಮೀರಿತಾಃ ।
'ಭಿದ್ಯಮಾನಾತ್ಪರಾದ್ಬಿಂದೋರವ್ಯಕ್ತಾತ್ಮಾ ರವೋಽಭವತ್ ॥' (ಶಾರದಾ.)
'ಶಕ್ತ್ಯವಸ್ಥಾರೂಪೋ ಯಃ ಪ್ರಥಮೋ ಬಿಂದುಸ್ತಸ್ಮಾದವ್ಯಕ್ತಾತ್ಮಾ ವರ್ಣಾದಿ-ವಿಶೇಷರಹಿತೋಽಖಂಡೋ ನಾದಮಾತ್ರ ಉತ್ಪನ್ನಃ ।' (ಪದಾರ್ಥಾ.)
'ಬಿಂದುಃ ಶಿವಾತ್ಮಕಸ್ತತ್ರ ಬೀಜಂ ಶಕ್ತ್ಯಾತ್ಮಕಂ ಸ್ಮೃತಮ್ ।
ತಯೋರ್ಯೋಗೇ ಭವೇನ್ನಾದಸ್ತೇಭ್ಯೋ ಜಾತಾಸ್ತ್ರಿಶಕ್ತಯಃ ॥
'ಸೋಽಂತರಾತ್ಮಾ ತದಾ ದೇವಿ ನಾದಾತ್ಮಾ ನದತೇ ಸ್ವಯಮ್ ।
ಯಥಾಸಂಸ್ಥಾನಭೇದೇನ ಸ ಭೂಯೋ ವರ್ಣತಾಂ ಗತಃ ।
ವಾಯುನಾ ಪ್ರೇರ್ಯಮಾಣೋಽಸೌ ಪಿಂಡಾದ್ವ್ಯಕ್ತಿಂ ಪ್ರಯಾಸ್ಯತಿ ॥'
(ಪ್ರಯೋಗಸಾರ)

'ಬಿಂದೋಸ್ತಸ್ಮಾದ್ಭಿದ್ಯಮಾನಾದ್ರವೋಽವ್ಯಕ್ತಾತ್ಮಕೋಽಭವತ್ ।' (ಪ್ರಪಂಚ.)

ಈ ಪಕ್ಷದಂತೆ– ಬಿಂದುವಿನಿಂದ ಉತ್ಪನ್ನವಾದ ನಾದವನ್ನೆ ಓಂಕಾರದ ಅಂಗವೆಂದು ಇಟ್ಟುಕೊಂಡರೆ ನಾದಬಿಂದುಕಲಾ ಎಂಬ ನಿರ್ದೇಶವೂ ಸರಿ ಕೂಡುವುದು. ಅದರಿಂದ ತಂತ್ರಗ್ರಂಥದಲ್ಲಿ ನಾದಬಿಂದುಕಲಾ ಎಂಬುದಾಗಿ ನಿರ್ದೇಶ ಕಂಡುಬರುತ್ತದೆ—

'ನಾದಬಿಂದುಕಲಾಭ್ಯಾಸಾಜ್ಜ್ಯೋತಿರುತ್ಪದ್ಯತೇ ಪುನಃ ।
ತತ್ಪ್ರಾಪ್ತೌ ಚ ಮನುಷ್ಯಾಣಾಂ ಜಾಯತೇ ಪರಮಂ ಪದಮ್ ॥'
(ಚಿಂತಾಮಣಿಕಲ್ಪ)

ಇಷ್ಟು ವಿವರಣೆಗಳಿಂದ ನಾದಬಿಂದುಕಲೆಗಳೆಂದರೇನು ಎಂಬುದರ ಕುರಿತು ಸ್ವಲ್ಪಮಟ್ಟಿಗೆ ಅರಿವಾದರೂ ಶಾಂತಾತಿಶಾಂತಗಳೆಂದರೇನು ಎಂಬುದು ಇನ್ನೂ ಸಮಸ್ಯೆಯೇ ಆಗಿ ಉಳಿದಿದೆ. ಅವುಗಳೂ ಕೂಡ ಉಚ್ಚಾರಕಾಲದ ದೇಹದೊಳಗಿನ ಸೂಕ್ಷ್ಮಾವಸ್ಥಾವಿಶೇಷಗಳಾಗಿರಬಹು ದೇನೋ! ಅಂತೂ ಈ ವಿಷಯದಲ್ಲಿ ನಮ್ಮ ಪ್ರಾಚೀನರು ಮೌನದ ಉತ್ತರ ವನ್ನಷ್ಟೆ ಇತ್ತಿದ್ದಾರೆ.

ಒಟ್ಟಿನಲ್ಲಿ ಇಷ್ಟನ್ನು ನಾವು ನಿರ್ಧರಿಸಿಕೊಳ್ಳಬಹುದು: ಓಂಕಾರದ ಮೂರು ಅಕ್ಷರಗಳನ್ನುಳಿದರೆ ಉಳಿದ ಐದು ಅಕ್ಷರಗಳು– 'ಮನಃ ಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್' ಎಂದು ಶಿಕ್ಷಾಶಾಸ್ತ್ರದಲ್ಲಿ ನುಡಿದಂತೆ ದೇಹ ದೊಳಗೆ ಸಂಭವಿಸತಕ್ಕ ಸೂಕ್ಷ್ಮವಾದ ಶಬ್ದವ್ಯಾಪಾರಗಳು, ಧ್ವನಿವಿಶೇಷಗಳು. ಅವುಗಳನ್ನು ನಾವು ಯೋಗಸಾಧನೆಯ ಬಲದಿಂದ ಸಾಧ್ಯವಿದ್ದಷ್ಟುಮಟ್ಟಿಗೆ ಅರಿತುಕೊಳ್ಳಬಹುದು. ಯೋಗದ ಬಲದಿಂದ ದೇಹದೊಳಗಿನ ಶಬ್ದವ್ಯಾಪಾರ ಗಳನ್ನು ಗಮನಿಸಬಹುದು ಎಂದು ಪ್ರಾಯೋಗಿಕವಾಗಿ ಶಾಸ್ತ್ರಗಳು ಉಪ ಪಾದಿಸಿವೆ. ಪ್ರತಿಯೊಂದು ನಾದ-ಸ್ವರಗಳಿಗೂ ಭಗವದ್ವಾಚಕತ್ವ ಇರುವುದ ರಿಂದ ಈ ಸೂಕ್ಷ್ಮಧ್ವನಿಗಳೂ ಭಗವದ್ವಾಚಕಗಳಾಗಿವೆ. ಅದರಿಂದ ಅವನ್ನು ಓಂಕಾರದ ಅಂಗಗಳಾಗಿ ಆಚಾರ್ಯರು ನಿರ್ದೇಶಿಸಿದ್ದಾರೆ. ಓಂಕಾರವು ಅಷ್ಟಾಕ್ಷರವಾಗದಿದ್ದರೆ ಅದರಿಂದ ಅಷ್ಟಾಕ್ಷರಮಂತ್ರವು ನಿಷ್ಪನ್ನವಾಗಲಾರದು; ಅಷ್ಟಾಕ್ಷರಗಳ ಮೂರು ಪಾದಗಳುಳ್ಳ ಗಾಯತ್ರಿಯ ಚತುರ್ಥಪಾದವಾಗ ಲಾರದು ಎಂಬ ವಿಷಯವನ್ನು ಗಮನಿಸಬೇಕು. ಈ ಎಲ್ಲ ಶಾಸ್ತ್ರಪ್ರಮೇಯ ಗಳನ್ನಳವಡಿಸಿಕೊಂಡು ಎಲ್ಲಕ್ಕೂ ಸರಿಬರುವಂತೆ ಆಚಾರ್ಯರು ಇಲ್ಲಿ ಅಷ್ಟಾಕ್ಷರತ್ವವನ್ನು ಉಲ್ಲೇಖಿಸಿದ್ದಾರೆ. ಓಂಕಾರದ ಈ ಎಂಟು ಅಕ್ಷರ

ಗಳನ್ನು ಮೊತ್ತಮೊದಲು ತನ್ನ ಗ್ರಂಥಗಳಲ್ಲಿ ಉಲ್ಲೇಖಿಸಿ ಬೆಳಕಿಗೆ ತಂದ ಕೀರ್ತಿ ಆಚಾರ್ಯರಿಗೇ ಸಲ್ಲಬೇಕು. ಈ ಹಿಂದೆ ವಿವರಿಸಿದಂತೆ ಉಳಿದೆಲ್ಲ ತಂತ್ರಗಳೂ ಓಂಕಾರದ ನಿಷ್ಕೃಷ್ಟಸ್ವರೂಪವನ್ನು ಅಪೂರ್ಣವಾಗಿಯೇ ಕೊಟ್ಟಿವೆ. ಅದನ್ನು ಪೂರ್ಣಗೊಳಿಸುವ ಶಕ್ತಿ ಈ ಪೂರ್ಣಬೋಧರಿಗೆ ಮಾತ್ರವೇ ಮೀಸಲೇನೋ!

ಈ ವಿವರಣೆಯಿಂದ ಇನ್ನೊಂದು ಸಮಸ್ಯೆ ಉಂಟಾಗಬಹುದು: ಅಕ್ಷರಗಳು ಎಂದು ವ್ಯವಹಾರ ಅಕಾರದಿಂದ ಕ್ಷಕಾರದ ವರೆಗಿನ ೫೧ ವರ್ಣಗಳಿಗೆ ಮಾತ್ರವೇ ಹೊರತು ಧ್ವನಿಗಳಿಗಲ್ಲ. ಹೀಗೆ ವ್ಯಕ್ತಧ್ವನಿಗಳಿಗೇನೆ 'ಅಕ್ಷರ' ಎಂಬ ವ್ಯವಹಾರವಿಲ್ಲದಿರುವಾಗ ಈ ಅವ್ಯಧ್ವನಿಗಳಿಗೆಲ್ಲ ಅಕ್ಷರತ್ವವ್ಯವಹಾರ ಹೇಗೆ ಕೂಡುವುದು? ಧ್ವನಿಗಳೂ ಅಕ್ಷರಗಳಾದರೆ ೫೧ ಅಕ್ಷರಗಳು ಎಂಬ ಗಣನೆಗೆ ಗತಿಯೇನು? ಧ್ವನಿಯನ್ನು ಇಷ್ಟೇ ಎಂದು ನಿರ್ಣಯಿಸುವುದು ಅಶಕ್ಯ ಎಂದಮೇಲೆ ಅಕ್ಷರಗಳೂ ಅನಂತಗಳೆಂದೇಆಯಿತಲ್ಲವೆ? ಹೀಗಿದ್ದ ಮೇಲೆ ಈ ವರ್ಣವಿಭಾಗವನ್ನೆಲ್ಲ ಯಾವ ಆಧಾರದ ಮೇಲೆ ಉಪಪಾದಿಸಬೇಕು?

ಈ ಪೂರ್ವಪಕ್ಷಕ್ಕೆ 'ಹೌದು' ಎನ್ನುವುದೇ ಉತ್ತರ. ಅಕ್ಷರಗಳು ಅನಂತಗಳಾಗಿವೆ. ವ್ಯವಹಾರೋಪಯೋಗಿಯಾದ ಅಕ್ಷರಗಳನ್ನಷ್ಟೆ ಪರಿಗಣಿಸಿ ೫೧ ಎಂದು ವಿಭಾಗಿಸಿದ್ದಾರೆ. ಅದರಿಂದಲೇ ಅಕ್ಷರವಿಭಾಗದಲ್ಲಿ ನಿರ್ಣಯವಿಲ್ಲದಿರುವುದು. ಪಾಣಿನಿಯ ಮತದಲ್ಲಿ ಲೃ ದೀರ್ಘಸ್ವರವಿಲ್ಲ. ಳ ಕ್ಷ ಎರಡು ಅಕ್ಷರಗಳಿಲ್ಲ. ತಂತ್ರದ ಗ್ರಂಥಗಳಲ್ಲಿದೆ. ಕಾರಣವಿಷ್ಟೆ: ವ್ಯವಹಾರದಲ್ಲಿ ಆ ಅಕ್ಷರಗಳ ಉಪಯೋಗವಿಲ್ಲ ಅದರಿಂದ ವ್ಯಾವಹಾರಿಕ ವ್ಯಾಕರಣವನ್ನು ಬರೆದ ಪಾಣಿನಿ ಆ ಅಕ್ಷರಗಳನ್ನು ತ್ಯಜಿಸಿದ. ತಂತ್ರಶಾಸ್ತ್ರದಲ್ಲಿ ಅವುಗಳ ಉಪಯೋಗವಿದೆ; ಅವುಗಳನ್ನು ಉಪಯೋಗಿಸಿಕೊಂಡರು. ಅದರಿಂದ ಅಕ್ಷರಸಂಖ್ಯೆಗಳಲ್ಲಿ ೬೩–೬೪ ಎಂಬ ಪಕ್ಷಗಳೂ ಉದಿಸಿಕೊಂಡವು—

'ತಸ್ಮಾತ್ತ್ರಿಷಷ್ಟಿರ್ವರ್ಣಾ ವೈ ಅಕಾರಪ್ರಭವಾಃ ಸ್ಮೃತಾಃ |' (ವಾಯುಪ್ರೋಕ್ತ)

'ತ್ರಿಷಷ್ಟಿಶ್ಚತುಃಷಷ್ಟಿರ್ವಾ ವರ್ಣಾಃ ಶಂಭುಮತೇ ಮತಾಃ |' (ಶಿಕ್ಷಾ)

ಧ್ವನಿಗಳಿಗೂ ಭಗವದ್ವಾಚಕತ್ವ ಇದೆಯೆಂದಮೇಲೆ ಅವುಗಳೂ ಪದಗಳಾಗಿಯೇ ತೀರಬೇಕಲ್ಲ. ಓಂಕಾರದ ಧ್ವನಿಯೇ ಏಕೆ? ಸಮುದ್ರ ಭೋರ್ಗರೆವಾಗ ಶ್ರೀಹರಿಯನ್ನು 'ಉಘೇ ಉಘೇ' ಎಂದು ಹಾಡಿ ಕೊಂಡಾಡುತ್ತಿಲ್ಲವೆ? ವನ್ಯಮೃಗಳು ತಮ್ಮ ಘೋರ ನಿಸ್ವನದಲ್ಲಿ ಭಗವಂತನ ಅದ್ಭುತರೂಪವನ್ನು ನುತಿಸುತ್ತಿಲ್ಲವೆ? ಸುಸ್ವರದಿಂದ ಹಾಡುವ ಪಕ್ಷಿಗಳು ಶಾಂತಾಕಾರನಾದ

ನಾರಾಯಣನನ್ನು ಕೂಗಿ ಕೊಂಡಾಡುತ್ತಿಲ್ಲವೆ? ಹೆಚ್ಚೇನು? ಹಲ್ಲಿ ಲೊಚ ಗುಟ್ಟುತ್ತಿರುವಾಗ ಕೂಡ ಚು, ಚು, ಎಂಥ ಅದ್ಭುತ ವಿದೆ ಈ ಭಗವಂತನ ಲೀಲೆ! ಎಂದು ಬೆರಗಾಗಿ ಕೂಗುತ್ತಿದೆಯಲ್ಲವೆ? ಪರಮಾತ್ಮನನ್ನು ಕೊಂಡಾಡದ ಯಾವ ಧ್ವನಿ ಈ ಬ್ರಹ್ಮಾಂಡದಲ್ಲಿದೆ? ಸ್ವರಗಳಿಗೆ ತಾಯಿಬೇರಾದ ಓಂಕಾರದ ಸ್ವರಕ್ಕೇನು ಇದು ಅಪವಾದವೆ? ಆಚಾರ್ಯರೇ 'ಕರ್ಮನಿರ್ಣಯ'ದಲ್ಲಿ ಈ ವಿಷಯವನ್ನು ಸ್ಫುಟಗೊಳಿಸಿದ್ದಾರೆ—

'ಗರ್ಗರಗೋಧಾಪಿಂಗಾದೀನಾಂ ಘೋಷಾ ಅಪಿ ನಾದಮಾತ್ರವ್ಯಂಜಕತ್ವೇನ ಭಗವದ್ವಾಚಕಾ ಏವೇತ್ಯಾಹ । 'ಅವಸ್ವರಾತೀ'ತ್ಯಾದಿನಾ । ಏತತ್ಸಮಸ್ತಮಿಂದ್ರಾಯೈವೇತ್ಯರ್ಥಃ । ಬ್ರಹ್ಮ ವೇದೋ ವಿಶೇಷತ ಇಂದ್ರಾಯೈವೋದ್ಯತಃ । ಗರ್ಗರ ಇತಿ ಪಾದಭೂಷಣಮಹಾಮತ್ರಕದಧಿಪಾತ್ರಹಸ್ತಿಹಸ್ತಾನಾಂ ನಾಮ । ಪಿಂಗಾ ಚಕೋರೀ । ಅವಪರೀತ್ಯಲ್ಪಾಧಿಕ್ಯಾದಿವಿಶೇಷೋಽಪಿ ತದ್ವಾಚಕ ಏವೇತಿ ಜ್ಞಾಪನಾಯ । ಚನಿಷ.ದದಿತ್ಯನುಕಾರಶಬ್ದಃ । ಸನಿಷ್ಯಣದಿತ್ಯತಿಶಯಾರ್ಥೇ । 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವೇ'ತಿ ಚ ಶ್ರುತಿಃ ।

'ದಧ್ನೋ ಮಥನಶಬ್ದಶ್ಚಾಪ್ಯಂತರ್ನಾದಸ್ವರೂಪತಃ ।
ಭೀಷಕತ್ವಂ ಹರೇರ್ಬ್ರೂಯಾದಂತರ್ನಾದೋ ಹಿ ಭೀಷಣೇ ॥
ಗಜಬೃಂಹಿತಮಪ್ಯೇವಂ ಧಿಕ್ಕಾರಸಹಿತಂ ವದೇತ್ ।
ಸ್ವರಿತೇನ ಸಮಾಯೋಗಾದ್ಧಿಕ್ಕೃತೌ ಸ್ವರಿತೋ ಯತಃ ॥
ಮಹಾಮತ್ರಂ ಜಲಾದ್ಯೈಶ್ಚ ಯುಕ್ತಮೇತಾದೃಶಂ ವದೇತ್ ।
ಪಾದಭೂಷಾ ಚ ಧಿಕ್ಕಾರಂ ತತ್ಕೃತಂ ಸ್ವರಿತಂ ವದೇತ್ ॥
ಅದ್ಭುತತ್ವಂ ಹರೇರ್ವಕ್ತಿ ಪಿಂಗಾ ಕಂಠಗಶಬ್ದವತ್ ।
ತಮೇವಾದ್ಭುತತಾಂ ವಕ್ತಿ ಗೃಹಗೋಧಾಽಪರಾಽಪಿಚೇ'ತಿ ಶಬ್ದತತ್ವೇ ।'

ನಾವು ವ್ಯವಹಾರದಲ್ಲಿ ಇಂದಿಗೂ ಏನಾದರೂ ಅದ್ಭುತವನ್ನು ಕಂಡರೆ 'ಚು, ಚು, ಏನಾಶ್ಚರ್ಯ!' ಎಂಬ ಉದ್ಗಾರವನ್ನೆಳೆಯುವುತ್ತೇವೆ. ಅಚ್ಚರಿಯಾದಾಗ ನಾವು ಉಚ್ಚರಿಸುವ ಈ 'ಚು'ಕಾರವನ್ನು ಹಲ್ಲಿ ನಮಗೆ ಕಲಿಸಿಕೊಟ್ಟಿತು ಎಂದು ಕೇಳಿದಾಗ ಸ್ವಲ್ಪ ಆಶ್ಚರ್ಯವಾಗುವುದಿಲ್ಲವೆ? ಮನುಷ್ಯ ತನಗೆ ಗೊತ್ತಿಲ್ಲದೆಯೇ ಇಂಥದೇ ಎಷ್ಟೋ ವ್ಯವಹಾರಗಳನ್ನು ರೂಢಿಸಿಕೊಂಡಿದ್ದಾನೆ. ತಾನು ರೂಢಿಸಿಕೊಂಡ ವ್ಯವಹಾರದ ಹಿನ್ನೆಲೆ ಇಂಥದು ಎಂದು ಬೊಟ್ಟಿಟ್ಟು ತೋರಿಸಲು ಆಚಾರ್ಯರಂಥ ಮಹಾಪುರುಷರೇ ಬರಬೇಕು. ಇಂಥ ಉದಾತ್ತ ಭಾವನೆಯನ್ನು ತಾಳುವುದು ಸಾಮಾನ್ಯವರ್ಗದ ಜನಕ್ಕೆ ಸಾಧ್ಯವೂ ಅಲ್ಲ. ಹಲ್ಲಿ ಲೊಚಗುಟ್ಟಿದಾಗೆಲ್ಲ ಪಂಚಾಂಗದಲ್ಲಿ ಫಲವನ್ನರಸುವ

ಜನ—ಅದು 'ಪರಮಾತ್ಮನ ಗುಣಗಳು ಅದ್ಭುತಗಳಾಗಿವೆ' ಎಂದು ಸಾರುತ್ತಿದೆ ಎಂಬ ಪುಣ್ಯತಮ ಅನುಸಂಧಾನವನ್ನಾದರೂ ಮನಸ್ಸಿನಲ್ಲಿ ಬೇರೂರಿಸಿ ಕೊಂಡರೆ ಕ್ಷೇಮ.

ಈ ತೆರನಾಗಿ ವಿಚಾರಮಾಡಿದಷ್ಟೆಲ್ಲ ಶಬ್ದಬ್ರಹ್ಮ ಗೂಢವಾಗುತ್ತಿದೆ. ಅದ ರಿಂದಲೆ ಶಂಕರಾಚಾರ್ಯರು ಅಂದುದು—

'ಸ ರವಃ ಶ್ರುತಿಸಂಪನ್ನೈಃ ಶಬ್ದಬ್ರಹ್ಮೇತಿ ಕಥ್ಯತೇ |' ಎಂದು.

ಹೀಗೆ ವ್ಯಾಪ್ತಸ್ವರೂಪಗಳನ್ನುಳ್ಳ ಶಬ್ದಬ್ರಹ್ಮವನ್ನು ಇನ್ನೂ ಶೋಧಿಸ ಬೇಕು, ಮಥಿಸಬೇಕು. ಆಗ ಇನ್ನಷ್ಟು ಸುಸ್ವಾದುವಾದ ನವನೀತ ಉದ್ಭವಿಸ ಲಿದೆ. ಕಡೆದು ಬಂದ ನವನೀತವನ್ನು ಹುಳಿಸಿ ಕೆಡಿಸುವಷ್ಟು ದೌರ್ಜನ್ಯವನ್ನು ಮಾತ್ರ ಜನ ವಹಿಸಬಾರದು. ಆಗ ಶಬ್ದಬ್ರಹ್ಮ ಕೊಂಚವಾದರೂ ತನ್ನ ಮೊಗವಾಡವನ್ನು ಸರಿಸೀತೇನೊ!

---

## ಚತುರ್ವಿಂಶತಿಮೂರ್ತಿಗಳು

ಶ್ರೀಹರಿಯ ಆಯುಧಗಳಾದ ಚಕ್ರಶಂಖಗದಾಪದ್ಮಗಳನ್ನು ಎಷ್ಟು ತೆರ ನಾಗಿ ಧರಿಸಬಹುದೋ ಅಷ್ಟು ತೆರನಾದ ಶ್ರೀಹರಿಯ ರೂಪಗಳನ್ನು ಧ್ಯಾನ ಮಾಡುವ ವಿಧಾನ ಒಂದು ತೆರನಾದ ಗಣಿತ ಪ್ರೇಮವನ್ನೂ ಸೂಚಿಸುತ್ತದೆ. ಈ ನಾಲ್ಕು ಆಯುಧಗಳನ್ನು ನಾಲ್ಕು ಕೈಗಳಲ್ಲಿ ಎಷ್ಟು ತೆರನಾಗಿ ತಿರುಗಿಸಿ ಹಿಡಿದರೂ ೨೪ ಬಗೆಗಳಲ್ಲಿ ಸೇರದ ಇನ್ನೊಂದು ಬಗೆಯಿರಲಾರದು. (೪ × ೩ × ೨ = ೨೪) ಅದರಿಂದಲೇ ಭಾಸ್ಕರಾಚಾರ್ಯರು ತನ್ನ ಲೀಲಾವತಿಯಲ್ಲಿ 'ನಾಲ್ಕು ಆಯುಧಗಳನ್ನು ಹರಿಯು ತನ್ನ ನಾಲ್ಕು ಕೈಗಳಲ್ಲಿ ಎಷ್ಟು ತೆರ ನಾಗಿ ಹಿಡಿದುಕೊಳ್ಳಬಹುದು' ಎಂದೊಂದು ಪ್ರಶ್ನೆಯನ್ನೆ ಹಾಕಿದ್ದಾರೆ! ಇದು ಗಣಿತದ ವಿಧಾನದಿಂದ ನಮ್ಮವರು ಭಗವದ್ರೂಪದಲ್ಲಿ ಕಂಡುಕೊಂಡ ವಿಶೇಷ.

ಈ ೨೪ ವಿಧದ ಆಯುಧಧಾರಣೆಗಳಲ್ಲಿ ಒಂದೊಂದಕ್ಕೂ ಒಂದು ನಿಯತಿ ಯಿದೆ. ಈ ರೀತಿ ಧರಿಸಿದರೆ ಆ ಮೂರ್ತಿಯ ಹೆಸರು ಹೀಗೆ ಎಂದು. ನಮಗೆ ಚೆನ್ನು ಎನ್ನಿಸಿದ ಮೂರ್ತಿಗಳಿಗೆ ತೋಚಿದ ಆಯುಧಗಳನ್ನೆಲ್ಲ ತೊಡಿ ಸುವಂತಿಲ್ಲ. ಈ ಆಯುಧವ್ಯವಸ್ಥೆಯಲ್ಲಿಯೇ ಶಾಸ್ತ್ರಗಳ ಸಹಕಾರ ಇರು ವುದು. ವ್ಯಾಸರ ಪುರಾಣೋಕ್ತಿಗಳಿಂದಲ್ಲದೆ ಗಣಿತಶಾಸ್ತ್ರದಿಂದ ನಾವು ಮೂರ್ತಿಸ್ವರೂಪವನ್ನು ನಿರ್ಣಯಿಸಬರುವಂತಿಲ್ಲ. ಆದರೆ ಈ ವಿಷಯದಲ್ಲಿ ಹೆಚ್ಚಿನ ಮಂದಿ ಗಲಿಬಿಲಿಗೀಡಾಗುತ್ತಾರೆ. ಕಾರಣವಿಷ್ಟೆ: ವ್ಯಾಸರು ಎಲ್ಲೂ

ಒಂದೆಡೆ ಬರೆದಂತೆ ಇನ್ನೊಂದೆಡೆ ಬರೆಯುವವರಲ್ಲ. ಸಮಾಧಿಭಾಷೆಯನ್ನೋ, ದರ್ಶನಭಾಷೆಯನ್ನೋ ಬಳಸಿಕೊಂಡು ಎಲ್ಲಾದರೂ ಮುಂದುಹಿಂದು ಮಾಡಿಯೇ ಬರೆಯುವವರು ಅವರು; ಇಲ್ಲ, ಹೇಳುವ ಶೈಲಿಯನ್ನಾದರೂ ಬದಲಿಸಿ ತೊಡಕನ್ನು ತಂದೀಯುವರು. ಎಲ್ಲೆಡೆಯಲ್ಲೂ ಒಂದೇ ತೆರನಾಗಿ ಬರೆದಿಟ್ಟರೆ ಜಗತ್ತು ಸಾತ್ವಿಕಪ್ರಕೃತಿಗಳಿಂದ ತುಂಬಿಬಿಡುತ್ತಿತ್ತೇನೊ! ಅದೂ ಅಲ್ಲದೆ ಓದುವವನ ಬುದ್ಧಿವ್ಯಾಪಾರಕ್ಕೂ ಸ್ವಲ್ಪ ಎಡೆಯೀಯಬೇಕಲ್ಲ. ಹಾಯಾಗಿ ಕಾದಂಬರಿಗಳನ್ನು ಓದಿದಂತೆ ಪುರಾಣಗಳನ್ನು ಓದುವುದಲ್ಲ ಎನ್ನುವುದನ್ನು ವ್ಯಾಸರು ಚೆನ್ನಾಗಿ ತೋರಿಸಿಕೊಟ್ಟಿದ್ದಾರೆ. ಸದ್ಯ ಚತುರ್ವಿಂಶತಿ ಮೂರ್ತಿಗಳ ವಿಷಯದಲ್ಲೂ ಹೀಗೆ ಭ್ರಮಿಸಿಕೊಳ್ಳುವ ಪ್ರಸಂಗವಿದೆ. ಅದಕ್ಕೆಂದೇ ಆಚಾರ್ಯರು ತನ್ನ ಗ್ರಂಥದಲ್ಲಿ ಚತುರ್ವಿಂಶತಿಮೂರ್ತಿಗಳ ಲಕ್ಷಣವನ್ನು ಸ್ಫುಟವಾಗಿಯೇ ಉಲ್ಲೇಖಿಸಿದ್ದಾರೆ ಎನ್ನಬಹುದೇನೊ!

ಪುರಾಣವಾಕ್ಯಗಳನ್ನು ಹೇಗೆ ತಪ್ಪಾಗಿ ತಿಳಿದುಕೊಳ್ಳುತ್ತಾರೆ ಎನ್ನುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನೀಯಬಹುದು: ವಾಚಸ್ಪತಿಮಿಶ್ರರು ಸಂಸ್ಕೃತಸಾಹಿತ್ಯದಲ್ಲಿಯೆ ಅಪೂರ್ವವಾದ ವಾಚಸ್ಪತ್ಯಕೋಶವನ್ನು ಬರೆದು ಪ್ರಖ್ಯಾತರಾದ ಮಹಾವಿದ್ವಾಂಸರು. ಜ್ಯೋತಿಷ, ನ್ಯಾಯ, ವೇದಾಂತ, ವ್ಯಾಕರಣ, ಮೀಮಾಂಸಾ– ಹೀಗೆ ಎಲ್ಲ ವಿಭಾಗಗಳಲ್ಲೂ ತಾನು ಪರಿಣತನೆಂದು ತನ್ನ ಕೋಶದಲ್ಲೇ ತೋರಿಸಿಕೊಟ್ಟ ವಿಚಕ್ಷಣರು. ಅವರು ಚತುರ್ವಿಂಶತಿಮೂರ್ತಿಗಳ ಲಕ್ಷಣವನ್ನು ಹೇಗೆ ಬರೆದಿದ್ದಾರೆ ಗೊತ್ತೆ? ಅವರ ಲಕ್ಷಣದ ಪ್ರಕಾರ– ಕೇಶವನು ಶಂಖಚಕ್ರಗದಾಪದ್ಮಗಳನ್ನು ಧರಿಸಿಕೊಂಡದ್ದಲ್ಲ, ಪದ್ಮಶಂಖಚಕ್ರಗದಾಗಳನ್ನು ಧರಿಸಿಕೊಂಡದ್ದು. ಹೀಗೆಯೇ ಇಪ್ಪತ್ತನಾಲ್ಕು ಮೂರ್ತಿಗಳಲ್ಲಿಯೂ ಕೆಳಗಿನ ಬಲದಕೈಯ ಆಯುಧವನ್ನು ಮೇಲಿನ ಬಲದಕೈಗೆ, ಮೇಲಿನ ಬಲದಕೈಯದ್ದು ಎಡದಕೈಗೆ, ಮೇಲಿನ ಎಡದ ಕೈಯದ್ದು ಕೆಳಗಿನ ಎಡದಕೈಗೆ– ಹೀಗೆ ಒಂದು ಆಯುಧ ಮುಂದಾಗಿ ನಿರೂಪಿಸಿದ್ದಾರೆ. ಅಂತೂ ೨೪ ಮೂರ್ತಿಗಳ ಲಕ್ಷಣವನ್ನೂ ತಪ್ಪಾಗಿ ಬರೆದಿದ್ದಾರೆ! ಅವರ ಈ ಭ್ರಮೆಗೆ ಕಾರಣ ಇನ್ನಾವುದೂ ಅಲ್ಲ–ವ್ಯಾಸರ ಪುರಾಣವಾಣಿಯೆ! ಅಗ್ನಿಪುರಾಣದ ಶ್ಲೋಕಗಳ ಆಧಾರದ ಮೇಲೆ ಅವರು ಈ ಲಕ್ಷಣವನ್ನು ನಿರೂಪಿಸಿದ್ದಾರೆ. ಅಗ್ನಿಪುರಾಣಕ್ಕೆ ಅವರು ಮಾಡಿದ ಅರ್ಥ ಪುರಾಣಾಂತರದಿಂದ ವಿರುದ್ಧವಾದುದು ಎಂಬುದನ್ನೂ ಅವರು ಗಮನಿಸಿಲ್ಲ! ಅವರ ಪಾಂಡಿತ್ಯದ ಮೇಲೆ ಅವರಿಗೆ ಅಷ್ಟು ವಿಶ್ವಾಸವೇನೊ!

ಅಗ್ನಿಪುರಾಣದ ವಚನ ಕೆಳಗಿನಂತಿದೆ—

'ಓಂರೂಪಃ ಕೇಶವಃ ಪದ್ಮಶಂಖಚಕ್ರಗದಾಧರಃ |
ನಾರಾಯಣಃ ಶಂಖಪದ್ಮಗದಾಚಕ್ರೀ ಪ್ರದಕ್ಷಿಣಮ್ ||
ತತೋ ಗದೀ ಮಾಧವೋಽರಿಶಂಖಪದ್ಮೀ ನಮಾಮಿ ತಮ್ |
ಚಕ್ರಕೌಮೋದಕೀಪದ್ಮಶಂಖೀ ಗೋವಿಂದ ಊರ್ಜಿತಃ ||
ಮೋಕ್ಷದಃ ಶ್ರೀಗದೀ ಪದ್ಮೀ ಶಂಖೀ ವಿಷ್ಣುಶ್ಚ ಚಕ್ರಧೃಕ್ |
ಚಕ್ರಶಂಖಾಬ್ಜಗದಿನಂ ಮಧುಸೂದನಮಾನಮೇ ||
ಭಕ್ತ್ಯಾ ತ್ರಿವಿಕ್ರಮಃ ಪದ್ಮೀ ಗದೀ ಚಕ್ರೀ ಚ ಶಂಖ್ಯಪಿ |
ಶಂಖಚಕ್ರಗದಾಪದ್ಮೀ ವಾಮನಃ ಪಾತು ಮಾಂ ಸದಾ ||
ಮುಕ್ತಿದಃ ಶ್ರೀಧರಃ ಪದ್ಮೀ ಚಕ್ರೀ ಗದೀ ಚ ಶಂಖ್ಯಪಿ |
ಹೃಷೀಕೇಶೋ ಗದೀ ಚಕ್ರೀ ಪದ್ಮೀ ಶಂಖೀ ಚ ಪಾತು ನಃ ||
ವರದಃ ಪದ್ಮನಾಭಸ್ತು ಶಂಖಾಬ್ಜಾರಿಗದಾಧರಃ |
ದಾಮೋದರಃ ಪದ್ಮಶಂಖಗದಾಚಕ್ರೀ ನಮಾಮಿ ತಮ್ ||
ರಕ್ಷೇದ್ಗದೀ ಶಂಖಚಕ್ರೀ ವಾಸುದೇವೋಽಬ್ಜಭೃಜ್ಜಗತ್ |
ಸಂಕರ್ಷಣೋ ಗದೀ ಶಂಖೀ ಪದ್ಮೀ ಚಕ್ರೀ ಚ ಪಾತು ನಃ ||
ಚಕ್ರೀ ಶಂಖಗದೀ ಪಾತು ಪ್ರದ್ಯುಮ್ನಃ ಪದ್ಮಭೃತ್ಪ್ರಭುಃ |
ಅನಿರುದ್ಧಶ್ಚಕ್ರಗದೀ ಶಂಖೀ ಪದ್ಮೀ ಚ ಪಾತು ನಃ ||
ಸುರೇಶೋಽರ್ಯಬ್ಜಶಂಖಾಢ್ಯಃ ಶ್ರೀಗದೀ ಪುರುಷೋತ್ತಮಃ |
ಅಧೋಕ್ಷಜಃ ಪದ್ಮಗದೀ ಶಂಖಚಕ್ರೀ ಚ ಪಾತು ನಃ ||
ದೇವೋ ನೃಸಿಂಹಶ್ಚಕ್ರಾಬ್ಜಗದಾಶಂಖೀ ನಮಾಮಿ ತಮ್ |
ಅಚ್ಯುತಃ ಶ್ರೀಗದೀ ಪದ್ಮೀ ಚಕ್ರೀ ಶಂಖೀ ಚ ಪಾತು ನಃ ||
ಬಾಲರೂಪೀ ಶಂಖಗದೀ ಉಪೇಂದ್ರಶ್ಚಕ್ರಪದ್ಮ್ಯಪಿ |
ಜನಾರ್ದನಃ ಪದ್ಮಚಕ್ರೀ ಶಂಖಧಾರೀ ಗದಾಧರಃ ||
ಶಂಖೀ ಚಕ್ರೀ ಚ ಪದ್ಮೀ ಚ ಹರಿಃ ಕೌಮೋದಕೀಧರಃ |
ಕೃಷ್ಣಃ ಶಂಖೀ ಗದೀ ಪದ್ಮೀ ಚಕ್ರೀ ಮೇ ಭುಕ್ತಿಮುಕ್ತಿದಃ ||
ಆದಿಮೂರ್ತಿರ್ವಾಸುದೇವಸ್ತಸ್ಮಾತ್ಸಂಕರ್ಷಣೋಽಭವತ್ |
ಸಂಕರ್ಷಣಾಚ್ಚ ಪ್ರದ್ಯುಮ್ನಃ ಪ್ರದ್ಯುಮ್ನಾದನಿರುದ್ಧಕಃ |
ಕೇಶವಾದಿಪ್ರಭೇದೇನ ಏಕೈಕಃ ಸ್ಯಾತ್ತ್ರಿಧಾ ಕ್ರಮಾತ್ ||'

ಮೇಲಿನ ವಚನದಲ್ಲಿ ಆಯುಧಗಳನ್ನು ಪ್ರದಕ್ಷಿಣೆಯಾಗಿ ಎಣಿಸಬೇಕು ಎಂದಿಷ್ಟೇ ಇದೆ; ಮೇಲಿನ ಬಲಗೈಯಿಂದ ಮೊದಲುಮಾಡಿ ಎಣಿಸಬೇಕು ಎಂದೇನಿಲ್ಲ. ಕೆಳಗಿನ ಬಲಗೈಯಿಂದ ಮೊದಲುಮಾಡಿ ಸುತ್ತಾಗಿ ಎಣಿಸಿದರೆ—ಆಯುಧಗಳು ಬೇರೆ ಪುರಾಣಗಳಲ್ಲಿ ಹೇಳಿದಂತೆಯೇ—ಆಚಾರ್ಯರು ತಂತ್ರ

ಸಾರದಲ್ಲಿ ಹೇಳಿದಂತೆಯೇ ಉಪಪನ್ನವಾಗುವುದು. ಮೇಲಿನ ಬಲಗೈಯಿಂದ ಮೊದಲುಮಾಡಿ ಗಣನೆ ಎಂದು ವಾಚಸ್ಪತಿಗಳು ಭ್ರಮಿಸಿಕೊಂಡಿದ್ದಾರೆ, ಅಷ್ಟೆ! ಮೇಲೆ ನಾನು ಉದಾಹರಿಸಿದ ಶ್ಲೋಕಗಳಿಗೂ ಈಗ ಮುದ್ರಿತವಾದ ಅಗ್ನಿಪುರಾಣದ ಶ್ಲೋಕಗಳಿಗೂ ತುಂಬ ವ್ಯತ್ಯಾಸವಿದ್ದರೂ–ಎಲ್ಲ ಗ್ರಂಥಗಳಿಗೂ ಅವಿರೋಧಿಯಾದ ಈ ಪಾಠವೇ ಪ್ರಾಮಾಣಿಕವೆಂದು ನಿರ್ಣಯಿಸಿ ಉಲ್ಲೇಖಿಸಿದ್ದೇನೆ.

ಮುದ್ರಿತಪಾಠದಲ್ಲಿ ತಪ್ಪಿದೆ ಎನ್ನುವುದು ಒಂದೆರಡು ಉದಾಹರಣೆಗಳಿಂದಲೇ ಸ್ಫುಟವಾಗಬಹುದು. ಶ್ರೀಧರನ ಲಕ್ಷಣವನ್ನು ಗಮನಿಸಿ:

'ಗತಿದಃ ಶ್ರೀಧರಃ ಪದ್ಮೀ ಚಕ್ರಶಾರ್ಙ್ಗೀ ಚ ಶಂಖ್ಯಪಿ ।'

ಇಲ್ಲಿ ಗದೆಯ ಬದಲು ಶಾರ್ಙ್ಗ ಬಂದಿದೆ. ಅದಕ್ಕೆ ೨೪ ಮೂರ್ತಿಗಳ ಆಯುಧದಲ್ಲಿ ಎಡೆಯೆಲ್ಲಿ?

ಹಾಗೆಯೇ ಪ್ರದ್ಯುಮ್ನನ ಲಕ್ಷಣದಲ್ಲಿ 'ಗದೀ ಚಕ್ರೀ ಶಂಖಗದೀ ಪ್ರದ್ಯುಮ್ನಃ ಪದ್ಮಭೃತ್ಪ್ರಭುಃ' ಎಂದಿದೆ. ಇಲ್ಲಿ ಹೇಳಿರುವಂತೆ ಎರಡೆರಡು ಗದೆಗಳನ್ನು ಪ್ರದ್ಯುಮ್ನನ ಯಾವ ಕೈಗೆ ತೊಡಿಸುವುದು? ಇಂಥದೇ ಹಲವು ಕಾರಣಗಳಿಂದ ಮುದ್ರಣದಲ್ಲಿರುವ ಪಾಠ ಅಗ್ರಾಹ್ಯವಾಗಿದೆ. ವ್ಯಾಸಭಾಷೆಗಿಂತಲೂ ರಹಸ್ಯವಾದ ಭಾಷೆ ಈ ಮುದ್ರಣದ ಭಾಷೆಯೇ ಆಗಿ ಉಳಿದಿದೆ!

ಹೀಗೆಯೇ ಸ್ಕಾಂದಪುರಾಣದ ಕಾಶೀಖಂಡದಲ್ಲೂ ಮೂರ್ತಿಲಕ್ಷಣದ ಉಲ್ಲೇಖವಿದೆ—

(ಮೇಲಿನ ಬಲದಕೈಯಿಂದ ಗಣನೆ)

'ಶಂಖಚಕ್ರಗದಾಪದ್ಮೈರ್ಮೂರ್ತಿಂ ಜಾನೀಹಿ ಕೈಶವೀಮ್ ।
ಪೂಜಿತಾ ಯಾ ನೃಣಾಂ ಕುರ್ಯಾಚ್ಚಿಂತಿತಾರ್ಥಮಸಂಶಯಮ್ ॥
ಮಧುಹಾ ಪರಿಚೇತವ್ಯಃ ಶಂಖಪದ್ಮಗದಾರಿಭಿಃ ।
ವೈರಿಣೋ ನಾಶಮಾಯಂತಿ ತನ್ಮೂರ್ತಿಪರಿಸೇವನಾತ್ ॥
ಸಂಕರ್ಷಣಃ ಸಮಚ್ಯೋऽತ್ರ ಶಂಖಾಬ್ಜಾರಿಗದಾಯುಧಃ ।
ತನ್ಮೂರ್ತಿಪೂಜಾನಾಜ್ಜಾತು ಜಂತುರ್ನ ಸ್ಯಾತ್ಪುನರ್ಭವೀ ॥
ಶಂಖಕೌಮೋದಕೀಚಕ್ರಪದ್ಮೈರ್ದಾಮೋದರೋऽರ್ಚ್ಯತೇ ।
ದದಾತಿ ವಿತ್ತಂ ಪುತ್ರಾಂಶ್ಚ ಗೋಧನಂ ಧಾನ್ಯಮೇವ ಹಿ ॥
ವಾಸುದೇವಃ ಶಂಖಚಕ್ರಾಬ್ಜಗದಾಭಿರುಪಲಕ್ಷಿತಃ ।
ಲಕ್ಷ್ಮೀವಂತಂ ಜನಂ ಕುರ್ಯಾದ್ಗೃಹೇऽಪಿ ಪರಿಧಾರಿತಃ ॥

ಪಾಂಚಜನ್ಯಂ ಗದಾಂ ಪದ್ಮಂ ಚಿತ್ರಮೂರ್ತಿ ಸುದರ್ಶನಮ್ |
ಪ್ರದ್ಯುಮ್ನಃ ಪೂಜ್ಯತೇ ಮರ್ತ್ಯೈರ್ಬಹುದ್ಯುಮ್ನಂ ಪ್ರಯಚ್ಛತಿ ||

(ಮೇಲಿನ ಎಡದಕ್ಕೈಯಿಂದ ಗಣನೆ)

ಊರ್ಧ್ವವಾಮಕರಾತ್ಸೃಷ್ಟ್ವಾ ವಿಷ್ಣ್ವಾದ್ಯಂ ಷಟ್ಕಮುಚ್ಯತೇ |
ಯಸ್ಯ ಸ್ಮರಣಮಾತ್ರೇಣ ವಿಲೀಯಂತೇಽಘರಾಶಯಃ ||
ಶಂಖಾರಿಭ್ಯಾಂ ಗದಾಬ್ಜಾಭ್ಯಾಂ ಪೂಜ್ಯೋ ವಿಷ್ಣುಃ ಶ್ರಿಯೇ ನರೈಃ |
ಶಂಖಪದ್ಮಗದಾಚಕ್ರೈರ್ಮಾಧವಃ ಪರಮರ್ದ್ಧಿದಃ ||
ಧ್ಯೇಯೋಽನಿರುದ್ಧಃ ಸಂಸಿದ್ಧ್ಯೈ ಶಂಖಾಬ್ಜಾರಿಗದೋದ್ಯತಃ |
ಶಂಖೇನ ಗದಯಾ ಚಕ್ರಾಂಬುಜಾಭ್ಯಾಂ ಪುರುಷೋತ್ತಮಃ ||
ಅಧೋಕ್ಷಜೋ ಜನಿಹರಃ ಶಂಖಾರ್ಯಬ್ಜಗದೋ ಮುನೇ |
ಶಂಖಕೌಮೋದಕೀಪದ್ಮಚಕ್ರೈರ್ಧ್ಯೇಯೋ ಜನಾರ್ದನಃ ||

(ಕೆಳಗಿನ ಎಡಗೈಯಿಂದ ಗಣನೆ)

ಅಧೋವಾಮಕರಾತ್ಸೃಷ್ಟ್ವಾ ಷಡ್ಗೋವಿಂದಾದಿಮೂರ್ತಯಃ |
ಶಂಖಂ ಚಕ್ರಂ ಗದಾಂ ಪದ್ಮಂ ಗೋವಿಂದೋ ಬಿಭೃಯಾತ್ಸದಾ ||
ಶಂಖಪದ್ಮಗದಾಚಕ್ರೈರರ್ಚ್ಯೋ ಲಕ್ಷ್ಮ್ಯೈ ತ್ರಿವಿಕ್ರಮಃ |
ಶಂಖಾಬ್ಜಚಕ್ರಂ ಬಿಭ್ರಾಣೋ ಗದಾವಾನ್ ಶ್ರೀಧರಃ ಶ್ರಿಯೇ ||
ಹೃಷೀಕೇಶಶ್ಚ ಶಂಖೇನ ಗದಾಚಕ್ರಾಂಬುಜೈರ್ಮತಃ |
ನೃಸಿಂಹಃ ಶಂಖಚಕ್ರಾಭ್ಯಾಂ ಪದ್ಮೇನ ಗದಯೋಹ್ಯತೇ |
ಅಚ್ಯುತಃ ಶಂಖಭೃನ್ನಿತ್ಯಂ ಗದಾಪದ್ಮರಥಾಂಗವಾನ್ ||

(ಕೆಳಗಿನ ಬಲಗೈಯಿಂದ ಗಣನೆ)

ದಕ್ಷಿಣಾಧಃಕರಾದೂಹ್ಯಾ ನಾರಾಯಣಾದಯಶ್ಚ ಷಟ್ |
ಶಂಖಾಂಬುಜಗದಾಚಕ್ರೀ ಧ್ಯೇಯೋ ನಾರಾಯಣೋ ನೃಭಿಃ ||
ವಾಮನಶ್ಚೈವ ಶಂಖಾರಿಗದಾಜಲಜಭೃತ್ಸದಾ |
ಶಂಖೀ ಪದ್ಮೀ ಪದ್ಮನಾಭೋ ಜ್ಞೇಯಶ್ಚಕ್ರೀ ಗದೀ ಮುನೇ ||
ಉಪೇಂದ್ರಃ ಶಂಖವಾನ್ನಿತ್ಯಂ ಗದಾರಿಕಮಲಾಯುಧಃ |
ಹರಿರ್ಹರೇದಘಂ ಶಂಖೀ ಚಕ್ರೀ ಪದ್ಮೀ ಗದೀ ನೃಣಾಮ್ |
ಶಂಖೇನ ಗದಯಾ ಪದ್ಮಚಕ್ರಾಭ್ಯಾಂ ಕೃಷ್ಣ ಉಚ್ಯತೇ ||
ಏತೇ ಭೇದಾ ಮಯಾಽಽಖ್ಯಾತಾಃ ಸ್ವಮೂರ್ತೀನಾಂ ಮಹಾಮುನೇ |
ಯಾನ್ವಿಜ್ಞಾಯ ಧ್ರುವಂ ಮರ್ತ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ||

ಅಗ್ನಿಬಿಂದು ಎಂಬ ಮುನಿಯನ್ನು ಕುರಿತು ಶ್ರೀಹರಿಯು ತನ್ನ ಲಕ್ಷಣವನ್ನು ನಿರೂಪಿಸಿದ ಮೇಲಿನ ಪದ್ಯಗಳು ಅಗ್ನಿಪುರಾಣದ ಮತ್ತು ಆಚಾರ್ಯರ

ಉಲ್ಲೇಖಗಳಿಗೆ ಸಂವಾದಿಗಳಾಗಿವೆ. ಇದರಲ್ಲೂ ಒಂದು ತೊಡಕಿತ್ತು: ಪದ್ಯದಲ್ಲಿ 'ವಾಸುದೇವಃ' ಎಂದಿದ್ದಲ್ಲಿ 'ವಾಮನಃ' ಎಂದೂ 'ವಾಮನಶ್ಚೈವ' ಎಂದಿದ್ದಲ್ಲಿ 'ವಾಸುದೇವಶ್ಚ' ಎಂದೂ ಮುದ್ರಿತವಾಗಿದೆ. ಆದರೆ ಲಕ್ಷಣಗಳನ್ನು ಕಾಣುವಾಗ ವ್ಯತ್ಯಾಸ ಮಾಡುವುದು ಯುಕ್ತ ಎಂದು ತೋರುವುದರಿಂದ ಅವುಗಳನ್ನು ವ್ಯತ್ಯಾಸವಾಗಿ ಉಲ್ಲೇಖಿಸಿದ್ದೇನೆ. ಅದರಿಂದ ವಾಸುದೇವನ ಲಕ್ಷಣವನ್ನರುಹುವ ಪಾದದಲ್ಲಿ ಒಂದಕ್ಷರ ಹೆಚ್ಚಾದರೂ—'ನವಾ ಏಕೇನಾಕ್ಷರೇಣ' ಎಂಬಂತೆ ಅದರಿಂದೇನೂ ವೃತ್ತಭಂಗವಾಗುವಂತಿಲ್ಲ.

ಪುರಾಣಗಳಲ್ಲಿ ಪರಸ್ಪರ ವಿರುದ್ಧಗಳಂತೆ ಕಂಡುಬಂದರೆ ಹೇಗೆ ಬಗೆಹರಿಸಿಕೊಳ್ಳಬೇಕು ಎಂದು ತೋರಿಸುವುದಕ್ಕಾಗಿ ಈ ಎರಡು ಪುರಾಣವಚನಗಳನ್ನು ಉದಾಹರಿಸಿದ್ದೇನೆ. ಹೀಗೆಯೇ ಇನ್ನೂ ಅನೇಕ ಕಡೆಗಳಲ್ಲಿ ಬರುವ ಈ ಮೂರ್ತಿಲಕ್ಷಣಗಳನ್ನು ಇದೇ ತೆರನಾಗಿ ಕೂಡಿಸಿಕೊಳ್ಳಬೇಕು. ಕೃಷ್ಣಾಚಾರ್ಯರ ಸ್ಮೃತಿಮುಕ್ತಾವಳಿಯ ಲಕ್ಷಣ ಮತ್ತು ವಾದಿರಾಜರ ಚತುರ್ವಿಂಶತಿಮೂರ್ತಿಸ್ತೋತ್ರದ ಲಕ್ಷಣ ಇವೆರಡೂ ಆಚಾರ್ಯರ ವಚನಕ್ಕೆ ಸಂವಾದಿಗಳಾಗಿದ್ದು ವ್ಯಾಖ್ಯಾನಗಳಂತಿವೆ. ಅವನ್ನು ಕೂಡ ಲಕ್ಷಣನಿರ್ಣಯದಲ್ಲಿ ಆಧಾರವಾಗಿ ಬಳಸಿಕೊಳ್ಳಬಹುದು.

'ರಾಮಾನಂದ ಯತಿ' ಎಂಬಾತನು ಕಾಶೀಖಂಡದ ವ್ಯಾಖ್ಯಾನದಲ್ಲಿ ಈ ಮೂರ್ತಿಗಳಲ್ಲಿ ಕೆಲವಕ್ಕೆ ರೂಪವನ್ನೂ ನಿರ್ದೇಶಿಸಿದ್ದಾನೆ. ಅದು ಈ ರೀತಿಯಾಗಿದೆ—

'ಶಂಖಚಕ್ರಗದಾಪದ್ಮೈಃ ಕೇಶವಃ ಕನಕಪ್ರಭಃ |
ಶಂಖಪದ್ಮಗದಾಚಕ್ರೈರರ್ಜುನೋ ಮಧುಸೂದನಃ ||
ಸಂಕರ್ಷಣೋ ದರಾಬ್ಜಾರಿಗದಾಭಿಃ ಕನಕಪ್ರಭಃ |
ದಾಮೋದರಃ ಶಂಖಗದಾಚಕ್ರಾಬ್ಜೈಃ ಕ್ಷೀರಸನ್ನಿಭಃ ||
ರಕ್ತಶ್ಚಕ್ರಗದಾಪದ್ಮದರೈರ್ವಾಮನ ಉಚ್ಯತೇ |
ಶಂಖೀ ಗದೀ ಸಾಬ್ಜಚಕ್ರಃ ಪ್ರದ್ಯುಮ್ನೋ ವಜ್ರಸನ್ನಿಭಃ ||
ಸಪದ್ಮಶಂಖಾರಿಗದೋ ವಿಷ್ಣುಶ್ಯಾಲಕ್ತಸಪ್ರಭಃ |
ಮಾಧವಶ್ಚಕ್ರಶಂಖಾಬ್ಜಗದಾಹಸ್ತೋ ಜಪಾನಿಭಃ ||
ಗದೀ ಶಂಖೀ ಸಾಬ್ಜಚಕ್ರಸ್ತ್ವನಿರುದ್ಧೋಽಸಿತಪ್ರಭಃ |
ಮನಃಶಿಲಾಭೋ ಗೋವಿಂದೋ ಗದಾಪದ್ಮದರಾರಿಭಿಃ |
ಸಗದಾಚಕ್ರಶಂಖಾಬ್ಜೋ ನೀಲಾಶ್ಮಾಭಸ್ತ್ರಿವಿಕ್ರಮಃ ||
ಚಕ್ರಗದಾಶಂಖಪದ್ಮೈಃ ಶ್ರೀಧರಃ ಕುಮುದಪ್ರಭಃ |

ಕಾಶ್ಮೀರಾಭೋ ಹೃಷೀಕೇಶಃ ಸಚಕ್ರಾಬ್ಜದರೋ ಗದೀ ॥
ಸ್ಫಟಿಕಾಭೋ ವಾಸುದೇವಃ ಶಂಖಾರ್ಯಬ್ಜಗದಾಧರಃ ।
ಕ್ಷೀರಾಭೋಽಬ್ಜಗದಾಚಕ್ರಶಂಖೈರ್ನಾರಾಯಣಃ ಸ್ಮೃತಃ ।
ಪದ್ಮಚಕ್ರಗದಾಶಂಖೈಃ ಪದ್ಮನಾಭೋಽಂಜನದ್ಯುತಿಃ ॥'

ಇದರ ಆಧಾರದಂತೆ ಕೇಶವಾದಿ ೧೬ ಮೂರ್ತಿಗಳ ವರ್ಣವನ್ನು ಈ ರೀತಿ ನಿರೂಪಿಸಬಹುದು —

| | | |
|---|---|---|
| ೧ | ಕೇಶವ | ಬಂಗಾರದ ಬಣ್ಣ |
| ೨ | ನಾರಾಯಣ | ಹಾಲಿನಂತೆ ಬಿಳಿ |
| ೩ | ಮಾಧವ | ದಾಸವಾಳದಂತೆ ಕೆಂಪು |
| ೪ | ಗೋವಿಂದ | ಮನಃಶಿಲೆಯ ಬಣ್ಣ |
| ೫ | ವಿಷ್ಣು | ಅಲತಿಗೆಯ ಬಣ್ಣ |
| ೬ | ಮಧುಸೂದನ | ಬಿಳಿ |
| ೭ | ತ್ರಿವಿಕ್ರಮ | ನೀಲಮಣಿಯಂತೆ ಕಪ್ಪು |
| ೮ | ವಾಮನ | ಕೆಂಪು |
| ೯ | ಶ್ರೀಧರ | ಕುಮುದದಂತೆ ಬಿಳಿ |
| ೧೦ | ಹೃಷೀಕೇಶ | ಕುಂಕುಮದಂತೆ ಕೆಂಪು |
| ೧೧ | ಪದ್ಮನಾಭ | ಕಾಡಿಗೆಯಂತೆ ಕಪ್ಪು |
| ೧೨ | ದಾಮೋದರ | ಹಾಲಿನಂತೆ ಬಿಳಿ |
| ೧೩ | ಸಂಕರ್ಷಣ | ಬಂಗಾರದ ಬಣ್ಣ |
| ೧೪ | ವಾಸುದೇವ | ಸ್ಫಟಿಕದಂತೆ ಸ್ವಚ್ಛ |
| ೧೫ | ಪ್ರದ್ಯುಮ್ನ | ವಜ್ರದಂತೆ ಬಿಳುಪು |
| ೧೬ | ಅನಿರುದ್ಧ | ಕಪ್ಪು |

ನಿರ್ಣಯಸಿಂಧುವಿನಲ್ಲಿ— ಬೋಪದೇವನ ಅತಿ ಸಂಕ್ಷಿಪ್ತವಾದ ಚತುರ್ವಿಂಶತಿಮೂರ್ತಿಲಕ್ಷಣವನ್ನು ಸಂಗ್ರಹಿಸಿದ್ದು ಅದು ಕೆಳಗಿನಂತಿದೆ:

'ಕೇವಿಗೋವಾದಾಪುಹಪ್ರಸೇಪ್ರಜಾಚ್ಯುಕೃಮಮಾತ್ರಿನಾ ।
ವಾಃಧೋನೃಹಸಾನಿಶ್ರೀಪಾ ಶಾಚ್ಚಗೇ ವಿಗಪೇ ಚಪೇ ॥'

ಇದರ ಮೂರು ಪಾದಗಳಲ್ಲಿ ಕ್ರಮವಾಗಿ ಚತುರ್ವಿಂಶತಿಮೂರ್ತಿಗಳ ಹೆಸರೂ ನಾಲ್ಕನೆಯ ಪಾದವೊಂದರಲ್ಲೆ ಅವಲ್ಲೆವುಗಳ ಲಕ್ಷಣವೂ ಉಕ್ತವಾಗಿದೆ! ಕೇ, ವಿ, ಗೋ, ವಾ, ಎಂಬ ಅಕ್ಷರಗಳು ಕೇಶವ-ವಿಷ್ಣು ಮೊದ

ಲಾದ ಹೆಸರಿನ ಮೊದಲಕ್ಷರಗಳೆಂದು ಭಾವಿಸಬೇಕು. 'ಶಾತ್ ಚಗೇ' ಎಂದರೆ ಶಂಖದ ನಂತರ ಚಕ್ರಗದೆಗಳು— ಅರ್ಥಾತ್ ಕೊನೆಯ ಕೈಯಲ್ಲಿ ಪದ್ಮ. ಈ ಶಂಖ ಚಕ್ರ ಗದಾ ಪದ್ಮಗಳನ್ನು ಮೇಲೆ ಹೇಳಿದ ಕೇಶವಾದಿ ಮೂರ್ತಿಗಳ ಕ್ರಮದಂತೆಯೇ ಮೇಲಿನ ಬಲದಕ್ಕೈಯಿಂದ ಮೇಲಿನ ಎಡದಕ್ಕೈಯಿಂದ ಕೆಳಗಿನ ಎಡದಕ್ಕೈಯಿಂದ ಮತ್ತು ಕೆಳಗಿನ ಬಲದಕ್ಕೈಯಿಂದ ಈ ಕ್ರಮದಲ್ಲಿ ಒಂದು ಸುತ್ತು ಗಣಿಸಿದರೆ ನಾಲ್ಕು ಮೂರ್ತಿಗಳ ಲಕ್ಷಣವಾದಂತಾಯಿತು. 'ವಿ' ಅಂದರೆ ವಿಪರೀತವಾಗಿಸಿ ಎಂದರ್ಥ; ಈ ವೈಪರೀತ್ಯ ಚಕ್ರ ಗದೆಗಳಿಗೆ ಮಾತ್ರವೇ ಅನ್ವಯಿಸುತ್ತದೆ; ತಥಾಚ ಶಂಖ ಗದಾ ಚಕ್ರ ಪದ್ಮಗಳನ್ನೂ ಮೇಲಿನಂತೆಯೇ ಸುತ್ತುಬರಿಸಿದರೆ ಒಟ್ಟಿಗೆ ೮ ಮೂರ್ತಿಗಳ ಲಕ್ಷಣವನ್ನು ನಿರೂಪಿಸಿದಂತಾಯಿತು. ಹೀಗೆಯೇ— 'ಶಾತ್ ಗಪೇ' ಎಂಬ ಪಕ್ಷದಲ್ಲಿ 'ಶಂಖ ಗದಾ ಪದ್ಮ ಚಕ್ರ' ವಿರುದ್ಧವಾಗಿಸಿದಾಗ ಶಂಖ ಪದ್ಮ ಗದಾ ಚಕ್ರ. ಇವು ಒಂದೊಂದನ್ನೂ ೪ ಕೈಗಳಲ್ಲಿ ಸುತ್ತಿಸಿದಾಗ ಒಟ್ಟು ೧೬ ಮೂರ್ತಿಗಳ ಲಕ್ಷಣವನ್ನು ಬರೆದಂತಾಯಿತು. ಅಂತೂ ಪೂರ್ವಾರ್ಧದ ನಾರಾಯಣಾಂತ ಮೂರ್ತಿಗಳ ಲಕ್ಷಣ ನಿರೂಪಿತವಾಯಿತು. ಮೂರನೆಯ ಪಾದದಲ್ಲಿ ಹೇಳಿದ ವಾಸುದೇವಾದಿ ಮೂರ್ತಿಗಳ ಲಕ್ಷಣ— 'ಶಾತ್ ಚಪೇ' ಮತ್ತು 'ವಿಚಪೇ'! ಶಂಖ ಚಕ್ರ ಪದ್ಮ ಗದಾ ಮತ್ತು ಶಂಖ ಪದ್ಮ ಚಕ್ರ ಗದಾ ಇವುಗಳನ್ನು ನಾಲ್ಕು ಕೈಗಳಲ್ಲಿ ಆವರ್ತಿಸಿದಾಗ ಮತ್ತೆ ೮ ಮೂರ್ತಿಗಳ ಲಕ್ಷಣವನ್ನೂ ಬರೆದಂತಾಯಿತು. ಹೀಗೆ ೨೪ ಮೂರ್ತಿಗಳ ಲಕ್ಷಣವನ್ನು ೮ ಅಕ್ಷರಗಳಲ್ಲಿ ತುಂಬಿಸಿ ಬರೆದುದು ವಿಚಿತ್ರವಾಗಿದೆ!

ಇದೇ ತೆರನಾಗಿ ಎಲ್ಲ ಕಡೆಯಲ್ಲೂ ಸರ್ವಾವಿರುದ್ಧವಾಗಿ ಅರ್ಥವನ್ನು ನಿರ್ಣಯಿಸಿಕೊಳ್ಳಬೇಕು.

---

## ಅಂಗನ್ಯಾಸ

'ನ್ಯಾಸ' ಎಂಬ ಶಬ್ದಕ್ಕೆ ಸಂಸ್ಕೃತದಲ್ಲಿ ನಿಕ್ಷೇಪ, ಇಡುವುದು (ನಿ+ಅಸ 'ಅಸು ಕ್ಷೇಪಣೇ') ಎಂದರ್ಥ. 'ಅಂಗೇಷು ನ್ಯಾಸಃ=ಅಂಗನ್ಯಾಸಃ' ನಮ್ಮ ಅಂಗಗಳಲ್ಲಿ ಮಂತ್ರಪೂತವಾದ ಕರವನ್ನು ಇಡುವುದು ಎಂದು ಈ ಪದದ ಅರ್ಥ. 'Introduction to Tantra Sastra' ಎಂಬ ಗ್ರಂಥದಲ್ಲಿ 'Sir John Woodroffe' ಅವರು ಕೂಡ ಇದೇ ಅರ್ಥವನ್ನು ಬರೆದಿದ್ದಾರೆ—

"This word, which comes from the root "to place", means placing the tips of the fingers and palm of the right hand on various parts of the body, accompanied by particular mantra."

ಯಾವುದೇ ಒಂದು ಮಂತ್ರದ ಆದಿಯಲ್ಲಿ ಮತ್ತು ಕೊನೆಯಲ್ಲಿ ಈ ಅಂಗ ನ್ಯಾಸವನ್ನಾಚರಿಸುವುದು ನಮ್ಮ ಪೂರ್ವಜರ ಸಂಪ್ರದಾಯ. ಅದರಿಂದಲೇ ಎಲ್ಲ ತಂತ್ರಗ್ರಂಥಗಳೂ ಅಂಗನ್ಯಾಸದ ವಿಧಿಯನ್ನು ವಿಸ್ತರವಾಗಿಯೇ ನಿರೂಪಿಸುತ್ತವೆ. ಆದರೆ ಈ ಅಂಗನ್ಯಾಸದ ತಾತ್ಪರ್ಯವೇನು? ಜಪದ ತುದಿಮೊದಲಲ್ಲಿ ಅದನ್ನು ಆಚರಿಸುವುದರ ಹಿನ್ನೆಲೆಯಾದರೂ ಏನು? ಅದರಲ್ಲಿ ವಷಟ್, ಫಟ್ ಮೊದಲಾದ ಅಪೂರ್ವಪದಗಳನ್ನು ಪ್ರಯೋಗಿಸುವ ಉದ್ದೇಶವೇನು? ಆ ಪದಗಳ ಅರ್ಥವೇನು? ಒಟ್ಟದಲ್ಲಿ ಈ ಅಂಗನ್ಯಾಸದ ಅರ್ಥವೇನು? ಈ ವಿಷಯದಲ್ಲಿ ಯಾರೂ ಹೆಚ್ಚಾಗಿ ಗಮನಿಸುವುದಿಲ್ಲ. ಎಲ್ಲ ಜಪಪ್ರಿಯರೂ ಯಾಂತ್ರಿಕವಾದ ಅಂಗನ್ಯಾಸವನ್ನೇ ಹೆಚ್ಚಾಗಿ ಆಚರಿಸುವುದನ್ನು ಕಾಣುತ್ತೇವೆ! ಆದರೆ ಇವುಗಳ ಆಶಯವನ್ನು ಅರಿತುಕೊಂಡರೆ– ಈ ಅಂಗನ್ಯಾಸದ ಹಿಂದೆ ಅಪೂರ್ವವಾದ ಅರ್ಥವ್ಯಾಪ್ತಿಯನ್ನು ತುಂಬಿದ ಪ್ರಾಚೀನರ ಅಲೌಕಿಕ ಪ್ರಜ್ಞೆಯನ್ನರಿತುಕೊಂಡರೆ– ಆಗ ಅಂಗನ್ಯಾಸ ಏಕೆ ಆವಶ್ಯಕ ಎಂಬುದು ಸ್ಫುಟವಾಗುವುದು.

ಪ್ರಕೃತ ಅಷ್ಟಾಕ್ಷರದ ಅಂಗನ್ಯಾಸವನ್ನು ಗಮನಿಸುವ ಮೊದಲು ಅದರ ಪದಗಳ ಅರ್ಥವನ್ನು ಮಾಡಿಕೊಳ್ಳುವುದು ಆವಶ್ಯಕ:

'ಕ್ರುದ್ಧೋಲ್ಕಾಯ ಹೃದಯಾಯ ನಮಃ'

ಹೃದಯಕಮಲದಲ್ಲಿ ಅಂಗುಷ್ಠಪರಿಪೂರ್ಣನಾಗಿ ಜ್ವಲಿಸುತ್ತಿರುವ ಕರುಣಾಳುವಿಗೆ ಈ ಕಾಯ ಅರ್ಪಿತ.

'ಮಹೋಲ್ಕಾಯ ಶಿರಸೇ ಸ್ವಾಹಾ'

ನನ್ನ ಶಿರಸ್ಸಿನಲ್ಲಿದ್ದು 'ಶಿರಃ' ಪದವಾಚ್ಯನಾದ, ದಿಗ್ದಿಗಂತಗಳನ್ನು ಬೆಳಗುವ ಜ್ಯೋತಿರ್ಮಯರೂಪಿ ಚರಾಚರಪತಿಗೆ ಈ ಚಪಲದೇಹ ಅರ್ಪಿತ.

'ವೀರೋಲ್ಕಾಯ ಶಿಖಾಯೈ ವಷಟ್'

ಯಾಗಾಗ್ನಿಯಂತೆ ಪಾಪಗಳನ್ನೆಲ್ಲ ಸುಟ್ಟುರಿವ ಟಂಕಧಾರಿ ಹರಿ ನನ್ನ ಶಿಖೆಯಲ್ಲಿದ್ದು ನನ್ನ ದೇಹದ ಪಾಪಗಳನ್ನು ತುಂಡರಿಸಲೆಂದು ಅವನಿಗೆ ಈ ಡಿಂಗರದ ಶರೀರ ಅರ್ಪಿತ.

'ದ್ಯೂಲ್ಕಾಯ ಕವಚಾಯ ಹುಮ್'

ಗಗನ ಸ್ವರ್ಗಗಳಲ್ಲಿ ಕೂಡ ಶತ್ರುಗಳನ್ನು ಜಯಿಸಿ ಭಕ್ತರನ್ನು ಕಾವ, ತಾರಕವಾಚ್ಯನಾದ ನಾರಾಯಣನೆ ನನ್ನ ಕವಚಮುದ್ರೆಯಲ್ಲಿ ಸನ್ನಿಹಿತನಾಗಿ 'ಹುಂ'ಕಾರಮಾತ್ರದಿಂದಲೆ ನನ್ನ ಅರಿಷಡ್ವರ್ಗವನ್ನು ನಿಗ್ರಹಿಸಲಿ ಎಂದು ಅವನಿಗೆ ಈ ತನು ಅರ್ಪಿತ.

'ಸಹಸ್ರೋಲ್ಕಾಯ ಅಸ್ತ್ರಾಯ ಫಟ್'

ಮೇಲೂ, ಕೆಳಗೂ, ಸುತ್ತಲೂ, ಎತ್ತೆತ್ತಲೂ, ಅನಂತಜ್ವಾಲಾಮಯನಾಗಿ ವಿವಿಧಾಯುಧಗಳಿಂದ ಶತ್ರುಗಳನ್ನು ಸದೆಬಡಿಯುವ, ನನ್ನ ಅಸ್ತ್ರಮುದ್ರೆಯಲ್ಲಿ ಸನ್ನಿಹಿತನಾಗಿರುವ, ಭಕ್ತಬಂಧುವಿಗೆ ಈ ಮೂರ್ತಿ ಅರ್ಪಿತ.

ಹೀಗೆ ಮೊತ್ತದಲ್ಲಿ ಅವುಗಳ ತಾತ್ಪರ್ಯವನ್ನು ತಿಳಿದುಕೊಂಡನಂತರ ಪರಶಃ ಅರ್ಥಚಿಂತನೆ ಪ್ರಸಂಗೋಚಿತವಾಗಿದೆ; ಇಲ್ಲಿ 'ಕೃದ್ಧೋಲ್ಕ' ಎಂಬೊಂದು ಪದದಲ್ಲಿ ತುಂಬ ಮತಭೇದವಿದೆ. ತಂತ್ರಸಾರದ ಅಚ್ಚಾದ ಎಲ್ಲ ಪುಸ್ತಕಗಳಲ್ಲೂ 'ಕ್ರುದ್ಧೋಲ್ಕ' ಎಂದಿದೆ. ಶ್ರೀಕಾಣಿಯೂರುಮಠದಲ್ಲಿರುವ ಅಪೂರ್ವವಾದ ಒಂದು ವ್ಯಾಖ್ಯಾನದಲ್ಲಿ— ಈ ಪದವನ್ನೆ ಇಟ್ಟುಕೊಂಡು ಅರ್ಥ ಬರೆದಿದ್ದಾರೆ ಎಂದೂ ಕೇಳಿದ್ದೇನೆ. ಆ ವ್ಯಾಖ್ಯಾನದ ರೀತ್ಯಾ ಕಲಿರೂಪಿಯಾದ ದುರ್ಯೋಧನನ ಕುರಿತು ಕುಪಿತವಾದ ಭಗವದ್ರೂಪವನ್ನು ಈ ಪದ ಬೋಧಿಸುತ್ತದೆ. ತಂತ್ರಸಾರದ ವ್ಯಾಖ್ಯಾನವೊಂದರಲ್ಲೆ ಅಲ್ಲ ಬೇರೆ ಗ್ರಂಥಗಳಲ್ಲೂ 'ಕ್ರುದ್ಧ' ಪದವೇ ಕಂಡುಬರುವಂತಿದೆ—

'ಕ್ರುದ್ಧೋಲ್ಕಾಯ ಹೃದಾಖ್ಯಾತಂ ಮಹೋಲ್ಕಾಯ ಶಿರಃ ಸ್ಮೃತಮ್ ।
ವೀರೋಲ್ಕಾಯ ಶಿಖಾ ಪ್ರೋಕ್ತಾ ದ್ಯೂಲ್ಕಾಯ ಕವಚಂ ಸ್ಮೃತಮ್ ।
ಸಹಸ್ರೋಲ್ಕಾಯಾಸ್ತ್ರಮುಕ್ತ ಮಂಗಶ್ಲ್ಟಿ ರಿಯಂ ಮತಾ ॥' (ಶಾರದಾ.)

'ಉಲ್ಕೈಃ ಕ್ರುದ್ಧ ಮಹಾವೀರದ್ಯುಸಹಸ್ರೇತಿ ಪೂರ್ವಕೈಃ ।
ಏಷಾಂ ವಿಭಕ್ತಿಯುಕ್ತಾನಾಂ ಭವೇದಂತೇಽಗ್ನಿವಲ್ಲಭಾ॥' (ಮಂತ್ರತಂತ್ರಪ್ರಕಾಶ)

ಗ್ರಂಥಾಂತರದಲ್ಲೂ ಇದೇ ತೆರನಾದ ಉಲ್ಲೇಖವಿದೆ—

'ಕ್ರುದ್ಧೋಲ್ಕಾದಿಪದೈರ್ವಹ್ನಿಜಾಯಾಂತೈರ್ಜಾತಿಸಂಯುತೈಃ ।'

ಈ ಎಲ್ಲ ಗ್ರಂಥಗಳ ಪಾಠವೂ 'ಕ್ರುದ್ಧೋಲ್ಕ'ವೆಂದೇ ಇತ್ತೋ, ಅಥವಾ ಶೋಧಕರ, ಮುದ್ರಕರ ಪ್ರಮಾದದಿಂದ 'ಕೃದ್ಧ'ವೇ 'ಕ್ರುದ್ಧ'ವಾಯಿತೋ ನಿರ್ಣಯಿಸಬರುವಂತಿಲ್ಲ. ಏನೇ ಇದ್ದರೂ ಸರ್ವಮೂಲದ ಮೂಲಪ್ರತಿಗಳಲ್ಲಿ

'ಕೃದ್ಧ' ಎಂಬ ಪಾಠವೇ ಕಂಡುಬರುವುದರಿಂದ ಆ ಪಾಠವನ್ನು ತೊರೆದು 'ಕ್ರುದ್ಧ' ಪದವನ್ನು ಆ ಸ್ಥಾನಕ್ಕೇರಿಸಲು ಯಾವೊಂದು ಔಚಿತ್ಯವೂ ಇಲ್ಲ. ಆದರೆ 'ಕೃದ್ಧ' ಎಂಬ ಪದಕ್ಕೆ ಅರ್ಥವೇನು? ಈ ತೊಡಕನ್ನು ಪರಿಹರಿಸುವುದಕ್ಕಾಗಿಯೇ ನಂತರದವರು ಸುಲಭವಾದ 'ಕ್ರುದ್ಧ'ವನ್ನೆ ಬಳಸಿಕೊಂಡರೋ ಏನೊ!

'ಕೃದ್ಧ'ಪದಕ್ಕೆ ಕೆಲ ಪಂಡಿತರು ಹೀಗೆ ಅರ್ಥ ಮಾಡುವುದುಂಟು:

'ಕರೋತಿ ಇತಿ ಕೃತ್=ಸ್ರಷ್ಟಾ, ದಧಾತೀತಿ ಧಃ=ಪಾತಾ, ಉಲ್ಕಾವತ್ಸರ್ವಾರ್ತ್ತೃತ್ವಾದುಲ್ಕಃ=ಸಂಹರ್ತಾ.' ಒಟ್ಟಿನಲ್ಲಿ ಸೃಷ್ಟಿಸ್ಥಿತಿಸಂಹಾರಕಾರಣ ಎಂಬ ಅರ್ಥವನ್ನು ಅವರು ಈ ಪದದಿಂದ ಬರಿಸುತ್ತಾರೆ. ಈ ವ್ಯಾಖ್ಯಾನ ಅರ್ಥದ ದೃಷ್ಟಿಯಲ್ಲಿ ಅಷ್ಟೊಂದು ತಪ್ಪು ಎಂದು ತೋರದಿದ್ದರೂ ಪ್ರಕೃತ ಅದರ ಔಚಿತ್ಯದ ಕುರಿತು ಸ್ವಲ್ಪ ಶಂಕಿಸಲೇಬೇಕಾಗಿದೆ. 'ತಜ್ಜಲಾನಿತಿ ಶಾಂತ ಉಪಾಸೀತ' ಎಂಬಂತೆ ಸೃಷ್ಟ್ಯಾದಿಕಾರಣನಾದ ಹರಿಯನ್ನು ಮನಸ್ಸಿನಲ್ಲಿ ಧ್ಯಾನಿಸುವುದು ಉಚಿತವೆಂದು ತೋರಿದರೂ ಮುಂದಿನ ಪದಗಳಿಗೂ ಈ ಪದಕ್ಕೂ ಅಷ್ಟೊಂದು ಸಾಂಗತ್ಯ ತೋರುವುದಿಲ್ಲ. ಮಹೋಲ್ಕಾದಿ ಪದಗಳಿಗೆ ಯಾವ ತೆರನಾದ ಅರ್ಥವನ್ನು ನಿರೂಪಿಸುವೆವೋ ಅಂಥದೇ ಅರ್ಥವನ್ನು ಕೃದ್ಧೋಲ್ಕಪದಕ್ಕೂ ನಿರೂಪಿಸುವುದು ಚೆನ್ನು. ಈ ದೃಷ್ಟಿಯಿಂದ ಕೃದ್ಧಮಹಾವೀರಾದಿಪದಗಳು ಸ್ತ್ರೀಲಿಂಗವಾದ 'ಉಲ್ಕಾ'ಪದದ ವಿಶೇಷಣಗಳು, ಅಂಥ ಜ್ಯೋತಿ(ಉಲ್ಕೆ) ಉಳ್ಳವನು ಎಂಬ ಅರ್ಥದಲ್ಲಿ ಬಹುವ್ರೀಹಿ ಮಾಡಿದಾಗ ಪುಂಲಿಂಗವಾಗಿ ಪರಿಣಮಿಸಿತು ಎನ್ನುವುದೇ ಸೊಗಸು. ಹಾಗಿದ್ದರೆ ಉಲ್ಕೆಗೆ ವಿಶೇಷಣವಾದ 'ಕೃದ್ಧ'ಪದಕ್ಕೆ ಏನರ್ಥ?

ವೇದಗಳಲ್ಲಿ 'ಕೃಧು' ಎಂಬೊಂದು ವಿಶೇಷಣಪದದ ಪ್ರಯೋಗವಿದೆ:

'ಯದಸ್ಯಾ ಅಂಹುಭೇದ್ಯಾಃ ಕೃಧು ಸ್ಥೂಲಮುಪಾತಸತ್ ।' (ಯಜುರ್ವೇದ)
'ಮಮ ಸ್ವನಾತ್ಕೃಧುಕರ್ಣೋ ಭಯಾತ್ತೇ ।' (ಋಗ್ವೇದ)

ಪೃಷೋದರಾದಿಯಾಗಿ 'ಕೃಧು' ಎಂಬ ರೂಪ ಹೇಗೆ ಸಿದ್ಧವಾಗುವುದೋ ಹಾಗೆಯೇ ಕ್ತಪ್ರತ್ಯಯಾಂತವಾದ 'ಕೃದ್ಧ' ಎಂಬ ರೂಪವೂ ಸಿದ್ಧವಾಗಬಹುದು. ಆ ಪಕ್ಷದಲ್ಲಿ 'ಕೃದ್ಧೋಲ್ಕ' ಎಂದರೆ 'ಹ್ರಸ್ವಶಿಖ' ಎಂದರ್ಥ:

'ಕೃದ್ಧಾ=ಹ್ರಸ್ವಾ ಉಲ್ಕಾ=ಶಿಖಾ ಯಸ್ಯ ಸಃ=ಕೃದ್ಧೋಲ್ಕಃ'
'ಉಲ್ಕಾ=Fire, flame' (V. S. Apte)

ಈ ಅರ್ಥದಲ್ಲಿ ಒಂದು ವೈಶಿಷ್ಟ್ಯವಿದೆ. ಭಗವದ್ರೂಪ ಎಲ್ಲೆಡೆಯಲ್ಲೂ ವ್ಯಾಪ್ತವಾಗಿದ್ದರೂ ನಮ್ಮ ಹೃತ್ಕಮಲದಲ್ಲಿ ಮಾತ್ರ ಅಂಗುಷ್ಠಪರಿಮಾಣ ವೆಂದು ಧ್ಯಾನಿಸಬೇಕೆಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ 'ಹೃದ್ಯ-ಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' ಎಂಬ ಬ್ರಹ್ಮಮೀಮಾಂಸಾಸೂತ್ರದ ವ್ಯಾಖ್ಯಾನದಲ್ಲಿ:

'ಸರ್ವಗತಸ್ಯಾಪಿ ತಸ್ಯಾಂಗುಷ್ಠಮಾತ್ರತ್ವಂ ಹೃದ್ಯವಕಾಶಾಪೇಕ್ಷಯಾ ಯುಜ್ಯತೇ ।'

ಉಪನಿಷತ್ತು ಕೂಡ ಈ ಮಾತನ್ನು ಪುಟಗೊಳಿಸುತ್ತದೆ—

'ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।'

ಆದರಿಂದ ಈ ಅರ್ಥವೇ ಇಲ್ಲಿ ಚೆನ್ನು ಎಂದು ಭಾಸವಾಗುತ್ತದೆ. ಹೆಚ್ಚಿನ ನಿರ್ಣಯವನ್ನು ಶಬ್ದಬ್ರಹ್ಮವಿದರಾದ ಕ್ರಾಂತದರ್ಶಿಗಳು ಮಾತ್ರ ಮಾಡಬಲ್ಲರು.

ಎರಡನೆಯದಾದ ಮಹೋಲ್ಕ ಶಬ್ದ ಸ್ಪಷ್ಟವಾಗಿದೆ. 'ಮಹತೀ ಉಲ್ಕಾ ಯಸ್ಯ'.

'ವೀರೋಲ್ಕ' ಎಂಬಲ್ಲಿರುವ 'ವೀರ'ಪದಕ್ಕೆ 'ಯಜ್ಞಾಗ್ನಿ' ಎಂದರ್ಥ.

'ವೀರಃ=ಯಜ್ಞಾಗ್ನೌ ಭರತಃ' (ವಾಚಸ್ಪತ್ಯ)

'ವೀರಃ=The sacrificial fire' (V. S. Apte)

ಆದರಿಂದ ಯಜ್ಞಾಗ್ನಿಯಂತೆ ಪಾಪವನ್ನು ತೊಡೆಯುವ ತೇಜಸ್ಸು ಎಂಬರ್ಥವನ್ನು ಬರೆದಿದ್ದೇನೆ. 'ದ್ಯು'ಶಬ್ದಕ್ಕೆ ಸ್ವರ್ಗ, ಆಕಾಶ ಎಂದರ್ಥವಿದೆ. ಕದನ ಹೂಡುವುದು ಎಂದೂ ಅರ್ಥವಿದೆ:

'ದ್ಯು=ದಿನೇ, ಗಗನೇ, ಸ್ವರ್ಗೇ' (ವಾಚ.)

'ದ್ಯು(ದ್ಯೌತಿ)=To encounter, attack.' (V. S. Apte)

ಭಗವಂತನ ಕದನ ಎಂದೂ ಜಯಾವ್ಯಭಿಚಾರಿಯಲ್ಲ ಎಂತಲೇ ತಂತ್ರ ನ್ಯಾಯದಿಂದ ಗಗನಸ್ವರ್ಗಗಳಲ್ಲಿ ಕೂಡ ಶತ್ರುಗಳನ್ನು ಜಯಿಸುವವನು ಎಂಬ ಅರ್ಥವನ್ನು ಬರೆದಿದ್ದೇನೆ. ಈ ಎರಡರಲ್ಲಿ ಯಾವುದಾದರೂ ಒಂದರ್ಥವನ್ನು ಆರಿಸಿ ಬಳಸಲೂಬಹುದು.

ಇನ್ನು ವ್ಯಾಖ್ಯಾನಕಾರರು ಭ್ರಮೆಗೊಳ್ಳುವ ಇನ್ನೊಂದು ಸಂದರ್ಭ ವುಂಟು. ಅದು ನಮಆದಿಪದಗಳ ವಿವರಣೆಯ ಸಂದರ್ಭ. ಹೆಚ್ಚುಮಂದಿ 'ನಮಃ' ಎಂದರೆ ನಮಸ್ಕಾರವೆಂದೇ ಅರ್ಥ; 'ಹುಂ' 'ಫಟ್' ಎಂದರೆ ಏನೋ

ಶತ್ರುಗಳನ್ನು ಬೆದರಿಸುವ ಅನುಕರಣೆಯ ಧ್ವನಿಗಳಷ್ಟೆ ಎಂದು ತಿಳಿದು ಕೊಂಡಿರುತ್ತಾರೆ. ಹೀಗೆ ಭ್ರಮಿಸಿಕೊಂಡವರಲ್ಲಿ Sir John woodroffe ಅವರೂ ಒಬ್ಬರು. ಅವರ ಈ ಪಂಕ್ತಿಗಳನ್ನು ನೋಡಿದಾಗ ಈ ವಿಷಯ ಸ್ಫುಟವಾಗುವುದು—

"Salutation to the heart. *Swaha* to the Head. *Vasat* to the crown lock. *Vausat* to the three eyes (Including the central eye of wisdom, '*Jnana-chaksu*'.), *Phat* to the front and back of the palm."

ಆದರೆ ಈ ಅರ್ಥವಿವರಣೆ ಅಷ್ಟೊಂದು ಸಮರ್ಪಕವಾಗಿಲ್ಲ; ಇಲ್ಲಿ ಚತುರ್ಥ್ಯಂತಪದಗಳೊಟ್ಟಿಗೆ ಉಕ್ತಗಳಾದ 'ನಮಃ' 'ಸ್ವಾಹಾ' 'ವಷಟ್' 'ಹುಂ' 'ಫಟ್' ಎಂಬ ಎಲ್ಲ ಪದಗಳೂ ತ್ಯಾಗ ಅಥವಾ ದಾನ ಎಂಬ ಅರ್ಥವನ್ನು ಹೇಳುತ್ತವೆ. ಷಡಂಗನ್ಯಾಸವಾದರೆ ಅದರಲ್ಲಿ ಬರುವ 'ವೌಷಟ್' ಎಂಬ ಪದವೂ ಇದೇ ಅರ್ಥವನ್ನು ಹೇಳುತ್ತದೆ:

'ನಮಸ್=ತ್ಯಾಗೇ, ಸ್ವಸ್ವತ್ವಧ್ವಂಸಾನುಕೂಲವ್ಯಾಪಾರಭೇದೇ ।' (ವಾಚ.)

'"ಪುಷ್ಪಮಿದಂ ವಿಷ್ಣವೇ ನಮಃ" ಇತ್ಯಸ್ಯ ವಿಷ್ಣೂದ್ದೇಶ್ಯಕಮಂತ್ರಕರಣ-ತ್ಯಾಗಸ್ಯ ಕರ್ಮೇದಂ ಪುಷ್ಪಮಿತ್ಯರ್ಥಃ ।' (ಶಬ್ದಶಕ್ತಿಪ್ರಕಾಶಿಕಾ)

'ಸ್ವಾಹಾ ದೇವಹವಿರ್ದಾನೇ ಶ್ರೌಷಡ್ವೌಷಡ್ವಷಟ್ ಸ್ವಧಾ ।' (ಅಮರ.)

'ಹುಮ್=ನಿವಾರಣೇ' (ವಾಚ.)

ನಿವಾರಣೆಯಷ್ಟೇ ಏನು— ದಾನಕೂಡ ಅದರ ಅರ್ಥವಾಗಬಲ್ಲುದು. ಅವ್ಯಯಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಸಂದರ್ಭಬಲದಿಂದ ತಾನೆ ತಿಳಿದು ಕೊಳ್ಳಬೇಕು.

'ಫಟ್=ಅನುಕರಣಶಬ್ದೇ, ನಮ ಆದಿವದ್ದ್ರವ್ಯವಿಶೇಷಸ್ಯ ತ್ಯಾಗಾರ್ಥತಾಽಪಿ ।' (ವಾಚ.)

ಹೀಗೆ ಈ ಮಂತ್ರಗಳಿಂದ ಭಗವಂತನ ನಾನಾ ವಿಭೂತಿರೂಪಗಳ ರಕ್ಷೆಯನ್ನು ಕೋರಿ ಆ ರೂಪಗಳಿಂದ ಸುರಕ್ಷಿತವೂ, ಪವಿತ್ರವೂ ಆದ ಮನಸ್ಸಿನಿಂದ ಜಪವನ್ನು ಮಾಡುವುದೇ ಈ ನ್ಯಾಸದ ಉದ್ದೇಶ ಎಂಬುದು ಸ್ಫುಟವಾಗಿದೆ. ಮೂಗಿಗೆ ಬೆರಳು ತಾಕಿಸುವುದಷ್ಟೆ ಪ್ರಾಣಾಯಾಮವಾದಾಗ, ಮೈಗೆ ಕೈಸೋಕಿಸುವುದಷ್ಟೆ ಅಂಗನ್ಯಾಸವಾದಾಗ, ಬಾಯಿಗೆ ನೀರು ಚಿಮುಕಿ

ಸುವುದಷ್ಟೆ ಅಚವುನವಾದಾಗ ಈ ಪವಿತ್ರಧ್ಯೇಯುಗಳಿಗೆಡೆಯೆಲ್ಲಿ? ಈ ಪರಂಪರೆಯು ಉಳಿಗಾಲವೆಲ್ಲಿ?

ಶಂಕರಾಚಾರ್ಯರು ಅಂಗನ್ಯಾಸದ ಅರ್ಥವನ್ನು ಕೆಳಗಿನಂತೆ ವಿವರಿಸಿದ್ದಾರೆ—

ಹೃದಯಂ ಬುದ್ಧಿಗಮ್ಯತ್ವಾತ್ತನ್ನಾಮಃ ಸ್ಯಾನ್ನಮಃಪದಮ್ ।
ಕ್ರಿಯತೇ ಹೃದಯೇನಾತೋ ಬುದ್ಧಿಗಮ್ಯನಮಸ್ಕ್ರಿಯಾ ॥
ತುಂಗಾರ್ಥತ್ವಾಚ್ಛಿರಃ ಸ್ವೇ ಸ್ವೇ ವಿಷಯಾಹರಣೇ ದ್ವಿಶಃ ।
ಶಿರೋಮಂತ್ರೇಣ ಚೋತ್ತುಂಗವಿಷಯಾಹೃತಿರೀರಿತಾ ॥
ಶಿಖಾ ತೇಜಃ ಸಮುದ್ದಿಷ್ಟಾ ವಷಡಿತ್ಯಂಗಮುಚ್ಯತೇ ।
ತತ್ತೇಜೋಽಸ್ಯ ತನುಃ ಪ್ರೋಕ್ತಾ ಶಿಖಾಮಂತ್ರೇಣ ಮಂತ್ರಿಣಃ ॥
ಕಚಗ್ರಹಣ ಇತ್ಯಸ್ಮಾದ್ಧಾತೋಃ ಕವಚಸಂಭವಃ ।
ಹುಂ ತೇಜಸ್ತೇಜಸಾಂ ದೇಹೋ ಗೃಹ್ಯತೇ ಕವಚಂ ತತಃ ॥
ನೇತ್ರಂ ದೃಷ್ಟಿಃ ಸಮುದ್ದಿಷ್ಟಾ ವೌಷಟ್ ದರ್ಶನಮುಚ್ಯತೇ ।
ದರ್ಶನಂ ದೃಶಿ ಯೇನ ಸ್ಯಾತ್ತತ್ತೇಜೋ ನೇತ್ರವಾಚಕಮ್ ॥
ಅಸುತ್ರಾಸಾದಿಕೌ ಧಾತೂ ಸ್ತಃ ಕ್ಷೇಪಚಲನಾರ್ಥಕೌ ।
ತಾಭ್ಯಾಮನಿಷ್ಟಮಾಕ್ಷಿಪ್ಯ ಚಾಲಯೇತ್ಫಟ್ಪದಾಗ್ನಿನಾ ॥ (ಪ್ರಪಂಚಸಾ.)

## ಅಷ್ಟಾಂಗನ್ಯಾಸ

'ಪಜ್ಜಾನುನಾಭಿಹೃದಯಮಾಜ್ಯಾಸಾನೇತ್ರಕೇಷು ಚ' ಎಂದು ಆಚಾರ್ಯರು ನಿರೂಪಿಸಿದ ಅಷ್ಟಾಂಗನ್ಯಾಸವೂ ಕೂಡ ಇದೇ ತೆರನಾದ ಹಿನ್ನೆಲೆಯಿಂದ ಹೊರಟಿದೆ. ಮಂತ್ರದ ಒಂದೊಂದು ಅಕ್ಷರವೂ ಕೂಡ ಒಂದೊಂದು ಭಗವದ್ರೂಪವನ್ನು ಪ್ರತಿಪಾದಿಸುವುದರಿಂದ ಆ ಭಗವದ್ರೂಪವನ್ನು ನಮ್ಮ ಅಂಗಗಳಲ್ಲಿ ಧ್ಯಾನಮಾಡುವುದೇ ಈ ನ್ಯಾಸದ ರೀತಿ. ಅಷ್ಟಾಕ್ಷರದ ಒಂದೊಂದು ಅಕ್ಷರಕ್ಕೂ ಪ್ರತ್ಯೇಕ ಋಷಿ, ದೇವತೆ, ಛಂದಸ್ಸುಗಳನ್ನು ಒಂದು ಗ್ರಂಥದಲ್ಲಿ ನಿರ್ದೇಶಿಸಿದ್ದಾರೆ—

'ಗೌತಮಶ್ಚ ಭರದ್ವಾಜೋ ವಿಶ್ವಾಮಿತ್ರ ಋಷಿಸ್ತಥಾ ।
ಜಮದಗ್ನಿರ್ವಸಿಷ್ಠಶ್ಚ ಕಶ್ಯಪೋಽತ್ರಿಶ್ಚ ಕುಂಭಜಃ ॥
ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ ।
ತ್ರಿಷ್ಟುಬ್ಜಗತ್ಯೌ ಚ ವಿರಾಟ್ ವಸವೋಽಷ್ಟೌ ಚ ದೇವತಾ ॥'

ಗ್ರಂಥಾಂತರದಲ್ಲಿ ಪ್ರತಿಯೊಂದು ವರ್ಣದಿಂದ ಧ್ಯೇಯರೂಪಗಳನ್ನು ಕೆಳಗಿನಂತೆ ನಿರೂಪಿಸಿದೆ—

'ಓಂಕಾರಂ ತು ಸದಾ ಧ್ಯೇಯಂ ಜ್ಯೋತಿರ್ಮಾಲಾಸಮಾಕುಲಮ್ |
ನಕಾರಂ ಮೇಘವರ್ಣಾಭಂ ಮೋಕಾರಂ ಚಿಂತಯೇತ್ತತಃ ||
ಭಿನ್ನಾಂಜನಸಮಾಕಾರಂ ತೃತೀಯಂ ಬೀಜಮುತ್ತಮಮ್ |
ನಕಾರಂ ಶ್ಯಾಮವರ್ಣಾಭಂ ಸೌಮ್ಯರೂಪಂ ಸುಶೋಭನಮ್ ||
ರಾಕಾರಂ ಜಲವರ್ಣಾಭಂ ಸಮ್ಯಕ್ ಸಂದೀಪ್ತತೇಜಸಮ್ |
ಧೂಮ್ರವರ್ಣಂ ಸದಾ ಧ್ಯೇಯಂ ಯಕಾರಂ ಪರಮುತ್ತಮಮ್ ||
ಅನೌಪಮ್ಯಗುಣಾಕಾರಂ ಣಕಾರಂ ಚ ವಿಚಿಂತಯೇತ್ |
ಮಕಾರಂ ತು ತತೋ ಧ್ಯೇಯಂ ಪದ್ಮರಾಗಸಮಪ್ರಭಮ್||'(ಮಹಾಕಪಿಲಪಂ.)

ಈ ಅಂಗನ್ಯಾಸದ ವಿಧಾನವನ್ನು ಕೆಳಗಿನ ವಾಕ್ಯದಿಂದ ತಿಳಿದುಕೊಳ್ಳಬಹುದು—

'ವಿನ್ಯಸೇದ್ವರ್ಣಮೇಕೈಕಂ ಬಿಂದ್ವಂತಂ ಧ್ರುವವೇಷ್ಟಿತಮ್ |
ತತ್ರಾಂಗುಲೀಭಿರ್ನ್ಯಾಸಃ ಸ್ಯಾಚ್ಛಿರಸ್ಯೇಕೈವ ಮಧ್ಯಮಾ ||
ತರ್ಜನೀಮಧ್ಯಮಾಭ್ಯಾಂತು ಚಕ್ಷುಷೋರ್ನ್ಯಾಸ ಇಷ್ಯತೇ |
ಅಂಗುಷ್ಠಾನಾಮಿಕಾಭ್ಯಾಂ ತು ಮುಖೇ ನ್ಯಾಸಃ ಪ್ರಕೀರ್ತಿತಃ ||
ಹೃದಯೇ ಜ್ಞಾನಮುದ್ರಾ ಸ್ಯಾದಂಗುಷ್ಠಂ ಚ ಕನಿಷ್ಠಿಕಾ |
ನಾಭೌ ಪ್ರಕೀರ್ತಿತಾ ಗುಹ್ಯೇ ಅನಂಗುಷ್ಠಾಃ ಪ್ರಕೀರ್ತಿತಾಃ |
ಸರ್ವಾ ಜಾನೌ ಚ ಪಾದೇ ಚ ಪಂಚಾಪಿ ಪರಿಕೀರ್ತಿತಾಃ ||'(ಮಂತ್ರತಂತ್ರಪ್ರ.)

ಹೀಗೆ ಎಲ್ಲ ಮಂತ್ರಗಳಲ್ಲಿಯೂ ಭಗವದ್ರೂಪಾನುಸಂಧಾನದ ಹಿನ್ನೆಲೆಯಿಂದಲೇ ನ್ಯಾಸಪದ್ಧತಿ ಹೊರಟಿದೆ ಎಂಬುದನ್ನು ಈ ಮಾರ್ಗದಿಂದ ತಿಳಿದುಕೊಳ್ಳಬಹುದು.

## ಗಾಯತ್ರಿಯ ಅಂಗನ್ಯಾಸ

ಎಲ್ಲ ಮಂತ್ರಗಳಂತೆಯೆ ಗಾಯತ್ರಿಯ ಅಂಗನ್ಯಾಸದ ರೀತಿಯೂ ಇದೇ ತೆರನಾಗಿದೆ. ಅದರ ಪ್ರತಿಯೊಂದು ಪದವೂ ಪ್ರಾತಿಸ್ವಿಕವಾಗಿ ಭಗವದ್ವಾಚಕವಾಗಿದೆ ಎಂತಲೇ ಚತುರ್ಥ್ಯಂತಗಳಾದ ಹೃದಯಾದಿ ಪದಗಳಿಂದ ಅನ್ವಿತವಾಗಬಲ್ಲವು.

ಗಾಯತ್ರಿಯ ಅರ್ಥದ ಕುರಿತು 'ವುಡ್‌ರೋಫ್' ಅವರ ವಿವರಣೆ ಮನನೀಯವಾಗಿದೆ:

"The *Gayatri-Vyakarana* of *Yoga-Yajnavalkya* thus explains the following words: *Tat*, that. The word *Yat* (which) is understood. *Savituh* is the possessive case of *Savitr* derived

from the root *Su*, "to bring forth." *Savitr* is, therefore, the bringer-forth of all that exists. The Sun (*Surya)* is the cause of all that exists, and of the state in which they exist. Bringing forth and creating all things, it is called *Savitr*. The *Bhavishya-Purana* says *Surya* is the visible *Devata*. He is the Eye of the world and the Maker of the day. There is no other *Devata* eternal like unto Him. This universe has emanated from, and will be again absorbed into, Him. Time is of and in Him. The planets, stars, the *Vasus*, *Rudras*, *Vayu*, *Agni*, and the rest are but parts of Him. By *Bhargah* is meant the *Aditya devata*, dwelling in the region of the Sun (*Surya-mandala)* in all His might and glory. He is to the Sun what our spirit (*Atma)* is to our body. Though He is in the region of the Sun in the outer or material sphere He also dwells in our inner selves. He is the light of the light in the solar circle, and is the light of the lives of all beings. As He is in outer ether, so also is He in the ethereal region of the heart. In the outer ether He is *Surya*, and in the inner ether He is the wonderful light which is the smokeless Fire In short, that Being whom the *sadhaka* realizes in the region of his heart is the *Aditya* in the heavenly firmament. The two are one. The word is derived in two ways: (1) from the root *bhrij*, "ripen, mature, destroy, reveal, shine." In this derivation *Surya* is He who matures and transforms all things. He Himself shines and reveals all things by His light. And it is He who at the final Dissolution (*pralaya)* will in His image of destructive Fire (*kalagni)*, destroy all things. (2) From *bha* = dividing all things into different classes; *ra* = colour; for He produces the colour of all created objects; *ga*, constantly going and returning. The Sun divides all things, produces the different colours of all things, and is constantly going and returning. As the *Brahmana-sarvasva* says: "The *Bhargah* is the *Atma* of all that exists, whether

moving or motionless, in the three *lokas* (*Bhur-bhuvah-svah*). There is nothing which exists apart from it.

"*Devasya* is the genitive of *Deva*, agreeing with *Savituh*. *Deva* is the radiant and playful (*lilamaya*) one, *Surya* is in constant play with creation (*srsti*), existence (*sthiti*), and destruction (*pralaya*), and by His radiance pleases all. (*Lila*, as applied to the *Brahman*, is the equivalent of *maya*.) *Varenyam* = *Varaniya*, or adorable. He should be meditated upon and adored that we may be relieved of the misery of birth and death. Those who fear rebirth, who desire freedom from death and liberation and who strive to escape the three kinds of pain (*tapa-traya*), which are *adhyatmika*, *adhidaivika*, and *adhibhautika*, meditate upon and adore the *Bharga*, who, dwelling in the region of the Sun, is Himself the three regions called *Bhur-loka*, *Bhuvar-loka*, *Svar-loka*. *Dhimahi* = *dhyayema*, from the root *dhyai*. We meditate upon, or let us meditate upon.

"*Pracodayat* = may He direct. The *Gayatri* does not so expressly state, but it is understood that such direction is along the *Catur-varga*, or four-fold path, which is *dharma*, *artha*, *kama*, and *moksa* (piety, wealth, desire, and its fulfilment and liberation, vide post.) The *Bhargah* is ever directing our inner faculties (*buddhi-vrtti*) along these paths."

(Introduction to *Tantrasastra*)

ಅಹಿರ್ಬುಧ್ನ್ಯಸಂಹಿತೆಯಲ್ಲಿ ನಿರೂಪಿಸಿದ ಗಾಯತ್ರ್ಯರ್ಥ ಇನ್ನೂ ಸೊಗಸಾಗಿದೆ:

**ತತ್**

'ಯಾ ಸಾ ಭೂತಿರ್ಮಹಾಶಕ್ತೇರ್ವೈಷ್ಣವ್ಯಾಃ ಕೋಟಿಭಾಗಜಾ |
ಶುದ್ಧಾಶುದ್ಧಮಯೈರ್ಭಾವೈಸ್ಸ್ವನ್ತೇ ವಿಸ್ತೃಣಾತಿ ತಾವರ್ ||
ಪ್ರತಿಸಂಚರವೇಲಾಯಾಂ ತಾಮಯತ್ಯೇವ ತಾಂ ಪುನಃ |
ತಾಯತೇ ತತ್ರ ತತ್ರೈವ ಭೂತ್ಯಂಶೇ ಧಾರಕಾತ್ಮನಾ ||
ಪ್ರಮಾಣತ್ವೇನ ಭೂಯಶ್ಚ ತತ್ತದರ್ಥತಯಾ ಪುನಃ |
ಅತಸ್ತದಿತಿ ಸಂಕಲ್ಪಃ ಪ್ರೋಚ್ಯತೇ ವೈಷ್ಣವಃ ಪರಃ ||

## ಸವಿತುಃ

'ಪ್ರಸೌತಿ ಸಕಲಾಶ್ಶ್ರೇಷ್ಠಾಃ ಪ್ರಸೂತೇ ಸಕಲಂ ಜಗತ್ ।
ಅವತೇರ್ಗತಿಕಾಂತ್ಯರ್ಥಾತ್ತ್ರ ರತೇರ್ದಾನಕರ್ಮಣಃ ॥
ಗತೋ ಹ್ಯವತಿ ಸರ್ವತ್ರ ಷಡ್ಭಿಃ ಕಾಂತೋ ಗುಣೈಃ ಪರಃ ।
ಭೋಗಾಪವರ್ಗಯೋರ್ದಾತಾ ಸವಿತೇತಿ ನಿರುಚ್ಯತೇ ॥'

## ವರೇಣ್ಯಮ್

'ವರ್ಯೈರ್ನೇಯಂ ವರೇಣ್ಯಂ ತು ವರಾಃ ಖ್ಯಾತಾರ ಈರಿತಾಃ ।
ವರಣೀಯಂ ವರೇಣ್ಯಂ ವಾ ವರಂ ನಯತಿ ತತ್ಪರಮ್' ॥

## ಭರ್ಗಃ

'ಭರ್ಗಸ್ತೇಜಃ ಸಮಾಖ್ಯಾತಂ ಪ್ರಭಾವಃ ಕರ್ತೃರೂಪತಾ ।
ಭರತೀದಂ ಜಗತ್ಕೃತ್ಸ್ನಂ ಸಂಭರತ್ಯಪಿ ಚೇಶ್ವರಾನ್ ॥
ರಮಯತ್ಯಪಿ ತತ್ಸರ್ವಂ ರಾತಿ ಚಾರ್ಥಮಭೀಪ್ಸಿತಮ್ ।
ಗಮಯತ್ಯಪಿ ತನ್ನಾಶಂ ಸ್ಯತಿ ಬಂಧಮಶೇಷತಃ ॥
ಭರ್ಜಯತ್ಯಖಿಲಂ ಕಷ್ಟಂ ಭ್ರಸ್ಜತೇಽನೇಹಸಂ ತಥಾ ।
ಅತೋ ಭರ್ಗಃ ಪರಂ ವಿಷ್ಣೋಃ ಸಂಕಲ್ಪಂ ವಿದುರದ್ಭುತಮ್ ॥'

## ದೇವಸ್ಯ

'ದ್ಯೋತನಃ ಸರ್ವಭಾವಾನಾಂ ದ್ಯೋತಮಾನಃ ಸ್ವಯಂ ಸದಾ ।
ಅಜ್ಞಾನಮಖಿಲಂ ಚಾನ್ಯಚ್ಛ್ಯೋಧಯತ್ಯಖಿಲಂ ಜಗತ್ ॥
ಅತಃ ಸಕಲಮೇವೇದಂ ತತ್ರೋತಂ ಮಣಿಸೂತ್ರವತ್ ।
ಇತ ಈರಣ ಈಡ್ಯಶ್ಚ ವನಿತಃ ಸಕಲಂ ವಿಯತ್ ॥
ದೇವ ಇತ್ಯುದಿತೋ ವಿಷ್ಣುಃ ಪರಮಾತ್ಮಾ ಸನಾತನಃ' ॥

## ಧೀಮಹಿ

'ಧೀಮಹೀತ್ಯತ್ರ ಧೀರ್ಜ್ಞಾನಂ ಮನನಂ ಭಾವನಂ ತಥಾ' ।

## ಧಿಯೋ ಯೋ ನಃ ಪ್ರಚೋದಯಾತ್

'ಧಿಯೋ ಧೀಪೂರ್ವಿಕಾಶ್ಶ್ರೇಷ್ಠಾಃ ಪ್ರೇರಣಂ ತು ಪ್ರಚೋದನಮ್ ।
ಯಃ ಸರ್ವಶಕ್ತಿಃ ಸವಿತಾ ದೇವಃ ಸಂವಿನ್ಮಯಶ್ಚ ಯಃ ॥
ಯಶ್ಚ ಸರ್ವವಿದೀಶಾನೋ ಧಿಯಸ್ತಾಸ್ತಾಃ ಪ್ರಚೋದಯಾತ್ ।
ಸೃಷ್ಟಿಸ್ಥಿತಿಲಯತ್ರಾಣಕ್ರಿಯಾಕಾರಣಮವ್ಯಯಮ್ ॥
ತಸ್ಯ ದೇವಸ್ಯ ಸಂಕಲ್ಪಂ ಭರ್ಗಃಸಂಜ್ಞಮುಪಾಸ್ಮಹೇ ।
ಗಾಯಂತಂ ತ್ರಾಯಮಾಣಾಯಾ ಗಾಯತ್ರ್ಯಾ ಅರ್ಥ ಈದೃಶಃ ॥'

ಭಗವಂತನು ತನ್ನ ಲೀಲಾವಿಭೂತಿಯನ್ನು ನಾನಾರೂಪವಾಗಿ ವಿಸ್ತರಗೊಳಿಸಿ ಪ್ರಳಯಕಾಲದಲ್ಲಿ ಅದನ್ನು ತನ್ನಲ್ಲಿ ಹುದುಗಿಸಿ ಮತ್ತೆ ಸೃಷ್ಟಿಯಲ್ಲಿ ಅದನ್ನು ಬಹುರೂಪವಾಗಿಸುವುದರಿಂದ—(ತನುತೇ, ವಿಸ್ತೃಣಾತಿ, ತಾಮಯತಿ, ತಾಯತೇ ಚೇದಮಿತಿ ತತ್।) ಈ ಭಗವದಿಚ್ಛೆಯೇ 'ತತ್' ಎನ್ನಿಸಿಕೊಳ್ಳುತ್ತದೆ.

ಎಲ್ಲ ಚೇಷ್ಟೆಗಳನ್ನು ನಿಯಮಿಸುವುದರಿಂದ, ಎಲ್ಲ ಜಗತ್ತನ್ನು ಸೃಜಿಸುವುದರಿಂದ, ಎಲ್ಲೆಡೆಯೂ ವ್ಯಾಪಿಸಿ ಎಲ್ಲವನ್ನೂ ರಕ್ಷಿಸುತ್ತಿರುವುದರಿಂದ, ಷಡ್ಗುಣಗಳ ಸುಂದರಮೂರ್ತಿಯಾದುದರಿಂದ, ಭೋಗಾಪವರ್ಗಗಳನ್ನು ಕೊಡುವುದರಿಂದ ಶ್ರೀಹರಿ 'ಸವಿತೃ' ಎನ್ನಿಸಿಕೊಂಡಿದ್ದಾನೆ. (ಪ್ರಸೌತಿ, ಪ್ರಸೂತೇ, ಇತಿ ಸವಿತಾ । ಸೈಃ=ಷಡ್ಗುಣೈಃ ವಃ=ಕಾಂತಃ । ಭೋಗಾಪವರ್ಗೌ ತರತಿ=ದದಾತೀತಿ=ತಾ, ತಥಾಚ ಸವತ್ಯೈವ ಸವಿತಾ ।)

ಸಜ್ಜನರಿಂದ ಗಮ್ಯವಾದುದರಿಂದ ಅವನ ಸಂಕಲ್ಪವು 'ವರೇಣ್ಯ'ವೆನ್ನಿಸಿದೆ.

ಜಗತ್ತನ್ನೆಲ್ಲ ಧರಿಸಿರುವುದರಿಂದ, ರಮಿಸಿರುವುದರಿಂದ, ಇಷ್ಟವನ್ನಿತ್ತು ಸಲಹುವುದರಿಂದ, ಪ್ರಳಯಕಾಲದಲ್ಲಿ ಎಲ್ಲವನ್ನೂ ನಾಶಗೊಳಿಸಿ ಯೋಗ್ಯರಿಗೆ ಮುಕ್ತಿಯನ್ನು ಕರುಣಿಸುವುದರಿಂದ, ಎಲ್ಲ ಕಷ್ಟಗಳನ್ನೂ ಸುಟ್ಟುಬಿಡುವುದರಿಂದ ಕಾಲವನ್ನು ಪರಿಣತಗೊಳಿಸುವುದರಿಂದ ಕೂಡ ಶ್ರೀಹರಿಯ ಸಂಕಲ್ಪ 'ಭರ್ಗಃ' ಎನ್ನಿಸಿಕೊಂಡಿದೆ. (ಭರತೀತಿ=ಭಃ । ರಮಯತಿ ರಾತಿ=ದದಾತಿ ಚೇತಿ=ರಃ । ನಾಶಂ ಗಮಯತೀತಿ=ಗಃ । ಸ್ಯತಿ ಬಂಧಮಿತಿ=ಸ್, ತಥಾ ಚ ಭರ್ಗಃ ।)

ಎಲ್ಲ ವಸ್ತುವನ್ನು ಬೆಳಗಿಸಿ ತಾನು ಜ್ಯೋತೀರೂಪನಾಗಿದ್ದು ಜಗತ್ತಿನ ಅಜ್ಞಾನದ ಕತ್ತಲನ್ನು ತೊಡೆಯುತ್ತಿರುವುದರಿಂದ, ಜಗತ್ತನ್ನು ನಿಯಮಿಸುವುದರಿಂದ, ಜಗತ್ತಿನಿಂದ ಸ್ತುತನಾದುದರಿಂದ, ಆಶ್ರಿತನಾದುದರಿಂದ ಹರಿಯನ್ನು 'ದೇವ'ನೆನ್ನುವರು. (ಸ್ವಯಂ ದೀವ್ಯತಿ=ದ್ಯೋತತೇ, ಜಗಚ್ಚ ದೇವಯತಿ=ಪ್ರಕಾಶಯತೀತಿ= ದೇವಃ । ದೀವ್ಯತೇ=ಗಮ್ಯತೇ ಇತಿ ದೇವಃ । ದೇವಯತಿ=ಪ್ರೇರಯತೀತಿ=ದೇವಃ । ದೀವ್ಯತೇ=ಸ್ತೂಯತ ಇತಿ ದೇವಃ ।)

ಹೀಗೆ ಎಲ್ಲ ಮಂತ್ರಗಳ ನ್ಯಾಸಗಳಲ್ಲೂ ಹುದುಗಿರುವ ಗೂಢಾರ್ಥಗಳನ್ನು ಅರಿತು ಆಚರಣೆಗೆ ತಂದಾಗ ಮಾತ್ರವೆ ನಾವು ಪ್ರಾಚೀನರಿಗೆ ಆನೃಣ್ಯವನ್ನು ಸಂಪಾದಿಸಿಕೊಂಡಂತಾಗುವುದು.

---

## ಮಂತ್ರಗಳ ಛಂದಸ್ಸು

ಯಾವುದೇ ಮಂತ್ರವನ್ನು ಪಠಿಸುವಾಗ, ಜಪಿಸುವಾಗ, ಅಧ್ಯಾಪಿಸುವಾಗ ಅದರ ಋಷಿ-ಛಂದಸ್ಸು-ದೇವತೆಗಳನ್ನೂ ಅದರ ಅರ್ಥವನ್ನೂ ತಿಳಿದುಕೊಂಡಿರ ಬೇಕು ಎಂದು ಶಾಸ್ತ್ರಕಾರರ ವಚನವಿದೆ. ಋಗ್ಭಾಷ್ಯದಲ್ಲಿ ಆಚಾರ್ಯರು ಉದಾಹರಿಸಿದ ಸ್ಮೃತಿಯೂ ಇದೇ ಅರ್ಥವನ್ನು ಪ್ರತಿಪಾದಿಸುತ್ತದೆ—

'ಋಷಿಚ್ಛಂದೋದೈವತಾನಿ ಜ್ಞಾತ್ವಾರ್ಥಂ ಚೈವ ಭಕ್ತಿತಃ ।
ಸ್ವಾಧ್ಯಾಯೋನೈವ ಮೋಕ್ಷಃ ಸ್ಯಾದ್ವಿರಕ್ತಸ್ಯ ಹರಿಸ್ಮೃತೇಃ ॥'

ಉಪನಿಷತ್ತೂ ಕೂಡ ಇದೇ ಮಾತನ್ನಾಡಿದೆ—

'ಯೋ ಹವಾ ಅವಿದಿತಾರ್ಷಚ್ಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತ್ಯಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತೇ ವಾ ಪದ್ಯತೇ ಪ್ರ ವಾ ಮೀಯತೇ ।'

ಛಂದಸ್ಸನ್ನು ತಿಳಿದುಕೊಳ್ಳುವುದು ಎಂದಾಗ ಪದ್ಯದ ಅರ್ಥಗಣನೆಯನ್ನು ಮಾಡಿ ಯಾವ ವೃತ್ತ ಎಂದು ತಿಳಿದುಕೊಳ್ಳುವುದಷ್ಟೆ ಅಲ್ಲ. ಆ ಛಂದಸ್ಸಿನ ದೇವತೆಯನ್ನೂ ತಿಳಿದುಕೊಳ್ಳಬೇಕು. ಈ ಮಾತನ್ನು ಆಚಾರ್ಯರು ಋಗ್ಭಾಷ್ಯದಲ್ಲಿ ಸ್ಫುಟಗೊಳಿಸಿದ್ದಾರೆ—

'ಛಂದಸ್ತ್ವೇನ ಮುನಿತ್ವೇನ ತಾಸಾಂ ಸ್ಮೃತಿರುದಾಹೃತಾ ।'

ರಾಘವೇಂದ್ರಯತಿಗಳೂ ಈ ಮಾತನ್ನು ಬರೆದಿದ್ದಾರೆ.—

ಛಂದಃಪದಸ್ಯ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಇತ್ಯ-ತ್ರೋಕ್ತದಿಶಾ ಮುಖ್ಯಾಮುಖ್ಯವೃತ್ತಿಭ್ಯಾಮಭಿಮಾನ್ಯಭಿಮನ್ಯಮಾನೋಭಯ-ಪರತ್ವಾತ್ ।' (ಮಂತ್ರಾರ್ಥಮಂಜರಿ)

ಇವುಗಳಲ್ಲಿ ವೈದಿಕಛಂದಸ್ಸುಗಳನ್ನು ಸಾಮಾನ್ಯವಾಗಿ ೧೪ ವಿಭಾಗಗಳಾಗಿ ವಿಭಾಗಿಸುತ್ತಾರೆ. ೨೪ ಅಕ್ಷರದ ಛಂದಸ್ಸಿನಿಂದ ಕ್ರಮವಾಗಿ ನಾಲ್ಕು ನಾಲ್ಕು ಅಕ್ಷರಗಳನ್ನು ಹೆಚ್ಚಿಸುತ್ತಾ ಹೋಗಬೇಕು. ಹೀಗೆ ಮುಂದುವರಿಸುತ್ತಾ ಹೋದಾಗ ೧೪ನೆಯದಾದ ಅತಿಧೃತಿಯಲ್ಲಿ ೭೬ ಅಕ್ಷರಗಳಾಗುವುವು. ಇನ್ನೂ ಹೆಚ್ಚು ಅಕ್ಷರಗಳ ವೃತ್ತಗಳು ಲೋಕದಲ್ಲಿ ಪ್ರಸಿದ್ಧಗಳಾದರೂ ವೇದ ದಲ್ಲಿ ಅವುಗಳ ಪರಿಗಣನೆಯ ಆವಶ್ಯಕತೆಯಿಲ್ಲ. ಎಂತಲೇ ಅವುಗಳನ್ನು ವೈದಿಕಛಂದಸ್ಸುಗಳಲ್ಲಿ ನಿರೂಪಿಸಿಲ್ಲ.

'ಅಥ ಚ್ಛಂದಾಂಸಿ ಗಾಯತ್ರ್ಯುಷ್ಣಿಗನುಷ್ಟುಬ್ಬೃಹತೀಪಂಕ್ತಿತ್ರಿಷ್ಟುಬ್ಜಗತ್ಯತಿ-

ಜಗತೀಶಕ್ವರ್ಯತಿಶಕ್ವರ್ಯರ್ಷ್ಟ್ಯತ್ಯಷ್ಟಿಧೃತ್ಯತಿಧೃತಯಶ್ಚತುರ್ವಿಂಶತ್ಯಕ್ಷರಾದೀನಿ ಚತುರುತ್ತರಾಣಿ ।' (ಸರ್ವಾನುಕ್ರಮಣಿಕಾ)

ಇದರಿಂದ ಆ ವೃತ್ತಗಳ ಹೆಸರು ಕೆಳಗಿನಂತಾಗುವುದು—

| ಅಕ್ಷರ | ಹೆಸರು | ಅಕ್ಷರ | ಹೆಸರು | ಅಕ್ಷರ | ಹೆಸರು |
|---|---|---|---|---|---|
| ೨೪ | ಗಾಯತ್ರೀ | ೪೪ | ತ್ರಿಷ್ಟುಪ್ | ೬೪ | ಅಷ್ಟಿ |
| ೨೮ | ಉಷ್ಣಿಕ್ | ೪೮ | ಜಗತೀ | ೬೮ | ಅತ್ಯಷ್ಟಿ |
| ೩೨ | ಅನುಷ್ಟುಪ್ | ೫೨ | ಅತಿಜಗತೀ | ೭೨ | ಧೃತಿ |
| ೩೬ | ಬೃಹತೀ | ೫೬ | ಶಕ್ವರೀ | ೭೬ | ಅತಿಧೃತಿ |
| ೪೦ | ಪಂಕ್ತಿ | ೬೦ | ಅತಿಶಕ್ವರೀ | | |

ಇವುಗಳನ್ನು ೪ ಪಾದಗಳಾಗಿ ವಿಂಗಡಿಸಿದಾಗ ಕ್ರಮವಾಗಿ ಗಾಯತ್ರಿಯು ಪಾದದಲ್ಲಿ ೬ ಅಕ್ಷರಗಳು, ಉಷ್ಣಿಕ್ಕಿನಲ್ಲಿ ೮ ಅಕ್ಷರಗಳು— ಹೀಗೆ ಸಾಗುವುದು. ಆದರೆ ೬ ಅಕ್ಷರಗಳ ನಾಲ್ಕು ಪಾದಗಳನ್ನುಳ್ಳ ವೃತ್ತದಂತೆ ೮ ಅಕ್ಷರಗಳನ್ನುಳ್ಳ ಮೂರು ಪಾದದ ವೃತ್ತವೂ ಗಾಯತ್ರಿಯೇ ಆಗುವುದು. 'ಅಷ್ಟಾಕ್ಷರಾ ವೈ ಗಾಯತ್ರೀ.' ಮೊತ್ತದಲ್ಲಿ ಎರಡೂ ೨೪ ಅಕ್ಷರಗಳಷ್ಟೆ ಆಗುವುದು ತಾನೆ. ಅದರಿಂದಲೇ—ಋಗ್ವೇದದ ಮೊದಲ ಭಾಗದ ಅಗ್ನಿಸೂಕ್ತದ ಛಂದಸ್ಸು ಗಾಯತ್ರಿ.

ವೇದದ ಈ ಅಕ್ಷರಸಂಖ್ಯೆಗಳಲ್ಲಿ ಒಮ್ಮೊಮ್ಮೆ ವ್ಯತ್ಯಾಸವಾಗುವುದಿದೆ. ೨೨-೨೩ ಅಕ್ಷರಗಳ ಗಾಯತ್ರಿಯೂ ಇದೆ; ೨೫-೨೬ ಅಕ್ಷರಗಳ ಗಾಯತ್ರಿಯೂ ಇರುವುದುಂಟು. ಆದರೆ ಇಲ್ಲಿ ವೃತ್ತಭಂಗದ ಶಂಕೆಯನ್ನು ಮಾಡುವಂತಿಲ್ಲ. ಅದಕ್ಕೆ ಪ್ರತ್ಯೇಕವಾಗಿ ಪರಿಷ್ಕಾರವನ್ನೆ ಮಾಡಿದ್ದಾರೆ—

**'ಊನಾಧಿಕೇನೈಕೇನ ನಿಚೃದ್ಭುರಿಜೌ ದ್ವಾಭ್ಯಾಂ ವಿರಾಟ್ ಸ್ವರಾಜೌ'**(ಅನು.)

**'ತಾಸ್ತಾ ಊನಾಧಿಕೇಷ್ವಪಿ । ನಿಚೃದ್ಭುರಿಗ್ವಿರಾಟ್‌ಸಂಜ್ಞಾಃ'** (ಋಗ್ಭಾಷ್ಯ)

**'ಏಕೇನಾಕ್ಷರೇಣ ನ್ಯೂನಾ ನಿಚೃತ್ । ಏಕೇನಾಧಿಕಾ ಭುರಿಕ್ । ದ್ವಾಭ್ಯಾಂ ನ್ಯೂನಾ ವಿರಾಟ್ । ದ್ವಾಭ್ಯಾಮಧಿಕಾ ಸ್ವರಾಟ್ ।'** (ಋಗ್ಭಾಷ್ಯಟೀಕಾ)

ಈ ಪರಿಷ್ಕಾರದ ಆಧಾರದಿಂದ ಎಲ್ಲ ವೃತ್ತಗಳಲ್ಲೂ ಅಕ್ಷರವ್ಯತ್ಯಾಸವನ್ನು ಕೂಡಿಸಿಕೊಳ್ಳಬೇಕು. ಉದಾಹರಣೆಗೆ: ೨೩ ಅಕ್ಷರಗಳನ್ನುಳ್ಳ ಗಾಯತ್ರಿ 'ನಿಚೃದ್ಗಾಯತ್ರಿ', ೨೫ ಅಕ್ಷರಗಳಿದ್ದರೆ 'ಭುರಿಗ್ಗಾಯತ್ರಿ', ೨೨ ಅಕ್ಷರಗಳಾದರೆ 'ವಿರಾಡ್ಗಾಯತ್ರಿ', ೨೬ ಅಕ್ಷರಗಳಿದ್ದರೆ 'ಸ್ವರಾಡ್ಗಾಯತ್ರಿ'. ಈ ಕಾರಣ

ದಿಂದಲೇ ಒಂದೆರಡಕ್ಷರಗಳು ಹೆಚ್ಚುಕಮ್ಮಿಯಿದ್ದರೂ ವೃತ್ತಭಂಗವಾಗುವಂತಿಲ್ಲ ಎಂಬ ಮಾತು ಹೊರಟಿತು—

'ನವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಮ್ ।'

ಎರಡಕ್ಷರಗಳಿಂದಲೂ ಕಮ್ಮಿಯಿದ್ದರೂ—ಅದನ್ನು ವಿರಾಡ್ಗಾಯತ್ರಿಯೆಂದೇ ಕರೆಯುವರು—

'ದ್ವಾಭ್ಯಾಮಿತಿ ದ್ವಿತ್ವಸ್ಯೋಪಲಕ್ಷಣತ್ವೇನಾದೋಷಾತ್ । ಏವಂಚ ತ್ರಿಪ್ರ-ಭೃತಿಭಿರಕ್ಷರೈರ್ನ್ಯೂನತ್ವೇಽಪಿ ವಿರಾಟ್ತ್ವಸಿದ್ಧಿಃ ।'

'ಯಾಃ ಕಾಶ್ಚಿದ್ಬಹುಪಾದಾಸ್ತು ಗಾಯತ್ರ್ಯೋ ಹೀನತಾಂ ಗತಾಃ ।
ಅಕ್ಷರೈರ್ಬಹುಭಿಸ್ತಾಸ್ತು ಗಾಯತ್ರ್ಯ ಉಪಧಾರಯೇತ್ ॥'

ಆದರಿಂದಲೇ— ಓಂಕಾರದ ಛಂದಸ್ಸು ಗಾಯತ್ರಿ ಎಂದರೆ ತಪ್ಪಿಲ್ಲ. ಇಷ್ಟೇ ಅಲ್ಲದೆ— ಅಕ್ಷರಗಳ ವ್ಯತ್ಯಾಸಕ್ಕನುಗುಣವಾಗಿ ವೃತ್ತಗಳನ್ನು ನಾನಾವಿಧವಾಗಿ ವಿಭಾಗಿಸಿದ್ದಾರೆ. ಅದರಲ್ಲಿ ಗಾಯತ್ರಿಯ ವಿಭಾಗವೊಂದನ್ನು ಉದಾಹರಣೆಯಾಗಿ ಇಲ್ಲಿ ಉಲ್ಲೇಖಿಸುತ್ತೇನೆ:

'ಪ್ರಥಮಂ ಛಂದಸ್ತ್ರಿಪದಾ ಗಾಯತ್ರೀ ಪಂಚಕಾಶ್ಚತ್ವಾರಃ, ಷಟ್ಕಶ್ಚೈಕಶ್ಚತು-ರ್ಥಶ್ಚತುಷ್ಕೋ ವಾ ಪದಪಂಕ್ತಿಃ, ಷಟ್ಸಪ್ತೈಕಾದಶಾ ಉಷ್ಣಿಗ್ಗರ್ಭಾ, ತ್ರಯಃ ಸಪ್ತಕಾಃ ಪಾದನಿಚೃತ್, ಮಧ್ಯಮಃ ಷಟ್ಕಶ್ಚೇದತಿನಿಚೃತ್, ದಶಕಶ್ಚೇದ್ಯವಮಧ್ಯಾ, ಯಸ್ಯಾಸ್ತು ಷಟ್ಕಸ್ತಪಕಾಷ್ಟಕಾಃ ಸಾ ವರ್ಧಮಾನಾ, ವಿಪರೀತಾ ಪ್ರತಿಷ್ಠಾ, ದ್ವೌ ಷಟ್ಕೌ ಚ ಸಪ್ತಕಶ್ಚ ಹ್ರಸೀಯಸೀ ।' (ಅನುಕ್ರಮಣೀ.)

ಮೇಲಿನ ವಾಕ್ಯದಂತೆ ಗಾಯತ್ರಿಯ ವಿಭಾಗಗಳು ೮ ತೆರನಾಗಿದ್ದು ಅವು ಈ ರೀತಿಯಿವೆ—

೧ ಐದಕ್ಷರದ ನಾಲ್ಕು ಪಾದಗಳ<br>ಅಥವಾ—ಒಂದರಲ್ಲಿ ಆರು ನಾಲ್ಕನೆಯ<br>ಪಾದದಲ್ಲಿ ನಾಲ್ಕು ಅಕ್ಷರಗಳ ಗಾಯತ್ರಿ } ಪದಪಂಕ್ತಿ

೨ ಕ್ರಮವಾಗಿ ಮೂರು ಪಾದಗಳಲ್ಲಿ<br>೬—೭—೧೧ ಅಕ್ಷರಗಳುಳ್ಳ ಗಾಯತ್ರಿ } ಉಷ್ಣಿಗ್ಗರ್ಭಾ

೩ ಏಳಕ್ಷರಗಳ ಮೂರು ಪಾದಗಳುಳ್ಳ ಗಾಯತ್ರಿ: ಪಾದನಿಚೃತ್

೪ ನಡುವಿನ ಪಾದವೊಂದು ಆರಕ್ಷರಗಳದ್ದಾದರೆ: ಅತಿನಿಚೃತ್

೫ ನಡುವಿನ ಪಾದವೊಂದು ೧೦ ಅಕ್ಷರಗಳದ್ದಾದರೆ: ಯವಮಧ್ಯಾ

೬ ಕ್ರಮವಾಗಿ ೩ ಪಾದಗಳಲ್ಲಿ ೬–೭–೮ ಅಕ್ಷರಗಳನ್ನುಳ್ಳ ಗಾಯತ್ರಿ } ವರ್ಧಮಾನಾ

೭ ವಿಪರೀತವಾಗಿ ೮–೭–೬ ಅಕ್ಷರಗಳಿದ್ದರೆ: ಪ್ರತಿಷ್ಠಾ

೮ ಎರಡು ಪಾದಗಳಲ್ಲಿ ಆರಕ್ಷರಗಳಿದ್ದು ಮೂರನೆಯಪಾದದಲ್ಲಿ ಏಳಕ್ಷರಗಳಿದ್ದರೆ } ಹ್ರಸೀಯಸೀ

ಹೀಗೆ ಎಲ್ಲ ಛಂದಸ್ಸುಗಳಲ್ಲಿಯೂ ಪ್ರಭೇದಗಳನ್ನು ಛಂದಃಶಾಸ್ತ್ರದಿಂದ ತಿಳಿದುಕೊಂಡು ಸರಿಯಾದ ಛಂದೋಜ್ಞಾನವನ್ನು ಸಂಪಾದಿಸಿಕೊಳ್ಳಬೇಕು.

ಈ ಛಂದಸ್ಸಿನ ಅಭಿಮಾನಿದೇವತೆಗಳನ್ನೂ ಋಗ್ಭಾಷ್ಯವಚನದಿಂದ ತಿಳಿದುಕೊಳ್ಳಬಹುದು:

'ಗಾಯತ್ರೀ ಬೃಹತೀ ಚೈವ ತಾಃ ಸರ್ವಾ ಗರುಡಸ್ತಥಾ ।
ಬ್ರಹ್ಮಾಣ್ಯನುಷ್ಟುಬಿಂದ್ರಾಣೀ ತ್ರಿಷ್ಟುಪ್ ಸ್ವಾಹೇತಿ ಚೋಚ್ಯತೇ ॥
ಗಾಯತ್ರೀ ಜಗತೀ ಚೈವ ವಾರುಣೀ ರೋಹಿಣೀ ತಥಾ ।
ಅನುಷ್ಟುಬ್ಬೃಹತೀ ಚೈವ ತಾರಾ ಪಂಕ್ತಿಃ ಶಚೀ ತಥಾ ॥
ಉಷ್ಣಿಕ್ ಸೌರೀ ಜಗತ್ಯಶ್ಚ ಸರ್ವದೇವಸ್ತ್ರಿಯೋ ಮತಾಃ ।
ವಿರಾಣ್ಮಿತ್ರಾವರುಣಯೋರ್ಭಾರ್ಯೋರ್ ಇತಿ ಚ ಕೀರ್ತಿತೇ ॥
ಅತಿಚ್ಛಂದಾಂಸಿ ಸರ್ವಾಣಿ ಸರ್ವದೇವ್ಯಃ ಪ್ರಕೀರ್ತಿತಾಃ ।
ವಿರಾಡಿತಿ ಚ ನಾಮಾಸಾಮ್'

ಈ ವಚನದಂತೆ ಈ ರೀತಿಯಾಗಿ ನಿರ್ಣಯಿಸಬಹುದು—

| ಛಂದಸ್ಸು | ಅಭಿಮಾನಿಗಳು |
| --- | --- |
| ಗಾಯತ್ರಿ | ಶ್ರೀ, ಸರಸ್ವತಿ, ಭಾರತಿ, ಗರುಡ ಸ್ವಾಹಾ. |
| ಉಷ್ಣಿಕ್ | ಸೂರ್ಯಪತ್ನಿ. |
| ಅನುಷ್ಟುಪ್ | ಸರಸ್ವತಿ, ರೋಹಿಣಿ. |
| ಬೃಹತಿ | ಶ್ರೀ, ಸರಸ್ವತಿ, ಭಾರತಿ, ಗರುಡ, ತಾರಾ. |
| ಪಂಕ್ತಿ | ಶಚೀ, ಮಿತ್ರಾವರುಣರ ಮಡದಿಯರು. |
| ತ್ರಿಷ್ಟುಪ್ | ಶಚಿ. |
| ಜಗತೀ | ವಾರುಣಿ, ಸರ್ವದೇವತಾಸ್ತ್ರೀಯರು. |

ಇನ್ನುಳಿದ ಅತಿಜಗತಿಯಿಂದ ಅತಿಧೃತಿಯವರೆಗಿನ ವೃತ್ತಗಳಿಗೆ ಅತಿಚ್ಛಂದಸ್ಸು ಎಂದು ಹೆಸರು. ಈ ಅತಿಚ್ಛಂದಸ್ಸುಗಳಿಗೆ ಎಲ್ಲ ದೇವಿಯರೂ ಅಭಿಮಾನಿನಿಯರು.

ಈ ಛಂದೋಭಿಮಾನಿಗಳನ್ನು ವೇದವಚನಗಳಿಂದಲೂ ತಿಳಿಯಬಹುದು–

**'ಅಗ್ನೇರ್ಗಾಯತ್ರ್ಯಭವತ್ಸಯುಗ್ವಾ'**

ಅಗ್ನಿಯ ಸಹಚಾರಿಣಿಯಾದ ಸ್ವಾಹಾದೇವಿಯು ಗಾಯತ್ರಿಯ ಅಭಿಮಾನಿನಿಯಾದಳು.

**'ಉಷ್ಣಿಹಯಾ ಸವಿತಾ ಸಂಬಭೂವ'**

ಉಷ್ಣಿಗಭಿಮಾನಿನಿಯಾದ ತನ್ನ ಮಡದಿಯೊಡನೆ ಸೂರ್ಯನು ಕ್ರೀಡಿಸಿದನು. (ಉಷ್ಣಿಹಯಾ=ಉಷ್ಣಿಹಾ)

**'ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ ।'**

ಉತ್ತಮ ವಚನಗಳಿಂದ ಪೂಜ್ಯನಾದ ಚಂದ್ರನು ಅನುಷ್ಟುಬ್‌ದೇವತೆಯಾದ ರೋಹಿಣಿಯೊಡನೆ ರಮಿಸಿದನು.

**'ಬೃಹಸ್ಪತೇರ್ಬೃಹತೀ ವಾಚಮಾವತ್'**

ಬೃಹಸ್ಪತಿಯ ಮಾತಿನಂತೆ ನಡೆವ ಸಾಧ್ವಿತಾರೆಯು ಬೃಹತಿಯ ದೇವತೆ.

**'ವಿರಾಣ್ಮಿತ್ರಾವರುಣಯೋರಭಿಶ್ರೀಃ'**

ಮಿತ್ರಾವರುಣಪತ್ನಿಯರೇ ವಿರಾಟ್ (ಪಂಕ್ತಿ) ಛಂದಸ್ಸಿನ ದೇವತೆಗಳು.

**'ಇಂದ್ರಸ್ಯ ತ್ರಿಷ್ಟುಬಿಹ ಭಾಗೋ ಅಹ್ನಃ'**

ದಿವಸಾಭಿಮಾನಿಯಾದ ಇಂದ್ರನ ಅರ್ಧಾಂಗಿಯಾದ ಶಚಿಯೇ ತ್ರಿಷ್ಟುಪಿನ ದೇವತೆ.

**'ವಿಶ್ವಾನ್ ದೇವಾನ್ ಜಗತ್ಯಾವಿವೇಶ'**

ಜಗತ್ಯಭಿಮಾನಿನಿಯರಾದ ದೇವಿಯರು ತಮ್ಮ ತಮ್ಮ ಗಂಡಂದಿರಾದ ಎಲ್ಲ ದೇವತೆಗಳನ್ನೂ ಹೊಂದಿಕೊಂಡಿದ್ದರು.

ಛಂದಃಶಾಸ್ತ್ರವನ್ನು ಬರೆದ ಪಿಂಗಲನಾಗನು ಮಾತ್ರ ಈ ಶ್ರುತಿಗಳಿಗೆ ಬೇರೆ ಅರ್ಥವನ್ನು ಮಾಡಿಕೊಂಡಿದ್ದಾನೆ. ಅವನ ರೀತ್ಯಾ ಈ ಏಳು ಛಂದಸ್ಸುಗಳಿಗೆ ಕ್ರಮವಾಗಿ ಅಗ್ನಿ, ಸೂರ್ಯ, ಚಂದ್ರ, ಬೃಹಸ್ಪತಿ, ಮಿತ್ರಾವರುಣರು, ಇಂದ್ರ, ಮತ್ತು ವಿಶ್ವೇದೇವತೆಗಳು ಅಭಿಮಾನಿಗಳು.

**'ಅಗ್ನಿಃ ಸವಿತಾ ಸೋಮೋ ಬೃಹಸ್ಪತಿರ್ಮಿತ್ರಾವರುಣಾವಿಂದ್ರೋ ವಿಶ್ವೇದೇವಾ ದೇವತಾಃ ।'**

ಆದರೆ–ಆಚಾರ್ಯರು ಋಗ್ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣಕ್ಕೆ ವಿರುದ್ಧವಾಗಿರುವ ಪಿಂಗಲನಾಗನ ಈ ಅರ್ಥ ಎಷ್ಟರಮಟ್ಟಿಗೆ ಯುಕ್ತ

ವೆಂಬುದು ಸಂಶಯಾಸ್ಪದವಾಗಿದೆ. ಪಿಂಗಲನ ಪಕ್ಷಕ್ಕೆ ಅನುಲಕ್ಷಿಸಿಯೋ ಎಂಬಂತೆ ಟೀಕಾಚಾರ್ಯರು ಭಾಷ್ಯವಚನದ ಏವಕಾರಕ್ಕೆ ಕೆಳಗಿನಂತೆ ಅರ್ಥ ಬರೆದಿದ್ದಾರೆ—

'ಏವಕಾರೋಽನ್ಯಥೋಕ್ತಿನಿರಾಸಾರ್ಥಃ |'

ಇದೇ ತೆರನಾಗಿ ನಾಲ್ಕನೆಯ ಅಧ್ಯಾಯದಲ್ಲಿ ಉಕ್ತಗಳಾದ ಮಂತ್ರಗಳ ಛಂದಸ್ಸು ಮತ್ತು ಅಭಿಮಾನಿಗಳನ್ನೂ ತಿಳಿದುಕೊಂಡು ಜಪಿಸಬೇಕು. ಇದರ ವಿಶೇಷವಿವರಗಳನ್ನು ಋಗ್ಭಾಷ್ಯದಂಥ ಗ್ರಂಥದಲ್ಲಿಯೋ— ಅನುಕ್ರಮಣಿಯಲ್ಲಿಯೋ, ಪಿಂಗಲನೇ ಮೊದಲಾದವರ ಛಂದಃಶಾಸ್ತ್ರದ ಗ್ರಂಥಗಳಲ್ಲಿಯೋ ಕಂಡುಕೊಂಡು ಜಪಪಠನಾದಿಗಳಲ್ಲಿ ಬಳಸಿಕೊಳ್ಳಬೇಕು.

---

## ಷೋಡಶ ಸಂಸ್ಕಾರಗಳು

ಷೋಡಶ ಸಂಸ್ಕಾರಗಳಲ್ಲಿ–ಕೆಲವು ಈಗ ಬಳಕೆಯಲ್ಲಿ ಇಲ್ಲ. ಉದಾಹರಣೆಗೆ–ವಿಷ್ಣುಬಲಿ–ನಾಲ್ಕು ಮಹಾವ್ರತಗಳು ಅಥವಾ ವೇದವ್ರತಗಳನ್ನು ಇಟ್ಟುಕೊಳ್ಳಬಹುದು. ಈಗ ಸುಮಾರಾಗಿ ಹತ್ತೋ ಹನ್ನೆರಡೋ ಸಂಸ್ಕಾರಗಳನ್ನಷ್ಟೆ ಮಾಡುವರು. ಅವುಗಳ ಕಾಲವಿಧಿಗಳ ಕುರಿತು ಸಂಕ್ಷೇಪವಾದ ಟಿಪ್ಪಣಿಯನ್ನು ಕೆಳಗೆ ಕೊಟ್ಟಿದ್ದೇನೆ. ವಿವರವಿಧಾನಗಳನ್ನು ಪೌರೋಹಿತ್ಯದ ಗ್ರಂಥಗಳಿಂದಲೂ, ಬಲ್ಲವರಿಂದಲೂ ತಿಳಿದುಕೊಳ್ಳಬಹುದು.

೧ ಗರ್ಭಾಧಾನಮ್: 'ಯದಾ ಋತುಮತೀ ಭವತ್ಯುಪರತಶೋಣಿತಾ ತದಾ ಸಂಭವಕಾಲಃ' (ಗೋಭಿಲ.)

'ಷೋಡಶರ್ತುರ್ನಿಶಾಃ ಸ್ತ್ರೀಣಾಂ ತಾಸು ಯುಗ್ಮಾಸು ಸಂವಿಶೇತ್ |' (ಮನು.)

'ಗರ್ಭಾಧಾನೇ ಸದಾ ಗ್ರಾಹ್ಯಾ ವರಾ ಭೌಮರವೀಜ್ಯಕಾಃ |'

ಸಂತಾನದ ವಿಷಯದಲ್ಲಿ ಬಹುಜಾಗರೂಕರಾದ 'ಪ್ರಜಾಯೈ ಗೃಹಮೇಧಿನಾಂ' ಎಂಬ ಮಾತನ್ನು ಅಕ್ಷರಶಃ ಪಾಲಿಸುತ್ತಿದ್ದ ಪ್ರಾಚೀನರು ಸಂಗಮದ ಕುರಿತು ಬಹುಜಾಗರೂಕರು. ಪ್ರಥಮರಾತ್ರಿಯಲ್ಲೇ ಬಂಧಗಳ ಪಾಂಡಿತ್ಯಕ್ಕೆ ಬಲಿಬಿದ್ದು ಸಂತಾನವನ್ನು ಕಳೆದುಕೊಳ್ಳಬೇಡಿ ಎಂದು ಅವರು ಎಚ್ಚರಿಕೆಯನ್ನಿತ್ತಿದ್ದಾರೆ:

'ಅತ್ರ ಸಮ್ಯಗಾಧಾನಹೇತುತಯಾ ಉತ್ತಾನಕರಚರಣಾಮೇವ ಕುರ್ವೀತ ನ ತಿರ್ಯಗಾಹಿತಕರಚರಣಾಂ ಸ್ತ್ರಿಯಮ್ | ಋತ್ವಭಿಗಮನಾನಂತರಂ ದಕ್ಷಿಣಪಾರ್ಶ್ವೇನ ಸ್ವಾಪಯೇತ್ | ಪುರುಷಾಯಿತೇ ತು ಗರ್ಭಾನುತ್ಪತ್ತಿರಿತಿ |'

೨ ಪುಂಸವನಮ್: ‘ಪುಮಾನ್ ಸೂಯತೇಽನೇನ ।’ ಹುಟ್ಟುವ ಮಗು ಗಂಡಾಗಿರಲಿ ಎನ್ನುವುದಕ್ಕಾಗಿ ಈ ವ್ರತವನ್ನಾಚರಿಸಬೇಕಂತೆ!

‘ಪುಂಸವನಮ್=The first of the purificatory Samskaras: it is a ceremony performed on a woman's pereciving the first signs of a living conception, with a view to the birth of a son.’

(V. S. Apte)

ಅದರ ಕಾಲವನ್ನೂ ವಿಧಾನವನ್ನೂ ಸ್ಮೃತಿಕಾರರು ಕೆಳಗಿನಂತೆ ಬರೆದಿದ್ದಾರೆ:

‘ವ್ಯಕ್ತೇ ಗರ್ಭೇ ತೃತೀಯೇ ತು ಮಾಸೇ ಪುಂಸವನಂ ಭವೇತ್ ।
ಗರ್ಭೇಽವ್ಯಕ್ತೇ ತೃತೀಯೇ ಚೇಚ್ಚತುರ್ಥೇ ಮಾಸಿ ವಾ ಭವೇತ್ ॥’ (ಶೌನಕ.)

‘ತೃತೀಯಸ್ಯ ಗರ್ಭಮಾಸಸ್ಯಾದಿಮದಶೇ ಪುಂಸವನಕಾಲಃ ।’ (ಗೋಭಿಲ.)

‘ಪ್ರಾತಃ ಸಶಿರಸ್ಕಾಪ್ಲುತಾ ಪಶ್ಚಾದಗ್ನೇರುದಗಗ್ರೇಷು ಕುಶೇಷು ಪ್ರಾಚ್ಯುಪವಿಶತಿ । ಪಶ್ಚಾತ್ಪತಿರವಸ್ಥಾಯ ದಕ್ಷಿಣೇನ ಪಾಣಿನಾ ದಕ್ಷಿಣಮಂಸಮನ್ವವಮೃಷ್ಯಾನಾಹಿತಂ ನಾಭಿದೇಶಮಭಿಸ್ಪೃಶೇತ್ ‘ಪುಮಾಂಸೌ ಮಿತ್ರಾವರುಣಾವಿ’ತ್ಯೇತಯರ್ಚಾ ।’ (ಗೋಭಿಲ.)

೩ ಸೀಮಂತೋನ್ನಯನಮ್: ‘ಸೀಮಂತಮೂರ್ಧ್ವಂ ನಯತ್ಯತ್ರ’

ಆರನೆಯ ಅಥವಾ ಎಂಟನೆಯ ಮಾಸದಲ್ಲಿ ಸೀಮಂತೋನ್ನಯನವೆಂದು ಕಾಲನಿರ್ಣಯವನ್ನು ಕೆಲವರು ಬರೆದರೆ—ಗರ್ಭದ ಚಲನೆ ಕಂಡುಬಂದ ಮೇಲೆ ಪ್ರಸವದ ಮೊದಲು ಈ ಸಂಸ್ಕಾರ ವಿಹಿತವಾಗಿದೆ ಎಂದು ಸಾಮಾನ್ಯವಾಗಿ ನಿರೂಪಿಸುವವರೂ ಇದ್ದಾರೆ:

‘ಅಥ ಸೀಮಂತಕರಣಂ ಪ್ರಥಮೇ ಗರ್ಭೇ ಮಾಸಿ ಷಷ್ಠೇಽಷ್ಟಮೇ ವಾ ।’

(ಗೋಭಿಲ.)

‘ಗರ್ಭಸ್ಪಂದನೇ ಸೀಮಂತೋನ್ನಯನಂ ಯಾವನ್ನ ಬಾಲಪ್ರಸವಃ ।’ (ಶಂಖ.)

೪ ವಿಷ್ಣುಬಲಿ: ಸೀಮಂತೋನ್ನಯನದ ತರುವಾಯ ಪ್ರಸವಪೂರ್ವಭಾವಿಯಾಗಿ ದೇವತಾಸಂತುಷ್ಟಿಗಾಗಿ ರಚಿಸುವ ಒಂದು ಸಂಸ್ಕಾರ. ಈ ಮೂರು ಸಂಸ್ಕಾರಗಳನ್ನೂ ಈಗ ಜತೆಯಾಗಿಯೇ ಆಚರಿಸುತ್ತಾರೆ.

೫ ಜಾತಕರ್ಮ: ಇದರ ಕಾಲವಿಧಿಗಳನ್ನು ಕೆಳಗಿನ ವಾಕ್ಯ ವಿವರಿಸುತ್ತದೆ:

‘ಪ್ರಾಙ್ನಾಭಿವರ್ಧನಾತ್ಪುಂಸೋ ಜಾತಕರ್ಮ ವಿಧೀಯತೇ ।’ (ಮನು.)

‘ಕುಮಾರಂ ಜಾತಂ ಪುನರನ್ಯೈರಾಲಂಭನಾತ್ ಸರ್ಪಿರ್ಮಧುನೀ ಹಿರಣ್ಯನಿಕಾಷಂ ಹಿರಣ್ಯೇನ ಪ್ರಾಶಯೇತ್ । ‘ಪ್ರ ತೇ ದದಾಮಿ ಮಧುನೀ ಘೃತಸ್ಯ

ವೇದಂ ಸವಿತ್ರಾ ಪ್ರಸೂತಂ ಮಘೋನಾಮ್ | ಆಯುಷ್ಮಾನ್ ಗುಪ್ತೋ ದೇವತಾಭಿಃ ಶತಂ ಜೀವ ಶರದೋ ಲೋಕೇ ಅಸ್ಮಿನ್' ಇತಿ |' (ಆಶ್ವಲಾಯನ.)

೬ ನಾಮಕರಣಮ್: 'ಏಕಾದಶೇ ದ್ವಾದಶೇ ವಾಽಹನಿ ಪಿತಾ ನಾಮ ಕುರ್ಯಾತ್ |' (ಶ್ರುತಿ.)

'ಜನನಾದ್ದಶರಾತ್ರೇ ವ್ಯುಷ್ಟೇ ಶತರಾತ್ರೇ ಸಂವತ್ಸರೇ ವಾ ನಾಮಕರಣಮ್ |' (ಗೋಭಿಲ.)

ಪತಂಜಲಿಮಹರ್ಷಿ ಕೂಡ ಈ ವಿಷಯವನ್ನು ಉಲ್ಲೇಖಿಸಿದ್ದಾನೆ:

'ಯಥಾ ದಶಮ್ಯಾಂ ಯಾಜ್ಞಿಕಾಃ ಪಠಂತಿ ದಶಮ್ಯುತ್ತರಕಾಲಂ ಪುತ್ರಸ್ಯ ಜಾತಸ್ಯ ನಾಮ ವಿದಧ್ಯಾತ್, ಘೋಷವದಾದ್ಯಂತರಂತಸ್ಥಮವೃದ್ಧಂ ತ್ರಿಪುರುಷಾನೂಕಮನರಿ ಪ್ರತಿಷ್ಠಿತಂ ತದ್ಧಿ ಪ್ರತಿಷ್ಠಿತತಮಂ ಭವತಿ |' (ಮಹಾಭಾಷ್ಯ.)

ಹೆಂಗಸರಿಗೆ ಹೆಸರನ್ನು ಆರಿಸುವಾಗ ಆದಷ್ಟು ಮಧುರವೂ ಸುಂದರವೂ ಆದ ಹೆಸರನ್ನ ಆರಿಸಬೇಕು ಎಂದು ಶಾಸ್ತ್ರಕಾರರ ಆಶಯ:

'ಸ್ತ್ರೀಣಾಂ ಸುಖೋದ್ಯಮಕ್ರೂರಂ ವಿಸ್ಪಷ್ಟಾರ್ಥಂ ಮನೋಹರಮ್ |
ಮಾಂಗಲ್ಯಂ ದೀರ್ಘವರ್ಣಾಂತಮಾಶೀರ್ವಾದಾಭಿಧಾನವತ್ ||' (ಮನು.)
'ಅಯುಗ್ ದಾಂತಂ ಸ್ತ್ರೀಣಾಮ್' (ಗೋಭಿಲ.)
ಯಥಾ ಯಶೋದಾ, ವಸುದೇತ್ಯಾದಿ |

೭ ಉಪನಿಷ್ಕ್ರಮಣಮ್: ಮಗುವಿಗೆ ಮೂರು ನಾಲ್ಕು ತಿಂಗಳು ತುಂಬಿದಾಗ ಹೊರಗಿನ ಗಾಳಿ ತಿನ್ನಿಸಲಿಕ್ಕಾಗಿ ದೇವಾಲಯದಂಥ ಪುಣ್ಯಸ್ಥಲದೆಡೆಗೆ ಕರದೊಯ್ಯುವುದು ಈಗಲೂ ಐದೆಯರಲ್ಲಿ ನಡೆದುಬಂದ ರೂಢಿ.

'ಉಪನಿಷ್ಕ್ರಮಣಮ್ = One of the Samskaras or religious rites, i. e., taking out a child for the first time into the open air (which is usually performed in fourth month of its ages).' (V. S. Apte.)

೮ ಅನ್ನಪ್ರಾಶನಮ್: 'ಅನ್ನಸ್ಯ ಪ್ರಾಶನಂ ಕಾರ್ಯಂ ಮಾಸಿ ಷಷ್ಠೇಽಷ್ಟಮೇ ಬುಧೈಃ |
ಸ್ತ್ರೀಣಾಂ ತು ಪಂಚಮೇ ಮಾಸಿ ಸಪ್ತಮೇ ಪ್ರಜಗೌ ಮುನಿಃ ||'
(ಕೃತ್ಯಚಿಂತಾಮಣಿ)

೯ ಚೌಲಮ್: 'ತೃತೀಯೇ ಪಂಚಮೇಽಬ್ದೇ ವಾ ಸ್ವಕುಲಾಚಾರತೋ ಹಿತಮ್ |
ಚೌಲಂ ಶಿಶೂನಾಂ ಯತ್ನೇನ ಸ್ವಗೃಹ್ಯೋಕ್ತವಿಧಾನತಃ |
ಆಧಾನತೋ ಜನ್ಮತೋ ವಾ ಸಪ್ತಮಾಬ್ದೇಽಪಿ ಕಾರಯೇತ್ ||' (ವಸಿಷ್ಠ.)

ಈ ಸಂಸ್ಕಾರವನ್ನು ಚೂಡಾಕರ್ಮವೆಂದೂ ಕರೆಯುವರು.

೧೦ ಉಪನಯನಮ್: ವೇದಾಧ್ಯಯನಕ್ಕಾಗಿ ಗುರುವಿನ ಬಳಿಗೆ ಕಳಿಸಿ ಕೊಡುವ ಸಂಸ್ಕಾರವನ್ನು 'ಉಪನಯನ' (ಉಪ=ಗುರೋಃ ಸಮೀಪೇ ನಯನಮ್) ಎಂದು ಕರೆವರು. ಎಂಟನೆಯ ವಯಸ್ಸಿನಲ್ಲಿ ಅಥವಾ ಗರ್ಭಾಷ್ಟಮದಲ್ಲಿ ಇದನ್ನು ಮಾಡುವುದು ಹೆಚ್ಚು ಬಳಕೆ.

'ಗೃಹ್ಯೋಕ್ತ ಕರ್ಮಣಾ ಯೇನ ಸಮೀಪಂ ನೀಯತೇ ಗುರೋಃ ।
ಬಾಲೋ ವೇದಾಯ ತದ್ಯೋಗಾದ್ಬಾಲಸ್ಯೋಪನಯಂ ವಿದುಃ ॥'
'ಗರ್ಭಾಷ್ಟಮೇಽಷ್ಟಮೇ ವಾಽಬ್ದೇ ಬ್ರಾಹ್ಮಣಸ್ಯೋಪನಾಯನಮ್॥'(ಮನು.)

೧೧ ಮಹಾನಾಮ್ನೀ
೧೨ ಮಹಾವ್ರತ
೧೩ ಉಪನಿಷತ್
೧೪ ಗೋದಾನ

ಈ ನಾಲ್ಕು ಸಂಸ್ಕಾರಗಳಿಗೆ ಒಟ್ಟಿಗೆ ಮಹಾವ್ರತವೆನ್ನುವರು. ವೇದವ್ರತವೆಂದೂ ವ್ಯವಹರಿಸುವುದುಂಟು.

'ಪ್ರಥಮಂ ಸ್ಯಾನ್ಮಹಾನಾಮ್ನೀ ದ್ವಿತೀಯಂ ಚ ಮಹಾವ್ರತಮ್ ।
ತೃತೀಯಂ ಸ್ಯಾದುಪನಿಷದ್ ಗೋದಾನಂ ಚ ತತಃ ಪರಮ್ ॥'

ಹದಿಮೂರರಲ್ಲಿ ಮಹಾನಾಮ್ನೀ ವ್ರತವನ್ನೂ, ಹದಿನಾಲ್ಕು-ಹದಿನೈದರಲ್ಲಿ ಮಹಾವ್ರತ ಉಪನಿಷತ್ತುಗಳನ್ನೂ, ಹದಿನಾರರಲ್ಲಿ ಗೋದಾನವನ್ನೂ ಆಚರಿಸಬೇಕೆಂದು ವಿಧಿಯಿದೆ—

'ವಿಪ್ರಸ್ಯ ಜನ್ಮತಸ್ತ್ರಯೋದಶೇ ವರ್ಷೇ ಮಹಾನಾಮ್ನೀವ್ರತಮ್ । ಚತುರ್ದಶೇ ಮಹಾವ್ರತಮ್ । ಪಂಚದಶೇ ಉಪನಿಷದ್ವ್ರತಮ್ । ಷೋಡಶೇ ವರ್ಷೇ ಗೋದಾನಮ್ ।'

ಕೇಶಗಳಿಗೆ ಸಂಸ್ಕೃತದಲ್ಲಿ 'ಗೋ' ಎಂದು ಹೆಸರಿರುವುದರಿಂದ–ಸಮಾವರ್ತನ ಪೂರ್ವಭಾವಿಯಾದ ಚೂಡಾಕರ್ಮವನ್ನೇ ಗೋದಾನವೆಂದು ಕರೆಯುವರು:

'ಗಾವೋ=ಕೇಶಾ ಲೋಮಾನಿ ವಾ ದೀಯಂತೇ=ಖಂಡ್ಯಂತೇಽತ್ರೇತಿ । ಗವಾಂ=ರೋಮ್ಣಾಂ ದಾನಂ ಯತ್ರೇತಿ ವಾ ।'

'ಬ್ರಹ್ಮಚರ್ಯಮಾಷೋಡಶಾತ್ತು ತತೋ ಗೋದಾನಾನಂತರಂ ದಾರಕರ್ಮ ।'
(ಚಾಣಕ್ಯ)

೧೫ (ಸ್ನಾನಂ) ಸಮಾವರ್ತನಮ್: ಗುರುಕುಲದಿಂದ ಹಿಂದಿರುಗಿ ಗಾರ್ಹಸ್ಥ್ಯವನ್ನು ನಿರ್ವಹಿಸುವುದಕ್ಕಾಗಿ ಮನೆಯ ಕಡೆಗೆ ಮರಳಿ ಬರುವುದಕ್ಕೆ ಸಮಾವರ್ತನವೆಂದು ಹೆಸರು.

'ಸಮಾವರ್ತನಮ್' = A pupil's return home after finishing his course of holy study.' (V. S. Apte.)

ಅದಕ್ಕೆ ಅಂಗವಾಗಿ ಆಚರಿಸುವ ಸ್ನಾನಕ್ಕೆ 'ಸ್ನಾನ'ವೆಂದು ಹೆಸರು. ಈ ಸ್ನಾನದಿಂದ ದೀಕ್ಷಿತನಾದವನು 'ಸ್ನಾತಕ' ಎನ್ನಿಸಿಕೊಳ್ಳುವನು.

೧೬ ವಿವಾಹ: ಶೀಲ, ವಯಸ್ಸು, ವಿದ್ಯೆಗಳಲ್ಲಿ ತನಗೆ ಅನುರೂಪಳಾದ ಕನ್ಯೆಯನ್ನು ವರಿಸುವ ಈ ವಿಧಿಯೇ ಪೂರ್ವಷೋಡಶ ಸಂಸ್ಕಾರಗಳಲ್ಲಿ ಕೊನೆಯದು.

ಈ ಸಂಸ್ಕಾರಗಳ ವಿವರ ಇಲ್ಲಿ ಹೆಚ್ಚೇನೂ ಉಪಯುಕ್ತವಲ್ಲ. ಹೋಮ ಕಾಲದಲ್ಲಿ— ಷೋಡಶಸಂಸ್ಕಾರಗಳನ್ನು ಅಗ್ನಿಗೆ ಆಚರಿಸುವಾಗ ವ್ಯಾಹೃತ್ಯಾದಿ ಮಂತ್ರಗಳಿಂದ ಗರ್ಭಾಧಾನಸಂಸ್ಕಾರವನ್ನು ಪೂರಯಿಸಿ 'ಗರ್ಭಾಧಾನಂ ಕೃತಂ ಸ್ವಾಮಿನ್', 'ಪುಂಸವನಂ ಕೃತಂ ಸ್ವಾಮಿನ್' ಎಂದು ನಿವೇದಿಸಿಕೊಳ್ಳುತ್ತಾರೆ:

'ಗರ್ಭಾಧಾನಂ ಕೃತಂ ಸ್ವಾಮಿನ್ನಿತಿ ಬದ್ಧಾಂಜಲಿಃ ಸ್ಮರೇತ್ ।
ಏವಂ ಪುಂಸವನಂ ಕಾರ್ಯಂ ಸೀಮಂತೋನ್ನಯನಂ ತಥಾ ॥' (ಯೋಗದೀ.)

---

## ಆಸನಗಳು

ಧ್ಯಾನಕಾಲದಲ್ಲಿ— ಜಪಾದಿಕಾಲದಲ್ಲಿ ಮನಸ್ಸಿನ ಏಕಾಗ್ರತೆಗಾಗಿ ಒಂದು ನಿರ್ದಿಷ್ಟವಾದ ಆಸನದ ಅವಶ್ಯಕತೆಯಿದೆ. ನಿಂತುಕೊಂಡು ಧ್ಯಾನಾದಿಗಳ ನ್ನಾಚರಿಸಿದರೆ ಶ್ರಮವಾಗುವ ಸಂಭವವುಂಟು, ಮಲಗಿಕೊಂಡಾಗ ನಿದ್ದೆ ಗೀಡಾಗುವ ಸಂಭವವುಂಟು; ಅದರಿಂದ ಅನುಕೂಲವಾದ ಒಂದು ಆಸನ ವನ್ನು ಆರಿಸಿಕೊಂಡು ಧ್ಯಾನಾದಿಗಳನ್ನೆಸಗಬೇಕು ಎಂದು ಪ್ರಾಚೀನರ ಆಶಯ:

'ಸ್ಥಿತಂ ಶ್ರಮಃ, ತಲ್ಪಾದೌ ದಂಡವತ್ಪತಿತಂ ತು ನಿದ್ರಾಽಭಿಭವತಿ ಇತ್ಯುಪ- ವಿಷ್ಟಸ್ಯೈವ ಜ್ಞಾನಾಭ್ಯಾಸಾಧಿಕಾರಃ ।' (ಪದಾರ್ಥಾ.)

ಈ ಆಶಯವನ್ನು 'ಆಸೀನಃ ಸಂಭವಾತ್' ಎಂಬ ಸೂತ್ರದಲ್ಲಿ ಬಾದರಾಯ ಣರೂ ಸ್ಫುಟಗೊಳಿಸಿದ್ದಾರೆ. ಅದರಲ್ಲೂ ಏನೇನೋ ಆಸನಗಳನ್ನು ರಚಿಸಿ ಕೊಂಡರೆ ದೇಹಕ್ಕೆ ಉಪಕಾರಕ್ಕಿಂತ ಪೀಡೆಯೇ ಹೆಚ್ಚು. ಅಂಥ ಆಸನ ಗಳನ್ನು ಹೆಚ್ಚು ಹೊತ್ತು ಹಾಕಿಕೊಂಡಿರುವುದರಿಂದ ದೇಹ ರುಗ್ಣವಾಗುವ ಸಂಭವವೂ ಉಂಟು, ಯೋಗಸಿದ್ಧಿಗೆ ಪ್ರತಿಬಂಧವಾಗುವ ಸಂಭವವೂ

ಉಂಟು. ಮೂಲಾಧಾರ, ಕುಂಡಲಿನೀ ಇವುಗಳನ್ನೆಲ್ಲ–ಕನ್ನಡಿಯಲ್ಲಿ ಎಂಬಂತೆ ವಿಶದವಾಗಿ ಅನುಭವಿಸಿಕೊಂಡು ಅದರಿಂದ ಶರೀರವನ್ನು ನಿಗ್ರಹಿಸುವ ಮಹಾ ಕಾರ್ಯದಲ್ಲಿ ತೊಡಗಿದ ಯೋಗಿಯು ತನ್ನ ಸಿದ್ಧಿಗೆ ಅನುಗುಣವಾದ ಆಸನ ವನ್ನು ಆರಿಸಿಕೊಳ್ಳುವುದು ಅವಶ್ಯ ಕರ್ತವ್ಯವಾಗಿದೆ:

'ಸ್ಥಿರಸುಖಮಾಸನಮ್' (ಯೋಗಸೂತ್ರ)

'ತತ್ರ ಯಥಾಕಥಾಂಚಿದುಪವೇಶನೇ ರೋಗಃ ಕುಂಡಲ್ಯಾದ್ಯಾನುಗುಣ್ಯಾಭಾವಶ್ಚ।' (ಪದಾ.)

'ಆಸನೇನ ರುಜೋ ಹಂತಿ ಪ್ರಾಣಾಯಾಮೇನ ಪಾತಕಮ್ ।
ವಿಕಾರಂ ಮಾನಸಂ ಯೋಗೀ ಪ್ರತ್ಯಾಹಾರೇಣ ಸರ್ವದಾ ॥
ಧಾರಣಾಭಿರ್ಮನೋಧೈರ್ಯಂ ಜ್ಞಾನಾದೈಶ್ವರ್ಯಮುತ್ತಮಮ್ ।
ಸಮಾಧೌ ಮೋಕ್ಷಮಾಪ್ನೋತಿ ತ್ಯಕ್ತ್ವಾ ಕರ್ಮ ಶುಭಾಶುಭಂ ॥' (ವಸಿಷ್ಠಸಂಹಿತಾ)

ಈ ಕಾರಣದಿಂದಾಗಿ– ಯೋಗಾಭ್ಯಾಸಕ್ಕೆ ಅನುಕೂಲಗಳಾದ ಕೆಲವು ಆಸನಗಳನ್ನು ಪ್ರಾಚೀನರು ನಿರ್ದೇಶಿಸಿದ್ದಾರೆ. ಅವುಗಳಲ್ಲಿ ಪದ್ಮಾಸನ, ಸ್ವಸ್ತಿಕಾಸನ, ವಜ್ರಾಸನ, ಭದ್ರಾಸನ, ವೀರಾಸನ ಇವು ಐದು ಪ್ರಸಿದ್ಧವಾದವುಗಳು.

'ಪದ್ಮಾಸನಂ ಸ್ವಸ್ತಿಕಾಖ್ಯಂ ವಜ್ರಂ ಭದ್ರಾಸನಂ ತಥಾ ।
ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನಪಂಚಕಮ್ ॥' (ಶಾರದಾ.)

ಈ ಆಸನಗಳ ಲಕ್ಷಣ ಕೆಳಗಿನಂತಿದೆ:

**ಪದ್ಮಾಸನ:** ಬಲದ ತೊಡೆಯ ಮೇಲೆ ಎಡದ ಕಾಲನ್ನೂ ಎಡ ತೊಡೆಯ ಮೇಲೆ ಬಲದ ಕಾಲನ್ನೂ ಹಾಕಿ ಕುಳಿತುಕೊಳ್ಳುವುದೇ ಪದ್ಮಾಸನ:

'ಊರುಮೂಲೇ ವಾಮಪಾದಂ ಪುನಸ್ತು ದಕ್ಷಿಣಂ ಪದಮ್ ।
ವಾಮೋರೌ ಸ್ಥಾಪಯಿತ್ವಾ ತು ಪದ್ಮಾಸನಮಿತಿ ಸ್ಮೃತಮ್ ॥' (ಯಾಮಲ.)

ಬೆನ್ನ ಬದಿಯಿಂದ ತನ್ನ ಕೈಗಳನ್ನು ತಿರುವುಮುರುವಾಗಿ ತಂದು ಎರಡು ಕಾಲುಗಳ ಅಂಗುಷ್ಠವನ್ನೂ ಹಿಡಿದುಕೊಂಡರೆ ಬದ್ಧಪದ್ಮಾಸನವೆನ್ನಿಸುವುದು. ಇದನ್ನೆ ಕೆಲವೊಮ್ಮೆ ಕೇವಲ ಪದ್ಮಾಸನವೆಂದೂ ಕರೆವರು:

'ಊರ್ವೋರುಪರಿ ವಿನ್ಯಸ್ಯ ಸಮ್ಯಕ್ ಪಾದತಲೇ ಉಭೇ ।
ಅಂಗುಷ್ಠೌ ಚ ನಿಬಧ್ನೀಯಾದ್ಧಸ್ತಾಭ್ಯಾಂ ವ್ಯುತ್ಕ್ರಮಾತ್ತತಃ ।
ಪದ್ಮಾಸನಮಿತಿ ಪ್ರೋಕ್ತಂ ಯೋಗಿನಾಂ ಹೃದಯಂಗಮಮ್ ॥' (ಶಾರದಾ.)

**ಸ್ವಸ್ತಿಕಾಸನ:** ಮೊಣಗಾಲು ಮತ್ತು ತೊಡೆಗಳ ನಡುವೆ ಕಾಲುಗಳ ನ್ನಿರಿಸಿ–ನೆಟ್ಟಗೆ ಕುಳಿತುಕೊಳ್ಳುವುದೇ ಸ್ವಸ್ತಿಕಾಸನ:

'ಜಾನೂರ್ವೋರಂತರೇ ಸಮ್ಯಕ್‌ಕೃತ್ವಾ ಪಾದತಲೇ ಉಭೇ |
ಋಜುಕಾಯೋ ವಿಶೇದ್ಯೋಗೀ ಸ್ವಸ್ತಿಕಂ ತತ್ಪ್ರಚಕ್ಷತೇ ||' (ಶಾರದಾ.)

**ವಜ್ರಾಸನ:** ತನ್ನ ಊರುಮೂಲದಲ್ಲಿ ಕ್ರಮವಾಗಿ ಪಾದದ್ವಯವನ್ನಿರಿಸಿ, ಅಂಗೈ ಮೇಲು ಬದಿಯಲ್ಲಿರುವಂತೆ ಕೈಗಳನ್ನು ಮೊಣಗಾಲಿನ ಮೇಲಿರಿಸಿಕೊಳ್ಳುವುದು ವಜ್ರಾಸನ:

ಊರ್ವೋಃ ಪಾದೌ ಕ್ರಮಾನ್ನ್ಯಸ್ಯೇಜ್ಜಾನ್ವೋಃ ಪ್ರತ್ಯಙ್ಮುಖಾಂಗುಲೀ |
ಕರೌ ನಿದಧ್ಯಾದಾಖ್ಯಾತಂ ವಜ್ರಾಸನಮನುತ್ತಮಮ್ ||' (ಶಾರದಾ.)

**ಭದ್ರಾಸನ:** ಅಂಡಕೋಶಗಳ ಕೆಳಗೆ ಸೀಳಿರುವ ಭಾಗದಲ್ಲಿ ಕಾಲ ಗುಲ್ಫ (ಹರಡು)ಗಳನ್ನಿರಿಸಿ ಕಾಲಿನ ಹಿಂಭಾಗಗಳನ್ನು ಅಂಡಕೋಶಗಳ ಕೆಳಗಿರಿಸಿ ಎರಡು ಕೈಗಳಿಂದ ಕಾಲಿನ ಬೆರಳುಗಳನ್ನು ಹಿಡಿದುಕೊಂಡು ನಿಶ್ಚಲವಾಗಿ ಕುಳಿತುಕೊಳ್ಳುವುದೇ ಭದ್ರಾಸನ:

'ಸೀವನ್ಯಾಃ ಪಾರ್ಶ್ವಯೋರ್ನ್ಯಸ್ಯೇದ್ಗುಲ್ಫಯುಗ್ಮಂ ಸುನಿಶ್ಚಲಮ್ |
ವೃಷಣಾಧಃ ಪಾರ್ಷ್ಣಿಪಾದೌ ಪಾಣಿಭ್ಯಾಂ ಪರಿಬಂಧಯೇತ್ ||' (ಶಾರದಾ.)
'ಗುದಮೇಢ್ರಾಂತರಾಲೋರ್ಧ್ವರೇಖಾ ಸೀವನೀ' (ಪದಾರ್ಥಾ.)

ಇದರಲ್ಲಿ ಒಂದು ವಿಶೇಷವಿದೆ. ಸೀವನಿಯ ಎಡಬದಿಯಲ್ಲಿ ಬಲಗುಲ್ಫ ಬಲಬದಿಯಲ್ಲಿ ಎಡಗುಲ್ಫವನ್ನಿರಿಸಿ ಹಿಂದಿನಂತೆಯೆ ವ್ಯುತ್ಕ್ರಮವಾಗಿ ಅವುಗಳ ಅಂಗುಷ್ಠವನ್ನು ಹಿಡಿಯಬೇಕು:

'ಸೀವನ್ಯಾ ಆತ್ಮನಃ ಪಾರ್ಶ್ವೇ ಗುಲ್ಫೌ ನಿಕ್ಷಿಪ್ಯ ಪಾದಯೋಃ |
ಸವ್ಯೇ ದಕ್ಷಿಣಗುಲ್ಫಂ ಚ ದಕ್ಷಿಣೇ ದಕ್ಷಿಣೇತರಮ್ ||
ದಕ್ಷೇ ಸವ್ಯಕರಂ ನ್ಯಸ್ಯ ಸವ್ಯೇ ನ್ಯಸ್ಯೇತರಂ ಕರಮ್ |
ಅಂಗುಷ್ಠೌ ಚ ನಿಬಧ್ನೀಯಾದ್ಧಸ್ತಾಭ್ಯಾಂ ವ್ಯುತ್ಕ್ರಮೇಣ ತು ||' (ಯೋಗಸಾರ)

ಇದನ್ನು ಕೆಲವರು 'ಗೋರಕ್ಷಾಸನ'ವೆಂದೂ ಕರೆವುದುಂಟು.

**ವೀರಾಸನ:** ಒಂದು ಕಾಲನ್ನು ತೊಡೆಯ ಮೇಲಿರಿಸಿ ಇನ್ನೊಂದನ್ನು ತೊಡೆಯ ಕೆಳಗಿರಿಸಿ ಋಜುಕಾಯನಾಗಿ ಕುಳಿತರೆ ವೀರಾಸನವಾಗುವುದು:

'ಏಕಂ ಪಾದಮಧಃ ಕೃತ್ವಾ ವಿನ್ಯಸ್ಯೋರೌ ತಥೇತರತ್ |
ಋಜುಕಾಯೋ ವಿಶೇದ್ಯೋಗೀ ವೀರಾಸನಮಿತೀರಿತಮ್ ||' (ಶಾರದಾ.)
'ಏಕಂ ಪಾದಮಥೈಕಸ್ಮಿನ್ ವಿನ್ಯಸ್ಯೋರೌ ತು ಸಂಸ್ಥಿತಮ್ |
ಇತರಸ್ಮಿಂಸ್ತಥೈವೋರುಂ ವೀರಾಸನಮುದಾಹೃತಮ್ ||' (ವಸಿಷ್ಠ.)

ಈ ಆಸನವನ್ನೆ 'ಪರ್ಯಂಕಬಂಧ'ವೆಂದೂ ಕರೆವುದುಂಟು. ಈ ಆಸನವೆ ಈ ಐದು ಆಸನಗಳಲ್ಲಿ ಹೆಚ್ಚು ಸುಕರವೂ ಹೆಚ್ಚು ಬಳಕೆಯಲ್ಲಿರುವುದೂ ಆಗಿದೆ.

---

## ಶರೀರಲಕ್ಷಣ

ಶರೀರದ ಲಕ್ಷಣದ ಕುರಿತು ಸಮಗ್ರವಾದ ವಿವರವನ್ನು ಸ್ಕಾಂದಪುರಾಣದ ವಚನದಲ್ಲಿ ಕಾಣಬಹುದಾದುದರಿಂದ ಅದರ ಸಂಪೂರ್ಣ ಆನುಪೂರ್ವಿಯನ್ನು ಕೆಳಗೆ ನಿರೂಪಿಸಲಾಗಿದೆ:

'ಪಂಚಸೂಕ್ಷ್ಮಃ ಪಂಚದೀರ್ಘಃ ಸಪ್ತರಕ್ತಃ ಷಡುನ್ನತಃ ।
ತ್ರಿಪೃಥುಹ್ರಸ್ವಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವಿತಿ ॥
ಪಂಚದೀರ್ಘಾಣಿ ಶಸ್ತಾನಿ ಯಥಾ ದೀರ್ಘಾಯುಷೋಽಸ್ಯ ವೈ ।
ಭುಜೌ ನೇತ್ರೇ ಹನುರ್ಜಾನು ನಾಸಾಽಸ್ಯ ತನಯಸ್ಯ ವೈ ॥
ಗ್ರೀವಾಜಂಘಾಮೇಹನ್ಯೈಶ್ಚ ತ್ರಿಭಿರ್ಹ್ರಸ್ವೋಽಯಮೀಡಿತಃ ।
ಸ್ವರೇಣ ಸತ್ವ೧ನಾಭಿಭ್ಯಾಂ ತ್ರಿಗಂಭೀರಃ ಶಿಶುಃ ಶುಭಃ ॥
ತ್ವಕ್ಕೇಶಾಂಗುಲಿದಶನಾ ಪರ್ವಾಣ್ಯಂಗುಲಿಜಾನ್ಯಪಿ ।
ತಥಾಽಸ್ಯ ಪಂಚ ಸೂಕ್ಷ್ಮಾಣಿ ದಿಕ್ಪಾಲಪದಭಾಗ್ಯಥಾ ॥
ವಕ್ಷಃಕುಕ್ಷ್ಯಲಕಸ್ಕಂಧಕರವಕ್ತ್ರಂ ಷಡುನ್ನತಮ್ ।
ತಥಾಽತ್ರ ದೃಶ್ಯತೇ ಬಾಲೇ ಮಹದೈಶ್ವರ್ಯಭಾಗ್ಯಥಾ ॥
ಪಾಣ್ಯೋಸ್ತಲೇ ಚ ನೇತ್ರಾಂತೇ ತಾಲುಜಿಹ್ವಾಧರೋಷ್ಠಕಮ್ ।
ಸಪ್ತಾರುಣಂ ಚ ಸನಖಮಸ್ಮಿನ್ ರಾಜ್ಯಸುಖಪ್ರದಮ್ ॥
ಲಲಾಟಕಟಿವಕ್ಷೋಭಿಸ್ತ್ರಿವಿಸ್ತೀರ್ಣೋ ಯಥಾ ಹ್ಯಸೌ ।
ಸರ್ವತೇಜೋಽತಿಗೈಶ್ವರ್ಯಂ ತಥಾ ಪ್ರಾಪ್ಸ್ಯತಿ ನಾನ್ಯಥಾ ॥
ಕಮಠೀಪೃಷ್ಠಕಠಿನಾವಕರ್ಮಕರಣೌ ಕರೌ ।
ರಾಜ್ಯಹೇತೂ ಶಿಶೋರಸ್ಯ ಪಾದೌ ಚಾಧ್ವನಿ ಕೋಮಲೌ ॥
ಅಚ್ಛಿನ್ನಾ ತರ್ಜನೀಂ ವ್ಯಾಪ್ಯ ತಥಾ ರೇಖಾಽಸ್ಯ ದೃಶ್ಯತೇ ।
ಕನಿಷ್ಠಾಪೃಷ್ಠನಿರ್ಯಾತಾ ದೀರ್ಘಾಯುಷ್ಯಂ ಯಥಾಽರ್ಪಯೇತ್ ॥
ಪಾದೌ ಸುಮಾಂಸಲೌ ರಕ್ತೌ ಸಮೌ ಸೂಕ್ಷ್ಮೌ ಸುಶೋಭನೌ ।
ಸಮಗುಲ್ಫೌ ಸ್ವೇದಹೀನೌ ಸ್ನಿಗ್ಧಾವೈಶ್ವರ್ಯಸೂಚಕೌ ॥
ಸ್ವಲ್ಪಾಭಿಃ ಕರರೇಖಾಭಿರಾರಕ್ತಾಭಿಃ ಸದಾ ಸುಖೀ ।
ಲಿಂಗೇನ ಕೃಶಹ್ರಸ್ವೇನ ರಾಜರಾಜೋ ಭವಿಷ್ಯತಿ ॥

---

೧ 'ಸತ್ವಮಂತಃಕರಣಮ್' (ರಾಮಾನಂದೀಯಟೀಕಾ)

ಉತ್ಕಟಾಸನಗುಲ್ಫಸ್ಸ್ವಿಜಾನ್ನಾಭಿರಸ್ಯಾಪಿ ವರ್ತುಲಾ ।
ದಕ್ಷಿಣಾವರ್ತಮರುಣಂ ಮಹದ್ವೈಶ್ವರ್ಯಸೂಚಿಕಾ ॥
ಧಾರೈಕಾ ಮೂತ್ರಯತ್ಯಸ್ಮಿನ್ ದಕ್ಷಿಣಾವರ್ತಿನೀ ಯದಿ ।
ಗಂಧಶ್ಚ ಮೀನಮಧುನೋರ್ಯದಿ ವೀರ್ಯೇ ತದಾ ನೃಪಃ ॥
ವಿಸ್ತೀರ್ಣೌ ಮಾಂಸಲೌ ಸ್ನಿಗ್ಧೌ ಸ್ವಿಚಾವಸ್ಯ ಸುಪೋಚಿತೌ ।
ವಾಮೌ ವೃತ್ತೌ ಸುಪ್ರಲಂಬೌ ದೋಷೌ ದಿಗ್ರಕ್ಷಣೋಚಿತೌ ॥
ಶ್ರೀವತ್ಸವಜ್ರಚಕ್ರಾಬ್ಜಮತ್ಸ್ಯಕೋದಂಡದಂಡಭೃತ್ ।
ತಥಾಽಸ್ಯ ಕರಗಾ ರೇಖಾ ಯಥಾ ಸ್ಯಾತ್ತ್ರಿದಿವಸ್ಪತಿಃ ॥
ದ್ವಾತ್ರಿಂಶದ್ದಶನಶ್ಚಾಯಂ ಕರಕಂಬುಶಿರೋಧರಃ ।
ಕ್ರೌಂಚದುಂದುಭಿಹಂಸಾಗ್ರಸ್ವರಃ ಸರ್ವೇಶ್ವರಾಧಿಕಃ ॥
ಮಧುಪಿಂಗಲನೇತ್ರೋಽಸೌ ನೈನಂ ಶ್ರೀಸ್ತ್ಯಜತಿ ಕ್ವಚಿತ್ ।
ಪಂಚರೇಖಲಲಾಟಸ್ತು ತಥಾ ಸಿಂಹೋದರಃ ಶುಭಃ ॥
ಊರ್ಧ್ವರೇಖಾಂಕಿತಪದೋ ನಿಃಶ್ವಸನ್ ಪದ್ಮಗಂಧವಾನ್ ।
ಅಚ್ಛಿದ್ರಪಾಣಿಃ ಸುನಖೋ ಮಹಾಲಕ್ಷಣವಾನಯಮ್ ॥' (ಕಾಶೀಖಂಡ)

---

## ಅಂಕುರಾರ್ಪಣ

ಪ್ರತಿಷ್ಠೆ, ದೀಕ್ಷಾಸ್ವೀಕಾರ, ವಿವಾಹ, ಉಪನಯನ, ಮೊದಲಾದ ಎಲ್ಲ ಕಾರ್ಯಗಳ ಪ್ರಾರಂಭದಲ್ಲೂ ಅಂಕುರಾರ್ಪಣೆಯನ್ನು ಮಾಡಬೇಕು ಎಂದು ಶಾಸ್ತ್ರಕಾರರ ಮತ:

'ಪ್ರತಿಷ್ಠಾಯಾಂ ಚ ದೀಕ್ಷಾಯಾಂ ಸ್ನಾಪನೇ ಚೋತ್ಸವೇ ತಥಾ ।
ಸಂಪ್ರೋಕ್ಷಣೇ ಚ ಶಾಂತ್ಯರ್ಥಂ ವಿವಾಹೇ ಮೌಂಜಿಬಂಧನೇ ।
ಸರ್ವಮಂಗಲಕಾರ್ಯೇಷು ಕಾರಯೇದಂಕುರಾರ್ಪಣಮ್ ॥
ಪ್ರತಿಷ್ಠಾದಿವಸಾತ್ಪೂರ್ವಂ ನವಮೇ ಸಪ್ತಮೇ ದಿನೇ ।
ಪಂಚಮೇ ವಾ ತೃತೀಯೇ ವಾಸದ್ಯೋ ವಾ ಚಾಂಕುರಾರ್ಪಣಮ್ ॥'(ಸಿದ್ಧಾಂತ.)

'ಪುಣ್ಯಾಹಘೋಷಣಂ ಕೃತ್ವಾ ಬ್ರಾಹ್ಮಣೈಃ ಸಹ ದೇಶಿಕಃ ।
ಮಂಗಲಾಂಕುರಯಜ್ಞಂ ಚ ಕುರ್ಯಾತ್ತತ್ರೈವ ಚಾಹನಿ ।
ಸಪ್ತಮಾನ್ನವಮಾದ್ವಾಽಪಿ ಪ್ರಾಗೇವ ಯಜ್ಞಕರ್ಮಣಃ ॥' (ಮಹಾಕಪಿಲ.)

'ಉತ್ಸವೇಷು ವಿವಿಧೇಷ್ವಪಿ ದೀಕ್ಷಾಸ್ಥಾಪನಾದಿಷು ಪವಿತ್ರವಿಧೌ ಚ ।
ಮಂಗಲಾಂಕುರವಿರೋಪಣಪೂರ್ವಂ ಮಂಗಲಂ ಭವತಿ ಕರ್ಮಕೃತಸ್ತು ॥
ಶಸ್ತಯೋಗದಿವಸಾತ್ತು ಪುರಸ್ತಾತ್ ಸಪ್ತಮೇಽಹನಿ ಶುಭೇ ನವಮೇ ವಾ ।
ಪಂಚಮೇಽಥ ಸುದಿನೇ ಸುಮುಹೂರ್ತೇ ಮಂಗಲಾಂಕುರವಿಧಿಂ ವಿದಧೀತ ॥'

ಅಂಕುರಾರ್ಪಣವನ್ನು ಮಾಡುವ ಮೊದಲದಿನ ಉಪವಾಸವಾಗಿದ್ದು ನಾಂದೀಮುಖಶ್ರಾದ್ಧವನ್ನು ಮಾಡಿಕೊಳ್ಳಬೇಕು:

'ಗುರುರ್ವಿಶುದ್ಧಃ ಪ್ರಾಗೇವ ಶುದ್ಧಾಹಾತ್ಸಪ್ತಮೇಽಹನಿ ।
ಸಂಕಲ್ಪ್ಯೋಪೋಷ್ಯ ಕರ್ತವ್ಯಮಂಕುರಾರೋಪಣಂ ಶುಭಮ್ ।
ಕುರ್ಯಾನ್ನಾಂದೀಮುಖಶ್ರಾದ್ಧಂ ಪೂರ್ವೇದ್ಯುಃ ಸ್ವಸ್ತಿವಾಚನಮ್ ।
ಸ್ವಗೃಹ್ಯೋಕ್ತಪ್ರಕಾರೇಣ ತದೇತದ್ವಿದಧೀತ ವೈ ॥'
'ಸರ್ವತ್ರಾಭ್ಯುದಯಶ್ರಾದ್ಧಮಂಕುರೋತ್ಪಾದನಂ ತಥಾ ।
ಆದಾವೇವ ಪ್ರಕುರ್ವೀತ ಕರ್ಮಣೋಽಭ್ಯುದಯಾತ್ಮನಃ ॥'

ವಿಧಾನದಂತೆ ರಚಿತಗಳಾದ ಶರಾವಾದಿಪಾತ್ರೆಗಳಲ್ಲಿ ವಿಧಿಯಂತೆ ಆನೀತವಾದ ಮಣ್ಣನ್ನೂ ಒಣಗಿದ ಗೋಮಯಾದಿಗಳನ್ನೂ ತುಂಬಿ ಆ ಮೇಲೆ ಬೀಜವನ್ನು ಬಿತ್ತಬೇಕು. ಅದಕ್ಕೆ ತುಂಬಬೇಕಾದ ಮಣ್ಣನ್ನು ಪವಿತ್ರವಾದ ನದೀತೀರಕ್ಕೆ ಹೋಗಿ ಮಂತ್ರಪೂತವಾದ ಕೊಡಲಿಯಿಂದ ಅಗೆದು ಹಗಲಿನ ಹೊತ್ತಿನಲ್ಲಿ ತಂದಿರಿಸಬೇಕೆಂದು ವಿಧಿಯಿದೆ:

ಗಂಧಾದಿಭಿಶ್ಚ ಕುದ್ದಾಲಂ ಪೂಜಯಿತ್ವಾ ದಿನಾಂತರೇ ।
ಗೀತನೃತ್ಯಸಮಾಯುಕ್ತಂ ಗಜವಾಜಿಸಮನ್ವಿತಮ್ ॥
ಗುರ್ವಾದಯೋ ರಥಾರೂಢಾ ಗಜಾರೂಢಾಸ್ತಥಾ ಪರೇ ।
ಗತ್ವಾ ತೀರಂ ತಡಾಗಸ್ಯ ನದ್ಯಾಃ ಪುಷ್ಪವನಸ್ಯ ಚ ॥
ತತ್ರ ಶುದ್ಧಂ ಭುವೋ ಭಾಗಂ ದರ್ಭೈಃ ಸಂಮೃಜ್ಯ ಚಾಸ್ತ್ರತಃ ।
ಅಭ್ಯುಕ್ಷ್ಯ ಚಾರ್ಘ್ಯತೋಯೇನ ತತ್ತನ್ಮಂತ್ರಮನುಸ್ಮರನ್ ॥
ಹೃದಾ ಭೂಮಿಂ ಸಮಾವಾಹ್ಯ ಗಂಧಪುಷ್ಪೈಃ ಸಮರ್ಚಯೇತ್ ।
ಕುದ್ದಾಲೀಮಸ್ತ್ರಮಂತ್ರೇಣ ಖಾತ್ವಾ ಭೂಮಿಮಥೋ ಮೃದಮ್ ॥
ಗೃಹೀತ್ವಾ ವಾಮದೇವೇನ ಪೂರಯೇತ್ಕಾಂಸ್ಯಪಾತ್ರಕೇ ।
ಹೃದಾ ಮೃದಂ ಚ ಸಂಮೃಜ್ಯ ವಸ್ತ್ರೇಣಾಚ್ಛಾದ್ಯ ಧಾರಯೇತ್ ॥
ಪುರಂ ವಾ ನಿಲಯಂ ವಾಪಿ ಸರ್ವಮಂಗಲನಿಃಸ್ವನೈಃ ।
ಗುರುಃ ಪ್ರದಕ್ಷಿಣಂ ಕೃತ್ವಾ ಮಂಡಪಂ ತ್ವಾನಯೇತ್ತತಃ ।
ಏತತ್ಕರ್ಮ ದಿವಾಕಾಲೇ ಕುರ್ಯಾದ್ರಾತ್ರೌ ನ ಬುದ್ಧಿಮಾನ್ ॥' (ಸಿದ್ಧಾಂತ.)

ಪಾತ್ರೆಗಳಲ್ಲಿ ಮಣ್ಣನ್ನು ತುಂಬಿದ ಮೇಲೆ— ಪೂರ್ವ ಅಥವಾ ಉತ್ತರಾಭಿಮುಖನಾಗಿ ಕುಳಿತು ಆ ಎಲ್ಲ ಬೀಜಗಳನ್ನು ಬೆರಸಿ ರಾತ್ರಿಯ ಕಾಲದಲ್ಲಿ ಆ ಪಾತ್ರೆಯಲ್ಲಿ ಅವನ್ನು ಬಿತ್ತಬೇಕು. ಬೀಜಗಳಿಗೆ ಚಂದ್ರನು ಅಭಿಮಾನಿಯಾದುದರಿಂದ ಅವನ್ನು ರಾತ್ರಿಯೇ ಬಿತ್ತುವುದು ಪ್ರಶಸ್ತವಾಗಿದೆ:

‘ಬೀಜಮುಖ್ಯೇನ ಮೂಲೇನ ಪ್ರಾಙ್ಮುಖೋ ವಾಽಪ್ಯುದಙ್ಮುಖಃ |
ವಾಪಯೇತ್ಸರ್ವಬೀಜಾನಿ ಪಾಲಿಕಾದಿಷ್ವನುಕ್ರಮಾತ್ |
ಬೀಜಾನಾಮಧಿಪಃ ಸೋಮಸ್ತಸ್ಮಾದ್ರಾತ್ರೌ ತು ನಿರ್ವಪೇತ್ ||’ (ಸಿದ್ಧಾಂತ.)
‘ಬೀಜೇಭ್ಯೋ ದೈವತೇಭ್ಯಶ್ಚ ಸ ರಾತ್ರೌ ಕಾಂತಿಮಾನ್ಯತಃ |
ತಸ್ಮಾದ್ಗುರುಸ್ತು ಬೀಜಾನಿ ನಿಶಾಯಾಮೇವ ನಿರ್ವಪೇತ್ ||’

ಎಂಟೊಂಬತ್ತು ದಿನಗಳ ಪೂಜೆ ಮುಗಿದ ನಂತರ– ಸುಳಿಯೊಡೆದಿರುವ ಈ ಅಂಕುರಗಳು ತಮ್ಮ ಬೆಳವಣಿಗೆಯ ಆಕೃತಿಯಿಂದ ಯಜಮಾನನ ಭವಿಷ್ಯವನ್ನು ಸೂಚಿಸುವ ಹರಿಕಾರಗಳಾಗುವುವಂತೆ! ಅವುಗಳ ವಿವರವನ್ನು ಕೆಳಗಿನ ವಾಕ್ಯದಿಂದ ತಿಳಿಯಬಹುದು:

‘ಯಜಮಾನಾಭಿವೃದ್ಧ್ಯರ್ಥಮಂಕುರಾಣಿ ಪರೀಕ್ಷಯೇತ್ |
ಸಮ್ಯಗೂರ್ಧ್ವಂ ಪ್ರರೂಢಾನಿ ಕೋಮಲಾನಿ ಸಿತಾನಿ ಚ ||
ಧೂಮ್ರವರ್ಣಾನ್ಯಪೂರ್ಣಾನಿ ತಥಾ ತಿರ್ಯಗ್ಗತಾನಿ ಚ |
ಶ್ಯಾಮಲಾನಿ ಚ ಕುಬ್ಜಾನಿ ವರ್ಜಯೇದಶುಭಾನಿ ತು ||
ಅವೃಷ್ಟಿಂ ಕುರುತೇ ಕೃಷ್ಣಂ ಧೂಮ್ರಾಭಂ ಕಲಹಂ ತಥಾ |
ಅಪೂರ್ಣಂ ಜನನಾಶಂ ಚ ದುರ್ಭಿಕ್ಷಂ ಶ್ಯಾಮಲಾಂಕುರಮ್ ||
ತಿರ್ಯಗ್ಗತೇ ಭವೇದ್ವ್ಯಾಧಿಃ ಕುಬ್ಜೇ ಶತ್ರುಭಯಂ ತಥಾ |
ಅಶುಭೇ ಚಾಂಕುರೇ ಜಾತೇ ಶಾಂತಿಹೋಮಂ ತಥಾಽಽಚರೇತ್ ||
ಮೂಲಮಂತ್ರೇಣ ಜುಹುಯಾತ್ ಗುರುಮೂರ್ತಿಧರೈಃ ಸಹ |
ಅಘೋರಾಸ್ತ್ರೇಣ ವಾಽಸ್ತ್ರೇಣ ಶತಂ ವಾಽಥ ಸಹಸ್ರಕಮ್ ||’ (ಸಿದ್ಧಾಂತಶೇ.)

## ಚಕ್ರಾಬ್ಜಮಂಡಲ

ಚಕ್ರಾಬ್ಜಮಂಡಲದ ಕುರಿತು ಆಚಾರ್ಯರು ಕೊಟ್ಟಿರುವ ವಿವರಣೆ ಅತ್ಯಂತ ಸೂಕ್ಷ್ಮವಾಗಿದೆ. ವ್ಯಾಖ್ಯಾನಕಾರರೂ ಕೂಡ ಇದರ ಕಡೆಗೆ ಹೆಚ್ಚಿನ ಗಮನವನ್ನೇನೂ ಕೊಟ್ಟಂತಿಲ್ಲ. ಆದರೆ ಇತರ ಕೆಲವು ಗ್ರಂಥಗಳ ಆಧಾರದಿಂದ ನಾವು ಚಕ್ರಾಬ್ಜಮಂಡಲದ ಪರಿಚಯವನ್ನು ತಕ್ಕಮಟ್ಟಿಗೆ ಮಾಡಿಕೊಳ್ಳಬಹುದು. ಗುರೂಪದೇಶ ಪರಂಪರಾಗತವಾದ ಪದ್ಧತಿಯನ್ನರಿಯದೆ ಪುಸ್ತಕದ ಬಲದಿಂದಲೇ ಕಂಡುಹಿಡಿಯಬೇಕಾದ ಈ ಪ್ರಸಂಗವನ್ನು ‘ತಕ್ಕಮಟ್ಟಿಗೆ’ ಎಂದೇ ಹೇಳಬೇಕಾಗಿದೆ ಹೊರತು ‘ಇದಮಿತ್ಥಂ’ ಎಂದು ನಿರ್ಧರಿಸುವಂತಿಲ್ಲ. ಆಧ್ಯಾತ್ಮಿಕ ವಿಚಾರಗಳಲ್ಲಿ ಅನೂಚಾನವಾಗಿ ನಡೆದು ಬಂದ ಪರಂಪರೆಯನ್ನು ಎಂದಿನಿಂದ ನಾವು ಕಳೆದುಕೊಂಡಿದ್ದೇವೋ ಅಂದಿನಿಂದ

ಯಾವುದೇ ತತ್ವವನ್ನು ಅಧಿಕಾರವಾಣಿಯಿಂದ ನಿರ್ಧರಿಸುವ ಹಕ್ಕನ್ನೂ ಕಳೆದುಕೊಂಡಿದ್ದೇವೆ. ಆದರೂ ಇವತ್ತಿನ ದಿನಗಳಲ್ಲೂ ಅಲ್ಲಲ್ಲಿ ಕಂಡು ಬರುವ ಸಂಪ್ರದಾಯದ ಆಸರೆಯಂತಿರುವ ಆಚಾರನಿಷ್ಠರಾದ ತತ್ತ್ವಜಿಜ್ಞಾಸುಗಳಾದ ಕೆಲವು ವಿದ್ವಾಂಸರು ಈ ಪರಂಪರೆಗಳನ್ನು ಪೂರ್ಣ ನಿರ್ನಾಮವಾಗದಂತೆ ಎಚ್ಚರಿಕೆ ವಹಿಸಿದ್ದಾರೆ. ಅಂಥವರು ಒಬ್ಬಿಬ್ಬರು ಇದ್ದಾರೆ ಎಂತಲೇ ಈ ತತ್ವಪ್ರಣಾಳಿಕೆಯ ಭವಿಷ್ಯ ಅಷ್ಟೊಂದು ಕೆಟ್ಟಿಲ್ಲ ಎನ್ನಬಹುದು.

ಪ್ರಕೃತ ಚಕ್ರಾಬ್ಜಮಂಡಲದ ವಿವರವನ್ನು ನಿರೂಪಿಸುವ ಗ್ರಂಥಗಳೂ ಹೆಚ್ಚಿಲ್ಲ. ಎಲ್ಲ ತಂತ್ರಗ್ರಂಥಗಳಲ್ಲೂ ಒಂದಲ್ಲ ಒಂದು ಮಂಡಲದ ಲಕ್ಷಣವಿದ್ದರೂ ಚಕ್ರಾಬ್ಜಮಂಡಲದ ಲಕ್ಷಣವಂತೂ ಹೆಚ್ಚಿನಮಟ್ಟಿಗೆ ಎಲ್ಲೂ ಇದ್ದಂತಿಲ್ಲ. ಪಂಚರಾತ್ರಾಂತರ್ಗತವಾದ ವಿಷ್ಣುಸಂಹಿತೆಯಲ್ಲಿ ಮಾತ್ರ ಇದರ ಲಕ್ಷಣವನ್ನು ಅಸ್ಫುಟವಾಗಿ ನಿರೂಪಿಸಿದ್ದಾರೆ. ನಾರಾಯಣಪಂಡಿತಾಚಾರ್ಯರು ತನ್ನ 'ಯೋಗದೀಪಿಕಾ'ದಲ್ಲಿ ತಕ್ಕಮಟ್ಟಿಗೆ ವಿಸ್ತಾರವಾಗಿಯೇ ಬರೆದಿದ್ದಾರೆ. ಇವನ್ನುಳಿದರೆ ಶ್ರೀವಿಜಯದಾಸರು ಬರೆದ ಸುಳಾದಿಯೊಂದರಲ್ಲಿ ಇದರ ವಿವರಣೆಯಿದೆ. ಆದರೆ ವಿಜಯದಾಸರ ಚಕ್ರಾಬ್ಜಮಂಡಲದ ವಿವರಣೆಗೂ ಉಳಿದ ಗ್ರಂಥಗಳ ವಿವರಣೆಗೂ ಸ್ವಲ್ಪ ಮಟ್ಟಿನ ವ್ಯತ್ಯಾಸವೂ ಇದ್ದಂತಿದೆ. ಯೋಗದೀಪಿಕಾದಿಗಳಲ್ಲಿ ಮಂಡಲದ ವೃತ್ತಗಳಿಗೆಲ್ಲ ಬಣ್ಣಬಳಿಯಬೇಕೆಂದು ವಿಧಿಸಿ ಎಲ್ಲೆಲ್ಲಿ ಏನೇನು ಬಣ್ಣವನ್ನು ಬಳಿಯಬೇಕೆಂದೂ ವಿಧಿಸಿದ್ದಾರೆ. ಆದರೆ ವಿಜಯದಾಸರು ಬಣ್ಣಗಳ ಕುರಿತು ಏನನ್ನೂ ಬರೆದಂತಿಲ್ಲ. ಸಾಮಾನ್ಯತಃ ವ್ಯತ್ಯಾಸಗಳೇನಿದ್ದರೂ ಮೂಲತಃ ಅವೆರಡೂ ಅವಿರುದ್ಧಗಳಾಗಿವೆಯೆಂದು ತಿಳಿಯಬಹುದು.

ಮೊದಲಾಗಿ ವಿಜಯದಾಸರು ಕೊಟ್ಟ ವಿವರಣೆ[೧]ಯನ್ನು ಸ್ವಲ್ಪ ಗಮನಿಸುವ:

ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡು, ಸೂರ್ಯನಾರಾಯಣನಾಗಿ ಜಗತ್ತಿನ ಮೇಲೆ ಕೃಪಾದೃಷ್ಟಿಯನ್ನು ಬೀರಿ 'ಘೃಣಿ' ಎನ್ನಿಸಿಕೊಂಡ ಶ್ರೀಹರಿಯ ಲೀಲಾವಿಭೂತಿಯ ಒಂದಂಶದ ಅನುಸಂಧಾನವನ್ನು ಈ ಚಕ್ರಾಬ್ಜದಿಂದ ತಿಳಿದುಕೊಳ್ಳಬಹುದು. ಜಾನಾತಿ, ಇಚ್ಛತಿ, ಯತತೇ ಎಂಬಂತೆ ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿಗಳೆಂಬ ಮೂರು - ಕಣ್ಣುಗಳಿಂದ ಜಗತ್ತನ್ನು

---

೧ ವಿಜಯದಾಸರ ಮೂಲವಿವರಣೆಯನ್ನು ಕಂಕಣಾಕಾರಸುಳಾದಿಯಲ್ಲಿ ಕಾಣಬಹುದು.

ನಡೆಯಿಸಿ, 'ತ್ರಿಯಂಬಕ'ನೆನ್ನಿಸಿಕೊಂಡ ಸೂರ್ಯನಾರಾಯಣನ ಒಂದು ವರ್ಷದ ಗತಿ ಮೂರು ತೆರನಾಗಿದೆ. ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ– ಈ ಐದು ರಾಶಿಗಳಲ್ಲಿ ಆತನ ಗತಿ ಸ್ಥಿರವಾಗುವುದು; ಅದರಿಂದಲೇ ಆಗ ಹಗಲು ಹೆಚ್ಚು, ರಾತ್ರಿಯ ಕಾಲ ಕಮ್ಮಿ. ವೃಶ್ಚಿಕ, ಧನು, ಮಕರ, ಕುಂಭ, ಮೀನ– ಈ ಕೊನೆಯ ಐದು ರಾಶಿಗಳಲ್ಲಿ ಆತನ ಗತಿ ತೀವ್ರವಾಗುವುದು ಎಂತಲೇ ಆಗ ಹಗಲಿನ ಅವಧಿ ಕಮ್ಮಿಯಾಗಿ ರಾತ್ರಿ ದೀರ್ಘವಾಗುವುದು. ಮೇಷ ಮತ್ತು ತುಲಾ– ಈ ಎರಡು ತಿಂಗಳಲ್ಲಿ ಮಾತ್ರ ಆತನು ಸಮಗತಿಯಾಗಿದ್ದಾನೆ. ಈ ಮಾತು ಭಾಗವತದಲ್ಲಿ ಬಂದಿದೆ:

'ಯದಾ ಮೇಷತುಲಯೋರ್ವರ್ತತೇ ತದಾಽಹೋರಾತ್ರಾಣಿ ಸಮಾನಿ ಭವಂತಿ|

'ಯದಾ ವೃಷಭಾದಿಷು ಪಂಚಸು ರಾಶಿಷು ಚರತಿ ತದಾಽಹಾನ್ಯೇವ ವರ್ಧಂತೇ ಹ್ರಸಂತಿ ಚ ರಾತ್ರಯಃ |'

'ಯದಾ ವೃಶ್ಚಿಕಾದಿಷು ಪಂಚಸು ವರ್ತತೇ ತದಾಽಹೋರಾತ್ರಾಣಿ ವಿಪರೀತಾನಿ ಭವಂತಿ |'

ಹೀಗೆ ಪ್ರಣವದ ಮೂರು ಅಕ್ಷರಗಳಿಂದಲೂ ವ್ಯಾಹೃತಿತ್ರಯದಿಂದಲೂ ಪ್ರತಿಪಾದ್ಯನಾಗಿ ಈ ಮೂರು ಗತಿಗಳಿಂದ ಮೇಷಾದಿಗಳಲ್ಲಿ ಸಂಚರಿಸುವ ಶ್ರೀಹರಿಯ ಈ ಮೂರು ಮಾರ್ಗಗಳಿಗೆ ಕ್ರಮವಾಗಿ ಕರಿವೀಥಿ, ಅಜವೀಥಿ, ರಥವೀಥಿಗಳೆಂದು ಅನ್ವರ್ಥವಾದ ಹೆಸರುಗಳಿವೆ. ಈ ಮೂರು ಹೆಸರುಗಳನ್ನು ಎರಡನೆಯ ವೃತ್ತದಲ್ಲಿ ಕಾಣಿಸಬೇಕು. ಅದರ ಹೊರಗಿನ ವೃತ್ತದಲ್ಲಿ ವಿಷ್ಣುಷಡಕ್ಷರಪ್ರತಿಪಾದ್ಯನಾಗಿ– ವಸಂತಾದಿ ಷಡೃತುಗಳಲ್ಲಿ ಸಂಚರಿಸುವ ನಾರಾಯಣನ ಧ್ಯಾನಕ್ಕಾಗಿ ಆರು ಋತುಗಳನ್ನು ಬರೆಯಬೇಕು. ಅದರ ಹೊರಗಿನ ವೃತ್ತದ ೮ ದಲಗಳಲ್ಲಿ ಅಷ್ಟಾಕ್ಷರಮಂತ್ರಪ್ರತಿಪಾದ್ಯನಾದ ಮತ್ತು ಪ್ರಣವದ ೮ ಅಕ್ಷರಗಳಿಂದ ಪ್ರತಿಪಾದ್ಯನಾದ ನಾರಾಯಣನ ನಾಮಗಳನ್ನು ಬರೆಯಬೇಕು. ಈ ಎಂಟು ರೂಪಗಳೇ ಸೂರ್ಯನನ್ನುಳಿದು ಬೇರೆ ೮ ಗ್ರಹಗಳಲ್ಲಿ ಸನ್ನಿಹಿತವಾಗಿದ್ದುಕೊಂಡು ಕಾಲವನ್ನು ಮುನ್ನಡೆಸುತ್ತಿವೆ ಎನ್ನುವುದೇ ಇಲ್ಲಿ ಗಮನಿಸಬೇಕಾದ ಅಂಶ. ವಾಸುದೇವಮಂತ್ರದ ೧೨ ಅಕ್ಷರಗಳಿಂದ ಪ್ರತಿಪಾದ್ಯನಾಗಿರುವ, ಕೇಶವಾದಿ ದ್ವಾದಶ ರೂಪಗಳನ್ನು ಧರಿಸಿರುವ ಶ್ರೀಹರಿಯೇ ಮೇಷಾದಿ ದ್ವಾದಶ ರಾಶಿಗಳಲ್ಲಿ ಸಂಚರಿಸುತ್ತಿದ್ದಾನೆ ಎನ್ನುವ ಅನುಸಂಧಾನವನ್ನು ಮಾಡುವುದಕ್ಕಾಗಿ ಅದರ ಮೇಲಿನ ವೃತ್ತದ ಹನ್ನೆರಡು ದಲಗಳಲ್ಲಿ ಈ ನಾಮಗಳನ್ನು ಬರೆಯಬೇಕು. ಯೋಗದೀಪಿಕಾಕಾರರೂ ಈ ವಿಷಯವನ್ನು ಉಲ್ಲೇಖಿಸಿದ್ದಾರೆ:

‘ಪದ್ಮಂ ದ್ವಾದಶಪತ್ರಂ ಸ್ಯಾದ್ವಾಸುದೇವಾಭಿರಾಧನೇ |
ನಾರಾಯಣಸ್ಯ ಪೂಜಾಯಾಂ ಭವೇದಷ್ಟದಲೋಚಿತಮ್ ||’

ಒಂದು ವರ್ಷದಲ್ಲಿ ೨೪ ಪಕ್ಷಗಳ ನಿಯಾಮಕನಾಗಿ, ಗಾಯತ್ರಿಯ ೨೪ ಅಕ್ಷರಗಳಿಂದ ಪ್ರತಿಪಾದ್ಯನಾದ, ಕೇಶವಾದಿ ಚತುರ್ವಿಂಶತಿಮೂರ್ತಿಧರನಾದ ನಾರಾಯಣನ ನಾಮಗಳನ್ನು– ಅದರ ಮೇಲಿನ ವೃತ್ತದ ೨೪ ದಲಗಳಲ್ಲಿ ಬರೆಯಬೇಕು.

ಸಂವತ್ಸರಚಕ್ರದ ೬೦ ಅರಗಳಲ್ಲೂ ಸಂಚರಿಸುವ ಶ್ರೀಹರಿಯ ಚಿಂತನೆ ಅದರ ಮೇಲೆ ವಿಹಿತವಾಗಿದೆ. ನಾಲ್ಕು ಪಾದಗಳನ್ನುಳ್ಳ ೨೭ ನಕ್ಷತ್ರಗಳಲ್ಲೂ ಸನ್ನಿಹಿತನಾಗಿದ್ದುಕೊಂಡು ಅಷ್ಟೋತ್ತರಶತನಾಮನಾದ ಶ್ರೀಹರಿಯನ್ನು ಅದರ ಮೇಲೆ ಚಿಂತಿಸಬೇಕು. ಎಲ್ಲ ಗ್ರಹಗಳಿಗೂ ೯ ನಕ್ಷತ್ರಗಳಿಗೊಂದರಂತೆ–ಮೂರು ವೀಥಿಗಳಿವೆಯೆಂದು ಕೆಳಗಿನ ವಾಕ್ಯದಿಂದ ತಿಳಿದುಬರುವುದು:

‘ಸರ್ವಗ್ರಹಾಣಾಂ ತ್ರೀಣ್ಯೇವ ಸ್ಥಾನಾನಿ ದ್ವಿಜಸತ್ತಮಾಃ |
ಸ್ಥಾನಂ ಜಾರದ್ಗವಂ ಮಧ್ಯಂ ತಥೈರಾವತಮುತ್ತರಮ್ |
ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿಹ ತತ್ವತಃ ||’

ಮಧ್ಯದಲ್ಲಿ ಸಂಚರಿಸುವ ಮಾರ್ಗ ಜಾರದ್ಗವ ಮಾರ್ಗ, ಉತ್ತರಾಯಣ ಕಾಲದ ಮಾರ್ಗ ಐರಾವತ ಮಾರ್ಗ, ದಕ್ಷಿಣಾಯಣದ ಮಾರ್ಗ ವೈಶ್ವಾನರ ಮಾರ್ಗ, ಈ ಒಂದೊಂದು ಮಾರ್ಗವೂ ಮೂರುವಿಧವಾಗಿವೆ. ಹೀಗೆ ಮೂರು ನಕ್ಷಗಳಿಗೊಂದು ಮಾರ್ಗವೆಂದಂತಾಯಿತು.

‘ತಚ್ಚ ವೀಥೀತ್ರಯಮೇಕೈಕಂ ತ್ರಿಧಾ ಭಿದ್ಯತೇ | ಅಶ್ವಿನ್ಯಾದಿನಕ್ಷತ್ರಾಣಾಂ ತ್ರಿಭಿಸ್ತ್ರಿಭಿರ್ನಾಗವೀಥೀಗಜವೀಥ್ಯೈರಾವತವೀಥೀತ್ಯುತ್ತರಮಾರ್ಗೇ ವೀಥೀತ್ರಯಮ್ | ಆರ್ಷಭೀ ಗೋವೀಥೀ ಜಾರದ್ಗವೀ ಚೇತಿ ಮೈಷುವೇ ಮಧ್ಯಮಾರ್ಗೇ ವೀಥೀತ್ರಯಮ್ | ಅಜವೀಥೀ ಮೃಗವೀಥೀ ವೈಶ್ವಾನರೀ ಚೇತಿ ದಕ್ಷಿಣಮಾರ್ಗೇ ವೀಥೀತ್ರಯಮ್ |’ (ವಿಜಯಧ್ವಜೀಯ)

ತಥಾ ಚ ಅಶ್ವಿನಿ, ಭರಣಿ, ಕೃತ್ತಿಕೆಗಳಿಗೆ ನಾಗವೀಥಿ; ರೋಹಿಣಿ, ಮೃಗಶಿರ, ಆರ್ದ್ರೆಗಳಿಗೆ ಗಜವೀಥಿ; ಪುನರ್ವಸು, ಪುಷ್ಯ. ಆಶ್ಲೇಷೆಗಳಿಗೆ ಐರಾವತವೀಥಿ; ಇವು ಮೂರು ಉತ್ತರದ ವೀಥಿಗಳು.

‘ಅಶ್ವಿನೀ ಕೃತ್ತಿಕಾ ಯಾಮ್ಯಾ[೧] ನಾಗವೀಥೀತಿ ಶಬ್ದಿತಾ |
ರೋಹಿಣ್ಯಾರ್ದ್ರಾ ಮೃಗಶಿರೋ ಗಜವೀಥ್ಯಭಿಧೀಯತೇ ||

೧ ಯಾಮ್ಯಾ=ಭರಣೀ

ಪುಷ್ಯಾಽಽಶ್ಲೇಷಾ ತಥಾಽಽದಿತ್ಯಾ[೧] ವೀಥೀ ಚೈರಾವತೀ ಮತಾ ।
ಏತಾಸ್ತು ವೀಥಯಸ್ತಿಸ್ರ ಉತ್ತರೋ ಮಾರ್ಗ ಉಚ್ಯತೇ ॥' (ವಾಯುಪುರಾಣ)

ಮಘಾ, ಪೂರ್ವಾ, ಉತ್ತರಾ—ಇವು ಮೂರಕ್ಕೆ ಆರ್ಷಭವೀಥಿ; ಹಸ್ತಾ, ಚಿತ್ರಾ, ಸ್ವಾತಿಗಳಿಗೆ ಗೋವೀಥಿ; ವಿಶಾಖಾ, ಜ್ಯೇಷ್ಠಾ, ಅನುರಾಧೆಗಳಿಗೆ ಜಾರದ್ಗವೀಥಿ; ಇವು ಮೂರು ಮಧ್ಯವೀಥಿಗಳು.

'ತಥಾ ದ್ವೇ ಚಾಪಿ ಫಾಲ್ಗುನ್ಯೌ ಮಘಾ ಚೈವಾಽರ್ಷಭೀ ಮತಾ ।
ಹಸ್ತಾ ಚಿತ್ರೇ ತಥಾ ಸ್ವಾತೀ ಗೋವೀಥೀತಿ ತು ಶಬ್ದಿತಾ ॥
ಜ್ಯೇಷ್ಠಾ ವಿಶಾಖಾಽನುರಾಧಾ ವೀಥೀ ಜಾರದ್ಗವೀ ಮತಾ ।
ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗ ಉಚ್ಯತೇ ॥' (ವಾಯು.)

ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ-ಇವು ಮೂರು ಅಜವೀಥಿ; ಶ್ರವಣ, ಧನಿಷ್ಠಾ, ಶತತಾರಾ-ಇವು ಮೂರು ಮೃಗವೀಥಿ; ಪೂರ್ವಾಭಾದ್ರಾ, ಉತ್ತರಾಭಾದ್ರಾ, ರೇವತಿ-ಇವು ವೈಶ್ವಾನರವೀಥಿ; ಈ ಮೂರು ವೀಥಿಗಳು ದಕ್ಷಿಣದ ಮಾರ್ಗಗಳು.

'ಮೂಲಾ ಪೂರ್ವೋತ್ತರಾಷಾಢೇ ಅಜವೀಥೀತಿ ಶಬ್ದಿತಾ ।
ಧನಿಷ್ಠಾ ಶತತಾರೇ ಚ ಮಾರ್ಗೀ[೨] ಶ್ರವಣಮೇವ ಚ ॥
ರೇವತೀ ದ್ವೇ ಭಾದ್ರಪದೇ ವೀಥೀ ವೈಶ್ವಾನರೀ ಮತಾ ।
ಏತಾಸ್ತು ವೀಥಯಸ್ತಿಸ್ರೋ ದಕ್ಷಿಣೋ ಮಾರ್ಗ ಉಚ್ಯತೇ ॥'

ಹೀಗೆ ನವವೀಥಿಗಳನ್ನು ನಕ್ಷತ್ರಗಳ ವೃತ್ತದ ಮೇಲಿನ ವೃತ್ತದಲ್ಲಿ ಬರೆಯಬೇಕು. ಅದರ ಹೊರಪತ್ತಲದ ೫೧ ದಲಗಳಲ್ಲಿ ಅಕಾರಾದಿ ಪ್ರತಿಪಾದ್ಯಗಳಾದ ಅಜಾದ್ಯೇಕಪಂಚಾಶನ್ಮೂರ್ತಿಗಳ ನಾಮವನ್ನು ಬರೆಯಬೇಕು. ಹೀಗೆ ಸಕಲ ಲೋಕಗಳನ್ನೂ ಸಕಲ ಪದಗಳನ್ನೂ ವ್ಯಾಪಿಸಿರುವ ನಾಮರೂಪಾತ್ಮಕನಾದ ಶ್ರೀಹರಿಯ ವಿರಾಡ್ರೂಪದ ಒಂದು ಭವ್ಯ ಚಿತ್ರವನ್ನು ಈ ಮಂಡಲದಲ್ಲಿ ಕಾಣಬಹುದು. ಆದರಿಂದಲೆ ವಿಜಯದಾಸರು ಕೆಳಗಿನಂತೆ ಇದನ್ನು ಹೊಗಳಿದ್ದಾರೆ:

'ಇದರೊಳು ಏಳು ಕೋಟಿ ಮಂತ್ರಾರ್ಥವೆ ಉಂಟು ।
ಅಧಿದೈವ ಅಧಿಭೂತ ಅಧ್ಯಾತ್ಮವೇ ಉಂಟು ।

೧ ಆದಿತ್ಯಾ=ಅದಿತಿದೈವತಾ ಪುನರ್ವಸುಃ
೨ ಮಾರ್ಗೀ=ಮೃಗವೀಥೀ

ಅಧಿಕಾರತನಭೇದ ತಿಳಕೊಂಬ ಜೀವಿಗಳಿಗೆ ।
ಸದಮಲಾನಂದ ನಮ್ಮ ವಿಜಯವಿಠಲರೇಯ ।
ಬದಿಯಲ್ಲಿ ಇರುತಿಪ್ಪ ಚಕ್ರಾಬ್ಜ ಬಲ್ಲವನಿಗೆ ॥' (ಕಂಕಣಾಕಾರಸುಳಾದಿ)

ಚಕ್ರಾಬ್ಜಮಂಡಲದ ಕುರಿತು ನಾರಾಯಣಪಂಡಿತಾಚಾರ್ಯರ ವಿವರಣೆ ಕೆಳಗಿನಂತಿದೆ:

'ವಿಧಾಸ್ಯನ್ನಥ ಚಕ್ರಾಬ್ಜಮಲಂಕುರ್ವೀತ ಮಂಡಲಮ್ ।
ವಿತಾನೈಃ ಫಲಪುಷ್ಪಾದಿಮಾಲಾಮುಕ್ತಾವಲಂಬನೈಃ ॥
ಸಾಷ್ಟಾಂಗುಲಂ ಚತುರ್ಹಸ್ತಂ ತುರ್ಯಾಸ್ರಂ ಮಂಡಪೇ ಕ್ರಿಯಾತ್ ।
ಕೋಣಸೂತ್ರೇ ಚ ಕೃತ್ವಾಽಸ್ಯ ಕರ್ಣಸೂತ್ರಾಣಿ ಪಾತಯೇತ್ ॥
ಬಾಹುಸೂತ್ರಾಣಿ ಚತ್ವಾರಿ ವಿಭಜೇಚ್ಚ ತ್ರಿಧಾ ತ್ರಿಧಾ ।
ಸೂತ್ರಾಣಿ ಪಾತಯೇತ್ತೇಷು ಪ್ರಾಕ್ಪ್ರತ್ಯಗ್ದಕ್ಷಿಣೋತ್ತರಮ್ ॥
ಪುನಶ್ಚ ಕರ್ಣಸೂತ್ರಾಣಿ ತೇಷು ಸೂತ್ರಾಂತರಾಣಿ ಚ ।
ಪಂಕ್ತೀಸ್ತಾ ದ್ವಿಗುಣೀಕುರ್ಯಾತ್ತಾಃ ಪುನಸ್ತ್ರಿಗುಣೀಕ್ರಿಯಾತ್ ॥
ಚತುರ್ವಿಂಶಚ್ಚತುರ್ವಿಂಶತ್ಪದಪಂಕ್ತೀರಿಮಾ ವಿದುಃ ।
ವೀಥ್ಯರ್ಥಂ ವರ್ತಯೇದ್ವೃತ್ತಂ ಮುಕ್ತ್ವಾ ಪಂಕ್ತಿದ್ವಯಂ ಬಹಿಃ ॥
ಪಂಕ್ತಿದ್ವಯಂ ಪುನರ್ಮುಕ್ತ್ವಾ ಕುರ್ಯಾದಾಸ್ಯಂ ತು ವರ್ತುಲಮ್ ।
ವೀಥೀ ಸಾರ್ಧೈಕಪಂಕ್ತಿಃ ಸ್ಯಾತ್ತದಂತರ್ಭ್ರಾಮಯೇತ್ಸಮಮ್ ॥
ಚತುರ್ಥಾ ರಾಶ್ಯರಾನ್ನಾಭಿಪದ್ಮಾನ್ಯೇಷು ಪ್ರಕಲ್ಪಯೇತ್ ।
ರಾಶ್ಯಂತರ್ವರ್ತುಲಾದಂತರ್ವಲಯೇತ್ಪಂಚಮಾಂಶತಃ ॥
ದ್ವಿರಂತರ್ಭ್ರಾಮಯೇನ್ನಾಭೌ ಯಥಾವೃತ್ತತ್ರಯಂ ಭವೇತ್ ।
ರಾಶ್ಯಂತರ್ವರ್ತುಲಾ ಪದ್ಮಮಧ್ಯಮಾನೇನ ಲಾಂಛಯೇತ್ ॥
ಪಾರ್ಶ್ವಯೋರ್ವರ್ತುಲೇ ತಸ್ಮಿನ್ ದಿಗ್ವಿದಿಗ್ಗತಸೂತ್ರತಃ ।
ತೇಷು ಷೋಡಶಮತ್ಸ್ಯೇಷು ಕುರ್ಯಾತ್ಸೂತ್ರಾಷ್ಟಕಂ ಮಿಥಃ ॥
ಸೂತ್ರಾಣ್ಯೇವಂ ಚತುರ್ವಿಂಶತ್ಪರಿತಶ್ಚಕ್ರವರ್ತುಲೇ ।
ಭವೇಯುಸ್ತೈರರಂ ಕುರ್ಯಾದನ್ಯೋನ್ಯಾಬದ್ಧಸೂತ್ರಕೈಃ ॥
ಮಧ್ಯಸೂತ್ರೇ ಯಥಾಗ್ರಂ ಸ್ಯಾನ್ಮೂಲಂ ತತ್ಪಾರ್ಶ್ವಸೂತ್ರಯೋಃ ।
ಅರಾಗ್ರಸೂತ್ರಾದ್ರಾಶ್ಯಂತರ್ವೃತ್ತೇ ಸಂಧಾಯ ವರ್ತಯೇತ್ ॥
ಚಕ್ರವೃತ್ತಶತಾತ್ಪಾರ್ಶ್ವಸೂತ್ರಾದ್ಯಂತಂ ಯಥಾ ಭವೇತ್ ।
ಅಂತರ್ವೃತ್ತಾದ್ಬಹಿಃ ಕುರ್ಯಾದ್ರಾಶ್ಯಗ್ರಾಣಿ ದಲಾಗ್ರವತ್ ॥
ದ್ವಾರಾಣಿ ತದ್ಬಹಿರ್ದಿಕ್ಷು ತೇಷಾಮುಭಯಪಾರ್ಶ್ವತಃ ।
ಶೋಭೋಪಶೋಭಾಯುಗ್ಮಾನಿ ಕೋಣಾನ್ಯೇಷಾಂ ಚ ಪಾರ್ಶ್ವತಃ ॥'

(ಯೋಗದೀಪಿಕಾ)

ಆಚಾರ್ಯರು ಹೇಳಿರುವ ಚಕ್ರಾಬ್ಜಮಂಡಲದಲ್ಲಿ ಎಲ್ಲಿ ಯಾವ ಬಣ್ಣವನ್ನು ಬಳಿಯಬೇಕು ಎನ್ನುವ ವಿಷಯವನ್ನು ಗ್ರಂಥಾಂತರದಿಂದ ತಿಳಿದುಕೊಳ್ಳಬಹುದು. ಅವುಗಳ ಸಹಕಾರದಿಂದ ಈ ರೀತಿಯಾಗಿ ನಿರ್ಧರಿಸಬಹುದು. ಹನ್ನೆರಡು ಅಥವಾ ಎಂಟು ದಲಗಳುಳ್ಳ ಕಮಲದ ಕೋಶ (ಕರ್ಣಿಕೆ)ಕ್ಕೆ ಹಳದಿ ಬಣ್ಣವನ್ನು ಬಳಿಯಬೇಕು. ದಲಗಳನ್ನೆಲ್ಲ ಬಿಳಿಯ ಬಣ್ಣದಿಂದ ತುಂಬಬೇಕು. ಕೇಸರದ ಒಳಬದಿಯನ್ನು ಹಳದಿಯಾಗಿಯೂ ತುದಿಯನ್ನು ಕೆಂಪಾಗಿಯೂ ಮಾಡಬೇಕು. ದಲದ ತುದಿಯನ್ನು ಕೆಂಪಾಗಿಯೂ ಒಳಮೈಯನ್ನು ಹಸುರಾಗಿಯೂ ಮಾಡಬೇಕು. ಅದರ ಸುತ್ತಲಿನ ಮೂರು ವರ್ತುಲಗಳಿಗೆ ಕ್ರಮವಾಗಿ ಬಿಳಿ ಕೆಂಪು ಕಪ್ಪುಗಳನ್ನು ಹಚ್ಚಬೇಕು. ಅರ ಮತ್ತು ನೇಮಿಗಳನ್ನು ಕೆಂಪಾಗಿಯೂ ಅದರ ಒಳಮೈಯನ್ನು ಹಳದಿಯಾಗಿಯೂ ಬರೆಯಬೇಕು. ವೀಥಿಗೆ ಹಸುರನ್ನು ಬರೆದು ಸುತ್ತಲೂ ಬಳ್ಳಿಗಳಿಂದ ಅಲಂಕರಿಸಬೇಕು. ಅದರ ಮೂಲೆಗಳಲ್ಲಿ ಕೆಂಪನ್ನೂ ದ್ವಾರಗಳಿಗೆ ಬಿಳಿರಂಗನ್ನೂ ಬಳಸಬೇಕು. ಶೋಭೆಯನ್ನು ಕೆಂಪಾಗಿಯೂ ಉಪಶೋಭೆಯನ್ನು ಹಳದಿಯಾಗಿಯೂ ಬರೆಯಬೇಕು. ಈ ರೀತಿ ಬಣ್ಣ ಬಳಿದ ನಂತರ ಮಂಡಲದಲ್ಲಿ ರಾಶಿಗಳನ್ನು ಬರೆವ ಜಾಗದಲ್ಲಿ ರಾಶಿಯ ಚಿತ್ರಗಳನ್ನೆ ಬಿಡಿಸಬೇಕೆನ್ನುವ ವಾದವೂ ಉಂಟು. ಅವರ ಪಕ್ಷದಲ್ಲಿ ಆ ವರ್ತುಲದಲ್ಲಿ ಮೇಷಾದಿಗಳ ಚಿತ್ರಗಳನ್ನು ಜ್ಯೋತಿಃಶಾಸ್ತ್ರದಲ್ಲಿ ವಿಹಿತವಾದಂತೆ ಬಿಡಿಸಬೇಕು. ಈ ಮಂಡಲವನ್ನು ಬಿಡಿಸುವುದೆಂದರೆಯೇ ಅದೊಂದು ದೊಡ್ಡ ಕಲೆಗಾರಿಕೆ. ಜ್ಯಾಮಿತೀಯಗಣಿತ-ಚಿತ್ರಕಲೆ-ವರ್ಣಸಂಯೋಜನವಿಧಾನಗಳನ್ನು ಬಲ್ಲ ಕಲಾವಿದ ಮಾತ್ರವೇ ಇಂಥ ಒಪ್ಪವಾದ 'ರೇಖಾಚಿತ್ರ'ವನ್ನು ಬಿಡಿಸಬಲ್ಲ. ಆಧ್ಯಾತ್ಮಿಕತೆಯಲ್ಲೂ ಕಲೆಗಾರಿಕೆಯನ್ನು ತೋರಿಸಿದ ಪ್ರಾಚೀನರು ಯಾವ ದೃಷ್ಟಿಯಿಂದಲೂ ನ್ಯೂನತೆಯನ್ನು ಉಳಿಸಿಕೊಂಡಿಲ್ಲ!

ಮೇಲೆ ವಿವರಿಸಿದ ವರ್ಣಸಂಯೋಜನೆಯ ವಿಧಿಯನ್ನು ಕೆಳಗಿನ ಪ್ರಮಾಣದಿಂದ ತಿಳಿದುಕೊಳ್ಳಬಹುದು:

'ಸರ್ವತ್ರ ಕರ್ಣಿಕಾ ಪೀತಾ ಸಿತಾನ್ಯಬ್ಜದಲಾನಿ ಚ |
ಪೃಥುಲಾರುಣಮಧ್ಯಾನಿ ಪೀತಾನ್ಯೇವ ಯಥಾಕ್ರಮಮ್ ||
ಕೇಸರಾಣ್ಯಚ್ಛಬಿಂದ್ವಗ್ರಾಣ್ಯುಜ್ಜ್ವಲಾನಿ ಪ್ರಕಲ್ಪಯೇತ್ |
ದಲಾಂತರಾಣಿ ಶ್ಯಾಮಾನಿ ವ್ಯೋಮಬಾಹ್ಯೇಽಶ್ರಯೋಽರುಣಾಃ ||
ಸಿತಾ ಧರ್ಮಾದಯಃ ಶ್ಯಾಮಾಸ್ತಥಾಽಧರ್ಮಾದಯಃ ಸ್ಮೃತಾಃ |
ದ್ವಾರಾಣಿ ತು ಸಿತಾನ್ಯೇವ ಚತುರ್ದಿಕ್ಷು ಪ್ರಕಲ್ಪಯೇತ್ ||

ಉತ್ತರಾದೀನಿ ಸರ್ವಾಣಿ ವಿಪ್ರಾದೀನಾಂ ಯಥಾಕ್ರಮಮ್ ।
ಶೋಭಾ ರಕ್ತೋಪಶೋಭಾ ತು ಪೀತಾ ನೀಲಂ ಚ ಕೋಣಕಮ್ ॥'(ವಿಷ್ಣುಸ.)

ನಾರಾಯಣಪಂಡಿತಾಚಾರ್ಯರೂ ಇದಕ್ಕೆ ಸಂವಾದಿಯಾದ ಮಾತನ್ನೇ ಆಡಿದ್ದಾರೆ:

'ಸಿತೇನ ರಜಸಾ ತತ್ರ ಸೂತ್ರವೃತ್ತಾನಿ ಬೃಂಹಯೇತ್ ।
ಕರ್ಣಿಕಾಂ ಪೂರಯೇತ್ಪೀತೈರ್ದಲಾನಿ ಸಿತಚೂರ್ಣಕೈಃ ॥
ಕೇಸರಾಗ್ರಾಣಿ ರಕ್ತೇನ ಪೀತೇನ ಚ ತದಂತರಮ್ ।
ದಲಾಗ್ರಾಣಿ ಚ ರಕ್ತೇನ ಶ್ಯಾಮೇನ ಚ ತದಂತರಮ್ ॥
ವೃತ್ತತ್ರಯಂ ಕ್ರಮಾಚ್ಛ್ವೇತರಕ್ತನೀಲೈಃ ಪ್ರಪೂರಯೇತ್ ।
ಅರಾನ್ನೇಮೀಂಶ್ಚ ರಕ್ತೇನ ಪೀತೇನ ಚ ತದಂತರಮ್ ॥
ವೀಥೀಂ ಶ್ಯಾಮೇನ ಸಂಪೂರ್ಯ ಲತಾಂ ತತ್ರ ಸಮಾಲಿಖೇತ್ ।
ತತ್ಕೋಣಾನಿ ಚ ರಕ್ತೇನ ದ್ವಾರಾಣಿ ಸಿತಚೂರ್ಣಕೈಃ ॥
ಶೋಭೋಪಶೋಭಕೇ ರಕ್ತಪೀತಾಭ್ಯಾಂ ಪರಿಪೂರಯೇತ್ ।
ಕೃಷ್ಣಚೂರ್ಣೇನ ತತ್ಕೋಣಾನ್ಯೇವಂ ಚಕ್ರಸರೋರುಹಮ್ ॥ (ಯೋಗದೀ.)

ಈ ಚಕ್ರಾಬ್ಜಮಂಡಲವನ್ನು ಬಿಡಿಸುವ ವಿಧಾನಗಳನ್ನು ಮತ್ತು ಬಣ್ಣಗಳನ್ನು ಬಳಿಯುವ ರೀತಿಯನ್ನು ಸಂಪ್ರದಾಯಜ್ಞರಿಂದ ತಿಳಿದುಕೊಳ್ಳಬೇಕು.

---

## ಭದ್ರಕಮಂಡಲ

ಭದ್ರಕಮಂಡಲದ ರಚನೆಯು ಚಕ್ರಾಬ್ಜದಿಂದ ಸ್ವಲ್ಪವೇ ವ್ಯತ್ಯಾಸವಾಗಿದ್ದು ಅದನ್ನು 'ಚತುರಸ್ರಂ ವಿನಾ ಚಕ್ರಂ' ಎಂದು ಆಚಾರ್ಯರೇ ಉಲ್ಲೇಖಿಸಿದ್ದಾರೆ. ಇದರಲ್ಲಿ ಬಣ್ಣ ಬಳೆವುದರಲ್ಲೂ ಸ್ವಲ್ಪ ವ್ಯತ್ಯಾಸವಿದೆ. ಅದು ಕೆಳಗಿನ ವಚನದಿಂದ ಸ್ಫುಟವಾಗುವುದು:

'ಪ್ರಥಯಃ ಶುಕ್ಲಕೃಷ್ಣಾಃ ಸ್ಯುರ್ವ್ಯತ್ಯಯಾತ್ಪೀತಸಂಧಯಃ ।
ನಾನಾವರ್ಣಾನಿ ಕಾರ್ಯಾಣಿ ದಿಕ್ಪಾನಾಂ ಸ್ವಸ್ತಿಕಾನಿ ತು ॥
ಪೀತಾಚ್ಛಪಾಟಲಶ್ಯಾಮಕೃಷ್ಣರೇಖಾಸ್ತು ತದ್ಬಹಿಃ ।
ಸಿತರಕ್ತಾಸಿತಾಸ್ತಿಸ್ರೋ ಭದ್ರಕೇ ವಿಹಿತಾಃ ಕ್ರಮಾತ್ ॥' (ವಿಷ್ಣುಸಂ.)

---

# ನಾಡೀಚಕ್ರ

ನಮ್ಮ ದೇಹದಲ್ಲಿರುವ ನಾಡಿಗಳ ಕುರಿತು ಆಚಾರ್ಯರು 'ದ್ವಾಸಪ್ತತಿಸಹಸ್ರಾಣಿ ನಾಡ್ಯಃ' ಎಂದು ಬರೆದಿದ್ದಾರೆ. ಈ ಮಾತನ್ನು ಪುರಾಣಗಳಲ್ಲೂ ಕಾಣಬಹುದು:

'ನಾಡೀಚಕ್ರಂ ಪ್ರವಕ್ಷ್ಯಾಮಿ ಯಜ್ಜ್ಞಾನಾಜ್ಜ್ಞಾಯತೇ ಹರಿಃ |
ನಾಭೇರಧಸ್ತಾದ್ಯತ್ಕಂದಮಂಕುರಾಸ್ತತ್ರ ನಿರ್ಗತಾಃ ||
ದ್ವಾಸಪ್ತತಿಸಹಸ್ರಾಣಿ ನಾಭಿಮಧ್ಯೇ ವ್ಯವಸ್ಥಿತಾಃ |
ತಿರ್ಯಗೂರ್ಧ್ವಮಧಶ್ಚೈವ ವ್ಯಾಪ್ತಂ ತಾಭಿಃ ಸಮಂತತಃ ||' (ಅಗ್ನಿಪು.)

ದೇಹದ ನಾಡಿಗಳ ಮತ್ತು ವಾಯುಸಂಚಾರದ ಕುರಿತು ಅಗ್ನಿಪುರಾಣದ ೨೧೪ನೆಯ ಅಧ್ಯಾಯವು ಅಮೂಲ್ಯವಾದ ವಿಷಯಗಳನ್ನು ಸಂಗ್ರಹಿಸಿದ ಒಂದು ಖನಿಯಂತಿದೆ.

ಈ ೭೨ ಸಾವಿರ ನಾಡಿಗಳು ದೇಹದ ಯಾವ ಯಾವ ಭಾಗವನ್ನು ಆವರಿಸಿಕೊಂಡಿವೆ ಎಂಬ ಕುರಿತು ಜಗನ್ನಾಥದಾಸರ ಕೆಳಗಿನ ಮಾತು ಮನನೀಯವಾಗಿದೆ—

'ಚರಣಗಳೊಳಿಹ ನಾಡಿಗಳು ಹ-
ನ್ನೆರಡು ಸಾವಿರ ಮಧ್ಯದೇಹದೊ-
ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ।
ಶಿರದೊಳಾರುಸಹಸ್ರ ಚಿಂತಿಸಿ
ಇರುಳುಹಗಲಭಿಮಾನಿದಿವಿಜರ-
ನರಿತುಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ॥'
'ಬೃಹತಿನಾಮಕ ವಾಸುದೇವನು
ವಹಿಸಿ ಸ್ತ್ರೀರೂಪಗಳ ದೋಷವಿ-
ರಹಿತವೆಪ್ಪತ್ತೆರಡುಸಾವಿರ ನಾಡಿಗಳೊಳಿದ್ದು ।
ದ್ರುಹಿಣಮೊದಲಾದಮರಗಣಸ-
ನ್ಮಹಿತಸರ್ವಪ್ರಾಣಿಗಳ ಮಹ-
ಮಹಿಮ ಸಂತೈಸುವನು ಸಂತತ ಪರಮಕರುಣಾಳು ॥'(ಹರಿಕಥಾಮೃ.)

ಈ ವಚನದಂತೆ— ಒಂದು ಬದಿಯ ೩೬ ಸಾವಿರ ನಾಡಿಗಳಲ್ಲಿ ಕಾಲಿನಲ್ಲಿರುವ ನಾಡಿಗಳು ೧೨ ಸಾವಿರ, ಮಧ್ಯದೇಹದಲ್ಲಿ ೧೪ ಸಾವಿರ, ಬಾಹು

ವಿನಲ್ಲಿ ೪ ಸಾವಿರ, ಶಿರಸ್ಸಿನಲ್ಲಿ ೬ ನಾವಿರ. ಹೀಗೆಯೇ ಇನ್ನೊಂದು ಬದಿಯಲ್ಲಿರುವ ೩೬ ಸಾವಿರ ನಾಡಿಗಳೂ ಕೂಡ. ಒಟ್ಟು ನಾಡಿಗಳ ಸಂಖ್ಯೆ ೭೨ ಸಾವಿರ.

ಈ ನಾಡೀ ಉಪಾಸನೆ ಪರಮಪವಿತ್ರವಾಗಿದ್ದು ಪಾಮರರಿಗೆ ಅಯೋಗ್ಯರಿಗೆ ಇದರ ರಹಸ್ಯವನ್ನರುಹಬಾರದೆಂದಿದ್ದಾರೆ ದಾಸರು:

'ಸೂರಿಗಳು ಚಿತ್ತೈಸುವುದು ಭಾ-
ಗೀರಥಿಯೆ ಮೊದಲಾದ ತೀರ್ಥಗ-
ಳೀರಧಿಕವೆಪ್ಪತ್ತು ಸಾವಿರ ನಾಡಿಯೊಳಗಿಹವು ।
ಈ ರಹಸ್ಯವನಲ್ಪ ಜನರಿಗೆ
ತೋರಿ ಪೇಳದೆ ನಾಡಿನದಿಯೊಳು
ಧೀರರನುದಿನ ಮಜ್ಜನವ ಮಾಡುತಲಿ ಸುಖಿಸುವರು ॥' (ಹರಿಕಥಾಮೃ.)

# ಗ್ರಂಥ-ಋಣ

| | |
|---|---|
| ೧ ಆಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀ ಹೃಷೀಕೇಶತೀರ್ಥರೆ ಬರೆದ— ೧೨ನೆಯ ಶತಮಾನದ ತಾಡವಾಲೆಯ ಸರ್ವ ಮೂಲ ಗ್ರಂಥ: | ಶ್ರೀಫಲಿಮಾರುಮಠದಿಂದ |
| ೨ ಸುಮಾರು ೧೫ನೆಯ ಶತಮಾನದ್ದೆಂದು ಊಹಿಸಬಹುದಾದ ತಾಡಪಾಲೆಯ ಸರ್ವಮೂಲ ಗ್ರಥ: | ಶ್ರೀಸೋದೆ ವಾದಿರಾಜಮಠದಿಂದ |
| ೩ ಛಲಾರೀಯ ಸಹಿತವಾದ ತಂತ್ರಸಾರ ಸಂಗ್ರಹ: | ಶ್ರೀಪೇಜಾವರಮಠದಿಂದ |
| ೪ ಶ್ರೀಫಲಿಮಾರುಮಠದ ಅತಿ ಪ್ರಾಚೀನ ಪುಸ್ತಕವೊಂದರ ಆಧಾರದಿಂದ ಶೋಧಿತ ವಾದ—ಛಲಾರೀಯ ಸಹಿತ ಮುದ್ರಿತ ತಂತ್ರಸಾರಸಂಗ್ರಹ: | ಶ್ರೀ. ಬನ್ನಂಜೆ ಅನಂತಕೃಷ್ಣಾಚಾರ್ಯರಿಂದ |
| ೫ ತಂತ್ರಸಾರಸಂಗ್ರಹದ ಟೀಕೆ—ವಿಟ್ಠಲಾಚಾರ್ಯಸುತ ನಾರಾಯಣಾಚಾರ್ಯ ಕೃತ ವಾಕ್ಯಾರ್ಥವಿವೃತಿ, ತೆಲುಗು ಲಿಪಿಯ ಕೈಬರಹದ ಪುಸ್ತಕ: | ಶ್ರೀ. ಪೇಜಾವರ ಸೀತಾರಾಮಾಚಾರ್ಯರಿಂದ |
| ೬ ಶಾರದಾತಿಲಕ | |
| ೭ ರಾಘವಭಟ್ಟಕೃತ ಶಾರದಾತಿಲಕ-ವ್ಯಾಖ್ಯಾನ ಪದಾರ್ಥಾದರ್ಶ | |
| ೮ Sir John Woodroffe ಅವರ *Introduction to Tantra Sastra* | |
| ೯ Critical and Comparative Study of Mantra Sastra: | ಉಡುಪಿ ಲಾ ಕಾಲೇಜಿನಿಂದ |
| ೧೦ ವಿಷ್ಣುಸಂಹಿತೆ: | ಶ್ರೀ. ಸುದರ್ಶನ ಜೋಯಿಸ, ಮಂಗಳೂರು, ಇವರಿಂದ |
| ೧೧ ಪಾದ್ಮಸಂಹಿತೆಯ ಕ್ರಿಯಾಪಾದ: | ,, |
| ೧೨ ಅಭಿನವಗುಪ್ತಕೃತ ತಂತ್ರಸಾರ | ———— |

| | |
|---|---|
| ೧೩ ಕೃಷ್ಣಾನಂದ ವಾಗೀಶಭಟ್ಟಾಚಾರ್ಯ-ವಿರಚಿತ ತಂತ್ರಸಾರ | |
| ೧೪ ಸಾತ್ವತಸಂಹಿತಾ | |
| ೧೫ ಭಟ್ಟಶಂಕರಸೂರಿರಚಿತ ಕುಂಡಾರ್ಕ | |
| ೧೬ ಶ್ರೀಜೀವನಾಥಝಾವಿರಚಿತ ವಾಸ್ತು-ರತ್ನಾವಲೀ | |
| ೧೭ ಹಯಶೀರ್ಷಪಂಚರಾತ್ರ: | ಶ್ರೀಪೇಜಾವರಮಠದಿಂದ |
| ೧೮ ಶಂಕರಾಚಾರ್ಯವಿರಚಿತ ತಂತ್ರಗ್ರಂಥ ಪ್ರಪಂಚಸಾರ: | ಉಡುಪಿ ಸಂಸ್ಕೃತಮಹಾಪಾಠಶಾಲೆಯಿಂದ |
| ೧೯ ಪಾರಮೇಶ್ವರಸಂಹಿತಾ: | ,, |
| ೨೦ ಅಹಿರ್ಬುಧ್ನ್ಯಸಂಹಿತಾ: | ,, |
| ೨೧ ಅಗ್ನಿಪುರಾಣ: | ,, |
| ೨೨ ಭವಿಷ್ಯತ್ಪುರಾಣ: | ,, |
| ೨೩ ವಾಯುಪ್ರೋಕ್ತ: | ,, |
| ೨೪ ಸಟೀಕಾ ಜಯತೀರ್ಥಯತಿಕೃತ ಪದ್ಯ-ಮಾಲಾ | |
| ೨೫ ಆಚಾರ್ಯರ ತಮ್ಮಂದಿರಾದ ವಿಷ್ಣು-ತೀರ್ಥರು ರಚಿಸಿದ ಸನ್ಯಾಸಪದ್ಧತಿ | |
| ೨೬ ನಾರಾಯಣಪಂಡಿತಾಚಾರ್ಯರ ಯೋಗದೀಪಿಕಾ | |
| ೨೭ ಪಾತಂಜಲ ಯೋಗಸೂತ್ರ | |
| ೨೮ ಪ್ರಾಚೀನವೂ ಹಸ್ತಲಿಖಿತವೂ ಆದ ಪಂಚರಾತ್ರಾನುಸಾರಿ ಪೌರೋಹಿತ್ಯ ಗ್ರಂಥ: | ಶ್ರೀ. ಪಡುಪೇಟೆ ಅನಂತಪದ್ಮನಾಭ ಉಪಾಧ್ಯಾಯರಿಂದ |
| ೨೯ ವಾಚಸ್ಪತ್ಯಕೋಶ: | ಶ್ರೀಅದಮಾರುಮಠದಿಂದ |
| ೩೦ ಆಪ್ಟೆಯವರ The Practical Sanskrit-English Dictionary | |

ಇವಲ್ಲದೆ ಭಾರತ–ಭಾಗವತ–ಇನ್ನುಳಿದ ಕೆಲವು ಪುರಾಣಗಳನ್ನೂ, ಆಚಾರ್ಯರ ಯತಿಪ್ರಣವಕಲ್ಪ-ಅನುವ್ಯಾಖ್ಯಾನ ಮೊದಲಾದ ಸರ್ವಮೂಲಕೃತಿಗಳನ್ನೂ, ಕೆಲವು ಅಲ್ಲಲ್ಲಿ ದೊರಕುವ ಸಂಹಿತಾಗ್ರಂಥಗಳನ್ನೂ–ತಂತ್ರಗ್ರಂಥಗಳನ್ನೂ, ನೃಸಿಂಹತಾಪಿನೀ ಮೊದಲಾದ ಉಪನಿಷತ್ತುಗಳನ್ನೂ, ಕೆಲವು ವೇದಭಾಗಗಳನ್ನೂ, ಸಂಸ್ಕೃತದಲ್ಲಿ ಪ್ರಸಿದ್ಧವಾದ ಹಲವು ಕೋಶಗಳನ್ನೂ ಈ ಗ್ರಂಥಾನುವಾದಕಾರ್ಯದಲ್ಲಿ ಅಲ್ಲಲ್ಲಿ ಬಳಸಿಕೊಂಡಿದ್ದೇನೆ.

# ತಂತ್ರಸಾರಸಂಗ್ರಹಸ್ಯ

## ಶ್ಲೋಕಾನಾಮಕಾರಾದಿಕ್ರಮೇಣಾನುಕ್ರಮಣಿಕಾ

ಶ್ಲೋಕಃ ಅ.ಸಂ. ಶ್ಲೋ.ಸಂ.

---


'ಪಾವಂಜೆ ಗುರುರಾವ್ ಅಂಡ್ ಸನ್ಸ್' ಇತ್ಯೇತೈರ್ಮುದ್ರಿತಃ ಸ್ವಕೇ ।
ಶ್ರೀಕೃಷ್ಣಮುದ್ರಣಾಗಾರೇ 'ತಂತ್ರಸಾರಸ್ಯ ಸಂಗ್ರಹಃ ॥'
ತೈಃ 'ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ' ಇತಿ ಶ್ರುತೇ ।
ಸ್ವಕೀಯೇ ಪುಸ್ತಕಾಗಾರೇ ಪ್ರಾಕಾಶ್ಯಮಪಿ ಯಾಪಿತಃ ॥